# ಬಯಕಾರ ರಾಮಪ್ಪ : ಒಂದು ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕ

ವಿಶ್ವನಾಥ ಮಾಳಗಿ

ಮಾರ್ಗದರ್ಶಕರು

ಡಾ. ಕಲವೀರ ಮನ್ವಾಚಾರ

ಸಹ ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಶಾಸನಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೦




# ಬಯಕಾರ ರಾಮಪ್ಪ : ಒಂದು ಅಧ್ಯಯನ

(ಪಿಎಚ್.ಡಿ ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕ
ವಿಶ್ವನಾಥ ಮಾಳಗಿ

ಮಾರ್ಗದರ್ಶಕರು
ಡಾ. ಕಲವೀರ ಮನ್ವಾಚಾರ
ಸಹ ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೧೦

## ಪ್ರಮಾಣ ಪತ್ರ

"ಬಯಕಾರ ರಾಮಪ್ಪ : ಒಂದು ಅಧ್ಯಯನ" ಎಂಬ ಮಹಾಪ್ರಬಂಧವು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ **ಡಾ. ಕಲವೀರ ಮನ್ವಾಚಾರ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಅಥವಾ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ವಿಶ್ವನಾಥ ಮಾಳಗಿ
ಸಂಶೋಧಕ
ಶಾಸನಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ:
ಸ್ಥಳ : ವಿದ್ಯಾರಣ್ಯ.

## ಮಾರ್ಗದರ್ಶಕರ ದೃಢೀಕರಣ ಪತ್ರ

**"ಬಯಕಾರ ರಾಮಪ್ಪ : ಒಂದು ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ **ವಿಶ್ವನಾಥ ವಾಳಗಿ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಕಲವೀರ ಮನ್ವಾಚಾರ
ಸಹ ಪ್ರಾಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

ದಿನಾಂಕ :
ಸ್ಥಳ : ವಿದ್ಯಾರಣ್ಯ

## ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಎ.ಮುರಿಗೆಪ್ಪ, ಕುಲಸಚಿವರಾದ ಡಾ.ಮಂಜುನಾಥ ಬೇವಿನಕಟ್ಟಿ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ವೀರೇಶ ಬಡಿಗೇರ ಮತ್ತು ಹಿಂದಿನ ಕುಲಸಚಿವರಾದ ಪ್ರೊ.ಹಿ.ಚಿ. ಬೋರಲಿಂಗಯ್ಯ ಅವರನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನಲ್ಲಿ ಸಂಶೋಧನಾ ಪ್ರವೃತ್ತಿ ಬೆಳಸಿ, ಪಿಹೆಚ್.ಡಿ. ಅಧ್ಯಯನದ ಪ್ರತಿ ಹಂತದಲ್ಲೂ ಸೂಕ್ತ ಸಲಹೆಗಳನ್ನು ನೀಡಿ, ಪ್ರೋತ್ಸಾಹಿಸಿ, ಆತ್ಮೀಯವಾಗಿ ಮಾರ್ಗದರ್ಶನ ಮಾಡಿದ ಮಾರ್ಗದರ್ಶಕರಾದ ಡಾ.ಕಲವೀರ ಮನ್ವಾಚಾರ ಅವರಿಗೆ ಯಾವತ್ತೂ ಚಿರಋಣಿ.

ಅಧ್ಯಯನಕ್ಕೆ ಸಹಕರಿಸಿದ ಶಾಸನಶಾಸ್ತ್ರ ವಿಭಾಗದ ಮುಖ್ಯಸ್ಥರಾದ ಡಾ. ಎಂ.ಕೊಟ್ರೇಶ್, ಡಾ.ಕೆ.ಜಿ.ಭಟ್‌ಸೂರಿ. ಡಾ.ದೇವರಕೊಂಡಾರೆಡ್ಡಿ, ಡಾ.ಪರಮಶಿವಮೂರ್ತಿ ಹಾಗೂ ಡಾ. ಸಂಪತ್ಕುಮಾರಾಚಾರ್ಯ, ಡಾ. ತಾರಿಹಳ್ಳಿ ಹನುಮಂತಪ್ಪ, ಡಾ. ರಮೇಶನಾಯಕ, ಡಾ. ಶ್ರೀಧರರಾವ್ ಪಿಸ್ಸೆ ಅವರಿಗೆ ಅಭಾರಿಯಾಗಿದ್ದೇನೆ.

ಪ್ರೀತಿ ವಿಶ್ವಾಸ ತೋರಿದ ರಾಮಸ್ವಾಮಿ ಮಾಳಗಿ, ಸಿ.ಎಸ್. ಪಂಪಾಪತಿ, ಎಂ. ಗಂಗಾಧರ, ಎಲ್. ನಾರಾಯಣ ನಾಯ್ಕ, ಕೋಳೂರು ಶಿವಣ್ಣ, ಪ್ರಹ್ಲಾದ ಆಚಾರ್ಯ, ಗಾದಿಲಿಂಗಪ್ಪ, ಗಣೇಶ್, ನಿಂಗಪ್ಪ, ಪಂಪಾಪತಿ, ವಸಂತ ಬಡಿಗೇರ ಹಾಗೂ ವಿಶ್ವವಿದ್ಯಾಲಯದ ಗ್ರಂಥಪಾಲಕರು ಮತ್ತು ಸಿಬ್ಬಂದಿ ವರ್ಗದವರಿಗೆ,

ಅಧ್ಯಯನಕ್ಕೆ ವಿವಿಧ ರೀತಿಯಲ್ಲಿ ಸಹಕಾರ ನೀಡಿದ ಆತ್ಮೀಯ ಸ್ನೇಹಿತರಾದ ಗುಜ್ಜಲ ಶ್ರೀನಿವಾಸ, ಪೂಜಾರಿ ಈರಣ್ಣ, ಪಾಲಯ್ಯ, ಮಂಜುನಾಥ ಮೇಸ್ತ್ರು, ನರಸಿಂಹಮೂರ್ತಿ, ರಾಚಯ್ಯ, ಕುಶಾಲ್, ಹನುಮಂತರಾಯ, ಹೊಳಿ ಬಸಪ್ಪ, ಸುರೇಶ, ರೇಣುಕಾಬಾಬು, ಶಿವಲೀಲಾ, ಗಿರಿಜಾ, ಕೃಷ್ಣವೇಣಿ, ಅವರಿಗೆ,

ಸದಾ ನನ್ನ ಶ್ರೇಯಸ್ಸನ್ನು ಬಯಸುವ ಪೂಜನೀಯ ಅಜ್ಜಿ ಮಲ್ಲಮ್ಮ ಮಾಳಗಿ, ತಂದೆ ರುದ್ರಪ್ಪ ಮಾಳಗಿ, ತಾಯಿ ಕಮಲಮ್ಮ ಮಾಳಗಿ, ಅಕ್ಕ ಅನ್ನಪೂರ್ಣ, ಮಾವನವರಾದ ಶ್ರೀ. ತುಕಾರಾಂ, ಶಾಸಕರು ಸಂಡೂರು, ಸಹೋದರರಾದ ರಂಗನಾಥ, ಅನಿಲ್‌ಕುಮಾರ್, ಮಾರುತಿ, ಸೊಸೆಯಂದಿರಾದ ಅರುಣ, ಶಿವಗಂಗಾ, ಗಾಯತ್ರಿ, ಮಾವನವರಾದ ಬೋರಯ್ಯ, ದೊಡ್ಡಪ್ಪನವರಾದ ಡಿ. ಬೋರಪ್ಪ ಹಾಗೂ ಪಂಪಾಪತಿ ಮಾಳಗಿ ಅವರಿಗೆ,

ಅಧ್ಯಯನದುದ್ದಕ್ಕೂ ತಾಳ್ಮೆಯಿಂದ ಸಹಕರಿಸಿದ ಬಾಳಸಂಗಾತಿಯಾದ ಜ್ಯೋತಿ ಮಾಳಗಿ, ಮಕ್ಕಳಾದ ಶ್ರೇಯಸ್, ವೈಷ್ಣವಿ, ಚಿನ್ಮಯಿ ಇವರೆಲ್ಲರನ್ನು ಪ್ರೀತಿಯಿಂದ ನೆನೆಯುವೆ.

ಅಕ್ಷರ ಸಂಯೋಜಿಸಿಕೊಟ್ಟ ಶ್ರೀ ಗಣೇಶ ಗ್ರಾಫಿಕ್ಸ್‌ನ ಶ್ರೀಮತಿ ಭಾರತಿ ಹೇಮಂತ್ ಅವರಿಗೆ ಹಾಗೂ ವೀರೇಶ ಅವರಿಗೆ,

ತುಂಬು ಹೃದಯದ ಕೃತಜ್ಞತೆಗಳು.

ವಿಶ್ವನಾಥ ಮಾಳಗಿ

# ಪರಿವಿಡಿ

ಅಧ್ಯಾಯ ಒಂದು ೧-೬

**ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

ಅಧ್ಯಾಯ ಎರಡು ೭-೭೬

**ವಿಜಯನಗರ ಕಾಲದ ಪರಿಸ್ಥಿತಿ**

ಅ. ಸಾಮಾಜಿಕ ಪರಿಸ್ಥಿತಿ

ಆ. ರಾಜಕೀಯ ಪರಿಸ್ಥಿತಿ

ಇ. ಧಾರ್ಮಿಕ ಪರಿಸ್ಥಿತಿ

ಅಧ್ಯಾಯ ಮೂರು ೭೭-೧೩೯

**ನಾಯಕರ ಉನ್ನತಿ**

ಅ. ನಾಯಕರ ಬೆಳವಣಿಗೆ

ಆ. ನಾಯಕರ ಸಾಧನೆಗಳು

ಇ. ಬಯಕಾರ ರಾಮಪ್ಪನ ಕುಟುಂಬದ ಹಿನ್ನೆಲೆ

ಅಧ್ಯಾಯ ನಾಲ್ಕು ೧೪೦-೧೯೯

**ಬಯಕಾರ ರಾಮಪ್ಪನ ಸಾಧನೆಗಳು**

ಅ. ರಾಜಕೀಯ

ಆ. ದೇವಾಲಯಗಳು

ಇ. ಕೆರೆಗಳು, ಬಾವಿಗಳು, ಅಗ್ರಹಾರಗಳು

ಅಧ್ಯಾಯ ಐದು ೨೦೦-೨೫೭

**ಸಂಗೀತ ಕ್ಷೇತ್ರಕ್ಕೆ ಕೊಡುಗೆ**

ಅ. ಕರ್ನಾಟಕ ಸಂಗೀತದ ಬೆಳವಣಿಗೆ

ಆ. ಪುರಂದರದಾಸರ-ಕನಕದಾಸರ ಕೊಡುಗೆ

ಇ. ಸ್ವರಮೇಳಕಳಾನಿಧಿ

ಅಧ್ಯಾಯ ಆರು ೨೫೮-೨೬೩

**ಸಮಾರೋಪ**

ಅನುಬಂಧಗಳು ೨೬೪-೨೭೧

೧. ಆಕರ ಗ್ರಂಥಗಳು

೨. ಛಾಯಾಚಿತ್ರಗಳು

## ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಚಲನಶೀಲತೆ ಅಥವಾ ಬದಲಾಗುವಿಕೆ ಜೀವಂತ ಜಗತ್ತಿನ ಮುಖ್ಯ ಲಕ್ಷಣವಾಗಿದೆ. ಈ ಜಗತ್ತು ಈ ಕ್ಷಣ ಇರುವ ಹಾಗೆ ಮತ್ತೆಂದಿಗೂ ಇರುವುದಿಲ್ಲ. ಅದು ಪ್ರತಿಕ್ಷಣವೂ ಹೊಸದಾಗುತ್ತಲೇ ಇರುತ್ತದೆ. ಹೊಸತು ಹಳೆತಾಗಿರುತ್ತಾ ಸಾಗುತ್ತದೆ, ಹಳತು ಹೊಸತಾಗುತ್ತಿರುತ್ತದೆ. ಈ ಬದಲಾಗುವಿಕೆ, ವಿಚಾರಧಾರೆಗಳಲ್ಲಿ ಬದಲಾಗುವಿಕೆ, ವಿಚಾರಧಾರೆಗಳ ಆಳ್ವಿಕೆಯಲ್ಲಿ ಬದಲಾಗುವಿಕೆ ಸಹಜ ಚಾರಿತ್ರಿಕ ಬೆಳವಣಿಗೆಯ ಭಾಗವಾಗಿರುತ್ತದೆ. ಜೀವನದ ಕ್ರಿಯಾಶೀಲತೆಯು ಪ್ರತಿಕ್ಷಣವೂ ಮರುಹುಟ್ಟು ಪಡೆಯುವ ಪ್ರಕ್ರಿಯೆಯಾಗಿರುತ್ತದೆ.

ಕರ್ನಾಟಕವು ಸಾವಿರಾರು ವರ್ಷಗಳ ಸುದೀರ್ಘ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದೆ. ಈ ಕರ್ನಾಟಕದ ಇತಿಹಾಸದಲ್ಲಿ ವಿಜಯನಗರದ ಸ್ಥಾಪನೆಯು ಐತಿಹಾಸಿಕ ಮತ್ತು ಮಹತ್ವಪೂರ್ಣ ಆದ ಘಟನೆಯಾಗಿದೆ. ಈ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿಂದೆ ಹಲವಾರು ಧ್ಯೇಯೋದ್ದೇಶಗಳು ಇರುವುದನ್ನು ಗುರುತಿಸಬಹುದಾಗಿದೆ.

೧೪ನೆಯ ಶತಮಾನದ ಪ್ರಥಮಾರ್ಧದಲ್ಲಿ ಹಠತ್ತಾಗಿ ಎರಗಿ ಬಂದ ದೆಹಲಿಯ ಮುಸ್ಲಿಂ ಸುಲ್ತಾನರ ದಾಳಿಗಳಿಂದ ದಕ್ಷಿಣ ಭಾರತದ ಹಲವಾರು ಸಾಮ್ರಾಜ್ಯಗಳು ನಾಶವಾದವು. ಕರ್ನಾಟಕ ಸಮಾಜವು ಕಂಡ ಭಾರೀ ಸ್ಥಿತ್ಯಂತರ ಕಾಲವಿದು. ಇಂಥ ಸಮಯದಲ್ಲಿ ವಿದ್ಯಾರಣ್ಯರ ಉತ್ತೇಜನ ಸಹಕಾರ ಮಾರ್ಗದರ್ಶನಗಳಿಂದ ಹುಟ್ಟಿ ಬೆಳೆದ ವಿಜಯನಗರ ಸಾಮ್ರಾಜ್ಯವು ಹೊಸ ಸಂಕ್ರಮಣಕ್ಕೆ

ನಾಂದಿಯನ್ನು ಹಾಡಿತು. ಅತ್ಯಂತ ಕಠಿಣಮಯ ನಿರಾಶಾದಾಯಕ ಪರಿಸ್ಥಿತಿಯಲ್ಲಿ ದಾರಿ ತೋರುವ ಬೆಳಕಿನಂತೆ ಉದಯಿಸಿ ಬಂದ ಈ ಸಾಮ್ರಾಜ್ಯವು ದಕ್ಷಿಣ ಭಾರತದ ಜನರಲ್ಲಿ ನವಚೇತನವನ್ನು ತುಂಬಿತು. ವಿಜಯನಗರದ ಅರಸರು ಮುಸ್ಲಿಂರ ದಾಳಿಗಳನ್ನು ಸಮರ್ಥವಾಗಿ ತಡೆದು ಒಳಗಿನ ದಂಗೆಗಳನ್ನು ಹತ್ತಿಕ್ಕಿ ಸಾಮ್ರಾಜ್ಯದಲ್ಲಿ ಶಾಂತಿ, ಸುವ್ಯವಸ್ಥೆಯನ್ನು ನೆಲೆಗೊಳಿಸಿದರು.

ವಿಜಯನಗರ ಸಾಮ್ರಾಜ್ಯವು ಸುಭದ್ರವಾಗಿ ನೆಲೆನಿಂತ ಮೇಲೆ ಸಾಂಸ್ಕೃತಿಕ ರಂಗಕ್ಕೆ ಮಹತ್ವ ಪೂರ್ಣವಾದ ಕೊಡುಗೆಗಳನ್ನು ನೀಡಿತು. ತಮಗಿಂತ ಹಿಂದೆ ಆಳಿದ ರಾಜರುಗಳ ಸಾಂಸ್ಕೃತಿಕ ಪರಂಪರೆಯನ್ನು ವಿಜಯನಗರದ ಅರಸರು ಶ್ರೀಮಂತಗೊಳಿಸಿದರು. ಭವ್ಯವಾದ ಸುಂದರ ನಗರಗಳನ್ನು ಮತ್ತು ಅನೇಕ ದೇವಾಲಯಗಳನ್ನು ನಿರ್ಮಿಸಿದರು. ಕಲೆ, ಸಾಹಿತ್ಯ, ಸಂಸ್ಕೃತಿಯ ಬೆಳವಣಿಗೆಗೆ ಕಾರಣೀಭೂತರಾದರು.ಈ ಕಾಲದ ಇನ್ನೊಂದು ಮುಖ್ಯ ಲಕ್ಷಣವೆಂದರೆ ಮಹಾಸಾಮ್ರಾಜ್ಯಗಳು ವೇಗವಾಗಿ ಬುಡಕಟ್ಟು ಸಮುದಾಯಗಳ ಬದುಕಿನೊಳಕ್ಕೆ ಪ್ರವೇಶ ಮಾಡಿ, ನಿಧಾನವಾಗಿ ಮತ್ತು ಹಂತ ಹಂತವಾಗಿ ಅವುಗಳನ್ನು ಮುಖ್ಯ ಪ್ರವಾಹದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದವು. ಈ ಕಾಲದ ಚರಿತ್ರೆಯು ಸೃಷ್ಟಿಸಿಕೊಂಡ ದಾಖಲೆಗಳು ಕೂಡಾ ಭಿನ್ನವಾದವು. ಮೌಖಿಕ ದಾಖಲೆಗಳು ಅಪಾರವಾದ ಸಂಖ್ಯೆಯಲ್ಲಿ ಹುಟ್ಟಿಕೊಂಡ ಕಾಲವಿದು. ಕೇಂದ್ರೀಕೃತ ರಾಜ್ಯ ವ್ಯವಸ್ಥೆ ಮತ್ತು ಸ್ವಾಯತ್ತವಾಗುಳಿಯ ಬಯಸುವ ಸಣ್ಣಪುಟ್ಟ ಸಂಸ್ಥಾನಗಳ ನಡುವಣ ಕರ್ಷಣ ಮತ್ತು ಹೊಂದಾಣಿಕೆಗಳು ಕೂಡ ತಮ್ಮ ಸೈದ್ಧಾಂತಿಕ ಗ್ರಹಿಕೆಗೆ ಅನುಗುಣವಾದ ಮೌಖಿಕ ದಾಖಲೆಗಳನ್ನು ಸೃಷ್ಟಿಸಿಕೊಂಡವು.

ವಿಜಯನಗರ ಕಾಲದಲ್ಲಿ ಅಸಂಖ್ಯಾತವಾದ ದೇವಾಲಯಗಳು ನಿರ್ಮಾಣವಾದವು. ಸುಂದರ ಹಾಗೂ ಕಲಾತ್ಮಕವಾದ ಈ ದೇವಾಲಯಗಳಲ್ಲಿ ವಾಸ್ತು ಶಿಲ್ಪ, ಚಿತ್ರಕಲೆಗಳು ಮನಮೋಹಕವಾಗಿ ಅರಳಿ ನಿಂತವು. ಈ ಸುಂದರ ಮನಮೋಹಕ, ಆಕರ್ಷಕ ದೇವಾಲಯಗಳು ಕೇವಲ ಅರಸರುಗಳಿಂದಲೇ ನಿರ್ಮಾಣವಾಗಲಿಲ್ಲ. ಈ ಸಾಮ್ರಾಜ್ಯದ ಪ್ರಗತಿಗಾಗಿ ತಮ್ಮ ತನು, ಮನ, ಧನಗಳನ್ನು ಮುಡುಪಾಗಿಟ್ಟು ಅರ್ಪಣಾ ಮನೋಭಾವದಿಂದ ಹೋರಾಡಿದ ಮಂತ್ರಿಗಳು, ಸಾಮಂತರು, ದಣ್ಣಾಯಕರು, ಸೇನಾಧಿಕಾರಿಗಳು ಹಾಗೂ ಉನ್ನತ ಅಧಿಕಾರಿಗಳು, ಗಣ್ಯವ್ಯಕ್ತಿಗಳು, ಶ್ರೀಮಂತ ವರ್ತಕರಿಂದಲೂ ಹಲವಾರು ದೇವಾಲಯಗಳು ನಿರ್ಮಾಣವಾದವು. ಹೀಗೆ ತಾವು ನಿರ್ಮಿಸಿದ ದೇವಾಲಯಗಳು, ಕೆರೆಗಳು, ಅಗ್ರಹಾರಗಳು, ಬಾವಿಗಳಿಂದ ಇಂದಿಗೂ ಹಲವಾರು ಅರಸರು, ಸಾಮಂತರು, ಅಧಿಕಾರಿಗಳು ಜನರ ಮನಸ್ಸಿನಲ್ಲಿ ಚಿರಸ್ಥಾಯಿಗಳಾಗಿದ್ದಾರೆ. ತಾನು ಮಾಡಿದ ಜನಹಿತ, ಜನಪರ ಕಾರ್ಯಗಳಿಂದ ಇಂದಿಗೂ ಚಿರಸ್ಥಾಯಿಯಾಗಿ ನೆಲೆ ನಿಲ್ಲುವವನು ಬಯಕಾರ ರಾಮಪ್ಪ.

ಅರಸರ ಪ್ರಜ್ವಲ ಆಳ್ವಿಕೆಯ ಮುಂದೆ ಅವರ ಸಮಕಾಲೀನ ಸಾಮಂತ ಅರಸರ, ಅಧಿಕಾರಿಗಳ ಸಾಧನೆಗಳು ಗೌಣವಾಗುವುದು ಹಿಂದಿನಿಂದಲೂ ನಡೆದು ಬಂದಿದೆ. ಅದಕ್ಕೆ ಕಾರಣ ಅರಸರು ಸರ್ವಾಧಿಕಾರಿಗಳು, ಸರ್ವಶ್ರೇಷ್ಠರೂ ಆಗಿರುವುದು. ಸಮಕಾಲೀನವರ ಸಾಧನೆಗಳನ್ನು ಪ್ರತ್ಯೇಕವಾಗಿ ಗಮನಿಸಿ ನೋಡಿದಾಗ ಕೆಲವು ಸಾಮಂತರ ಮತ್ತು ಅಧಿಕಾರಿಗಳ ಸಾಧನೆಗಳು, ಅರಸರ ಸಾಧನೆಗಳಿಗಿಂತ ಕೆಲವು ಅಂಶಗಳಲ್ಲಿ ಉನ್ನತವಾಗಿರುವುದು ಕಂಡು ಬರುತ್ತದೆ. ಇಂತಹ ಉನ್ನತ ಸಾಧನೆಗಳನ್ನು ಮಾಡಿದವರಲ್ಲಿ ಬಯಕಾರ ರಾಮಪ್ಪನೂ ಒಬ್ಬನು. ವಾಗ್ಗೇಯಕಾರನೆಂದು ಹೆಸರುವಾಸಿಯಾಗಿದ್ದ ಬಯಕಾರ ರಾಮಪ್ಪನು ೧೬ನೆಯ ಶತಮಾನದ ಪೂರ್ವದಲ್ಲಿ ಬಾಳಿ ಬದುಕಿದವನು. ಇವನ ಸಾಧನೆಗಳು ಜನಪರ ಕಾರ್ಯಗಳು ವಿಜಯನಗರದ ಅರಸರ ಮುಂದೆ ಎಲೆಮರೆಯ ಕಾಯಿಯಂತಾಗಿವೆ. ಸಾಮ್ರಾಜ್ಯದ ಉನ್ನತಿಗಾಗಿ ಎಲೆಯ ಮರೆಯ ಕಾಯಿಯಂತೆ ದುಡಿದು, ಸಾಮ್ರಾಜ್ಯದ ಏಳಿಗೆಗಾಗಿ ಬದುಕನ್ನು ಮುಡುಪಾಗಿಟ್ಟು ಜನರ ಮನಸ್ಸಿನಲ್ಲಿ ಇಂದಿಗೂ ಸ್ಥಾನ ಪಡೆದಿರುವ ಬಯಕಾರಿ ರಾಮಪ್ಪನ ಜೀವನ ಸಾಧನೆಗಳ ಮೇಲೆ ಬೆಳಕನ್ನು ಚೆಲ್ಲುವುದು ಈ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನದ ವ್ಯಾಪ್ತಿ**

'ಬಯಕಾರ ರಾಮಪ್ಪ : ಒಂದು ಅಧ್ಯಯನ' ಎನ್ನುವ ಶೀರ್ಷಿಕೆ ಈ ಪ್ರಬಂಧಕ್ಕಿದೆ. ಈ ಅಧ್ಯಯನದ ಕಾಲಮಿತಿ ಎಂದರೆ ಕೃಷ್ಣದೇವರಾಯನ ಕಾಲದಿಂದ ಅಂದರೆ ಕ್ರಿಶ. ೧೫೦೯ ರಿಂದ ೧೫೬೫ರವರೆಗೆ. ಶ್ರೀಕೃಷ್ಣದೇವರಾಯನ ಕಾಲದಲ್ಲಿ ಬಯಕಾರ ರಾಮಪ್ಪನ ಪೂರ್ವಿಕರು ಉನ್ನತ ಹುದ್ದೆಗಳಲ್ಲಿದ್ದರು. ಬಯಕಾರ ರಾಮಪ್ಪನ ಚಿಕ್ಕಪ್ಪ ರಾಮಯ್ಯ ಭಾಸ್ಕರನನ್ನು ಕೃಷ್ಣದೇವರಾಯನು ಕೊಂಡವೀಡು ದುರ್ಗದ ಅಧಿಪತಿಯಾಗಿ ನೇಮಿಸಿದ್ದನು. ಇದೇ ಕಾಲದಲ್ಲಿ ರಾಮಪ್ಪನು ಕಿರಿಯ ಹುದ್ದೆಗಳಲ್ಲಿ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸಿದ್ದನು. ಕೃಷ್ಣದೇವರಾಯನ ನಂತರ ಅವನ ಮಲ ಸಹೋದರ ಅಚ್ಯುತರಾಯನು ವಿಜಯನಗರದ ಸಾಮ್ರಾಟನಾದನು. ಇವನ ಕಾಲದಲ್ಲಿ ರಾಮಪ್ಪನು ಅತ್ಯುನ್ನತ ಹುದ್ದೆಗೇರಿದನು. ಅಚ್ಯುತರಾಯನು ಬಯಕಾರ ರಾಮಪ್ಪನನ್ನು ಕೊಂಡವೀಡು ದುರ್ಗದ ಅಧಿಪತಿಯನ್ನಾಗಿ ನೇಮಿಸಿದನು. ಮುಂದೆ ಸಾಮ್ರಾಟನಾದ ಸದಾಶಿವರಾಯನು ಅಳಿಯ ರಾಮರಾಯನ ಕೈಗೊಂಬೆಯಾದನು. ಬಯಕಾರ ರಾಮಪ್ಪನು ರಾಮರಾಯನ ಸಹೋದರನಾದ ವೆಂಕಟನ ನೆರವಿನಿಂದ ಅವನ ವಿಶ್ವಾಸವನ್ನು ಗೆದ್ದನು. ಮುಂದೆ ಕೆಲವೇ ವರ್ಷಗಳಲ್ಲಿ ವಿಜಯನಗರ ಸಾಮ್ರಾಜ್ಯವು ಪತನವಾಯಿತು. ಬಹುಶಃ ಸಾಮ್ರಾಜ್ಯವು ಅಮಾನುಷವಾಗಿ ನಾಶವಾಗುವ ಮೊದಲೇ ಇವನು ಕಾಲವಾಗಿರಬೇಕು.

ಬಯಕಾರ ರಾಮಪ್ಪನು ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ಬಾಳಿ ಬದುಕಿದನು. ಸಾಮ್ರಾಜ್ಯದ ಉನ್ನತಿಗಾಗಿ ಎಲೆಮರೆಯ ಕಾಯಿಯಂತೆ ದುಡಿದು, ಸಾಮ್ರಾಜ್ಯದ ಏಳಿಗೆಗಾಗಿ ಬದುಕನ್ನು ಮುಡುಪಾಗಿಟ್ಟು ಜನರ ಮನಸ್ಸಿನಲ್ಲಿ ಇಂದಿಗೂ ನೆಲೆನಿಂತಿದ್ದಾನೆ. ಬಯಕಾರ ರಾಮಪ್ಪನ ಜನಹಿತ ಕೆಲಸಗಳಿಂದ ಇಂದಿಗೂ ಜನರು ಉಪಯೋಗ ಪಡೆಯುತ್ತಿರುವುದು ಅವನ ಹಿರಿಮೆಗೆ ಹಿಡಿದ ಕೈಗನ್ನಡಿಯಾಗಿದೆ. ವಿಜಯನಗರ ಸಾಮ್ರಾಜ್ಯದ ಹಿನ್ನೆಲೆಯೊಂದಿಗೆ ಬಯಕಾರ ರಾಮಪ್ಪನ ಜೀವನ ವೃತ್ತಾಂತ ಹಾಗೂ ವಿಜಯನಗರ ಸಾಮ್ರಾಜ್ಯಕ್ಕೆ ಅವನು ಸಲ್ಲಿಸಿದ ಸೇವೆ, ಅವನು ಕಟ್ಟಿಸಿರುವ ಅಗ್ರಹಾರಗಳು, ದೇವಾಲಯಗಳು, ಕೆರೆಗಳು, ಬಾವಿಗಳು ಇವುಗಳ ಮುಖಾಂತರ ಅವನ ಸಮಾಜಸೇವೆ ಮತ್ತು ಕಲೆಗೆ ಸಲ್ಲಿಸಿದ ಸೇವೆಯನ್ನು ಸಂಗೀತ ಕ್ಷೇತ್ರಕ್ಕೆ ಅವನ ಮಹತ್ತರ ಕೊಡುಗೆಯಾದ 'ಸ್ವರಮೇಳಕಳಾನಿಧಿ'ಯನ್ನು ಅಲ್ಲದೆ ಇಂದಿಗೂ ಕೆರೆಗಳಿಂದಾಗುತ್ತಿರುವ ಉಪಯೋಗವನ್ನು ಗುರುತಿಸಿ ಅಧ್ಯಯನ ಮಾಡುವುದು ಈ ಸಂಶೋಧನೆಯ ವ್ಯಾಪ್ತಿಯಾಗಿದೆ.

ಪ್ರಸ್ತುತ ಅಧ್ಯಯನವು ಈ ಕೆಳಗಿನಂತೆ ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ವಿಜಯನಗರದ ಹಿನ್ನೆಲೆಯೊಂದಿಗೆ, ವಿಜಯನಗರ ಸ್ಥಾಪನಾನಂತರ ದಲ್ಲಿನ ವಿಜಯನಗರದ ರಾಜಕೀಯ ಪರಿಸ್ಥಿತಿ, ಬಹಮನಿ ಅರಸರೊಂದಿಗೆ ಸ್ಥಳೀಯ ಅಮರನಾಯಕರ ಜೊತೆ ವಿಜಯನಗರದ ಸಂಬಂಧಗಳು ಹಾಗೂ ಅಂದಿನ ಕಾಲದ ಸಾಮಾಜಿಕ ಮತ್ತು ಧಾರ್ಮಿಕ ಪರಿಸ್ಥಿತಿಯನ್ನು ಕುರಿತು ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ವಿಜಯನಗರ ಪೂರ್ವದಲ್ಲಿ ನಾಯಕ ಜನಾಂಗವು ಯಾವ ರೀತಿಯಲ್ಲಿ ಜೀವನ ಸಾಗಿಸುತ್ತಿತ್ತು. ಗುಪ್ತರ ಕಾಲದಲ್ಲಿ, ಮಾರ್ಯ ಕಾಲದಲ್ಲಿ ಕಾಡಿನಿಂದ ನಾಡಿಗೆ ಬಂದುದನ್ನು ಅಲ್ಲಿಂದ ಸ್ಥಳೀಯ ಅರಸರಾಗುವವರೆಗೆ ಬೆಳೆದು ಬಂದಿದ್ದನ್ನು ಹೇಳಲಾಗಿದೆ. ಅಲ್ಲದೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಕರ್ನಾಟಕದ ಚರಿತ್ರೆಗೆ ನೀಡಿದ ಕೊಡುಗೆಗಳನ್ನು ಹಾಗೂ ಬಯಕಾರ ರಾಮಪ್ಪನ ಕುಟುಂಬದ ಹಿನ್ನೆಲೆಯನ್ನು ಹೇಳಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಯಕಾರ ರಾಮಪ್ಪನ ಸಾಧನೆಗಳಾದ ಅವನು ಮಾಗಾಣಿಕಾರನಿಂದ ಕೊಂಡವೀಡುವಿನ ಅರಸಾದುದನ್ನು, ಅವನು ಕಟ್ಟಿಸಿದ ದೇವಾಲಯ, ಅಗ್ರಹಾರ, ಕೆರೆ, ಭಾವಿಗಳನ್ನು ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಸಂಗೀತದ ಹುಟ್ಟು, ಬೆಳವಣಿಗೆ, ಕರ್ನಾಟಕ ಸಂಗೀತಕ್ಕೆ ಪುರಂದರದಾಸರ, ಕನಕದಾಸರ ಕೊಡುಗೆಯನ್ನು ಹಾಗೂ ಬಯಕಾರ ರಾಮಪ್ಪನ ಮೇರು ಕೃತಿಯಾದ ಸ್ವರಮೇಳ ಕಳಾನಿಧಿಯನ್ನು ಕುರಿತು ಹೇಳಲಾಗಿದ.

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು, ಇದರಲ್ಲಿ ಅಧ್ಯಯನದ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

# ಅಧ್ಯಾಯ ೨
# ವಿಜಯನಗರ ಕಾಲದ ಪರಿಸ್ಥಿತಿ

ಅ. ಸಾಮಾಜಿಕ ಪರಿಸ್ಥಿತಿ

ಆ. ರಾಜಕೀಯ ಪರಿಸ್ಥಿತಿ

ಇ. ಧಾರ್ಮಿಕ ಪರಿಸ್ಥಿತಿ

## ಅಧ್ಯಾಯ ೨

# ವಿಜಯನಗರ ಕಾಲದ ಪರಿಸ್ಥಿತಿ

### ಸಾಮಾಜಿಕ ಪರಿಸ್ಥಿತಿ

ಭಾರತೀಯ ಸಮಾಜದ ರಚನೆ ಸಂಕೀರ್ಣವಾಗಿದೆ. ಅನೇಕ ಅಂಶಗಳು ಅದರ ಮೇಲೆ ಪರಿಣಾಮವನ್ನು ಬೀರಿವೆ. ಪ್ರಾದೇಶಿಕ ವೈಚಿತ್ರ್ಯಗಳು, ಧರ್ಮ, ನಂಬಿಕೆ, ಪಂಥಗಳಲ್ಲಿಯ ವ್ಯತ್ಯಾಸ, ಜಾತಿಯ ಕಟ್ಟುಪಾಡುಗಳು, ಜನಾಂಗ, ಭಾಷೆ ಇವೆಲ್ಲವು ಅತಿ ತೀವ್ರವಾಗಿ ವರ್ತಿಸಿ, ಪ್ರವರ್ತಿಸಿ ಭಾರತೀಯ ಸಮಾಜವನ್ನು ಅನೇಕ ದೃಷ್ಟಿಗಳಿಂದ ವಿಶಿಷ್ಟವನ್ನಾಗಿ ಮಾಡಿವೆ. ಸಮಾಜದ ಸುದೀರ್ಘ ಇತಿಹಾಸ, ವಿಶಾಲ ವ್ಯಾಪ್ತಿ, ಜನರ ವೈವಿಧ್ಯ ಇವು ಯುಗಗಳಿಂದ ವಿಕಾಸಗೊಳ್ಳುತ್ತಾ ಬಂದು ಮಾತಿನ ಪ್ರವೃತ್ತಿಗಳು ಮತ್ತು ಮೌಲ್ಯಗಳು ಸಮಾಜದ ಲಕ್ಷಣವನ್ನು ರೂಢಿಸಿವೆ. ಪ್ರಾದೇಶಿಕ ಅಂಶಗಳು ಸಾಲದು ಎನ್ನುವಂತೆ ಅಲೆ ಅಲೆಯಾಗಿ ಮೇಲಿಂದ ಮೇಲೆ ವಿದೇಶಿ ರಕ್ತವೂ ಹರಿದು ಬಂದು ದೇಶೀಯ ಅಂಶಗಳಿಗೆ ಸೇರಿಕೊಂಡು ಸಮಾಜದ ವಿಶಿಷ್ಯ ವಿನ್ಯಾಸವನ್ನು ರೂಪಿಸಿವೆ. ಆರ್ಯರು, ಗ್ರೀಕರು, ಸಿಥಿಯನರು, ಪಾರ್ಥಿಯನ್ನರು, ಶಕರು, ಹೂಣರು ಪ್ರಾಚೀನ ಕಾಲದಲ್ಲಿ ಭಾರತದ ಮಣ್ಣಿನ ಮೇಲೆ ಆಳವಾದ ಮುದ್ರೆಯನ್ನು ಉಳಿಸಿದರು. ಮಧ್ಯಕಾಲೀನ ಯುಗದಲ್ಲಿ ಅರಬರು, ಟರ್ಕರು, ಅಫ್ಘನ್ನರು, ಪರ್ಶಿಯನ್ನರು, ಮೊಗಲರು ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ಕೊಟ್ಟಿದ್ದಾರೆ. ಆಧುನಿಕ ಯುಗದಲ್ಲಿ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲೀಷರು ಕೊಡುಗೆ ನೀಡಿದ್ದಾರೆ. ವಿವಿಧ ಕಾಲಗಳಲ್ಲಿ ಭಾರತವು ವಿಶ್ವದಾದ್ಯಂತ ಇದ್ದ ಪ್ರಮುಖ ಶಕ್ತಿಗಳೆಲ್ಲದರ ತೊಟ್ಟಿಲಾಗಿ ವರ್ತಿಸುತ್ತಾ ಬಂದಿದೆ.

"ಸಂಸ್ಕೃತಿ" ಎಂಬ ಪದವು ಕೇವಲ ಮಾತಿಗೆ ನಿಲುಕದ ಜನರು ಅನುಭವಿಸುವ, ಆಚರಿಸುವ ರೀತಿ, ನೀತಿಗಳಿಂದ ಹಾಗೂ ಅದರಿಂದ ಪಡೆಯುವ ಅನುಭವಕ್ಕೆ ಕಂಡುಬರುವ ವಿಷಯ ಎಂದು ಸಾಮಾನ್ಯವಾಗಿ ಹೇಳಬಹುದು. ಸಾವಿರಾರು ವರ್ಷಗಳ ಒಂದು ಅನುಭವ, ಆಲೋಚನಾ ಫಲ, ನಂಬಿಕೆಗಳು, ನಡುವಳಿಕೆಗಳು ಇವುಗಳನ್ನೇ ನಾವು ಸಂಸ್ಕೃತಿಯ ಮೂಲ ಅಂಶವೆಂದು ಪರಿಗಣಿಸಬಹುದಾಗಿದೆ. ಜನತೆಯ ಸಾವಿರಾರು ವರ್ಷಗಳ ನಡವಳಿಕೆ, ತಿಳುವಳಿಕೆಗಳ ಫಲವಾಗಿಯೇ ಸಮಾಜಕ್ಕೆ ಕೂಡಿಬರುವ ಸಂಸ್ಕಾರವನ್ನು 'ಸಂಸ್ಕೃತಿ' ಎಂದು ಕರೆಯಲಾಗುವುದು. ಪ್ರತಿಯೊಂದು ಸಮಾಜಕ್ಕೆ ತನ್ನದೇ ಆದ ಸಂಸ್ಕೃತಿ ಇದ್ದೇ ಇರುತ್ತದೆ. ಸಮಾಜಕ್ಕೆ ಒಂದು ರೀತಿಯಲ್ಲಿ ಸ್ಫೂರ್ತಿಯನ್ನು ಕೊಡುವಂಥದು ಸಂಸ್ಕೃತಿ.

ಹಲವಾರು ಅಂಶಗಳು ಸಮಾಜ ವ್ಯವಸ್ಥೆಯ ಮೇಲೆ ಪರಿಣಾಮವನ್ನು ಬೀರುತ್ತವೆ. ಅವು ರಾಜಕೀಯ ಆದರ್ಶವಾಗಬಹುದು. ಧಾರ್ಮಿಕ ಪ್ರವೃತ್ತಿಯಾಗಬಹುದು. ಸಾಂಸ್ಕೃತಿಕ ಒಲವಾಗಬಹುದು. ಆರ್ಥಿಕ ಪರಿಸ್ಥಿತಿಯಾಗಬಹುದು. ಬೌದ್ಧಿಕ ವಾತಾವರಣವಾಗಬಹುದು. ರಾಜಕಾರಣವು ಮನುಷ್ಯನ ಜೀವನದಲ್ಲಿ ಒಂದು ಮಹತ್ವದ ಪಾತ್ರವನ್ನು ನಿರ್ವಹಿಸುತ್ತದೆ. ರಾಜ್ಯದ ಮಾದರಿಯು ಸಾಮಾಜಿಕ ವ್ಯವಸ್ಥೆಯನ್ನು ನಿರ್ಧರಿಸುವ ಒಂದು ಅಂಶವಾಗುತ್ತದೆ.

ಏಕಾಧಿಪತ್ಯ, ಚಕ್ರಾಧಿಪತ್ಯ, ನಿರಂಕುಶ ಆಡಳಿತ, ಬಂಡವಾಳಶಾಹಿ, ಪ್ರಜಾಸತ್ತೆ, ಮೊದಲಾದ ಯಾವುದೇ ಡೆಮೋಕ್ರಸಿ ಆದರೂ ಸಮಾಜದ ತಳಹದಿ ಮೇಲೆ ಬಲವಾದ ಪ್ರಭಾವವನ್ನು ಹೊಂದಿರುತ್ತದೆ. ರಾಜಕಾರಣದಲ್ಲಿ ಪ್ರಚಲಿತವಾಗಿರುವ ಆದರ್ಶಕ್ಕನುಗುಣವಾಗಿ ಆ ದಿಕ್ಕಿನಲ್ಲಿ ಜನತೆಯನ್ನು ನಿಯಂತ್ರಿಸಿ ಮುನ್ನಡೆಸಲಾಗುತ್ತದೆ. ಅಧಿಕಾರಕ್ಕೆ ಸೈನ್ಯಬಲ ಮತ್ತು ಆರ್ಥಿಕ ಬಲ ಎರಡೂ ಬೇಕು. ಜನತೆಯ ಶಕ್ತಿಯನ್ನು ತನ್ನದೇ ಒಲುವುಗಳು ದಿಕ್ಕಿನಲ್ಲಿ ಹರಿಸುವುದು ರಾಜಕೀಯ ಪರಿಸ್ಥಿತಿಯೇ. ಒಬ್ಬ ಜ್ಯೂಲಿಯಸ್ ಸೀಸರ್ ಇಡೀ ರೋಮನ್ ರಿಪಬ್ಲಿಕ್‌ನ ಬಲವನ್ನು ತಲೆಕೆಳಗೆ ಮಾಡಿಬಿಟ್ಟನು. ಒಬ್ಬ ನೆಪೋಲಿಯನ್ ಯೂರೋಪಿಯನ್ ನಕ್ಷೆಯನ್ನೇ ಬದಲಾಯಿಸಿದನು. ಒಬ್ಬ ಅಶೋಕನು ಭಾರತದ ಉದ್ದಗಲದ ತುಂಬಾ ನೈಜಕತೆಯ ಶಕ್ತಿಯನ್ನು ತುಂಬಿದನು. ಅಕ್ಬರನು ಇಡೀ ದೇಶದಲ್ಲಿ ಉದಾರವಾದದ ಬೀಜಗಳನ್ನು ಬಿತ್ತಿದನು. ಅತೀ ಕಡಿಮೆ ಕಾಲದಲ್ಲಿ ನಿರ್ದಿಷ್ಟ ವಲಯದಲ್ಲಿ ಪ್ರಭಾವ ಬೀರಬಹುದಾದ ಶಕ್ತಿ ಇರುವುದು ರಾಜಕೀಯ ನಾಯಕತ್ವಕ್ಕೇ. ಇದು ಒಂದು ಸಮಾಜದ ವ್ಯವಸ್ಥೆಯನ್ನು ರೂಪಿಸಬಹುದು, ಬದಲಿಸಬಹುದು ಅಥವಾ ಹಾಳು ಮಾಡಬಹುದು.[೧]

ಸಾಮಾಜಿಕ ಪರಿಸ್ಥಿತಿಗಳ ಅಧ್ಯಯನವು ವಿಶಾಲವಾದ ಕ್ಷೇತ್ರವನ್ನು ಒಳಗೊಳ್ಳುತ್ತದೆ. ಜೀವನ ಮತ್ತು ಆಲೋಚನಾ ವಿಧಾನ, ರೂಢಿ ಮತ್ತು ಅಭ್ಯಾಸಗಳು, ನೀತಿಗಳು, ಸ್ವಭಾವಗಳು, ಕುಟುಂಬದ

ಸ್ವರೂಪ, ಪ್ರಚಲಿತವಾಗಿದ್ದ ಸಾಮಾಜಿಕ ವ್ಯವಸ್ಥೆಗಳು, ಮಹಿಳೆಯರ ಸ್ಥಾನಮಾನ, ವಾರಸುದಾರಿಕೆಯನ್ನು ಕುರಿತ ವಿಚಾರಗಳು, ಜಾತ್ರೆಗಳು ಮತ್ತು ಹಬ್ಬಗಳು, ವಿಧಿಗಳು ಮತ್ತು ಆಚರಣೆಗಳು, ಹುಟ್ಟು ಮತ್ತು ಸಾವು, ಆಹಾರ ಮತ್ತು ಪಾನೀಯದ ಅಭ್ಯಾಸ, ಉಯಡೆ ಮತ್ತು ಆಭರಣಗಳ ಬಗೆಗಳು, ಕ್ರೀಡೆಗಳು ಮತ್ತು ಮನೋರಂಜನೆ, ಆಸ್ಥಾನ ಜೀವನ ಮತ್ತು ಸಾಮಾಜಿಕ ಜೀವನ, ನಂಬಿಕೆಗಳು ಮತ್ತು ಮೂಢನಂಬಿಕೆಗಳು, ಜಾತಿಗಳು ಮತ್ತು ಸಮುದಾಯಗಳು, ಒಂದು ಸಮಾಜದ ಸಂಸ್ಕೃತಿಯ ಮಟ್ಟವನ್ನು ಪ್ರತಿಬಿಂಬಿಸುವ ಅನೇಕ ಇತರ ಸಮಸ್ಯೆಗಳನ್ನು ನಾವು ಪರಿಗಣಿಸಬೇಕಾಗುತ್ತದೆ. ಈ ವ್ಯವಸ್ಥೆಗಳ ಬೆಳವಣಿಗೆ ಅವುಗಳ ಸೂಕ್ತ ಕಾರ್ಯ ನಿರ್ವಹಣೆಗಳಿಗೆ ಅನುಕೂಲಕರವಾದ ವಾತಾವರಣ ಅಗತ್ಯವಾಗುತ್ತದೆ. ಒಂದು ಸಮಾಜದ ಪ್ರಗತಿಯು ಒಂದು ನಿರ್ದಿಷ್ಟ ವಾತಾವರಣವನ್ನು ಅವಲಂಬಿಸಿರುತ್ತದೆ.

ಚಲನಶೀಲವೂ, ಪ್ರಗತಿಯುತವೂ ಆದ ಶಕ್ತಿಗಳು ಸಾಂಪ್ರದಾಯಿಕ ಸಾಮಾಜಿಕ ಸ್ತರೀಕರಣವನ್ನು ಬದಲಾಯಿಸುತ್ತಿದ್ದವು. ವರ್ಣಾಶ್ರಮ ಧರ್ಮವೇ ಸಮಾಜದ ಮೂಲ ಆಧಾರವಾಗಿತ್ತು. ಆದರೆ ಆಚರಣೆಯಲ್ಲಿ ಮಾತ್ರ ಅವುಗಳನ್ನು ಉಲ್ಲಂಘಿಸುವುದು ಸಾಮಾನ್ಯವಾಗಿತ್ತು. ಸಮಾಜ ಜೀವನದಲ್ಲಿ ಜಾತಿಯು ತನ್ನ ಸಾಂಗತ್ಯವನ್ನು ಕಳೆದುಕೊಂಡಿತ್ತು. ಸಾಮಾಜಿಕ ಸ್ಥಾನಮಾನದಲ್ಲಿ ಕೆಲವು ಜಾತಿಗಳು ಮೇಲಕ್ಕೆ ಏರಲು ಪ್ರಯತ್ನ ಪಡುತ್ತಿದ್ದವು. ವಿಜಯನಗರದ ಅರಸರಗಿಂತ ಹಿಂದಿನ ಅವಧಿಯಂತಲ್ಲದೆ ಈಗ ಈ ಪ್ರವೃತ್ತಿಯು ಹೆಚ್ಚಾಗಿ ವ್ಯಕ್ತವಾಯಿತು. ವಿಜಯನಗರದ ಅರಸರು ವರ್ಣಧರ್ಮ, ಆಶ್ರಮ ಧರ್ಮಗಳನ್ನು ರಕ್ಷಿಸಲು ಪ್ರಯತ್ನಿಸುತ್ತಿದ್ದರು. 'ಹಿಂದೂಗಳ ಸಾಮಾಜಿಕ ಐಕ್ಯತೆಯನ್ನು ಪರಿಪಾಲಿಸಲು ಅರಸರಿಗಿದ್ದ ಕಾಳಜಿ ಅವರು ಧರಿಸಿದ ಬಿರುದುಗಳಿಂದ ಧರ್ಮದ ರಕ್ಷಕ, ಎಲ್ಲಾ ಜಾತಿಗಳ ಕರ್ತವ್ಯವನ್ನು ಎತ್ತಿ ಹಿಡಿಯುವವನು, ಸಾಮ್ರಾಜ್ಯದ ಸಕಲ ಜಾತಿಗಳ ರಕ್ಷಕ ಇತ್ಯಾದಿ' ಎಂದು ಟಿ.ವಿ.ಮಹಾಲಿಂಗಂ ಅಭಿಪ್ರಾಯಪಡುತ್ತಾರೆ. ಅರಸರ ನೀತಿಯೇನೋ ಇದ್ದ ವ್ಯವಸ್ಥೆಯನ್ನು ದುರ್ಬಲಗೊಳಿಸದೆ ರಕ್ಷಿಸುವುದೇ ಆಗಿದ್ದರೂ ಕೂಡ ಪ್ರತಿಯೊಂದು ಜಾತಿಯ ಹಕ್ಕು ಬಾಧ್ಯತೆಗಳನ್ನು, ಕರ್ತವ್ಯಗಳನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಿರಲಿಲ್ಲ. ಈ ಕಾಲದಲ್ಲಿ ಕಂಡುಬಂದ ಇನ್ನೊಂದು ಬೆಳವಣಿಗೆಯೆಂದರೆ, ಬೇಕಾದಷ್ಟು ಉಪಜಾತಿಗಳು ಮತ್ತು ಅವುಗಳಲ್ಲಿ ಎಡಗೈ ಮತ್ತು ಬಲಗೈ ಎಂಬ ಬೇಧಗಳು ಕಾಣಿಸಿಕೊಂಡದ್ದು.[೩]

ಭಾರತದ ಪ್ರಾಚೀನ ಇತಿಹಾಸದಿಂದಲೂ ಬ್ರಾಹ್ಮಣ, ಕ್ಷತ್ರೀಯ ಹಾಗೂ ವೈಶ್ಯ ಈ ಮೂರು ವರ್ಣಗಳು ದ್ವಿಜ ವರ್ಣಗಳೆನಿಸಿಕೊಂಡಿವೆ. ಈ ಮೂರು ವರ್ಣಗಳೂ ಆರ್ಯರ ಬ್ರಾಹ್ಮಣ, ರಾಜನ್ಯ ಹಾಗೂ ವಿಶಃ ಋಗ್ವೇದ ಕಾಲದ ಪಂಗಡಗಳಿಂದಲೇ ಉದಿಸಿದ್ದು ಎಂದು ಹೇಳುವುದು

ಸತ್ಯ ಸಂಗತಿಯೇ ಆಗಿದೆ. ಅಂದಿನ ಕಾಲದಲ್ಲಿ ಇವರಿಗೆಲ್ಲ ಯಜ್ಞ ಸಂಸ್ಕೃತಿ ಎನ್ನುವುದು ಸರ್ವೇ ಸಾಮಾನ್ಯವಾಗಿತ್ತು. ಉಪನಯನ ಸಂಸ್ಕಾರ ಹಾಗೂ ಮಂತ್ರೋಚ್ಚಾರಗಳು ಆಯಾ ವರ್ಗಕ್ಕೆ ಬೇರೆ ಬೇರೆ ಪದ್ಧತಿಯಲ್ಲಿದ್ದವು. ಉಪನಯನ ಸಂಸ್ಕಾರವನ್ನು ಇವರು ಎರಡನೆಯ ಹುಟ್ಟು ಎಂದು ಪರಿಗಣಿಸಿದ್ದರಿಂದ ಇವರು 'ದ್ವಿಜ' ಎಂದು ಕರೆದುಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ವೈಶ್ಯರು ವರ್ಣ ವ್ಯವಸ್ಥೆಯಲ್ಲಿ ಉಚ್ಛರಾಗಿ ಬ್ರಾಹ್ಮಣ ಹಾಗೂ ರಾಜರಿಗಿಂತಲೂ ಕೆಳಹಂತದಲ್ಲಿ ಬರುತ್ತಿದ್ದರು. ಈ ವರ್ಣ ವ್ಯವಸ್ಥೆಯಲ್ಲಿ ನಾಲ್ಕನೆಯ ವರ್ಣವೆನ್ನಿಸಿಕೊಂಡಿದ್ದ ಶೂದ್ರ ವರ್ಣವು ಮಾತ್ರ ದ್ವಿಜ ವರ್ಣವಾಗಿರಲಿಲ್ಲ.

ವಿಜಯನಗರ ಕಾಲದ ಸಾಮಾಜಿಕ ರಚನೆಯಲ್ಲಿ ಬ್ರಾಹ್ಮಣರು ಹಿಂದೂ ಸಮಾಜದ ಅತ್ಯಂತ ಎತ್ತರದ ಪ್ರಧಾನವಾದ ಸ್ಥಾನದಲ್ಲಿದ್ದರು. ಇವರುಗಳಲ್ಲಿ ಎರಡು ಮುಖ್ಯವಾದ ವಿಭಾಗಗಳಿದ್ದವು. ೧.ಉತ್ತರದ ಪಂಚಗೌಡ, ೨.ದಕ್ಷಿಣದ ಪಂಚದ್ರಾವಿಡ. ಈ ಕಾಲದ ಕರ್ನಾಟಕ ಬ್ರಾಹ್ಮಣರು ಪಂಚ ದ್ರಾವಿಡ ವರ್ಗಕ್ಕೆ ಸೇರಿದವರು. ಅವರಲ್ಲಿ ಪ್ರಮುಖವಾಗಿ ಆರು ಭಾಷಾ ವರ್ಗಗಳಿದ್ದವು. ಕನ್ನಡ, ತೆಲುಗು, ತಮಿಳು, ಮರಾಠಿ, ಕೊಂಕಣಿ ಮತ್ತು ತುಳು ಭಾಷೆಗಳನ್ನಾಡುತ್ತಿದ್ದರು. ಈ ಕಾಲದ ಬ್ರಾಹ್ಮಣರೆಲ್ಲರೂ ಸ್ಮಾರ್ತ, ಮಾಧ್ವ ಅಥವಾ ಶ್ರೀವೈಷ್ಣವ ಮತಕ್ಕೆ ಸೇರಿದವರು. ಕ್ರಮವಾಗಿ ಇವರು ಶಂಕರಾಚಾರ್ಯ, ಮಧ್ವಾಚಾರ್ಯ ಮತ್ತು ರಾಮಾನುಜಾಚಾರ್ಯರ ಅನುಯಾಯಿಗಳಾಗಿದ್ದರು. ಈ ಮೂರು ವರ್ಗಗಳಲ್ಲಿ ಧಾರ್ಮಿಕ ಅಧ್ಯಯನಾಧಿಗಳನ್ನು ನಡೆಸುತ್ತಿದ್ದ ವೈದಿಕರು, ವೃತ್ತಿಜೀವಿಗಳು, ಅಧಿಕಾರಿಗಳು, ನೌಕರರು, ಜಮೀನುದಾರರು, ವರ್ತಕರು, ವಿವಿಧ ಕಸಬುಗಳನ್ನು ನಡೆಸುತ್ತಿದ್ದ ಲೌಕಿಕರೂ ಸೇರಿದ್ದರು.

ಸ್ಮಾರ್ತರು ಶಂಕರಾಚಾರ್ಯರ ಅದ್ವೈತ ಸಿದ್ಧಾಂತವನ್ನು ಒಪ್ಪಿಕೊಂಡವರು. ಮಾಧ್ವರು ಮಧ್ವಾಚಾರ್ಯರ ದ್ವೈತ ದರ್ಶನದ ಅನುಯಾಯಿಗಳು. ಇವರಲ್ಲಿ ಬಡಗನಾಡು, ಅರಮೇಲು, ಅವರವತ್ತು ವಕ್ಕಲು, ದೇಶಸ್ಥ ಇತ್ಯಾದಿ ಉಪಪಂಗಡಗಳಿದ್ದವು. ಶ್ರೀವೈಷ್ಣವರು ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ದರ್ಶನದ ಅನುಯಾಯಿಗಳು. ವಿಜಯನಗರ ಕಾಲದಲ್ಲಿ ಇವರಲ್ಲಿ ಎರಡು ಪಂಗಡಗಳಿದ್ದವು. ಅವು ತೆಂಗಲೈ ಮತ್ತು ವಡಗಲೈ. ಎರಡೂ ಪಂಗಡಗಳ ನಡುವೆ ವಿವಾಹ ಮತ್ತು ಸಹಪಂಕ್ತಿ ಭೋಜನ ಮೊದಲಾದ ಸಾಮಾಜಿಕ ಸಂಪರ್ಕವು ತುಂಬಾ ಕಡಿಮೆಯಾಗಿತ್ತು. ಇವರಲ್ಲಿ ಹೆಬ್ಬಾರ್, ಮಂಡ್ಯತ್ತಾರ್, ಹೆಮ್ಮಿಗೆಯಾರ್, ತಿರುಮಲೈಯಾರ್, ಕೀಳ್ನಾತ್ತರ್ ಮತ್ತು ಸ್ವಯಮಾಚಾರ್ಯರ್ ಉಪಪಂಗಡಗಳಿದ್ದವು. ಕರ್ನಾಟಕದ ಶ್ರೀವೈಷ್ಣವರಲ್ಲಿ ಹಲವರು ತಮಿಳನ್ನು, ಹಲವರು ತೆಲುಗನ್ನು ಮನೆ ಮಾತಾಗಿ ಆಡುತ್ತಿದ್ದರು. ಗೋತ್ರ ಮತ್ತು ಪ್ರವರಗಳಿಗೆ ಅನುಗುಣವಾಗಿ

ಎಲ್ಲ ಬ್ರಾಹ್ಮಣರು ಬೇರೆ ಬೇರೆ ಗುಂಪುಗಳಾಗುತ್ತಿದ್ದರು. ಬ್ರಾಹ್ಮಣರಿಗೆ ೧೬ ನಿತ್ಯ ಸಂಸ್ಕಾರಗಳಾಗಬೇಕಿತ್ತು. ಉಪನಯನ ಅವುಗಳಲ್ಲಿ ಮುಖ್ಯವಾದದ್ದು. ಬಾಲಕನಿಗೆ ಅದು ವೇದಾಧ್ಯಯನಕ್ಕೆ ದೀಕ್ಷೆಯನ್ನು ಕೊಡುತ್ತಿದ್ದಿತು. ತರಕಾರಿಗಳ ಬಳಕೆ, ಆಹಾರ ಪದ್ಧತಿಗಳಲ್ಲೂ ನಿಷೇಧಗಳಿರುತ್ತಿದ್ದವು. ಸಾಂಪ್ರದಾಯಿಕ ಶೈಲಿಯ ವಿವಾಹದಲ್ಲಿ ಹಲವಾರು ಆಚರಣೆಗಳನ್ನು ನಡೆಸಲಾಗುತ್ತಿತ್ತು. ವಿವಾಹ ವಿಚ್ಛೇದನಕ್ಕಾಗಲಿ, ವಿಧವಾ ಪುನರ್ ವಿವಾಹಕ್ಕಾಗಲಿ ಅವಕಾಶವಿರಲಿಲ್ಲ. ಅವು ನಿಶಿದ್ಧವಾಗಿದ್ದವು. ಬ್ರಾಹ್ಮಣರು ಸತ್ತವರನ್ನು ಸುಡುತ್ತಿದ್ದರು. ಹತ್ತು ದಿನಗಳ ಕಾಲ ಮೈಲಿಗೆ, ಹದಿನಾಲ್ಕು ದಿನಗಳ ಕಾಲ ಅಂತ್ಯಕ್ರಿಯೆಗಳು ಮತ್ತು ಸಂಬಂಧಿತ ಅಪರ ಕರ್ಮಗಳು ನಡೆಯುತ್ತಿದ್ದವು. ಸಾಂಪ್ರದಾಯಿಕವಾಗಿ ಅವರ ವೃತ್ತಿ ವೇದ, ಶಾಸ್ತ್ರ, ಪುರಾಣಗಳ ಅಧ್ಯಯನ ಯಜ್ಞ ಯಾಗಾದಿಗಳ ಆಚರಣೆ, ಅಗ್ರಹಾರಗಳಲ್ಲಿ ಭೋದಿಸುವುದು. ದೇವಾಲಯಗಳಲ್ಲಿ ಪೂಜೆ ಮಾಡುವುದು ಮೊದಲಾದವುಗಳು.

ಪೇಸ್‌ನ ಪ್ರಕಾರ ಬ್ರಾಹ್ಮಣರಲ್ಲಿ ನಾಲ್ಕು ವರ್ಗಗಳಿದ್ದವು. ಪುರೋಹಿತರು, ಅಧಿಕಾರಿಗಳು, ವ್ಯವಹಾರಸ್ಥರು ಮತ್ತು ಅನುವಂಶಿಕ ಜಮೀನುದಾರರು.[೪] ನ್ಯೂನಿಜನ್ ತುಸು ಬೇರೆಯದೇ ರೀತಿಯಲ್ಲಿ ನಾಲ್ಕು ವರ್ಗಗಳಾಗಿ ವಿಂಗಡಿಸಿದ್ದನು. ರಾಜಪುರೋಹಿತರು ಸಾವಿರಾರು ಸಂಖ್ಯೆಯಲ್ಲಿದ್ದರು. ದಾನವಾಗಿ ಬೇಕಾದಷ್ಟು ಹಣವನ್ನು...... ಪಡೆಯುತ್ತಿದ್ದರು. ಅವರ ಬಳಿ ಯಾವಾಗಲೂ ತುಂಬಾ ಹಣವಿರುತ್ತದೆ. ಅವರು ಎಷ್ಟು ಉದ್ಧತರಾಗಿರುತ್ತಾರೆಂದರೆ, ಬಾಗಿಲು ಕಾಯುವವರು ಪೆಟ್ಟು ಕೊಟ್ಟರೂ ಅವರನ್ನು ತಡೆಯಲು ಸಾಧ್ಯವಾಗುವುದಿಲ್ಲ. ಕೃಷ್ಣದೇವರಾಯನ ಆಡಳಿತದಲ್ಲಿ ರಂಗನಾಥ ದೀಕ್ಷಿತ ಎಂಬ ಬ್ರಾಹ್ಮಣ ಪುರೋಹಿತನು ರಾಜನಿಂದ ದಾನ ಪಡೆದ ಹಳ್ಳಿಯಲ್ಲಿ, ರಾಜಮಾತೆಯ ಪುಣ್ಯಸ್ಮರಣೆಗೆಂದೇ ಒಂದು ಕೆರೆ ಕಟ್ಟಿಸಿ ಅದಕ್ಕೆ ನಾಗಸಮುದ್ರ ಎಂದೇ ನಾಮಕರಣ ಮಾಡಿದ.[೫] ಕ್ರಿ.ಶ. ೧೫೧೦ರ ದಾಖಲೆಯು ತಿಳಿಸುವಂತೆ ಶಿವ ದೀಕ್ಷಿತನೆಂಬ ಓರ್ವ ವಿದ್ಯಾವಂತ ಬ್ರಾಹ್ಮಣನು, ಕೃಷ್ಣದೇವರಾಯನಿಂದ ಯಜ್ಞಗಳನ್ನು ಮಾಡಲೆಂದೇ ಒಂದು ಹಳ್ಳಿಯನ್ನು ದಾನ ಪಡೆದು ಆ ಹಳ್ಳಿಯಲ್ಲಿ ಎರಡು ಕೆರೆ ನಿರ್ಮಿಸಿ, ಆ ಹಳ್ಳಿ ಮತ್ತು ಕೆರೆಗಳನ್ನು ತನ್ನ ಬಂಧು ವರ್ಗದವರಿಗೆ ದಾನ ಮಾಡಿ, ಅವರು ತಮ್ಮಲ್ಲಿ ವೈಮನಸ್ಸು ಹೊಂದದೇ, ವೇದಾಧ್ಯಯನದಲ್ಲಿ ತೊಡಗಬೇಕು. ಅನ್ಯ ಜಾತಿಯವರೊಂದಿಗೆ ವಿವಾಹವಾಗಕೂಡದು. ವಿಷ್ಣು, ಈಶ್ವರ ದೇವರುಗಳಲ್ಲದೆ, ಕ್ಷುದ್ರ ದೇವತೆಗಳನ್ನು ಆರಾಧನೆ ಮಾಡದೇ, ವೇದ, ಶಾಸ್ತ್ರಗಳಲ್ಲಿ ಕಾಲಕ್ಷೇಪ ಮಾಡಬೇಕೆಂದೇ ತಿಳಿಸಿದೆ.[೬] ಕ್ರಿ.ಶ. ೧೪೮೭ರಲ್ಲಿ ನಿಡಗಲ್ಲು ಕೋಟೆಯನ್ನು ಆಳುತ್ತಿದ್ದ ಚಿಕ್ಕತಿಪ್ಪರಾಜೇಂದ್ರ ಎಂಬುವವನು ತನ್ನ ರಾಣಿ ಲಕ್ಷ್ಮೀದೇವಿಯ ಸ್ಮಾರಕಕ್ಕೆಂದೇ ಒಂದು ಕೆರೆಯನ್ನು ನಿರ್ಮಿಸಿ ಸಂಪೂರ್ಣ ಹಳ್ಳಿಯನ್ನೇ ಅಗ್ರಹಾರವನ್ನಾಗಿಸಿ ಬ್ರಾಹ್ಮಣರಿಗೆ ದಾನ ನೀಡಿದನು.[೭] ಮತ್ತೊಂದು ಶಾಸನದಂತೆ ಸೀಗಲಗುಡ್ಡ ಎಂಬಲ್ಲಿ ಈ ರಾಣಿಯ ಹೆಸರಿನಲ್ಲಿ ಒಂದು ದೇವಾಲಯ ನಿರ್ಮಿಸಿ ಲಕ್ಷ್ಮೀಶ್ವರನನ್ನು ಪ್ರತಿಷ್ಠಾಪಿಸಿ ಬ್ರಾಹ್ಮಣರಿಗೆ ದಾನ ಮಾಡಲಾಯಿತು.[೮]

ನ್ಯೂನಿಜ್‌ನ ಪ್ರಕಾರ ಎರಡನೆಯ ಗುಂಪಿನ ಬ್ರಾಹ್ಮಣರು ಪ್ರಾಮಾಣಿಕರಾದ ಜನ. ವ್ಯಾಪಾರವನ್ನು ನಡೆಸುವವರು, ಸೂಕ್ಷ್ಮಮತಿಗಳು, ಬುದ್ಧಿವಂತರು, ಲೆಕ್ಕಾಚಾರದಲ್ಲಿ ನಿಪುಣರು. ಇವುಗಳಿಂದಾಗಿ ಮತ್ತು ತಮ್ಮ ಕರ್ತವ್ಯ ಪಾಲನೆಯಿಂದಾಗಿ ರಾಜ್ಯದ ಆಡಳಿತವು ಸಮರ್ಪಕವಾಗಿ ನಡೆಯುವಂತೆ ನೋಡಿಕೊಳ್ಳುತ್ತಿದ್ದರು. ಇನ್ನೊಂದು ವರ್ಗದವರಿದ್ದಾರೆ. ಇವರು ಕನರೀಸ್ ಜನರು. ಇವರ ಬಳಿ ಪಗೋಡಗಳಿರುತ್ತವೆ. ಅವುಗಳ ಮೇಲೆ ಕೋತಿಗಳ ಮತ್ತು ಹಸುಗಳ ಚಿತ್ರವನ್ನು ಕೆತ್ತಿರುತ್ತಾರೆ.[೯] ದೇವಾಲಯದ ಪುರೋಹಿತರು, ಅಗ್ರಹಾರ ಪಡೆದವರು, ಅಧಿಕಾರಿಗಳು, ವ್ಯಾಪಾರಸ್ಥರು ಎಂದು ಬ್ರಾಹ್ಮಣರು ನಾಲ್ಕು ಪಂಗಡವಾಗಿದ್ದರು. ಬ್ರಾಹ್ಮಣರಲ್ಲಿ ತುಂಬಾ ಪ್ರಭಾವಶಾಲಿಗಳಾಗಿದ್ದವರು ವಿದ್ವಾಂಸರು, ಜ್ಯೋತಿಷ್ಯರು, ಸಾಹಿತಿಗಳು, ವೈದ್ಯರು, ನ್ಯಾಯವನ್ನು ವ್ಯಾಖ್ಯಾನಿಸಬಲ್ಲವರು, ನ್ಯಾಯ ನಿರ್ಮಾಣ ಮಾಡುವವರೂ ಆಗಿರುತ್ತಿದ್ದರು. ಜೆಸೂಯಿಟ್ ಪಾದ್ರಿಗಳಲ್ಲಿ ಒಬ್ಬನಾದ ಫಾದರ್ ಬಿ. ಕುಟಿನ್ಹೋಗೆ 'ಸೆತಾತುಚಕೆ' ಎಂಬ ಪ್ರಸಿದ್ಧ ರಾಜಗುರುವಿನ ನಿಕಟ ಪರಿಚಯವಿದ್ದಿತ್ತು. ಆತನು ಒಂದು ಪತ್ರದಲ್ಲಿ ಹೀಗೆ ಬರೆದಿದ್ದಾನೆ. 'ಆತನು ತನ್ನ ಕೆಟ್ಟ ಗುಣಗಳಿಂದಾಗಿ ಆ ಹುದ್ದೆಗೆ ಅನರ್ಹನಾಗಿದ್ದಾನೆ. ಅವನಿಗೆ ಮನೆಯಲ್ಲಿ ಅನೇಕ ಪತ್ನಿಯರಿದ್ದಾರೆ. ಅವರಲ್ಲಿ ಒಬ್ಬಳು ಒಂಟೆಗಳನ್ನು ನುಂಗಿ ಸೊಳ್ಳೆಗಳಿಗೆ ನಾಚಿಕೊಳ್ಳುವವಳು. ಅನೇಕ ಕೆಲಸಕ್ಕೆ ಬಾರದ, ಶಾಸ್ತ್ರ ಆಧಾರವೇ ಇಲ್ಲದ ಆಚರಣೆಗಳಿಂದ ಜನರನ್ನು ವಂಚಿಸಿ ಪ್ರಕೃತಿ ನಿಯಮದ ಮೂಲಾಗತ್ಯತೆಗಳನ್ನು ಮರೆಯುವವಳು.[೧೦] ದಕ್ಷಿಣ ಭಾರತದಲ್ಲಿ ಪೋರ್ಚುಗೀಸ್ ಕಾಲೋನಿಗಳು ಸ್ಥಾಪನೆಗೊಂಡ ಮೇಲೆ ವ್ಯಾಪಾರವು ಲಾಭದಾಯಕ ವೃತ್ತಿಯಾಗಿದೆ ಎಂಬುದನ್ನು ಮನಗಂಡ ಕೆಲವು ಬ್ರಾಹ್ಮಣರು ಅದಕ್ಕೆ ಸಂಕೋಚಪಡದೆ ಕೈ ಹಾಕಿದರು. ತನ್ನ ಆರ್ಥಿಕ ಸಂಕಷ್ಟಗಳನ್ನು ನಿವಾರಿಸಿಕೊಳ್ಳಲು ಬ್ರಾಹ್ಮಣರು ಯಾವ ವೃತ್ತಿಯನ್ನು ಬೇಕಾದರೂ ಕೈ ಹಿಡಿಯಬಹುದಾಗಿತ್ತು. ಅದಕ್ಕೆ ಶಾಸ್ತ್ರಗಳ ವಿರೋಧವೇನಿರಲಿಲ್ಲ. ಇಂಥವರನ್ನು ಕುರಿತು ಪೇಸ್ ಮತ್ತು ನ್ಯೂನಿಜ್ ಇಬ್ಬರೂ ಬರೆದಿದ್ದಾರೆ.

ವೆಂಕಟರಮಣಯ್ಯನವರು ರಾಜ್ಯಾಡಳಿತದಲ್ಲಿ ಬಹುಮುಖ್ಯವಾಗಿದ್ದವರನ್ನು ಕಂಡು ಹೀಗೆ ಹೇಳುತ್ತಾರೆ. ವಿದ್ಯಾವಂತ ಬ್ರಾಹ್ಮಣರಲ್ಲಿ ಬಹುತೇಕ ಜನರು ಸರಕಾರಿ ಸೇವೆಯನ್ನು ಕೈಗೊಳ್ಳಲು ಬಯಸುತ್ತಿದ್ದರು. ಅವರಿಗೆ ಅದರಲ್ಲಿ ಉಜ್ವಲವಾದ ಭವಿಷ್ಯವಿತ್ತು. ಉತ್ತಮ ಲೆಕ್ಕಪತ್ರಜ್ಞರು, ಆಡಳಿತ ನಿಪುಣರೂ ಆಗುವಂತೆ ಅವರಿಗೆ ತರಬೇತಿ ನೀಡಲಾಗುತ್ತಿತ್ತು. ಕೇಂದ್ರ ಆಡಳಿತದ ಸಚಿವಾಲಯದಲ್ಲಿ ಈ ವರ್ಗದ ಜನರೇ ತುಂಬಿರುತ್ತಿದ್ದರು. ಈ ವರ್ಗದ ಬ್ರಾಹ್ಮಣರು ಧಾರ್ಮಿಕ ಆಚರಣೆಗಳಲ್ಲಿ ಅಷ್ಟಾಗಿ ಸಂಪ್ರದಾಯಬದ್ಧವಾಗಿರಲಿಲ್ಲ ಎಂದು ನಂಬಲು ಕಾರಣಗಳಿವೆ. ಅವರು ಸಚಿವರಾಗುತ್ತಿದ್ದರು. ಸೇನಾ ದಂಡನಾಯಕರಾಗುತ್ತಿದ್ದರು ಮತ್ತು ಪ್ರಾಂತ್ಯಗಳ ರಾಜ್ಯಪಾಲರಾಗುತ್ತಿದ್ದರು.[೧೧] ರಾಜ್ಯಾಡಳಿತದಲ್ಲಿ ಬಹುಮುಖ್ಯವಾದ ಸ್ಥಾನಗಳನ್ನು ಹೊಂದಿದ್ದ ಬ್ರಾಹ್ಮಣರಿಗೆ ವಿರೋಧವೇ ಇರುತ್ತಿರಲಿಲ್ಲ. ಈ

ಹುದ್ದೆಗಳಿಗೆ ಅವರನ್ನು ಆಯ್ಕೆ ಮಾಡಲು ಅವರ ಸ್ಥಾನಮಾನ ಕಾರಣವಾಗಿರದೆ ಅವರ ವಿಶ್ವಾಸಾರ್ಹತೆಯೇ ಕಾರಣವಾಗುತ್ತಿತ್ತು.

ಮುಖ್ಯವಾದ ಹುದ್ದೆಗಳಿಗೆ ಬ್ರಾಹ್ಮಣರನ್ನು ನೇಮಿಸುವುದಕ್ಕೆ ಕಾರಣಗಳನ್ನು ಕೃಷ್ಣದೇವರಾಯನು ಹೀಗೆ ಕೊಡುತ್ತಾನೆ. "ಒಬ್ಬ ಬ್ರಾಹ್ಮಣನು ಎಂತ ಆಪತ್ತಿನ ಸಮಯದಲ್ಲೂ ಕರ್ತವ್ಯ ಬದ್ಧನಾಗಿರುತ್ತಾನೆ. ಕ್ಷತ್ರೀಯ ಅಥವಾ ಶೂದ್ರನೊಬ್ಬನ ಅಧೀನನಾಗಿ ಕೆಲಸ ಮಾಡಬೇಕಾಗಿ ಬಂದರೂ ಅವನು ಸೇವೆಯಲ್ಲಿ ಮುಂದುವರೆಯುತ್ತಾನೆ. ಆದ್ದರಿಂದ ತನಗೆ ನಿಷ್ಠೆಯಿಂದಿರುವ ಹಾಗೂ ಅನೇಕ ಕಲೆ ಮತ್ತು ವಿಜ್ಞಾನಗಳಲ್ಲಿ ಪರಿಣಿತರಾಗಿರುವ, ಧರ್ಮದಿಂದ ನಡೆಯುವ ಪರಾಕ್ರಮಿಗಳಾದ ಬ್ರಾಹ್ಮಣರನ್ನು ತನ್ನ ಕೋಟೆಗಳ ರಕ್ಷಣೆಗೆ ನೇಮಿಸುವ ರಾಜನು ಎದೆಯ ಮೇಲೆ ಕೈಯಿರಿಸಿಕೊಂಡು ನಿರಾಳವಾಗಿ ನಿದ್ದೆ ಮಾಡಬಹುದು. ಅವರು ತಮ್ಮ ಕಾಲಕ್ಕಿಂತಲೂ ಹಿಂದಿನಿಂದಲೂ ಸೇವೆಯಲ್ಲಿದ್ದು ಕೋಟೆಗಳಲ್ಲಿ ಹುಲಿಯ ಗಿಣ್ಣನ್ನೂ ಇತರ ಅಪೂರ್ವ ವಸ್ತುಗಳನ್ನೂ ಅನೇಕ ಪೀಳಿಗೆಗಳವರೆಗೆ ಸಂಗ್ರಹಿಸಲ್ಪಟ್ಟಿರುತ್ತಾರೆ. ವರಮಾನವನ್ನು ಅಧಿಕಗೊಳಿಸಿ ಅವನ ಕೋಶವನ್ನು ದ್ವಿಗುಣಗೊಳಿಸುತ್ತಾರೆ. ವೆಚ್ಚವನ್ನು ಕಡಿಮೆ ಮಾಡುತ್ತಾರೆ. ಜನರು ಯಾವುದೇ ಕಷ್ಟಗಳಿಲ್ಲದೆ ಸುಖವಾಗಿರುವಂತೆ ನೋಡಿಕೊಳ್ಳುತ್ತಾರೆ. ರಾಜನಾಗಲೀ, ಪ್ರಜೆಯಾಗಲೀ ತೊಂದರೆ ಪಡದೆ, ಕೇವಲ ಶತ್ರುಗಳನ್ನು ಕಾಡುವ ಹಾಗೆ ನೋಡಿಕೊಳ್ಳುತ್ತಾರೆ.[೧೨]

ವಿಜಯನಗರ ಇತಿಹಾಸದಲ್ಲಿ ಕ್ಷತ್ರಿಯನು ಕಾಣಿಸಿಕೊಳ್ಳುವುದಿಲ್ಲ.[೧೩] ಸೇನಾಪತಿಗಳನ್ನು ಅವರ ಸಾಧನೆಗಳನ್ನು ಪ್ರಶಂಸಿಸಲಾಗುತ್ತಿತ್ತೇ ಹೊರತು, ಅವರ ಕ್ಷತ್ರೀಯ ವಂಶದಿಂದಲ್ಲ. ಈ ಕಾಲದಲ್ಲಿ ಅವರ ಕ್ಷತ್ರೀಯ ಹಕ್ಕುಗಳನ್ನು ಅಲಕ್ಷಿಸಿ ಅವರನ್ನು ಮಹಾಮಂಡಲೇಶ್ವರ ಇತ್ಯಾದಿ ಬಿರುದುಗಳಿಂದ ಕರೆಯಲಾಗುತ್ತಿತ್ತು. ನಾಲ್ಕನೆಯ ಜಾತಿಗೆ ಸೇರಿದವನು ಸಾಮ್ರಾಜ್ಯವನ್ನು ಸ್ಥಾಪಿಸಿರುವನು ಎಂಬುದು ಆಧಾರಗಳಿಂದ ನಮಗೆ ಖಚಿತವಾಗಿ ತಿಳಿದಿದೆ. ಧಾರ್ಮಿಕ ಆಚರಣೆಗಳಿಂದ, ಬ್ರಾಹ್ಮಣರಿಗೆ ಮಾಡಿದ ದಾನ ಧರ್ಮಗಳಿಂದ ಹಾಗೆಯೇ ವಿಜಯನಗರ ಕಾಲದ ಅರಸರೂ ಕೂಡ ಕ್ಷತ್ರಿಯ ಸ್ಥಾನಮಾನವನ್ನು ಪಡೆಯಲು ಪ್ರಯತ್ನಿಸಿದರು. ತಮ್ಮ ಮೂಲವನ್ನು ಸೂರ್ಯನಿಗೋ, ಚಂದ್ರನಿಗೋ ಗುರುತಿಸಿಕೊಂಡರು. ಬಹುಶಃ ಪ್ರಭುಸತ್ತೆಯಿಂದ ಮಾತ್ರ ಪ್ರಬಲರಾಗಿ ಗೌರವ, ಸಂಪತ್ತುಗಳಿಗೆ ಒಡೆಯರಾಗಿದ್ದ ಇವರು ತಮ್ಮ ಜಾತಿಯ ವಿಷಯ ಬಂದಾಗ ತಲೆತಗ್ಗಿಸುವ ವಾತಾವರಣ ಅಂದು ಉಂಟಾಗಿರಬಹುದು. ಅದರಿಂದ ಅವರು ತಮ್ಮ ಮೂಲವನ್ನು ಪುರಾಣ ಪುರುಷರೊಂದಿಗೆ ಸಮೀಕರಿಸಿಕೊಂಡಿರಬೇಕು. ಅಧಿಕಾರ ಬಲ, ಸಾಮರ್ಥ್ಯಗಳ ಮುಂದೆ ಜಾತಿಯು ಗೌಣವಾಗುವುದು ಕಂಡುಬರುತ್ತದೆ. ಇಲ್ಲಿ ವರ್ಣ ಕಟ್ಟುಪಾಡುಗಳಲ್ಲಿ ಶಿಥಿಲತೆಯಿತ್ತು ಎಂದು ಸೂಚಿತವಾಗುತ್ತದೆ. ಬಿ.ಎ.ಸಾಲೆತೊರೆಯರ ಅಭಿಪ್ರಾಯದಂತೆ 'ಗಣ್ಯ ಜನರನ್ನು, ಉನ್ನತ ವ್ಯಕ್ತಿಗಳನ್ನು ಅವರು ಹುಟ್ಟಿನಿಂದ ಕ್ಷತ್ರೀಯರಾಗಿಲ್ಲವಾದರೂ, ಅವರ ಪರಾಕ್ರಮ ದಕ್ಷತೆಗಳಿಂದಾಗಿ ಕ್ಷತ್ರೀಯ ವರ್ಗಕ್ಕೆ ಸೇರಿಸಲಾಗುತ್ತಿತ್ತು. ವಾಣಿಜ್ಯ ಮತ್ತು ಕೃಷಿ

ವರ್ಗದ ಚಟುವಟಿಕೆಗಳಿಂದ ಸತ್ವವು ತುಂಬಿಕೊಳ್ಳುತ್ತಿತ್ತು. ವಿಜಯನಗರದ ಭವ್ಯತೆಗೆ, ವೈಭವಕ್ಕೆ ಮಧ್ಯಜಾತಿಗಳು ಮುಖ್ಯವಾಗಿ ಕಾರಣವಾಗಿದ್ದವು.[೧೪]

ಮೂರನೆಯ ವರ್ಗಕ್ಕೆ ಸೇರಿದ ವೈಶ್ಯರು ವ್ಯಾಪಾರವನ್ನು ನಡೆಸುತ್ತಿದ್ದರು. ಸಮರ್ಥವಾದ ಸಂಘಗಳನ್ನು ಸ್ಥಾಪಿಸಿಕೊಂಡು ವೈಶ್ಯರು ರಾಜ್ಯದ ಆಡಳಿತದಲ್ಲೂ, ಸಮಾಜದಲ್ಲೂ ಅಪಾರವಾದ ಪ್ರಭಾವವನ್ನು ಹೊಂದಿರುತ್ತಿದ್ದರು. ಇವರಿಗೆ ಕಂದಾಯ ಹಾಗೂ ನ್ಯಾಯ ವಿತರಣ ಅಧಿಕಾರಿಗಳೂ ಇರುತ್ತಿದ್ದವು. ದೇವಾಲಯಗಳಿಗೋ, ಧರ್ಮ ಸಂಸ್ಥೆಗಳಿಗೋ ದಾನ ಮಾಡಬೇಕಾದರೆ ಉನ್ನತಾಧಿಕಾರಿಗಳು ಕೂಡ ಅವರ ಅನುಮತಿಯನ್ನು ಪಡೆಯಬೇಕಾಗಿತ್ತು.

ರಾಜಾಶ್ರಯವನ್ನು ಪಡೆದ ವರ್ತಕರು ಶ್ರೀಮಂತರಾಗಿದ್ದರೂ, ಉದ್ಯಮಶೀಲರಾಗಿದ್ದರು. ಸಮಾಜದಲ್ಲಿ ಅಪಾರವಾದ ಪ್ರಭಾವವನ್ನು ಬೀರುತ್ತಿದ್ದರು. ಆರ್ಥಿಕ ಶಕ್ತಿಯು ಅವರಿಗೆ ರಾಜಕೀಯ ಶಕ್ತಿಯನ್ನು ತಂದುಕೊಟ್ಟಿತ್ತು. ಅವರು ಸಂಘಗಳನ್ನು ರಚಿಸಿಕೊಂಡಿದ್ದರು. ರಾಜಸಭೆಗಳಲ್ಲೂ ಅವರಿಗೆ ಮುಖ್ಯವಾದ ಸ್ಥಾನವಿರುತ್ತಿತ್ತು. ಈ ಅಧಿಕಾರವು ಅವರ ಸಂಚಾರಶೀಲತೆಯ ಕಷ್ಟವನ್ನು ನೀಗಿಸುವಂಥದಾಗಿತ್ತು. ಅಬ್ದುಲ್ ರಜಾಕನು ನಗರದಲ್ಲಿ ಎರಡು ಬಗೆಯ ಸಂಘಗಳಿದ್ದನ್ನು ಗಮನಿಸಿರುವನು. ಬೇರೆ ಬೇರೆ ಸಂಘಗಳು ಅಥವಾ ಕಸಬುಗಳ ವರ್ತಕರು ತಮ್ಮ ವ್ಯಾಪಾರ ಮಳಿಗೆಗಳನ್ನು ಪಕ್ಕ ಪಕ್ಕದಲ್ಲಿಯೇ ಇಟ್ಟುಕೊಂಡಿರುತ್ತಾರೆ.[೧೫] ಡೊಮಿಂಗೋ ಪೇಸ್ "ಎಲ್ಲಾ ಕಸಬುಗಳ ಮತ್ತು ವರ್ತಕರ ಸಂಘಗಳು ನಮ್ಮ ಕಡೆ ಇರುವ ಕನ್‌ಪ್ರಾಂತಿ ಮಿಟೋಗಳಂತೆ (Con Fratenitoes) ಇಲ್ಲೂ ಇವೆ.[೧೬] ವರ್ತಕ ಸಂಘಗಳಿಗೆ ಒಳ್ಳೆಯ ಹೆಸರು ಪಡೆದ ವ್ಯಕ್ತಿಗಳು ಅಧ್ಯಕ್ಷರಾಗಿರುತ್ತಿದ್ದರು. ಇವರನ್ನು ಸೆಟ್ಟಿ ಪಟ್ಟಣಸ್ವಾಮಿಗಳೆಂದು ಕರೆಯಲಾಗುತ್ತಿತ್ತು.[೧೭] ಅಹೋಬಲದ ಅಗತ್ಯಗಳನ್ನು ಒಂದು ವರ್ತಕ ಸಂಘವು ಪೂರೈಸಿದುದನ್ನು ಹೇಳುತ್ತದೆ. ಆ ಸಂಘದ ಸದಸ್ಯರು ವಾಸವೀ ಕನ್ಯೆಯ ಭಕ್ತರಾಗಿದ್ದರು. ಅವರ ಮುಂದಾಳುಗಳಾಗಿದ್ದ ಒಂದುನೂರ ಐವತ್ತು ಜನರಿಗೆ ಪುಣ್ಯ ಬರಲೆಂದು ಈ ಧರ್ಮಕಾರ್ಯವನ್ನು ಮಾಡಲಾಯಿತು.[೧೮] ಸದಸ್ಯರ ನಡುವೆ ಅಹಿತಕರ ಸ್ಪರ್ಧೆಯನ್ನು ತಪ್ಪಿಸುವುದು. ಕೆಲವು ಶಿಸ್ತಿನ ನಿಯಮಗಳನ್ನು ಜಾರಿಗೆ ತರುವುದು, ಸದಸ್ಯರ ಸಮಾನ ಹಿತಾಸಕ್ತಿಗಳನ್ನು ಕಾಪಾಡುವುದು, ತನ್ನ ಸದಸ್ಯರಿಂದ ಸರ್ಕಾರಕ್ಕೆ ಸಲ್ಲಬೇಕಾಗಿದ್ದ ತೆರಿಗೆಯನ್ನು ಸಂಗ್ರಹಿಸಿಕೊಡುವುದು ಮೊದಲಾದ ಕೆಲಸಗಳನ್ನು ಸಂಘವು ನಿರ್ವಹಿಸುತ್ತಿತ್ತು. ಸಂಘಕ್ಕೆ ತನ್ನದೇ ನಾಣ್ಯಗಳನ್ನು ವಂತಿಸಿಕೊಳ್ಳಲು ಅಧಿಕಾರವಿತ್ತು. ರಾಜನೋ ಅಥವಾ ಅವನ ಅಧೀನ ಅಧಿಕಾರಿಯೋ ಈ ತೆರಿಗೆಗಳನ್ನು ಯಾವುದಾದರೊಂದು ದೇವಾಲಯಕ್ಕೆ ದಾನ ಮಾಡಲು ಇಚ್ಛಿಸಿದರೆ ಅವನು ವರ್ತಕ ಸಂಘದ ಅಥವಾ ಅದರ ಅಧ್ಯಕ್ಷನ ಅನುಮತಿಯನ್ನು ಪಡೆಯಬೇಕಾಗಿತ್ತು. ಒಬ್ಬ ಮಂತ್ರಿಯ ಪ್ರತಿನಿಧಿಯಾಗಿದ್ದ ಅಬ್ಬರಾಜ ತಿಮ್ಮಪ್ಪನೆನ್ನುವನು, ದೇವಾಲಯಕ್ಕೆ 'ಗ್ರಾಮಗಳ ಸೆಟ್ಟಿಪಟ್ಟಣ

ಸ್ವಾಮಿಗಳ ಅನುಮತಿಯನ್ನು ಪಡೆದು ಮೂಲದೀಪವನ್ನು ದಾನ ಮಾಡಿದನು.'[೧೯] ಬಳ್ಳಾರಿ ಜಿಲ್ಲೆಯ ಕುರುಗೋಡದ ಇನ್ನೊಂದು ಶಾಸನವು, 'ಗೌಡ ಸೇನಬೋವ ಮತ್ತು ಪಟ್ಟಣ ಸ್ವಾಮಿಗಳ ಅನುಮತಿಯಿಂದ ಮಾಡಿದ ದಾನವನ್ನು ಉಲ್ಲೇಖಿಸುತ್ತದೆ.[೨೦] ಅನಂತಪುರ ಜಿಲ್ಲೆಯ ಕದಿರಿಯ ಒಂದು ಶಾಸನವು, ನರಸಿಂಹ ದೇವರ ದೇವಸ್ಥಾನದಲ್ಲಿ ಸಭೆ ಸೇರಿದ ಒಂದು ವರ್ತಕ ಸಂಘವು ಅಸ್ಪೃಶ್ಯರಾದ ಮಾದಿಗರಿಗೂ ಸ್ಥಳೀಯ ರೈತರಿಗೂ ಉಂಟಾಗಿದ್ದ ವ್ಯಾಜ್ಯವನ್ನು ಹೇಗೆ ಪರಿಹರಿಸಿತು ಎಂಬುದನ್ನು ವರ್ಣಿಸುತ್ತದೆ. ಮೂಲರಿಗೆ ತೆರಿಗೆ ಪಾವತಿಯಿಂದ ವಿನಾಯಿತಿ ದೊರಕಿತು. ವಿವಾಹ ಸಂದರ್ಭಗಳಲ್ಲಿ ಚಿತ್ರದ ಹಾಡುವ ಕೆಲಸಕ್ಕೆ ಮಾದಿಗರಿಗೆ ಅನುಮತಿ ನೀಡಲಾಯಿತು.[೨೧]

ಬಾರ್ಬೋಸನ ಪ್ರಕಾರ, ಅಮೂಲ್ಯವಾದ ಹರಳುಗಳು, ಮುತ್ತುಗಳು, ಚಿನ್ನ, ಬೆಳ್ಳಿ, ಹವಳ ಮೊದಲಾದ ಬೆಲೆ ಬಾಳುವ ವಸ್ತುಗಳ ವ್ಯಾಪಾರ ಮಾಡುತ್ತಾ ಅವರು ತುಂಬಾ ಶ್ರೀಮಂತರಾಗಿದ್ದರು. ಇದೇ ಅವರ ಮುಖ್ಯ ವೃತ್ತಿ. ತಮಗೆ ಅನುಕೂಲವಾಗುವಂತೆ ವಸ್ತುಗಳ ಬೆಲೆಯನ್ನು ಅವರು ಅನೇಕ ಪಟ್ಟು ಏರಿಸುತ್ತಾರೆ ಅಥವಾ ಇಳಿಸುತ್ತಾರೆ.[೨೨] ಅವರ ಅಪರಾಧಗಳನ್ನು ರಾಜರು ವಿಚಾರಣೆ ಮಾಡಬೇಕಾಗಿಲ್ಲ. ರಾಜನಿಗೆ ತೃಪ್ತಿಯಾಗುವ ರೀತಿಯಲ್ಲಿ ಅವರೇ ನ್ಯಾಯ ವಿಚಾರಣೆ ಮಾಡಿಕೊಳ್ಳುತ್ತಾರೆ.[೨೩] ಇವರು ತಮ್ಮ ವ್ಯವಹಾರಗಳನ್ನು ತಾವೇ ನೋಡಿಕೊಳ್ಳುತ್ತಿದ್ದರು. ರಾಜಾಶ್ರಯವಿದ್ದರೂ ವರ್ತಕರು ಬೆಲೆಬಾಳುವ ಉಡುಗೊರೆಗಳನ್ನು ಕೊಟ್ಟು ರಾಜನನ್ನು ಮೆಚ್ಚಿಸಬೇಕಾಗಿತ್ತು. ವರ್ತಕರೂ ಸಮಾಜದ ಹಿತ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದುದನ್ನು ಕಾಣಬಹುದು. ಕ್ರಿ.ಶ.೧೫೩೦ರಲ್ಲಿ ಸೇಲಂ ಜಿಲ್ಲೆಯ ನಾಗಮಂಗಲದ ಹೊನ್ನ ಹಲಗಿ ಸೆಟ್ಟಿಯು ಹೊನ್ನಾಂಬುದಿ ಎಂಬ ಕೆರೆಯನ್ನು ನಿರ್ಮಿಸಿ ದಾನ ನೀಡಿದರು.[೨೪] ಕ್ರಿ.ಶ. ೧೫೦೦ ಒಂದು ಶಿಲಾಶಾಸನದಲ್ಲಿ ಪಟ್ಟಣಸ್ವಾಮಿ ಮಾದಿಶೆಟ್ಟಿಯ ಮಗ ನಾಗಿಶೆಟ್ಟಿಯು ಒಂದು ಚಿಕ್ಕ 'ಕಟ್ಟೆ' ಅಥವಾ ಕೆರೆಯನ್ನು ನಿರ್ಮಿಸಿದ ಎಂದು ತಿಳಿಸುತ್ತದೆ.[೨೫] ಕ್ರಿ.ಶ.೧೫೦೨ರ ದಾಖಲೆ ತಿರುಪತಿಗೆ ಸಂಬಂಧಿಸಿದೆ. ಅದು ಹೇಳುವಂತೆ ತಿಪ್ಪಶೆಟ್ಟಿ ಎಂಬ ವ್ಯಾಪಾರಿಯು ೮.೩೦೫ ಪಣಂ ಅಂದರೆ ಬಂಗಾರ ನಾಣ್ಯಗಳನ್ನು, ದೇವಸ್ಥಾನದ ಹಳ್ಳಿಗಳ ಅಭ್ಯುದಯಕ್ಕಾಗಿ, ಕೆರೆ ಹಾಗೂ ಕಾಲುವೆಗಳ ರಚನೆಗೆಂದೇ, ದೇವಸ್ಥಾನದ ಖಜಾನೆಯಲ್ಲಿ ಠೇವಣಿ ಇರಿಸಿದನಂತೆ.[೨೬] ಕ್ರಿ.ಶ. ೧೫೧೭ರ ತಿರುಪತಿಯ ಒಂದು ಶಾಸನದ ದಾಖಲೆಯಂತೆ ಧರ್ಮಪುರದ ಸಿದ್ಧಂಶೆಟ್ಟಿ ಎಂಬ ವ್ಯಾಪಾರಿ ತಿರುಮನೇರಿ ಎಂಬ ಹಳ್ಳಿಯಲ್ಲಿ ಭೂಮಿ ಸಾಗುವಳಿಗೆಂದೇ ಒಂದು ಕೆರೆ ಮತ್ತು ಒಂದು ದೇವಾಲಯವನ್ನು ತನ್ನ ಸ್ವಂತ ಖರ್ಚಿನಿಂದಲೇ ನಿರ್ಮಿಸಿದುದಲ್ಲದೆ, ಕೆರೆಯ ಕೆಳಗಿನ ಭೂಮಿಯನ್ನು ಸಾಗುವಳಿಗೆಂದೇ ಪರಿವರ್ತಿಸಿದನು. ಇದಕ್ಕೆ ಪ್ರತಿಫಲವೆಂದರೆ, ದೇವಸ್ಥಾನದಿಂದ ಅವನಿಗೆ ಪ್ರಸಾದ ದೊರೆಯುತ್ತಿತ್ತು. ಇದೊಂದು ಗೌರವ ಸೂಚಕ[೨೭] ಸಾಮಾಜಿಕ ಶ್ರೇಣಿಯಲ್ಲಿ ಮೂರನೆಯ ನಿರ್ವಹಿಸುತ್ತಿದ್ದರು. ಅವರ ವೃತ್ತಿಯು ಅವರಿಗೆ ಅಪಾರವಾದ ಧನವನ್ನು ಐಶ್ವರ್ಯವನ್ನು

ಸಂಗ್ರಹಿಸಲು ಅವಕಾಶ ನೀಡಿದ್ದಿತು. ಸಮಾಜದಲ್ಲಿ ಅವರು ಅತ್ಯಂತ ಶ್ರೀಮಂತರಾದ ಜನವರ್ಗ, ಅವರು ಬ್ಯಾಂಕರುಗಳಾಗಿ, ಖಜಾಂಚಿಗಳಾಗಿ ಕಾರ್ಯನಿರ್ವಾಹ ಮಾಡುತ್ತಿದ್ದರು. ಉತ್ತಮ ರೀತಿಯಲ್ಲಿ ಯೋಜಿತವಾದ ಸಂಘಗಳನ್ನು ಅಥವಾ ಗಿಲ್ಡುಗಳನ್ನು ಅವರು ರಚಿಸಿಕೊಂಡಿದ್ದರಿಂದ ವರ್ತಕರಿಗೆ ವೃತ್ತಿಯಲ್ಲಿ ಅಪಾರ ಪ್ರಯೋಜನವಾಯಿತು. ರಾಜ್ಯ ಕೋಶಕ್ಕೆ ಅವರ ಕೊಡುಗೆ ಮಹತ್ವದ್ದಾಯಿತು.

ಬ್ರಾಹ್ಮಣರು, ಕ್ಷತ್ರಿಯರು ಮತ್ತು ವೈಶ್ಯರಲ್ಲದ ಉಳಿದ ಎಲ್ಲರೂ ಶೂದ್ರರು. ಇವರು ಜನತೆಯ ಬಹುಭಾಗವಾಗಿದ್ದರು. ಇವರ ಮುಖ್ಯವಾದ ಕೆಲಸವೆಂದರೆ ದೈಹಿಕ ಪರಿಶ್ರಮದಿಂದ ಇತರ ಜಾತಿಗಳಿಗಾಗಿ ದುಡಿಯುವುದು. ವೃತ್ತಿಯ ಆಧಾರದಿಂದ ಅವರಲ್ಲೂ ಅಸಂಖ್ಯಾತ ಪಂಗಡಗಳು, ಉಪಪಂಗಡಗಳು, ಪಂಥಗಳು, ಉಪಪಂಥಗಳು ಇದ್ದವು. ಕರ್ನಾಟಕ ಸಂಸ್ಕೃತಿಯಲ್ಲಿಯೇ ಪ್ರಮುಖವಾಗಿ 'ಶೂದ್ರ' ಎನ್ನುವ ಶಬ್ದ ಮೂಲತಃ ಒಂದು ಬುಡಕಟ್ಟಿನ ಹೆಸರಾಗಿತ್ತು ಎಂದು ಕಂಡುಬರುತ್ತದೆ.[೨೭] ಮಧ್ಯಕಾಲದಲ್ಲಿ ವಿಜಯನಗರ ಅರಸರು ಪ್ರಾಬಲ್ಯಕ್ಕೆ ಬಂದಾಗ ಇವರೂ ವೈದಿಕ ಬುಡಕಟ್ಟುಗಳಂತೇ ಪಶುಸಂಗೋಪನೆ ಮಾಡಿಕೊಂಡಿದ್ದಂತೆ ಕಂಡುಬರುತ್ತದೆ. ಬಹುಶಃ ನಾಲ್ಕು ವರ್ಣಗಳ ಕಲ್ಪನೆಯನ್ನು ಹುಟ್ಟು ಹಾಕಿದ ಬುಡಕಟ್ಟುಗಳಿಗೆ ಶೂದ್ರರು ದಾಸ-ದಾಸಿಯರಾಗಿದ್ದರಿಂದ 'ಶೂದ್ರ' ಶಬ್ದವನ್ನು ದಾಸ್ಯಕ್ಕೆ ಸಮೀಕರಿಸಿರಸಬಹುದೆಂದು ತೋರುತ್ತದೆ.[೨೮] ಸಮಾಜದಲ್ಲಿ ಶೂದ್ರರು ಅತ್ಯಂತ ಕಷ್ಟದ, ಶ್ರಮದ ಹಾಗೂ ಅಸಹ್ಯ ತರುವಂತಹ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಇದಕ್ಕಾಗಿಯೇ ಪುರುಷನ ಪಾದದಿಂದ ಶೂದ್ರರು ಹುಟ್ಟಿಬಂದರು ಹಾಗೂ ಅವರ ಕರ್ತವ್ಯವೆಂದರೆ ಮೇಲಿನ ಮೂರು ವರ್ಣಗಳ ಸೇವೆ ಮಾಡಲು ಜನ್ಮವೆತ್ತಿದ ಜನರೆಂದು ನಿರೂಪಿಸಲಾಗಿದೆ. ಶ್ರೇಣಿಯಲ್ಲಿ ಕೊನೆಯದಾದ ಒಂದೊಂದರಲ್ಲು ತಮ್ಮದೇ ಆದ ಕಡ್ಡಾಯವಾದ ನಿಯಮಗಳಿದ್ದವು. ಪ್ರತಿಯೊಂದು ಉಪಜಾತಿಯಲ್ಲೂ ಸದಸ್ಯರು ತಮ್ಮದೇ ಸೀಮಿತ ಪಂಗಡದೊಳಗೆ ಮದುವೆ ಮಾಡಿಕೊಳ್ಳುತ್ತಿದ್ದರು. ಇತಿಮಿತಿಗಳೊಂದಿಗೆ ಅವರ ನಡುವೆ ಸಹ ಪಂಕ್ತಿ ಭೋಜನಕ್ಕೆ ಅವಕಾಶವಿತ್ತು. ಬಹುಸಂಖ್ಯೆಯ ಶೂದ್ರರು ಗೇಣಿದಾರರು ಅಥವಾ ಕೃಷಿಕಾಮಿಕರು. ಅವರು ರಾಷ್ಟ್ರದ ಬೆನ್ನುಮೂಳೆಯಾಗಿದ್ದರು. ದೇಶದ ಅಭ್ಯುದಯವು ಅವರ ಮೇಲೆ ಬಹುಮಟ್ಟಿಗೆ ಅವಲಂಬಿಸಿತ್ತು.[೨೯] ರೆಡ್ಡಿಗಳು ಮತ್ತು ಗೌಡರು ಮುಖ್ಯವಾಗಿ ಈ ವರ್ಗಕ್ಕೆ ಸೇರಿದವರು. ನಾಯಕರು ಯೋಧರು. ಅವರ ಮುಖ್ಯ ವೃತ್ತಿ ಯುದ್ಧ ಮಾಡುವುದಾಗಿತ್ತು. ಅವರು ತಮ್ಮ ಜಮೀನನ್ನು ಇತರರಿಂದ ಬೇಸಾಯ ಮಾಡಿಸುತ್ತಿದ್ದರು. ಕುರುಬರು ಮತ್ತು ಗೊಲ್ಲರು ಕುರಿ ಕಾಯುತ್ತಿದ್ದರು. ಮಡಕೆ ಮಾಡುವವರು ಕುಂಬಾರರು. ನೇಯುತ್ತಿದ್ದವರು ಪದ್ಮಶಾಲಿಗಳು. ಭೂಮಿ ಅಗೆಯುವವರು ವಡ್ಡರು. ಉಪ್ಪು ತಯಾರಿಸುವವರು ಉಪ್ಪಲಿಗರು. ಕ್ಷೌರ ಮಾಡುವವರನ್ನು ನಾಯಿಂದರೆಂದು ಕರೆಯಲಾಗುತ್ತಿತ್ತು. ಪ್ರತಿಯೊಂದು ಉಪಜಾತಿಯ ಮುಖ್ಯಸ್ಥನು ಹಿರಿಯರ ಒಂದು ಮಂಡಲಿಯ ಮೂಲಕ ಕಾರ್ಯ ನಿರ್ವಹಿಸುತ್ತಿದ್ದನು. ಈ ಉಪಜಾತಿಗಳ ಗಣ್ಯರನ್ನೇ ಅಮರನಾಯಕರನ್ನಾಗಿ, ಕಾವಲುಗಾರರನ್ನಾಗಿ, ಗೇಣಿ ರೈತರಾಗಿ ನೇಮಕ ಮಾಡಲಾಗುತ್ತಿತ್ತು.

ಮಧ್ಯಯುಗದ ಚರಿತ್ರೆಯ ಸಮಾಜದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜಾರಿಯಲ್ಲಿದ್ದಂತಹ ವ್ಯವಸ್ಥೆಯೇ ಸಂಕೀರ್ಣ ಜಾತಿ ವ್ಯವಸ್ಥೆ. ತಮ್ಮ ತಿಳುವಳಿಕೆ ಬಂದಂತಹ ಹೊಸ ಸಮಾಜವನ್ನು ಸಂಕೀರ್ಣ ಜಾತಿಗಳೆಂದು ತಿಳಿಸಿ ಅವು ಯಾವ ಸಮಯದಲ್ಲಿ ಉದಯಿಸಿದವರೆಂಬುದನ್ನು ವಿವರಿಸಿ ವರ್ಣವ್ಯವಸ್ಥೆಗೆ ಈ ಕಾಲದಲ್ಲಿದ್ದಂತಹ ವರ್ಣ ಪ್ರತಿಪಾದಕರು ಜೋಡಿಸುತ್ತಿದ್ದರು ಎಂದು ತಿಳಿಸುವ ಅನೇಕ ಆಧಾರಗಳು ಕಂಡುಬರುತ್ತವೆ. ಅಂದಿನ ಕಾಲದಲ್ಲಿ ಹೆಚ್ಚುತ್ತಿದಂತಹ ವೃತ್ತಿಗಳು ಈ ರೀತಿಯ ಸಂಕೀರ್ಣ ಜಾತಿಯ ಕಲ್ಪನೆಯನ್ನು ಬೆಳೆಸಲು ಮುಖ್ಯ ಕಾರಣವಾಗಿವೆ.

ಅಸ್ಪೃಶ್ಯರನ್ನು ಐದನೆಯ ವರ್ಗಕ್ಕೆ ನೂಕಲಾಗಿತ್ತು. ಅತ್ಯಂತ ಕೆಳವರ್ಗದವರಾದ ಹೊಲೆಯರು ಮತ್ತು ಮಾದಿಗರು ಊರ ಹೊರಗೆ ಒಟ್ಟಾಗಿ ವಾಸಿಸುತ್ತಿದ್ದರು. ಆ ಕೇರಿಗಳನ್ನು ಹೊಲಗೇರಿ ಎಂದು ಕರೆಯುತ್ತಿದ್ದರೆಂಬುದನ್ನು ಸಾಹಿತ್ಯಾಧಾರಗಳು, ಶಾಸನಧಾರಗಳು ಹಾಗೂ ಜಾನಪದ ಸಾಹಿತ್ಯಾಧಾರಗಳಲ್ಲಿ ಲಭ್ಯವಿದೆ. ನಾಗರಿಕ ಸಮಾಜದ ಚೌಕಟ್ಟಿನಿಂದ ಹೊರಗಿದ್ದ ಇವರನ್ನು ಮೇಲು ಜಾತಿಗಳ ಜನರು ದುರುಪಯೋಗಪಡಿಸಿಕೊಳ್ಳುತ್ತಿದ್ದರು. ಅಪಮಾನಿಸುತ್ತಿದ್ದರು. ಅವರು ಕಡ್ಡಾಯವಾಗಿ ದುಡಿಯಬೇಕಾಗಿತ್ತು. ಮೇಲು ಜಾತಿಯವರನ್ನು ಕುರಿತು ಪರಮ ವಿಧೇಯತೆಯಿಂದ ನಡೆದುಕೊಳ್ಳಬೇಕಾಗಿತ್ತು. ಅವರ ಆದೇಶಗಳನ್ನು ಪಾಲಿಸಬೇಕಾಗಿತ್ತು. ಅತಿ ಸಣ್ಣ ಅಪರಾಧಗಳಿಗೂ ಅವರಿಗೆ ಅತ್ಯಂತ ಕ್ರೂರವಾದ ದಂಡನೆ ಕೊಡಲಾಗುತ್ತಿತ್ತು. ಇತರರ ಬಾವಿಗಳಿಂದ ಅವರು ನೀರು ಸೇದಿಕೊಳ್ಳುವ ಹಾಗಿರಲಿಲ್ಲ. ಇತರರ ಮನೆಗೆ ಹೋಗುವಂತಿರಲಿಲ್ಲ. ಪ್ರತಿದಿನವು ರಾಜಧಾನಿಗೆ ನಿಗದಿತ ಸಮಯದಲ್ಲಿ ಬಂದು ಅಲ್ಲಿನ ಬೀದಿ ಬಚ್ಚಲು ಇನ್ನಿತರ ಕೊಳಕಾಗಿದ್ದ ಪ್ರದೇಶಗಳನ್ನು ಸ್ವಚ್ಛಗೊಳಿಸಬೇಕಾಗಿತ್ತು. ಇವರುಗಳು ರಾಜಧಾನಿಯನ್ನು ಪ್ರವೇಶಿಸಬೇಕಾದರೆ ಅನುಸರಿಸಬೇಕಾಗಿದ್ದ ಆಚರಣೆಗಳು ನಿಜಕ್ಕೂ ಅಮಾನುಷವಾಗಿದ್ದವೆಂದೇ ಹೇಳಬಹುದು. ಕೃಷಿ ಉತ್ಪಾದನೆಯಲ್ಲಿ ಭೂಮಾಲೀಕರು ಕೂಲಿ ಕೆಲಸಗಾರರನ್ನು, ಜೀತದಾಳುಗಳನ್ನು ನೇಮಿಸಿಕೊಳ್ಳುತ್ತಿದ್ದರು. ಕೂಲಿ ಕೆಲಸಗಾರರು ಸಾಮಾನ್ಯವಾಗಿ ಶೂದ್ರ ಜಾತಿಗಳಿಗೆ ಸೇರಿದವರಾಗಿರುತ್ತಿದ್ದರು. ಜೀತದಾಳುಗಳನ್ನು ಶಾಸನಗಳಲ್ಲಿ 'ಹೊಲೆಯರು' ಮತ್ತು 'ಮುಲದ್ಲು' ಎಂದು ಕರೆಯಲಾಗಿದೆ. ಇವರು ಸಾಮಾನ್ಯವಾಗಿ ಅಂತ್ಯಜ ಅಥವಾ ಅಸ್ಪೃಶ್ಯ ಜಾತಿಗಳಿಗೆ ಸೇರಿರುತ್ತಿದ್ದರು.[೨೦]

ಎರಡು ಬಗೆಯ ಶಕ್ತಿಗಳು ಜೀತಗಾರಿಕೆಯು ರೂಪುಗೊಳ್ಳುವುದಕ್ಕೆ ಕಾರಣ ಎಂದು ಶಾಸನಾಧಾರಗಳು ಸೂಚಿಸುತ್ತವೆ. ಮೊದಲನೆಯದಾಗಿ ಹಲವು ಬಗೆಯ ಭೂಒಡೆತನವಿದ್ದುದು. ಉಂಬಳಿ, ಕೊಡಗಿ, ಮಾನ್ಯ, ಸರ್ವಮಾನ್ಯ, ಅಗ್ರಹಾರ, ಬ್ರಹ್ಮದಾಯ, ದೇವದಾಯ ಮತ್ತು ಮೂಢಾಪುರ ಎಂಬುದಾಗಿ, ಎರಡನೆಯದಾಗಿ ಅರಸರಿಗೂ ಸ್ಥಳದಲ್ಲಿರದ ಜಮೀನುದಾರರಿಗೂ ಭೂಮಿಯ ಒದಗಣೆಗಿಂತಲೂ, ಕೂಲಿಯ ಒದಗಣೆಯನ್ನು ಕುರಿತು ಹೆಚ್ಚಿನ ಕಾತರತೆ ಇದ್ದುದು.[೨೧]

ಕೆಲಸಗಾರರು ಬೆಳಿಗ್ಗೆ ಕೆಲಸ ಮಾಡಲು ಬಂದಾಗ ಮೊದಲು ಅವರಿಗೆ ಒಂದು ನಿರ್ದಿಷ್ಟ ಪ್ರಮಾಣದ ಅನ್ನವನ್ನು ಕೊಡುವುದು. ಆಮೇಲೆ ಕೆಲಸ ಮುಗಿಸಿ ರಾತ್ರಿ ಅವರು ಹಿಂದಿರುಗುವಾಗ ತಲಾ ಒಂದೊಂದು ಫನಂ ಕೊಡುವುದು ಎಂದು ಬಾರ್ಬೋಸಾ ಹೇಳುತ್ತಾನೆ.[೩೩] ಬಾರ್ಬೋಸಾನ ಹೇಳಿಕೆಯನ್ನು ನ್ಯೂನಜ್ ಕೂಡ ಸ್ಥಿರಪಡಿಸುತ್ತಾನೆ. ಅವನ ಬಳಿ ಕುದುರೆಗಳಿಗೆ ಮಾಲೀಸು ಮಾಡುವ ೧೬೦೦ ಜನರಿದ್ದಾರೆ. ತರಬೇತಿ ಕೊಡುವ ೩೦೦ ಜನರಿದ್ದಾರೆ. ಮತ್ತು ೨೦೦ ಜನ ಕುಶಲಕರ್ಮಿಗಳಿದ್ದಾರೆ. ಅವರು ಕಮ್ಮಾರರು, ಗಾರೆಯವರು, ಬಡಗಿಗಳು ಹಾಗೂ ರಾಜನ ಬಟ್ಟೆಗಳನ್ನು ಒಗೆದು ಶುಚಿಪಡಿಸುವ ಅಗಸರು, ಇವರಿಗೆಲ್ಲ ರಾಜನು ಪ್ರತಿದಿನವೂ ಕೂಲಿಯನ್ನು ಪಾವತಿ ಮಾಡುತ್ತಾನೆ. ಅರಮನೆಯ ಹೆಬ್ಬಾಗಿಲ ಮುಂದೆ ಎಲ್ಲರಿಗೂ ಅವರವರ ಕೂಲಿಯನ್ನು ವಿತರಿಸುತ್ತಾನೆ.[೩೪] ಅಂದಿನ ಇತಿಹಾಸಕ್ಕೆ ಸಂಬಂಧಿಸಿದ ಏನೆಲ್ಲಾ ದಾಖಲೆಗಳು ದೊರಕಿಸಿದರೂ ಸಹ ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿಯಿಂದ ಪ್ರಭಾವಿತವಾಗಿರದ ಅಂಶಗಳು ವಿರಳವೆಂದೇ ಹೇಳಬಹುದು. ಹಿಂದೂ ಧರ್ಮದವನು ಜನನದಿಂದ ಮರಣದವರೆಗೂ ಮತ್ತು ಅದರಾಚೆಯೂ ಕೂಡ ಜಾತಿಯ ಆಧಾರದಲ್ಲಿಯೇ ಬದುಕುವಂತಾಗಿತ್ತು. ಹೀಗಾಗಿ ಅಂದು ಜಾತಿಯೇ ಎಲ್ಲವನ್ನು ನಿರ್ಧರಿಸುತ್ತಿತ್ತು. ಅಂದರೆ ಒಬ್ಬ ವ್ಯಕ್ತಿಯು ಯಾರನ್ನು ಮದುವೆಯಾಗಬೇಕು, ಹೇಗೆ ಮದುವೆಯಾಗಬೇಕು, ಎಲ್ಲಿ ವಾಸಿಸಬೇಕು, ಏನನ್ನು ತಿನ್ನಬೇಕು, ಎಲ್ಲಿ ಹೇಗೆ ಕೆಲಸ ಮಾಡಬೇಕು, ಹೇಗೆ ಬದುಕಬೇಕು, ಎಲ್ಲಿ ಹೇಗೆ ಅವನು ಸಾಯಬಹುದು, ಅವನನ್ನು ಎಲ್ಲಿ ಹೇಗೆ ಶವಸಂಸ್ಕಾರ ಮಾಡಬೇಕು ಎನ್ನುವ ಪ್ರತಿಯೊಂದು ವಿಷಯವೂ ಅವನ ಜಾತಿಯಿಂದಲೇ ನಿರ್ಣಯವಾಗುತ್ತಿತ್ತು.

ವಿಜಯನಗರ ಸಾಮ್ರಾಜ್ಯದ ಸಮಾಜದಲ್ಲಿ ಇನ್ನೊಂದು ಬಹುಮುಖ್ಯ ಪಂಗಡವಾಗಿದ್ದವರು ವೀರಶೈವರು ಅಥವಾ ಲಿಂಗಾಯತರು. ೧೨ನೆಯ ಶತಮಾನದ ಕ್ರಾಂತಿಯ ನಂತರ ಈ ಪಂಗಡವು ಬಹುಪ್ರಾಧಾನ್ಯತೆಯನ್ನು ಪಡೆಯಿತು. ೨ನೇ ದೇವರಾಯನ ೧೪೨೨–೧೪೪೬ ಕಾಲದಲ್ಲಿ ವೀರಶೈವ ಧರ್ಮವು ಅತಿ ಹೆಚ್ಚು ಪ್ರೋತ್ಸಾಹ ಪಡೆಯಿತು. ವಿಜಯನಗರವನ್ನಾಳಿದ ಮೊದಲ ರಾಜವಂಶವರಾದ ಸಂಗಮರು ಶೈವ ಪಂಥಿಯರು. ಶಿವನ ಆರಾಧಕರಾಗಿದ್ದ ಹರಿಹರ ಮತ್ತು ಬುಕ್ಕರಾಯರು ಈ ಪಂಥದ ವಿಚಾರಗಳಿಂದ ಪ್ರಭಾವಿತರಾಗಿದ್ದರು.

ಕೆಳದಿಯ ನಾಯಕರು ಹಾಗೂ ಆ ಕಾಲದ ಅನೇಕ ಪಾಳೆಯಗಾರರು ಮತ್ತು ಅಮರ ನಾಯಕರು ವೀರಶೈವ ಧರ್ಮದ ಅನುಯಾಯಿಗಳಾಗಿದ್ದರು. ವೀರಶೈವರು ಜಾತಿ ಪದ್ಧತಿಗೆ ವಿರುದ್ಧವಾಗಿದ್ದರು. ಸದಾಕಾಲ ಅವರು ಶಿವಲಿಂಗವನ್ನು ಧರಿಸುತ್ತಿದ್ದರು. ಅದು ತಮ್ಮನ್ನು ಪರಿಶುದ್ಧವಾಗಿಡುವುದರಿಂದ ಜನನ–ಮರಣಗಳ ಮೈಲಿಗೆ ಅಂಟುವುದಿಲ್ಲ ಎಂದು ಭಾವಿಸುತ್ತಿದ್ದರು. ವಿವಾಹ ಮತ್ತು ಇತರ ಸಂಸ್ಕಾರಗಳಲ್ಲಿ ವೈದಿಕ ವಿಧಾನಕ್ಕಿಂತ ಬೇರೆ ಪದ್ಧತಿಯನ್ನು ಅನುಸರಿಸುತ್ತಿದ್ದರು.

ಯಜ್ಞಯಾಗಾದಿಗಳನ್ನಾಗಲಿ, ಉಪವಾಸ ವ್ರತಗಳನ್ನಾಗಲಿ, ಮಾಡುವ ಅಗತ್ಯವಿಲ್ಲ. ದೇವಾಲಯಗಳನ್ನು ಕಟ್ಟಿಸುವ ಅಗತ್ಯವಿಲ್ಲವೆಂದು ತಿಳಿದಿದ್ದರು. ಇವರು ಸಸ್ಯಹಾರಿಗಳಾಗಿದ್ದರು. ವಿಧವಾ ವಿವಾಹವನ್ನಾಗಲಿ, ವಿಚ್ಛೇದನವನ್ನಾಗಲಿ ನಿಷೇಧಿಸಲಿಲ್ಲ. ಅವರು ಮೃತ ದೇಹಗಳನ್ನು ಹೂಳುತ್ತಿದ್ದರು. ವಾರ್ಷಿಕ ಶ್ರಾದ್ಧಾ ಕಾರ್ಯಗಳನ್ನು ಬ್ರಾಹ್ಮಣರಂತೆ ಆಚರಿಸುತ್ತಿರಲಿಲ್ಲ. ಇವರಲ್ಲಿ ಜಂಗಮರು, ಬಂಜಾರರು, ಆರಾಧ್ಯರು, ಸರ್ದಾರ, ನೊಣಬ ಇತ್ಯಾದಿ ಉಪಪಂಗಡಗಳಿದ್ದವು. ಇವರು ಕೃಷಿ, ವ್ಯಾಪಾರ, ಸಾರ್ವಜನಿಕ ಆಡಳಿತ, ವಿದ್ಯಾ ಸಂಬಂಧವಾದ ವೃತ್ತಿಗಳಲ್ಲಿ ತೊಡಗಿದ್ದರು. ವೀರಶೈವ ಧರ್ಮವು ಅಂದಿನ ಕಾಲದಲ್ಲಿನ ಸಮಾಜದಲ್ಲಿ ಅಂಗೀಕೃತವಾದ ಮತ್ತು ಹೇರಲ್ಪಟ್ಟಿದ್ದ ವೈದಿಕ ಬ್ರಾಹ್ಮಣ ಸಂಸ್ಕೃತಿಗೆ ಬದಲಿ ಸಾಮಾಜಿಕ ಮಾದರಿಯನ್ನು ಒದಗಿಸಿತು.

ವಿಜಯನಗರ ಕಾಲದ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತು ತಿಳಿಯುವುದಕ್ಕೆ ಆ ಕಾಲದ ಶಿಲ್ಪಗಳು, ಶಾಸನಗಳು, ವಿದೇಶಿಗಳಿಂದ ಬಂದಿದ್ದ ಬಾರ್ಬೋಸ, ಡೊಮಿಂಗೊಫಾಯಸ್, ನ್ಯೂನಿಜ್, ನಿಕೆಟಿನ್, ನಿಕೋಲೋಕಾಂಟಿ ಮುಂತಾದ ಪ್ರವಾಸಿಗರ ಸಾಹಿತ್ಯಿಕ ಆಧಾರಗಳು ಸಹಾಯಕವಾಗಿವೆ. ಈ ಕಾಲದ ದಾಖಲೆಗಳು ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ, ಕಲೆ, ಸಾಹಿತ್ಯ ಮುಂತಾದ ಸಮಾಜದ ವಿವಿಧ ರಂಗಗಳಲ್ಲಿ ಮಹಿಳೆಯರು ವಹಿಸಿದ್ದ ಪಾತ್ರ, ಗಳಿಸಿದ್ದ ಸಾಧನೆ ಹಾಗೂ ನೀಡಿದ ಕೊಡುಗೆಗಳ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಸಮಾಜದ ಎಲ್ಲ ಸ್ತರಗಳ ಸ್ತ್ರೀಯರಿಗೆ ಸಮಾಜ ಜೀವನದಲ್ಲಿ ಭಾಗವಹಿಸಿ ತಮ್ಮದೇ ಆದ ರೀತಿಯಲ್ಲಿ ಸೇವೆ ಸಲ್ಲಿಸಲು, ತಕ್ಕ ಅವಕಾಶಗಳಿದ್ದವು ಎಂದು ತಿಳಿದುಬರುತ್ತದೆ. ವಿಜಯನಗರ ಕಾಲದ ಸಾಹಿತ್ಯ ಮತ್ತು ಶಾಸನಗಳ ಪ್ರಕಾರ ಅಂದಿನ ಕೌಟುಂಬಿಕ ಜೀವನದಲ್ಲಿ ಮೂರು ವರ್ಗದ ಸ್ತ್ರೀಯರು ಇರುತ್ತಿದ್ದರು. ಅವರೆಂದರೆ ಕುಲಸ್ತ್ರೀ, ಭೋಗಸ್ತ್ರೀ ಮತ್ತು ವೇಶ್ಯೆ ಹೆಚ್ಚಿನ ಸ್ತ್ರೀಯರು ಮೊದಲನೆಯ ಗುಂಪಿನಲ್ಲಿದ್ದರೆ, ಎರಡು ಮತ್ತು ಮೂರನೆಯ ಗುಂಪಿನ ಸ್ತ್ರೀಯರು ಕಡಿಮೆ ಪ್ರಮಾಣದಲ್ಲಿದ್ದರು. ಮೊದಲನೇ ಗುಂಪಿನ ಸ್ತ್ರೀಯರು ನ್ಯಾಯಬದ್ಧ ಮದುವೆಯಾಗಿ ಧರ್ಮಪತ್ನಿಯರಾಗಿರುತ್ತಿದ್ದರು. ತಮ್ಮ ಗಂಡಂದಿರ ಬಗ್ಗೆ ಶ್ರದ್ಧೆ, ಭಕ್ತಿಯಿಂದಿರುತ್ತಿದ್ದರು.

ಇದು ತಮ್ಮ ಗಂಡನ ಬಗ್ಗೆ ತೋರಿಸುತ್ತಿದ್ದ ದೊಡ್ಡ ಸದ್ಗುಣ ಭಕ್ತಿಯಾಗಿತ್ತು. ತನ್ನ ಮಕ್ಕಳಿಗೆ ತಾಯಿಯಾಗಿ ಮತ್ತು ತನ್ನ ಮನೆಯಲ್ಲಿ ಗೃಹ ಪತ್ನಿಯಾಗಿ ಕೆಲಸ ನಿರ್ವಹಿಸುವುದು ಅವಳ ಹೊಣೆಗಾರಿಕೆಯಾಗಿತ್ತು. ಅಂದು ಅವಳದು ಬಿಡುವಿಲ್ಲದ ಜೀವನವಾಗಿತ್ತು. ಮನೆಯನ್ನು ಗುಡಿಸುವುದು, ರಂಗೋಲಿಯನ್ನು ಬಿಡಿಸುವುದರ ಮೂಲಕ ಮನೆಯನ್ನು ಸಿಂಗರಿಸುವುದು, ಪಾತ್ರೆಗಳನ್ನು ತೊಳೆಯುವುದು, ಅಡುಗೆಯನ್ನು ಮಾಡುವುದು ಹೀಗೆ ಕೆಲಸಗಳಲ್ಲಿ ತೊಡಗುತ್ತಿದ್ದಳು. ಅವಳು ಸಾಮಾನ್ಯವಾಗಿ ಮನೆಯಿಂದ ಹೊರಗೆ ಹೋಗುತ್ತಿರಲಿಲ್ಲ.[೩೫] ಆ ಕಾಲದ ಸ್ತ್ರೀಯರು ಹಲವಾರು ಚಟುವಟಿಕೆಗಳಲ್ಲಿ

ತೊಡಗುತ್ತಿದ್ದರು. ಅಂದರೆ ಮಡಿಕೆ ತಯಾರಿಕೆ, ಬುಟ್ಟಿ ಮತ್ತು ಚಾಪೆ ಹೆಣೆಯುವುದು, ಹೂಗಳನ್ನು ಕಟ್ಟುವುದು, ಬಟ್ಟೆ ನೇಯುವುದು ಮತ್ತು ಬಟ್ಟೆ ಹೊಲೆಯುವುದರಲ್ಲಿ ತಮ್ಮ ಸೇವೆ ಸಲ್ಲಿಸುತ್ತಿದ್ದರು.[೩೬]

ಪೋರ್ಚುಗೀಸ್ ಪ್ರವಾಸಿ ಡಾಮಿಂಗೋ ಪಾಯಸ್ ವಿಜಯನಗರ ಕಾಲದ ರಾಣಿಯರ ರಾಜಗೃಹ, ಸ್ತ್ರೀಯರ, ಶಿಖಂಡಿಯರ ಮತ್ತು ರಾಣಿಯರ ಸೇವಕರ ಬಗ್ಗೆ ವಿವರಗಳನ್ನು ನೀಡುತ್ತಾನೆ. ಪ್ರತಿಯೊಬ್ಬ ರಾಣಿಯೂ ತನ್ನದೇ ಆದ ಮನೆಯನ್ನು, ಬಾಲೆಯರನ್ನು, ಸಭಾಮಂದಿರದ ಸ್ತ್ರೀಯರನ್ನು, ರಕ್ಷಣಾ ಸ್ತ್ರೀಯರನ್ನು ಮತ್ತು ಹಲವಾರು ಇತರ ಸೇವಕಿಯರನ್ನು ಹೊಂದಿದ್ದಳು. ಆದರೆ, ಅವರ ಬಳಿ ಒಬ್ಬನೇ ಒಬ್ಬ ಗಂಡಸಿನ ಆವಶ್ಯಕತೆ ಇರುತ್ತಿರಲಿಲ್ಲ. ಒಂದು ವೇಳೆ ಆವಶ್ಯಕತೆ ಇದ್ದರೆ ಶಿಖಂಡಿಯು ರಾಣಿಯರನ್ನು ನೋಡಿಕೊಳ್ಳುತ್ತಿದ್ದನು. ಇಂತಹ ಹನ್ನೆರಡು ಸಾವಿರ ಸ್ತ್ರೀಯರಿದ್ದರು. ಸಾಮಾನ್ಯವಾಗಿ ಈ ಸ್ತ್ರೀಯರು ಖಡ್ಗ ಮತ್ತು ಗುರಾಣಿಗಳನ್ನು ಹಿಡಿಯುವ, ಮಲ್ಲಯುದ್ಧ ಮಾಡುವ, ತುತ್ತೂರಿ ಊದುವ ಮತ್ತು ಇತರ ಸಂಗೀತ ವಾದ್ಯಗಳನ್ನು ನುಡಿಸುವ ಸಾಮರ್ಥ್ಯವುಳ್ಳವರಾಗಿದ್ದರು. ರಾಜನಂತೆ ರಾಣಿಯರೂ ಸಹ ಆಳುಗಳನ್ನು, ಬಟ್ಟೆ ಹೊಗೆಯುವವರನ್ನು ಮತ್ತು ಅಧಿಕಾರಿಗಳನ್ನು ತಮ್ಮ ಮನೆಗಳ ಮಹಾದ್ವಾರಗಳ ಒಳಗೆ ಹೊಂದಿದ್ದರು.[೩೭] ಈ ಕಾಲದ ಸ್ತ್ರೀಯರು ಮತ್ತು ದೇವಾಲಯಗಳ ನಡುವೆ ಉತ್ತಮವಾದ ಸಂಬಂಧವಿತ್ತು. ದೇವಾಲಯ ಧರ್ಮದ ಚಿಹ್ನೆಯಾಗಿತ್ತು. ಹಿತಕರವಾದ ಧಾರ್ಮಿಕ ಪರಂಪರೆಯನ್ನು ದೇವಾಲಯಗಳ ನಿರ್ಮಾಣ, ಎಲ್ಲಾ ಧರ್ಮಗಳ ದೇಗುಲಗಳಿಗೆ ವಿಭಿನ್ನ ಬಗೆಯ ಕಾಣಿಕೆಗಳ ಅರ್ಪಣೆ ಮಾಡಿ ದೈವಿಕವಾದ ಸಹಿಷ್ಣುತಾ ಸಂಪ್ರದಾಯವನ್ನು ಧಾರ್ಮಿಕ ಕಾರ್ಯಗಳ ಮೂಲಕ ಉಳಿಸಿ, ಬೆಳೆಸಿಕೊಂಡು ಬರುವುದರಲ್ಲಿ ಈ ಕಾಲದ ಮಹಿಳೆಯರೂ ಹಿಂದೆ ಬೀಳಲಿಲ್ಲ ಎಂಬುದನ್ನು ಶಾಸನಗಳು ದೃಢಪಡಿಸುತ್ತವೆ. ದೇವರಾಯ ಮಹಾರಾಯನ ರಾಣಿ ಭೀಮಾದೇವಿ ಮಂಗಾಯಿ ಬಸದಿಗಾಗಿ ಶಾಂತಿನಾಥ ಸ್ವಾಮಿಯ ವಿಗ್ರಹವನ್ನು ಮಾಡಿಸಿದಳು ಎಂಬ ವಿಚಾರ ಕ್ರಿ.ಶ. ೧೪೧೦ರ ಶಾಸನವೊಂದರಲ್ಲಿದೆ.[೩೮] ಅಧಿಕಾರಿ ಅಲ್ಲಪ್ಪ ದಂಡನಾಯಕನ ಭಾಮಿನಿ-ಡಣ್ಣಾಯಕಿ ಹಾಗೂ ಚಾಯವ್ವಿ-ಡಣ್ಣಾಯಕಿ ಎಂಬ ಇಬ್ಬರು ಅರ್ಧಾಂಗಿಯರು ತಿರಕಣಾಂಬಿಯಲ್ಲಿ ಗೋಪಿನಾಥ ದೇವರನ್ನು ಪ್ರತಿಷ್ಠಾಪನೆ ಮಾಡಿದರೆ[೩೯] ಸಮಾಜದ ಮೇಲ್ವರ್ಗಕ್ಕೆ ಸೇರಿದ ರಂಗನಾಯಕಿ ಮೇಲುಕೋಟೆಯಲ್ಲಿ ಸಂಪತ್ಕುಮಾರ ದೇವರ ಧರ್ಮಪತ್ನಿಯ ಗುಡಿಯ ಮುಂದೆ ರಂಗಮಂಟಪ ಒಂದನ್ನು ನಿರ್ಮಿಸಿದಳು[೪೦] ಎಂಬ ವಿವರಗಳು ಕ್ರಮವಾಗಿ ಕ್ರಿ.ಶ. ೧೩೧೮ ಹಾಗು ೧೪೫೮ರ ದಾಖಲೆಗಳಲ್ಲಿ ಸಿಗುತ್ತವೆ. ಸಾಮಾನ್ಯ ಸ್ತ್ರೀಯರಾಗಿದ್ದ ಲಕ್ಷ್ಮೀಬೋಯಿ ಅವ್ವೆ ತರಿಯೂರಿನಲ್ಲಿ ನಂದಿಕೇಶ್ವರ ದೇವರ ಪ್ರತಿಷ್ಠಾಪನೆ ಮಾಡಿದರೆ,[೪೧] ಬಿರ್ತಿ ಮಲ್ಲಮ್ಮ ಕಡೂತಿಯಲ್ಲಿ ಕಂಬದೈಯ್ಯ, ಅಂದರೆ ನರಸಿಂಹ ಹಾಗೂ ಗೋಪಾಲಕೃಷ್ಣ ದೇವರುಗಳಿಗೆ ಎರಡು ದೇಗುಲ ಕಟ್ಟಿಸಿದಳು[೪೨] ಎಂಬುದಾಗಿ ಕ್ರಮವಾಗಿ ಕ್ರಿ.ಶ. ೧೫೯೩ ಹಾಗೂ ೧೫೪೩ರ ಶಾಸನಗಳು

ವಿವರಿಸುತ್ತವೆ. ೨ನೆಯ ದೇವರಾಯನ ರಾಣಿ ಕಮಲಾದೇವಿ ತುಮಕೂರು ಜಿಲ್ಲೆಯ ಬಿದಿರಿಯ ಕಲಿನಾಥ ದೇವರಿಗೆ ಭೂದಾನ ನೀಡಿದರೆ, ಕೃಷ್ಣದೇವರಾಯ ರಾಣಿಯರಾಗಿದ್ದ ತಿರುಮಲದೇವಿ ಹಾಗೂ ಚಿನ್ನಾದೇವಿ ತಿರುಪತಿಯ ಭಗವಂತನಿಗೆ ಚಿನ್ನದ ಬಟ್ಟಲು, ತಟ್ಟೆ, ಕಂಠಿಹಾರ, ಪದಕಹಾರ, ಗ್ರಾಮ ಇತ್ಯಾದಿಗಳನ್ನು ಅರ್ಪಿಸಿರು. ಅಚ್ಯುತರಾಯ ರಾಣಿ ವರದಾಂಬಿಕಾ ಅದೇ ದೇವರ ಪೊಂಗಲ್ ನೈವೇಧ್ಯಕ್ಕಾಗಿ ಆರು ಹಳ್ಳಿಗಳನ್ನು ಕಾಣಿಕೆಯಾಗಿ ನೀಡಿದಳು ಎಂಬುದು ತಿರುಮಲೈ ತಿರುಪತಿ ದೇವಸ್ಥಾನದ ದಾಖಲೆ ಹಾಗೂ ಇತರ ಶಾಸನಗಳಿಂದ ಗೊತ್ತಾಗುತ್ತದೆ.[೪೩] ಸಮಾಜದ ಕೆಳಗಿನ ಸ್ತರಕ್ಕೆ ಸೇರಿದ ಸದಸ್ಯೆಯರಾದ ತಿಪ್ಪಮ್ಮ ಬನ್ನೂರಿನ ಹನುಮಂತ ದೇವರ ಬೆಳಗಿನ ನೈವೇಧ್ಯಕ್ಕೆ ಮೊಸರನ್ನವನ್ನು ತಯಾರಿಸುವ ಉದ್ಧೇಶಕ್ಕಾಗಿ ಜಮೀನುಗಳನ್ನು ಹಾಗೂ ೬೦೦ ಅಡಕೆ ಮರಗಳನ್ನು,[೪೪] ಕುರುಬ ಜಾತಿಯ ಗೋವಿಂದಿ ಶ್ರೀವೆಂಕಟೇಶ ಪರಮಾತ್ಮನ ೧೦ ದಿನಗಳ ಬ್ರಹ್ಮೋತ್ಸವದಲ್ಲಿ ೭ ದಿನಗಳ ಸೇವೆಗಾಗಿ ೨೧೮೦ ಪಣವನ್ನು[೪೫] ಮತ್ತು ತಿರುಮುಮ್ಮನ್ ತಿರುಪತಿಯ ಶ್ರೀ ಗೋವಿಂದರಾಜ ದೇವಸ್ಥಾನಕ್ಕೆ ೪೦೦ ಪಣವನ್ನು ಅರ್ಪಿಸಿದಳು[೪೬] ಎಂಬ ವಿವರಗಳು ೧೫೪೧ ಹಾಗೂ ೧೫೪೫ರ ದಾಖಲೆಗಳಲ್ಲಿವೆ. ಬ್ರಾಹ್ಮಣರಿಗೆ ದಾನ ಮಾಡುವುದು, ಕೆರೆ–ಕಟ್ಟೆ, ಅಗ್ರಹಾರ, ಛತ್ರ ಇತ್ಯಾದಿಗಳ ನಿರ್ಮಾಣ ಮಾಡುವುದೇ ಮುಂತಾದ ಜನೋಪಯೋಗಿ ಕಾರ್ಯಕ್ರಮಗಳಲ್ಲೂ, ಈ ಕಾಲದ ಮಹಿಳೆಯರು ಭಾಗವಹಿಸುತ್ತಿದ್ದರು ಎಂಬುದು ಗಮನಾರ್ಹವಾದುದು. ರಾಮಚಂದ್ರಾಪುರ ಎಂಬ ಅಗ್ರಹಾರವನ್ನು ಕಟ್ಟಿ, ಬಾವಿ ತೋಡಿಸಿದ ರಾಣಿ ಚಿನ್ನಮಾಂಬ, ವೆಂಕಟಕೃಷ್ಣರಾಜ ಅಗ್ರಹಾರ ಸ್ಥಾಪನೆ ಮಾಡಿದ ಯಲಹಂಕನಾಡ ಪ್ರಭುವಿನ ರಾಣಿ ವೆಂಕಟಕೃಷ್ಣ ರಾಜಮ್ಮ, ಮಲ್ಲಿಕಾರ್ಜುನ ದೇವರ ಶಿಷ್ಯನಿಗೆ ಮಗ್ಗಿಹಳ್ಳಿ ಗ್ರಾಮ ನೀಡಿದ ಗಂಗರಾಜ ಒಡೆಯನ ರಾಜಮಾತೆ, ಕಂಡಾದ ರಾಮಾನುಜ ಅಯ್ಯಂಗಾರ್ ನಡೆಸುತ್ತಿದ್ದ ಛತ್ರದಲ್ಲಿ ಆಹಾರ ದಾನಕ್ಕಾಗಿ ಚಿನ್ನವನ್ನೇ ದಾನ ಮಾಡಿದ ಓರ್ವ ಮಹಾಮಂಡಲೇಶ್ವರನ ರಾಣಿ ನರಸಮ್ಮನ್ ಮೇಲುಕೋಟೆಯ ೫೨ ಜನ ಶ್ರೀ ವೈಷ್ಣವ ಬ್ರಾಹ್ಮಣರಿಗೆ ದತ್ತಿಗಳನ್ನು ನೀಡಿದ ನಾಚಾರಮ್ಮ ಮತ್ತು ತಾನಿದ್ದ ಮನೆಯನ್ನೇ ಬ್ರಾಹ್ಮಣರಿಗೆ ದಾನ ಕೊಟ್ಟಿದ್ದ ಸಂಗಮ ದೇವಿ ಮುಂತಾದವರನ್ನು ೧೫೪೦, ೧೪೯೯, ೧೫೧೧, ೧೪೯೭, ೧೪೭೧ ಹಾಗೂ ೧೪೩೦ ಶಾಸನಗಳು ಸ್ತುತಿಸಿವೆ.[೪೭]

ಈ ಕಾಲದಲ್ಲಿ ಸ್ತ್ರೀಯರು ಉನ್ನತವಾದ ಹುದ್ದೆಗಳನ್ನು ಹೊಂದಿದ್ದರು. ಅಡಿಪಂ ಪರರ್ಮದಮ್ಮಂ ಮತ್ತು ರುಕ್ಮಣೀ ಅಮ್ಮನ್ ಇವರು ಅಚ್ಯುತರಾಯನ ಕಾಲದಲ್ಲಿ ಪ್ರಾಂತ್ಯಾಧಿಕಾರಿಯಾಗಿದ್ದರು.[೪೮] ಮಲ್ಲಮ್ಮನ್, ಅರವಿಟ್ಟು ಲಕ್ಷ್ಮೀಯಮ್ಮನ್ ಮತ್ತು ತಿಮ್ಮಕ್ಕ ಇವರು ಕೃಷ್ಣದೇವರಾಯ ಮತ್ತು ಅಚ್ಯುತರಾಯನ ಕಾಲದಲ್ಲಿ ಉನ್ನತ ಹುದ್ದೆಗೇರಿ ಸೇವೆ ಸಲ್ಲಿಸುತ್ತಿದ್ದರು.[೪೯] ಭೂಮಿಯ ವ್ಯವಸಾಯದಲ್ಲೂ ಸ್ತ್ರೀಯರು ಮಹತ್ವದ ಪಾತ್ರವನ್ನು ನಿರ್ವಹಿಸಿರುವುದು ಕಂಡುಬರುತ್ತದೆ. ತಾಳಂಗೇರಿಯಾ ಶಾಸನವು

ಮೊಚ್ಚೊಬ್ಬರಸಿ ಕುಂಬಾಳಿಯ ಮುಖ್ಯಸ್ಥನಿಂದ ಉಳುಮೆಗೆ ಒಳಪಡೆದ ಭೂಮಿಯನ್ನು ಸ್ವೀಕರಿಸಿ ಅದನ್ನು ಫಲವತ್ತಾಗಿ ಮಾಡಿ, ಮನೆಯನ್ನು ಕಟ್ಟಿ ತೋಟವನ್ನು ಬೆಳೆಸಿದಳೆಂದು ತಿಳಿಸುತ್ತದೆ.[೫೦] ಇಟಲಿಯ ಪ್ರವಾಸಿಗ ಪಿತ್ರೊದೆಲ್ಲಿವಲ್ಲೆಯು ಹಲವಾರು ಸ್ತ್ರೀಯರು ಕೃಷಿಯ ಚಟುವಟಿಕೆಯನ್ನು ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆಂದು ತಿಳಿಸುತ್ತಾನೆ. ಅವರು ಬೀಜ ಬಿತ್ತುವುದು, ಸಸಿ ಬೆಳೆಸುವುದು, ಗೊಬ್ಬರ ಹಾಕುವುದು, ಧಾನ್ಯಗಳನ್ನು ಸಂಗ್ರಹಿಸಿ ರಾಶಿ ಮಾಡುವುದು ಮುಂತಾದ ಕೆಲಸ ಮಾಡುತ್ತಿದ್ದರು.[೫೧]

ಮಹಿಳೆಯ ಸ್ಥಾನಮಾನದ ಹಾದಿಯಲ್ಲಿ ಮುಳ್ಳಾಗಿದ್ದ ವೇಶ್ಯಾವೃತ್ತಿ, ದೇವದಾಸಿ, ನಾಯಕಸಾನಿ ಹಾಗೂ ಸತಿಸಹಗಮನ ಪದ್ಧತಿ ಮುಂತಾದ ಅನಿಷ್ಟಗಳು ಈ ಸಮಾಜದಲ್ಲಿ ಪ್ರಬಲವಾಗಿದ್ದವು ಎನ್ನುವುದು ಗಮನಿಸಬೇಕಾದ ಅಂಶವಾಗಿದೆ. ಮಹಿಳೆಯರಿಗೆ ಗೃಹಕೃತ್ಯವನ್ನು ನಿರ್ವಹಿಸಲು ತಕ್ಕ ಶಿಕ್ಷಣವನ್ನು ಕೊಟ್ಟರೆ ಸಾಕು. ಅದು ಅವರಿಗೆ ಮುಂದೆ ಪ್ರಯೋಜನವಾಗುತ್ತದೆ ಎಂಬ ಭಾವನೆಯಿತ್ತು. ಆದರೆ ಸಮಾಜದ ಮೇಲು ವರ್ಗದವರು ತಮ್ಮ ಹೆಣ್ಣು ಮಕ್ಕಳಿಗೆ ಕಲೆ ಮತ್ತು ಸಾಹಿತ್ಯಗಳನ್ನು, ಸಂಗೀತ, ನಾಟ್ಯ, ವರ್ಣಚಿತ್ರ, ಪುಷ್ಪವಿನ್ಯಾಸ, ಅಡುಗೆ ಮೊದಲಾದವುಗಳನ್ನು ಹೇಳಿಕೊಡುತ್ತಿದ್ದರು. ಕೆಳವರ್ಗದವರು, ಕುಟುಂಬಕ್ಕೆ ಸಹಾಯವಾಗುವಂತೆ ಯಾವುದಾದರೊಂದು ಕಸುಬನ್ನು ಕಲಿತಿರುತ್ತಿದ್ದರು. ಬುಟ್ಟಿ ಹೆಣೆಯುವುದು, ಚಾಪೆ ನೇಯುವುದು, ಹಾರಗಳನ್ನು ತಯಾರಿಸುವುದು, ಎಣ್ಣೆ ಹಿಂಡುವುದು, ಗೊಂಬೆಗಳನ್ನು ತಯಾರಿಸಿ ಮಾರುವುದು, ಹೊಲಗದ್ದೆಗಳಲ್ಲಿ ದುಡಿಯುವುದು, ದನ ಮೇಯಿಸುವುದು ಮೊದಲಾದ ಕೆಲಸಗಳನ್ನು ಮಾಡುತ್ತಿದ್ದರು. ಅಲ್ಲದೆ ಸಮಾಜದ ಶ್ರೀಮಂತ ವರ್ಗದವರು ಕಸಗೂಡಿಸಲು, ಪಾತ್ರೆ ತೊಳೆಯಲು, ಬಟ್ಟೆ ಹೊಗೆಯಲು ಮೊದಲಾದ ಕೆಲಸಗಳಿಗೆ ಕೆಳಜಾತಿಯ ಮಹಿಳೆಯರನ್ನು ನೇಮಿಸಿಕೊಳ್ಳುತ್ತಿದ್ದರು.

ವಿಜಯನಗರದ ಕಾಲದಲ್ಲಿಯೇ ಅಲ್ಲದೆ ನಮ್ಮ ಪ್ರಾಚೀನ ಭಾರತದ ಚರಿತ್ರೆಯನ್ನು ಗಮನಿಸುವುದಾದರೆ ರಾಜರ ಆಸ್ಥಾನದಲ್ಲಿಯೇ ಎಲ್ಲಾ ವೃತ್ತಿಗಳಿಗಿಂತಲೂ ವೇಶ್ಯಾ ವೃತ್ತಿಯು ಸ್ವಾಭಾವಿಕ ವೃತ್ತಿಯಾಗಿ ಬೆಳೆದು ಬಂದಿರುವುದು ಕಂಡುಬರುತ್ತದೆ. ದೇವಾಲಯ ಧರ್ಮದ ಚಿಹ್ನೆಯಾಗಿತ್ತು. ದೇವಾಲಯದಲ್ಲಿ ಸ್ತ್ರೀಯರು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಸೇವೆ ಸಲ್ಲಿಸುತ್ತಿದ್ದರು. ಅಂದರೆ ನೃತ್ಯ, ಸಂಗೀತ, ಹಾಡುಗಾರಿಕೆ ಹಾಗೂ ಇತರ ಸೇವೆ ಸಲ್ಲಿಸುತ್ತಿದ್ದರು. ಇಂತವರನ್ನು ರಂಗಭೋಗದವರು, ದೇವದಾಸಿಗಳು, ಪಾತ್ರಿ ಮತ್ತು ಸೇನೆ ಎಂದು ಕರೆಯಲಾಗುತ್ತಿತ್ತು. ಕ್ರಿ.ಶ. ೧೫೧೫ರ ಅಮರಾವತಿಯ ಶಾಸನದಿಂದ ಮಧುರಾ ಪುರಿಯ ಮಾಧವಿ ದೇವಿಯ ದೇವಾಲಯದ ಸೇವೆಯಲ್ಲಿ ಸಾನಿಯರು ಇದ್ದದ್ದು ತಿಳಿಯುತ್ತದೆ.[೫೨] ಸಿಂಹಾಚಲಂನ ನರಸಿಂಹದೇವರ ಮುಂದೆ ನಾಮ ಸಂಕೀರ್ತನ ಹಾಡುವುದಕ್ಕಾಗಿ ಸಾನಿಯರಿದ್ದರೆಂಬುದು ಅಲ್ಲಿಯ ಕ್ರಿ.ಶ. ೧೩೫೯ರ ಶಾಸನದಿಂದ

ತಿಳಿಯುತ್ತದೆ.[೫೩] ಅದೇ ದೇವರ ಸನ್ನಿಧಿಯಲ್ಲಿ ವೀಣೆ ಮತ್ತು ಇತರ ವಾದ್ಯಗಳನ್ನು ನುಡಿಸುವುದಕ್ಕಾಗಿ ಇಬ್ಬರಿ ಸ್ತ್ರೀಯರಿದ್ದರು. ಕ್ರಿ.ಶ. ೧೩೪೯ರ ಶಾಸನದಿಂದ ತಿಳಿಯುತ್ತದೆ.[೫೪] ದೇವರಿಗೆ ಚಾಮರ ಬೀಸಲು ಇಬ್ಬರು ಸಾನಿಯರು ಮತ್ತು ದೇವಾಲಯದಲ್ಲಿ ಕನ್ನಡಿ ಹಿಡಿಯಲು ಮತ್ತು ರಂಗೋಲಿ ಇಡಲು ಒಬ್ಬ ಸ್ತ್ರೀ ಇದ್ದುದು ಶಾಸನಗಳಿಂದ ತಿಳಿಯುತ್ತದೆ.[೫೫] ಕನ್ಯೆಯರನ್ನು ದೇವಾಲಯಗಳಿಗೆ ದೇವದಾಸಿಯರನ್ನಾಗಿ, ಬಸವಿಯರನ್ನಾಗಿ ಬಿಡುವ ಸಂಪ್ರದಾಯವೂ ಇತ್ತು. ಅವರನ್ನು ಮದುವೆಯಾಗಲು ಯಾರೂ ಮುಂದೆ ಬರುತ್ತಿರಲಿಲ್ಲ. ತಂದೆ–ತಾಯಿಗಳು ಈ ದುಷ್ಟ ಪದ್ಧತಿಯನ್ನು ಒಂದು ಹರಕೆ ತೀರಿಸುವ ಸಲುವಾಗಿ ಎಂಬಂತೆ ಬಿಟ್ಟು ಬಿಡುತ್ತಿದ್ದರು. ಇದನ್ನೇ ಕೆಳವರ್ಗದ ಸಾಮಾಜಿಕ ಸ್ತರಕ್ಕೆ ಸೇರಿದ ಜನರೂ ಅನುಸರಿಸುತ್ತಿದ್ದರು.[೫೬] ಈ ಕಾಲದ ಸಾಹಿತ್ಯಕ ಕೃತಿಗಳು ವ್ಯಭಿಚಾರವನ್ನು ಬೆಳೆಯುತ್ತಿದ್ದ ದುಷ್ಟ ಅಭ್ಯಾಸವಾಗಿ ಚಿತ್ರಿಸಿವೆ. ಗಣಿಕೆಯರನ್ನು, ನಾಯಕ ಸಾನಿಯರು, ಅಂತಃಪುರದ ಸ್ತ್ರೀಯರು ಎಂದು ಕರೆಯಲಾಗುತ್ತಿತ್ತು. ಅರಮನೆಯೊಂದಿಗೆ ಸಂಬಂಧವಿದ್ದುದ್ದರಿಂದ ಅವರಿಗೆ ಸಮಾಜದಲ್ಲಿ ಬಹು ಉನ್ನತವಾದ ಸ್ಥಾನಮಾನವಿದ್ದಿತು. ದೇವಾಲಯಗಳಲ್ಲಿ ಸೇವೆ ಸಲ್ಲಿಸುತ್ತಿದ್ದ ದೇವದಾಸಿಯರು, ಲಿಂಗಬಸವಿ, ವಿಷ್ಣುಬಸವಿ ಎಂಬ ಎರಡು ವರ್ಗದ ಬಸವಿಯರು ಮತ್ತು ವೃತ್ತಿನಿರತ ಸೂಳೆಯರು ಇರುತ್ತಿದ್ದರು.[೫೭] ವೇಶ್ಯೆಯರು, ದೇವದಾಸಿಯರು ಆರ್ಥಿಕವಾಗಿ ಸ್ವತಂತ್ರರೂ, ಸಾಮಾಜಿಕವಾಗಿ ಗೌರವಾನ್ವಿತರೂ, ರಾಜಕೀಯವಾಗಿ ಸವಲತ್ತುಗಳನ್ನು ಪಡೆದವರೂ ಆಗಿರುತ್ತಿದ್ದರು. ಅವರ ವೃತ್ತಿಯು ಬೇರೆ ಯಾವುದೇ ವೃತ್ತಿಯಂತೆ ಶಾಸನಬದ್ಧ ವೃತ್ತಿಯಾಗಿತ್ತು. ಅವರೂ ಸರಕಾರಕ್ಕೆ ತೆರಿಗೆಯನ್ನು ಕಟ್ಟುತ್ತಿದ್ದರು. ವಿಜಯನಗರ ಕಾಲದಲ್ಲಿ ವೇಶ್ಯಾವಾಟಿಕೆಯು ಆಳವಾಗಿ ಬೇರೂರಲು ಕೆಲವು ಪ್ರಮುಖ ಕಾರಣಗಳೆಂದರೆ ಬಡತನ, ಅಜ್ಞಾನ, ಯುದ್ಧದ ಸಂದರ್ಭ, ಆಸ್ಥಾನದ ನೃತ್ಯಗಾರ್ತಿಯರು ಹಾಗೂ ವೇಶ್ಯಾವೃತ್ತಿ.

ವಿದೇಶಿ ಪ್ರವಾಸಿಗನಾದ ಬಾರ್ಬೋಸಾನು 'ಕೆಲವು ಶ್ರೀಮಂತ ವೇಶ್ಯೆಯರು ಬಡತನದ ಬೇಗೆಯಲ್ಲಿರುವ ಪೋಷಕರನ್ನು ತಮ್ಮ ಹೆಣ್ಣು ಮಕ್ಕಳನ್ನು ವೇಶ್ಯಾವೃತ್ತಿಗೆ ಕಳುಹಿಸಲು ಒತ್ತಾಯಿಸುತ್ತಾರೆ. ಈ ಸಂದರ್ಭದಲ್ಲಿ ತಮ್ಮ ತಮ್ಮ ಮಕ್ಕಳ ಮಾರಾಟ ಅಥವಾ ಪರಿಣಿತಿಗಾಗಿ ಅಂಥವರ ಹತ್ತಿರ ಕಳುಹಿಸುತ್ತಾರೆ'[೫೮] ಎಂದು ಬರೆದಿರುವನು. ಗಂಡ ಸತ್ತ ನಂತರ ಹೆಂಡತಿಯು ಸಹಗಮನ ಮಾಡದೆ ಉಳಿದುಕೊಂಡರೆ ಅಂಥವರನ್ನು ಅಗೌರವದಿಂದ ಕಾಣಲಾಗುತ್ತಿತ್ತು. ಅವರ ತಲೆಯನ್ನು ಬೋಳಿಸಿ ಮನೆತನಕ್ಕೆ ಅಮಂಗಳವೆಂದು ಬಗೆದು ಹೊರಗೆ ಕಳುಹಿಸುವುದು, ಕೊನೆಗೆ ದಿಕ್ಕಿಲ್ಲದೆ ಅವಳು ದೇವಾಲಯವೊಂದರಲ್ಲಿ ದೇವದಾಸಿಯಾಗಿ ನಂತರ ವೇಶ್ಯಾವೃತ್ತಿಯಲ್ಲಿ ತೊಡಗುವುದಾಗಿ ಬಾರ್ಬೋಸನು ಹೇಳಿದ್ದಾನೆ.[೫೯] ಯುದ್ಧ ಸಂದರ್ಭದಲ್ಲಿ ವಿಜಯನಗರ ಅರಸರು ಸೈನಿಕ ಶಿಬಿರಗಳಲ್ಲಿ ವೇಶ್ಯೆಯರಿಗೂ, ಕನ್ಯೆಯರಿಗೂ ಪ್ರಮುಖ ಸ್ಥಾನ ಕಲ್ಪಿಸಿ ಕೊಡುತ್ತಿದ್ದರು. ಈ ಯುವತಿಯರ ಮೇಲಿನ ಆಸೆಯಿಂದ

ಸಾಮಂತರು, ಸರದಾರರು ರಾಜನ ಸೈನ್ಯವನ್ನು ಸೇರಿಕೊಳ್ಳುತ್ತಿದ್ದರು. ಈ ಯುವತಿಯರಿಗೆ ರಾಜನ ಬೊಕ್ಕಸದಿಂದ ಸಂಬಳ ದೊರೆಯುತ್ತದೆ.[೬೦] ಎಂಬ ಬಾರ್ಬೋಸನ ಹೇಳಿಕೆಯು ವೇಶ್ಯಾವೃತ್ತಿಯ ವೃದ್ಧಿಗೆ ಯುದ್ಧಗಳು ಕಾರಣಗಳಾಗಿದ್ದವೆಂದು ತಿಳಿದುಬರುತ್ತದೆ. ಮದುವೆಯಾಗದ ಈ ಯುವತಿಯರು ಯುದ್ಧರಂಗದಿಂದ ಬದುಕಿ ಬಂದರೆ ಅವರು ಅನುಸರಿಸಬೇಕಾಗಿದ್ದು ವೇಶ್ಯಾವೃತ್ತಿಯೊಂದನ್ನೇ. ತಂದೆತಾಯಿಯರು ಹಸಿವಿನ ಬವಣೆಯನ್ನು ತಾಳಲಾರದೆ ತಮ್ಮ ಮಕ್ಕಳನ್ನು ಮಾರಿರುವುದು ರಾಮನಾಥ ಚರಿತೆಯಲ್ಲಿ ಕಂಡುಬರುತ್ತದೆ.[೬೧] ವೇಶ್ಯೆಯರು ನೀಡುತ್ತಿದ್ದ ತೆರಿಗೆಯನ್ನು ಕುರಿತು ಅಬ್ದುಲ್ ರಜಾಕ್ ಈ ರೀತಿ ಹೇಳುತ್ತಾನೆ. ವಿಜಯನಗರದ ಏಳು ಕೋಟೆಗಳಲ್ಲಿ ಈ ರೀತಿಯ ಅನೇಕ ವೇಶ್ಯಾ ಗೃಹಗಳಿದ್ದವು. ಈ ವೇಶ್ಯಾಗೃಹಗಳ ಮೇಲೆ ಹಾಕಿದ ತೆರಿಗೆಯಿಂದ ಬೊಕ್ಕಸಕ್ಕೆ ಹನ್ನೆರಡು ಸಾವಿರ ಫನ ಆದಾಯ ಬರುತ್ತಿತ್ತು. ಈ ಹಣದಿಂದ ಸೈನಿಕರಿಗೆ ಸಂಬಳವಾಗಿ ಕೊಡುತ್ತಿದ್ದರು[೬೨] ಎಂದು ಹೇಳಿರುವುದು ವೇಶ್ಯೆಯರ ಆದಾಯ ಮತ್ತು ಈ ವೃತ್ತಿಯ ಸ್ಥಾನಮಾನವನ್ನು ತಿಳಿಸುತ್ತದೆ.

ಸತಿ ಸಹಗಮನ ಪದ್ಧತಿಯು ವಿಜಯನಗರ ಕಾಲದಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ. ಸಹಗಮನವು ಎರಡು ಪದ್ಧತಿಯಲ್ಲಿ ಆಚರಣೆಯಲ್ಲಿತ್ತು. ಗಂಡ ಸತ್ತರೆ ಅವನ ಜೊತೆಯಲ್ಲಿಯೇ ಜೀವಂತವಾಗಿ ಚಿತೆಗೆ ಹಾರುವುದಕ್ಕೆ ಸಹಗಮನ ಎಂದೂ, ಗಂಡನು ಎಲ್ಲೋ ದೂರದಲ್ಲಿ ಯುದ್ಧದಲ್ಲಿ ಅಥವಾ ಬೇಟೆಯ ಸಮಯದಲ್ಲಿ ಮರಣಹೊಂದಿದರೆ ಗಂಡನನ್ನು ನೆನೆದುಕೊಂಡು ಬೆಂಕಿಯಲ್ಲಿ ಜೀವ ಅರ್ಪಣೆ ಮಾಡಿಕೊಳ್ಳುವ ಕ್ರಿಯೆಗೆ ಅನುಗಮನ ಎಂದು ಕರೆಯಲಾಗುತ್ತಿತ್ತು. ಸಹಗಮನ ಸಮಾರಂಭವೊಂದನ್ನು ವರ್ಣಿಸುತ್ತಾ ನ್ಯೂನಿಜ ಹೀಗೆ ಬರೆದಿರುವನು. "ಕೊನೆಗೆ ಅವಳು ಎಲ್ಲರಿಂದ ಬೀಳ್ಕೊಂಡು ತನ್ನ ತಲೆಯ ಮೇಲೆ ಎಣ್ಣೆ ತುಂಬಿದ ಗಡಿಗೆಯನ್ನು ಹೊತ್ತು ಎಂಥ ಧೈರ್ಯದಿಂದ ಆಕೆಯು ಬೆಂಕಿಗೆ ನೆಗೆಯುತ್ತಿದ್ದಳೆಂದರೆ ಅದು ಅತ್ಯಾಶ್ಚರ್ಯಕರವಾಗಿದೆ. ಆಕೆಯು ಚಿತೆಗೆ ಹಾರಿದೊಡನೆಯೇ ಕೈಯಲ್ಲಿ ಕಟ್ಟಿಗೆಗಳನ್ನು ಹಿಡಿದುಕೊಂಡು ಕಾದಿರುತ್ತಿದ್ದ ಬಂಧುಗಳ ಸರಸರನೆ ಅವುಗಳನ್ನು ಎಸೆದು ಅವಳ ದೇಹವನ್ನು ಮುಚ್ಚಿಬಿಡುತ್ತಾರೆ. ಇಷ್ಟು ಮಾಡಿದ ಮೇಲೆ ಎಲ್ಲರೂ ಜೋರಾಗಿ ಅಳತೊಡಗುತ್ತಾರೆ.[೬೩] ಬಾರ್ಬೋಸನು ಬರೆಯುತ್ತಾ "ರಾಜ ಸತ್ತರೆ ಅಂತಃಪುರದ ನಾನೂರು ಐನೂರು ಸ್ತ್ರೀಯರು ಅವನೊಡನೆ ಚಿತೆಯಲ್ಲಿ ಬೀಳುತ್ತಾರೆ. ಇದಕ್ಕಾಗಿಯೇ ಚಿತಾಗ್ನಿಯನ್ನು ತುಂಬಾ ದೊಡ್ಡದಾಗಿ ಮಾಡಿರುತ್ತಾರೆ. ಶ್ರೀಗಂಧ, ತೇಗ, ಹೊನ್ನೆ ಮುಂತಾದ ಮರಗಳ ಎಣ್ಣೆ, ತುಪ್ಪವನ್ನು ಹೇರಳವಾಗಿ ಶೇಖರಿಸಿರುತ್ತಾರೆ. ಈ ಚಿತೆಯಲ್ಲಿ ಬೀಳುವುದಕ್ಕೆ ನಾ ಮುಂದು ತಾ ಮುಂದು ಎಂದು ನುಗ್ಗಿ ಬರುತ್ತಾರೆ[೬೪] ಎಂದು ಅಂದಿನ ರಾಜಾಸ್ಥಾನದಲ್ಲಿ ಇದ್ದ ಸತಿ ಪದ್ಧತಿಯನ್ನು ವಿವರಿಸಿದ್ದಾನೆ.

ಕೆಳಜಾತಿಯ ಹೆಂಗಸರು ಕೇವಲ ಜೀವಿಕೆಗಾಗಿ ತಮ್ಮ ಗಂಡಸರೊಂದಿಗೆ ಸಮ ಸಮವಾಗಿ ಬಹಳಷ್ಟು ಪಟ್ಟು ದುಡಿಯಬೇಕಾಗಿತ್ತು. ಜೀವನಕ್ಕೆ ಆಧಾರವಾಗಿ ವ್ಯವಸಾಯವನ್ನೇ ನಂಬಿದ್ದರು. ಮಳೆ ಬಿದ್ದರೆ ಮಾತ್ರ ಬೆಳೆ, ಇಲ್ಲದಿದ್ದರೆ ಸಾವೇ ಗತಿಯಾಗಿತ್ತು. ಹೆಚ್ಚಿನ ಮಹಿಳೆಯರು ಆರೋಗ್ಯ ಹೀನರಾಗಿದ್ದರು. ಅವರು ತಲೆಯ ಕೂದಲನ್ನು ಬಾಚಿಕೊಳ್ಳದೆ ತರಗೆಲೆಗಳಂತೆ ಬಿಟ್ಟುಕೊಳ್ಳುತ್ತಿದ್ದರು. ಮೈಗೆ ಪ್ರಾಣಿಗಳ ಚರ್ಮವನ್ನು ಸುತ್ತಿಕೊಳ್ಳುತ್ತಿದ್ದರು. ಗಂಡಸರು ಸೊಂಟಕ್ಕೆ ಮಾತ್ರ ಒಂದು ಚಿಕ್ಕ ಬಟ್ಟೆ ಅಥವಾ ಮರದ ತೊಗಟೆಗಳಿಂದ ಮುಚ್ಚಿಕೊಳ್ಳುತ್ತಿದ್ದರೆಂದು ಬಾರ್ಬೋಸ್ ಹೇಳಿದ್ದಾನೆ.[೬೫] ತಂದೆ ತಾಯಿಯರು ತಮ್ಮ ಹಸಿವಿನ ಬವಣೆಯನ್ನು ತಾಳಲಾರದೆ ತಮ್ಮ ಮಕ್ಕಳನ್ನು ಮಾರಿರುವುದು ರಾಮನಾಥ ಚರಿತೆಯಲ್ಲಿ ಕಂಡುಬರುತ್ತದೆ.[೬೬] ಭಿಕ್ಷೆ ಬೇಡುವುದು ಸಾಮ್ರಾಜ್ಯದಲ್ಲಿ ಹೆಚ್ಚಾಗಿದ್ದಿತು. ಹಸಿವು ಹೆಚ್ಚಾದಾಗ ಜನರು ಅನೇಕ ಮಾರ್ಗಗಳನ್ನು ಹುಡುಕುತ್ತಿದ್ದರು. ಅದರಲ್ಲಿ ಭಿಕ್ಷೆ ಬೇಡಿ ತಿನ್ನುವುದೂ ಒಂದಾಗಿತ್ತು.

ವಿಧವೆಯರು ತಮ್ಮ ಜೀವನವನ್ನು ಶೋಚನೀಯ ರೀತಿಯಲ್ಲಿ ಕಳೆಯಬೇಕಾಗಿತ್ತು. ಅವರು ಹೆಚ್ಚಾಗಿ ತಮ್ಮ ಜೀವನವನ್ನು ಧಾರ್ಮಿಕ ಕ್ರಿಯೆಗಳಲ್ಲಿಯೇ ತೊಡಗಿಸಿಕೊಂಡು ಕಾಲ ಕಳೆಯುತ್ತಿದ್ದರು. ಗಂಡ ಸತ್ತ ಮೇಲೆ ವಿಧವೆಯು ಸಹಗಮನ ಮಾಡಿಕೊಳ್ಳದೆ ಬದುಕುವುದಿದ್ದರೆ ಅವಳು ಪ್ರಾಣಿಗಳಿಗಿಂತಲೂ ಹೀನಾಯವಾದ ಬದುಕನ್ನು ನಡೆಸಬೇಕಾಗಿತ್ತು. ಸಮಾಜದ ಯಾವುದೇ ಶುಭ ಕಾರ್ಯಗಳಲ್ಲಿ ಭಾಗವಹಿಸುವಂತಿರಲಿಲ್ಲ. ಒಂದು ರೀತಿಯ ಗೃಹಬಂಧನದಲ್ಲಿರಬೇಕಾಗಿತ್ತು. ಬೆಳಗ್ಗೆ ಎದ್ದ ತಕ್ಷಣ ವಿಧವೆಯ ಮುಖ ನೋಡಿದರೆ, ಕೆಲಸಕ್ಕೆ ಹೋಗುವಾಗ ಎದುರಿಗೆ ಬಂದರೆ ಅಪಶಕುನವೆಂದು ನಂಬಿ ಅವಳನ್ನು ಜೀವಂತ ಶವವನ್ನಾಗಿ ಮಾಡಲಾಗಿತ್ತು. ಹಿಂದೂ ವಿಧವೆಯರು ಸಮಾಜದಲ್ಲಿ ಅನುಭವಿಸಬೇಕಾಗಿದ್ದ ದುಃಖ ಸಂಕಟಗಳು ಎಷ್ಟಿರುತ್ತಿದ್ದುವೆಂದರೆ ಕೆಲವರಾದರೂ ವಿಧವೆಯಾಗಿ ಬದುಕುವುದಕ್ಕಿಂತ ಆತ್ಮಾರ್ಪಣೆಯೇ ಅದಕ್ಕಿಂತ ಮೇಲೆ ಎಂದು ಭಾವಿಸಿರಬಹುದು. ಮನೆಯಲ್ಲಿ ಬದುಕಿರುವವರೆಗೂ ಹೀನಾಯ, ಅಪಮಾನ, ತಲೆಬೋಳಿಸಬೇಕಾಯಿತು. ದಿನಕ್ಕೆ ಒಂದು ಸಾರಿ ಮಾತ್ರ ಆಹಾರ, ಎಲ್ಲರಿಂದಲೂ ಅವಹೇಳನ, ತಿರಸ್ಕಾರ ಅವಳ ಮಾತನ್ನು ಅಪಹಾಸ್ಯ, ಸಲಹೆಯನ್ನು ನಿರಾಕರಿಸುವುದು. ಹೆಂಡತಿಯು ಸಹಗಮನ ಮಾಡದೆ ಉಳಿದುಕೊಂಡರೆ ಅವಳನ್ನು ಅಗೌರವದಿಂದ ಕಾಣಲಾಗುತ್ತಿತ್ತು. ಅವರ ತಲೆಯನ್ನು ಬೋಳಿಸಿ ಮನೆತನಕ್ಕೆ ಅಮಂಗಳವೆಂದು ಬಗೆದು ಹೊರಗೆ ಕಳುಹಿಸುವುದು. ಕೊನೆಗೆ ದಿಕ್ಕಿಲ್ಲದೆ ಅವಳು ದೇವಾಲಯವೊಂದರಲ್ಲಿ ದೇವದಾಸಿಯಾಗಿ ನಂತರ ವೇಶ್ಯಾವೃತ್ತಿಯಲ್ಲಿ ತೊಡಗುವುದಾಗಿ ಬಾರ್ಬೋಸನು ಹೇಳಿದ್ದಾನೆ.[೬೭]

ಹಿಂದೂಗಳ ಕುಟುಂಬದ ಮುಖ್ಯ ಲಕ್ಷಣ ಬಹು ಪ್ರಾಚೀನ ಕಾಲದಿಂದಲೂ ಒಟ್ಟು ಕುಟುಂಬ ಪದ್ಧತಿಯಾಗಿತ್ತು. ಇದರಿಂದಾಗಿ ಕುಟುಂಬದ ಗಾತ್ರ ದೊಡ್ಡದಾಯಿತು. ಒಟ್ಟು ಕುಟುಂಬ

ಪದ್ಧತಿಯಲ್ಲಿ ಅನುಕೂಲಗಳಿದ್ದವು. ಅನಾನುಕೂಲಗಳಿದ್ದವು. ಕುಟುಂಬದ ಪ್ರತಿಯೊಬ್ಬ ಸದಸ್ಯನಿಗೂ ಸಾಮಾಜಿಕ, ಆರ್ಥಿಕ ಭದ್ರತೆಯಿತ್ತು. ಶ್ರಮದ ಹಂಚಿಕೆ, ಎಲ್ಲರಿಗೂ ಸಮಾನವಾಗಿ ಅನ್ವಯವಾಗುವ ಮುಖಂಡತ್ವ, ಸಕಾಲಿಕ ನೆರವು, ಹಿರಿಯರನ್ನು ಕುರಿತ ಗೌರವ, ಕಿರಿಯರನ್ನು ಕುರಿತ ಪ್ರೀತಿ, ಸಮರಸತೆಯ ಭಾವನೆ, ಸಹಕಾರ, ಸೇವೆ, ತ್ಯಾಗ ಮನೋಧರ್ಮ ಇವು ಒಟ್ಟು ಕುಟುಂಬದ ಅಂಶಗಳಾಗಿದ್ದವು. ಆಸ್ತಿಯ ಒಡೆತನದ ಹೆಮ್ಮೆಯನ್ನು ಎಲ್ಲರೂ ಸಮಾನವಾಗಿ ಹಂಚಿಕೊಳ್ಳುತ್ತಿದ್ದರು. ಅದು ಪಿತೃ ಪ್ರಧಾನವಾದ ವ್ಯವಸ್ಥೆಯಾಗಿತ್ತು. ತಂದೆಯ ಯಜಮಾನಿಕೆಯ ಕುಟುಂಬವು ಒಪ್ಪಿಕೊಂಡಿತ್ತು. ಕುಟುಂಬದ ಸದಸ್ಯರ ಚಾರಿತ್ರ್ಯವನ್ನು, ನಡವಳಿಕೆಯನ್ನು ರೂಪಿಸುವ ಮುಖ್ಯ ಕೇಂದ್ರವಾಗಿತ್ತು. ಅದು ಪ್ರತಿಯೊಬ್ಬರ ಆಹಾರ, ಬಟ್ಟೆಬರೆ, ವಿದ್ಯಾಭ್ಯಾಸ, ವೈದ್ಯಕೀಯ ನೆರವು ಇತ್ಯಾದಿ ಅಗತ್ಯಗಳನ್ನು ನೋಡಿಕೊಳ್ಳುವುದರ ಜೊತೆಗೆ ಸಾಮಾಜಿಕ ಶಿಕ್ಷಣವನ್ನು ನೀಡುತ್ತಿತ್ತು. ಅವಿಭಕ್ತ ಕುಟುಂಬದೊಂದಿಗೆ ವಿಭಕ್ತ ಕುಟುಂಬವೂ ಇದ್ದಿತು. ಜನರು ಆಡಳಿತ ಅಥವಾ ಮಿಲಿಟರಿ ಕಾರಣಗಳಿಂದಾಗಿ ಅನಿವಾರ್ಯವಾಗಿ ಹೊರಗೆ ಹೋಗಬೇಕಾಗುತ್ತಿತ್ತು. ಮನೆಯಿಂದ ದೂರವಾಗಿದ್ದುಕೊಂಡು ವ್ಯವಹಾರವನ್ನೋ, ಕಸುಬನ್ನೋ ನಡೆಸಬೇಕಾಗುತ್ತಿತ್ತು. ಆಗ ವಿಭಕ್ತ ಕುಟುಂಬ ಅನಿವಾರ್ಯವಾಗುತ್ತಿತ್ತು. ಪಿತೃ ಪ್ರಧಾನವಾದ ಕುಟುಂಬವೇ ಪ್ರಧಾನವಾಗಿದ್ದರೂ ಸಾಮ್ರಾಜ್ಯದ ಕೆಲವು ಭಾಗಗಳಲ್ಲಿ ಮಾತೃ ಪ್ರಧಾನ ಕುಟುಂಬವೂ ಪ್ರಚುರದಲ್ಲಿತ್ತು. ವಿಜಯನಗರ ಕಾಲದ ಕರ್ನಾಟಕ ಕರಾವಳಿ ಭಾಗದಲ್ಲಿ ವಿಜಯನಗರ ಮತ್ತು ಕೆಳದಿ ಅರಸರಿಗೆ ಸಾಮಂತರಾದ ಅನೇಕ ನಾಯಕರಿದ್ದರು. ಅನೇಕ ಸಾಮಾಜಿಕ ವರ್ಗಗಳಿದ್ದವು. ಅಗಸರು, ಅಂಡೆಕೊರಗರು, ಕರಿನ್ಯಾರರು, ಕುಂಬಾರರು, ಕ್ಷೌರಿಕರು, ದೇವಾಡಿಗರು, ಹಳೆಪೈಕರು, ಹರಿಚಟ್ಟಿಗಳು, ಹೊಲೆಯರು, ಬಂಟರು, ಪಾಂಚಾಲರು, ಸಾಲಿಯಾನರು ಮತ್ತು ಇತರರು ಅಳಿಯ ಸಂತಾನ ಪದ್ಧತಿಯನ್ನು ಅದರ ಎಲ್ಲಾ ಕಟ್ಟು ಕಟ್ಟಳೆಗಳೊಂದಿಗೆ ಆಚರಿಸುತ್ತಿದ್ದರು.[೬೮] ದಕ್ಷಿಣ ಕನ್ನಡದ ಅರಸರಾಗಿ ಕೂಡ ವಿಜಯನಗರದ ಕಾಲದಲ್ಲಿ ಅರಸೊತ್ತಿಗೆಯು ಸೋದರಳಿಯಂದರ ಮೂಲಕ ಇಳಿದುಬರುವ ತತ್ತ್ವವನ್ನು ಮಾನ್ಯ ಮಾಡಿದ್ದರು. ಕಾರ್ಕಳ, ಮೂಡಬಿದರೆಗಳ ರಾಜರು, ಚಾಟ, ಬಂಗೆ, ಅಜಿಲ ಮತ್ತು ಇತರರು ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸಿದರು.[೬೯] ಪಿ. ಗುರುರಾಜ ಭಟ್ ಅವರ ಪ್ರಕಾರ ಸಾಂಪ್ರದಾಯಿಕ ಇತಿಹಾಸವನ್ನು ಒತ್ತಟ್ಟಿಗಿಟ್ಟರೂ ಇಡೀ ತುಳು ನಾಡನ್ನು ಸುಮಾರು ಮುನ್ನೂರು ನಾನೂರು ವರ್ಷಗಳ ಕಾಲ (೧೨ ರಿಂದ ೧೬ನೇ ಶತಮಾನ) ಜೈನ ಅರಸರು ಆಳುತ್ತಿದ್ದರು. ಬ್ರಾಹ್ಮಣ ಧರ್ಮದೆಡೆಗೆ ಅವರ ಒಲವಿರಲಿಲ್ಲ. ಅಳಿಯ ಸಂತಾನ ಪದ್ಧತಿಯನ್ನು ಅನುಸರಿಸುತ್ತಿದ್ದರು.[೭೦]

**ರಾಜಕೀಯ ಪರಿಸ್ಥಿತಿ**

ಮಾನವನು ತಾನು ಬದುಕುತ್ತಿರುವ ಸಮಾಜಗಳು ಹಾಗೂ ನಾಗರಿಕ ವ್ಯವಸ್ಥೆಯಲ್ಲಿ ರಾಜ್ಯ

ಅಥವಾ ಸಾಮ್ರಾಜ್ಯ ಎಂಬ ವ್ಯವಸ್ಥೆಯನ್ನು ರೂಢಿಸಿಕೊಂಡಿರುತ್ತಾನೆ. ಕೆಲವು ಪ್ರಾಥಮಿಕ ರೂಪುರೇಷೆಗಳ ನಿರ್ಮಾಣಕ್ಕೂ ಈ ವ್ಯವಸ್ಥೆಯು ಸಾವಿರಾರು ವರ್ಷಗಳನ್ನೇ ತೆಗೆದುಕೊಳ್ಳುತ್ತದೆ ಎನ್ನಬಹುದು. ಇಲ್ಲಿ ಸಾಮ್ರಾಜ್ಯವು ಒಂದು ಸುವ್ಯವಸ್ಥಿತ ಆಳ್ವಿಕೆಯ ವ್ಯವಸ್ಥೆಯಾಗಿರುತ್ತದೆ. ಅಷ್ಟೇ ಅಲ್ಲದೇ ಒಂದು ನಿರ್ದಿಷ್ಟ ಭೌಗೋಳಿಕ ಪ್ರದೇಶದಲ್ಲಿ ವಾಸಿಸುವ ಜನರನ್ನು ಆಳುವ ಸಾರ್ವಭೌಮತ್ವದ ಶಕ್ತಿಯಾಗಿರುತ್ತದೆ. ಒಂದು ಆಡಳಿತ ವ್ಯವಸ್ಥೆಯ ಮೂಲಕ ಆಳ್ವಿಕೆಯನ್ನು ನಡೆಸಲಾಗುತ್ತದೆ. ಈ ರೀತಿಯಲ್ಲಿ ರಾಜ್ಯ ಅಥವಾ ಸಾಮ್ರಾಜ್ಯ ಎಂಬುವುದು, ಒಂದು ಸಂಕೀರ್ಣ ಅಧಿಕಾರ ವ್ಯವಸ್ಥೆಯಾಗಿರುತ್ತದೆ.

ಅನೇಕ ಸಂಕೀರ್ಣ ಅಂಶಗಳಿಂದ ಕೂಡಿದ ಘಟನೆಯು ಒಂದು ರಾಜ್ಯದ ಉದಯಕ್ಕೆ ಕಾರಣವಾಗುತ್ತದೆ. ಇಲ್ಲಿ ತಾತ್ವಿಕ, ಸಾಮಾಜಿಕ, ಸಾಂಸ್ಕೃತಿಕ, ಭೌಗೋಳಿಕ, ಆರ್ಥಿಕ, ವ್ಯಕ್ತಿಗತ ಅಂಶಗಳು ಒಂದರ ಮೇಲೊಂದು ವರ್ತಿಸುತ್ತದೆ. ಮನುಷ್ಯನಿಗೆ ಅಧಿಕಾರದ ಗೀಳು, ತನ್ನ ಸರ್ವಸ್ವವನ್ನು ಪಣಕಿಟ್ಟಾದರೂ ಅದನ್ನು ಸೆಳೆದುಕೊಳ್ಳಲು ಅವನು ಪ್ರಯತ್ನಿಸುತ್ತಾನೆ. ಇದಕ್ಕೆ ಯಾವುದೇ ರೀತಿಯ ಸಂಬಂಧಗಳು ಅಡ್ಡಿಯಾಗುವುದಿಲ್ಲ. ಯಾವುದೇ ರೀತಿಯ ಶೂನ್ಯತೆ ಅಧಿಕಾರದಲ್ಲಿ ಆಶೋತ್ತರಗಳನ್ನು ಬೆಳೆಸಿಕೊಂಡ ವ್ಯಕ್ತಿಗಳು ಕಾರ್ಯ ಪ್ರವೃತ್ತರಾಗಲು ಇದು ಆಹ್ವಾನವಾಗುತ್ತದೆ. ರಾಜಕೀಯ ಅಧಿಕಾರಕ್ಕೆ ಅಂಟಿಕೊಂಡ ಅಧಿಕಾರ, ಬೆಡಗು, ಗೌರವ, ವೈಭವ, ಪ್ರತಿಷ್ಠೆ ಇವು ಕ್ರಿಯಾಶೀಲರೂ, ಸತ್ವಶಾಲಿಗಳೂ ಆದ ನಾಯಕರು ತಮ್ಮ ಹಕ್ಕನ್ನು ಮುಂದೊಡ್ಡುವಂತೆ ಪ್ರೇರೇಪಿಸುತ್ತದೆ. ಜಾತಿ, ಮತ, ವರ್ಗ, ಮೊದಲಾದವುಗಳೆಲ್ಲದರ ತಡೆಗಳನ್ನು ಮುರಿದು ಅಧಿಕಾರಕ್ಕಾಗಿ ಮುನ್ನುಗ್ಗುವುದು, ಹೋರಾಡುವುದು ಸಾಮಾನ್ಯ ಘಟನೆಯಾಗಿದೆ.

ಭಾರತದ ಐತಿಹಾಸಿಕ ಮತ್ತು ಕಲಾ ಪರಂಪರೆಯಲ್ಲಿ ದಖ್ಖನ್ ಪ್ರಸ್ಥಭೂಮಿಯು ಅನನ್ಯವಾದ ಸ್ಥಾನವನ್ನು ಉಳಿಸಿಕೊಂಡು ಬಂದಿದೆ. ಉತ್ತರಕ್ಕೆ ತಪತಾ ಮತ್ತು ನರ್ಮದಾ ನದಿಯು ದಕ್ಷಿಣಕ್ಕೆ ತುಂಗಭದ್ರಾ, ಕೃಷ್ಣೆಯನ್ನೊಳಗೊಂಡ ಪ್ರದೇಶವು ಹದಿನಾಲ್ಕರಿಂದ ಹದಿನೇಳನೆಯ ಶತಮಾನದವರೆಗೆ ಬಹು ಮಹತ್ವದ ಪಾತ್ರವನ್ನು ವಹಿಸಿತ್ತು. ಆ ಸಮಯದಲ್ಲಿ ರಾಜಕೀಯ ಶಕ್ತಿಯಾಗಿ ಇಸ್ಲಾಮ್ ಇಲ್ಲಿ ನೆಲೆಗೊಂಡಿತ್ತು. ಆದರೆ ಇಸ್ಲಾಮಿನ ಉದಯಕ್ಕೆ ಮುಂಚೆಯೇ ಅರಬ್ಬರೊಂದಿಗೆ ದಕ್ಷಿಣ ಭಾರತಕ್ಕೆ ಸಂಪರ್ಕವಿತ್ತು. ಅರಬ್ಬರು ಪಶ್ಚಿಮ ದೇಶಗಳಿಗೆ ಭಾರತೀಯ ಸರಕುಗಳನ್ನು ಸಾಗಿಸುವ ವಾಹಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ದಕ್ಷಿಣ ಭಾರತದ ಪ್ರತಿಯೊಂದು ರಾಜ್ಯದಲ್ಲಿ ಅರಬ್ಬೀ ಕುದುರೆಗಳಿಗೆ ಹೆಚ್ಚಿನ ಬೇಡಿಕೆ ಇರುತ್ತಿತ್ತು. ವಸ್ತುತಃ ದಖ್ಖನ್ನಿನಲ್ಲಿ ಮುಸ್ಲಿಂ ಆಡಳಿತವು ಸ್ಥಾಪನೆಗೆ ಮೊದಲೇ ಅರಬ್ ನೆಲೆಗಳು ಇಲ್ಲಿದ್ದವು.

ಹದಿಮೂರನೆಯ ಶತಮಾನದ ಕೊನೆಯ ವೇಳೆಗೆ ಈ ಹೊಸಮತದ ರಾಜಕೀಯ ಪ್ರಭಾವವು ಅನುಭವಕ್ಕೆ ಬಂದಿತು. ದಕ್ಷಿಣದ ಸಿರಿ-ಸಂಪತ್ತು ಉತ್ತರದಿಂದ ಟರ್ಕರ ಗಮನವನ್ನು ಸೆಳೆಯಿತು.

ಇಲ್ಲಿನ ಇಡೀ ರಾಜಕೀಯ ರಚನೆಯನ್ನು ಅಲ್ಲಾವುದ್ದೀನ್ ಖಿಲ್ಜಿಯ ದಂಡಯಾತ್ರೆಯು ಬದಲಾಯಿಸಿ ಬಿಟ್ಟಿತು. ಈ ದಂಡಯಾತ್ರೆಯು ಎರಡು ದೃಷ್ಟಿಯಿಂದ ಮಹತ್ವಪೂರ್ಣವಾಗಿದ್ದಿತು. ಅವುಗಳಲ್ಲಿ ಒಂದು ಸುಪ್ರಸಿದ್ಧವಾದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಇನ್ನೊಂದು ಬಹಮನಿ ರಾಜ್ಯದ ಉದಯ.

ಹದಿನಾಲ್ಕನೆಯ ಶತಮಾನದ ಅಂತ್ಯದಲ್ಲಿ, ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿಯು ಅಲ್ಲೋಲ ಕಲ್ಲೋಲದಿಂದ ಕೂಡಿತ್ತು. ಬಹುಪ್ರಸಿದ್ಧ ಪಡೆದ ಹಾಗೂ ಚಿರಪರಿಚಿತ ರಾಜಕೀಯ ವಂಶಗಳಾದ ಪಲ್ಲವರು, ಚೋಳರು, ಪಾಂಡ್ಯರು, ಚಾಳುಕ್ಯರು ಹಾಗೂ ಹೊಯ್ಸಳರು ಒಂದಾನೊಂದು ಕಾಲದಲ್ಲಿ ದಕ್ಷಿಣ ಭಾರತದ ಸಾಹಿತ್ಯ, ಸಂಸ್ಕೃತಿ ಹಾಗೂ ರಾಜಕೀಯಕ್ಕೆ ಚರಿತ್ರಾರ್ಹ ಕಾಣಿಕೆಯನ್ನು ನೀಡಿದ್ದರೂ, ಅವರೆಲ್ಲರೂ ಬಲಹೀನರಾಗಿದ್ದರು. ಈ ಯಾವ ಅರಸರೂ ರಾಜಕೀಯ ಕ್ಷೇತ್ರದಲ್ಲಿ ತಮ್ಮ ಪ್ರಜೆಗಳಿಗೆ ಮಾರ್ಗದರ್ಶನ ನೀಡುವ ಪರಿಸ್ಥಿತಿಯನ್ನು ಹೊಂದಿರಲಿಲ್ಲ. ಈ ಅರಾಜಕೀಯ ಪರಿಸ್ಥಿತಿಗೆ ಅವರ ಒಳ ಜಗಳಗಳೇ ಕಾರಣವಾಗಿದ್ದು, ಅವರನ್ನು ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಸೈನಿಕವಾಗಿ ಬಲಹೀನಗೊಳಿಸಿತ್ತು.[೬೧] ದೆಹಲಿ ಸುಲ್ತಾನರು ಈ ಅಸಹಾಯ ಪರಿಸ್ಥಿತಿಯ ಲಾಭ ಪಡೆದುಕೊಂಡು ತಮ್ಮ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಂಡರು. ಅದೇ ಅವರ ಕ್ರಿ.ಶ.೧೩೧೦ ಹಾಗೂ ಕ್ರಿ.ಶ. ೧೩೨೭ರಲ್ಲಿ ನಡೆಸಿದ ದಂಡಯಾತ್ರೆ, ಇದು ದಕ್ಷಿಣ ಭಾರತದ ರಾಜ್ಯಗಳಿಗೆ ಆಘಾತವನ್ನು ನೀಡಿದ್ದಲ್ಲದೆ, ಅವುಗಳನ್ನು ಗೊಂದಲಕ್ಕೆ ಗುರಿ ಮಾಡಿದವು.[೬೨] ಈ ದಾಳಿಗಳು ಅವರ ಮಹತ್ವಾಕಾಂಕ್ಷೆಯಂತೆ ಕೇವಲ ರಾಜ್ಯದ ವಿಸ್ತರಣೆಯಾಗಿರದೆ. ಹಿಂದೂ ಸಂಘ ಸಂಸ್ಕೃತಿ, ದೇವಸ್ಥಾನ ಮತ್ತು ಮಠಗಳ, ಒಟ್ಟಾರೆ ಹೇಳಬೇಕಾದರೆ ಹಿಂದೂ ಸಂಸ್ಕೃತಿಯ ಅವನತಿಗೆ ನಾಂದಿಯಾಯಿತು. ಈ ವಿಧವಾಗಿ ಮಹಮ್ಮದೀಯರ ಆಕ್ರಮಣವು ರಾಷ್ಟ್ರಾಭಿಮಾನ ಹಾಗೂ ರಾಷ್ಟ್ರಾಭಿಮಾನಿಗಳನ್ನು ಕೆರಳಿಸಿತು. ಹಿಂದೂ ಧರ್ಮದ ರಕ್ಷಣೆಗೆ ಹೋರಾಡಿದ ಆದಿಶಂಕರರ ಹಾಗೂ ಇತರ ಧರ್ಮಗುರುಗಳ ಶಿಷ್ಯಕೋಟಿ ಸಿಡಿದೇಳುವಂತೆ ಪ್ರೇರೆಪಿಸಿತು.[೬೩] ಯಾವ ಧಾರ್ಮಿಕ ನಾಯಕರ ಹೆಸರನ್ನು ಪ್ರಸ್ಥಾಪಿಸದೇ ಓರ್ವ ವಿದ್ವಾಂಸರು ಹೀಗೆ ಹೇಳಿರುವುದನ್ನು ಗಮನಿಸಬಹುದು. ಅದೇನೆಂದರೆ "ಜನರು ಮತ್ತು ಜನನಾಯಕರು, ಶೈವಮತದ ಪ್ರಭಾವಕ್ಕೆ ಒಳಗಾಗಿದ್ದು, ಅವರು ತಮ್ಮ ದೇವಾಲಯಗಳು ನಾಶಕ್ಕೆ ಈಡಾಗುವುದನ್ನು ಮೂಕ ಪ್ರೇಕ್ಷಕರಂತೆ ನೋಡಿ ಕುಳಿತಿರದೆ, ತಮ್ಮ ಸಂಪ್ರದಾಯ ರಕ್ಷಣೆಗೆ ಕಟಿಬದ್ಧರಾಗಿದ್ದು........ ಶಿವನಲ್ಲಿ ಅನನ್ಯ ಭಕ್ತಿಯನ್ನು ಹೊಂದಿರುವ ಇವರು ಶೈವ ವಿರೋಧವನ್ನು ಸಹಿಸದೆ, ಆ ವಿರೋಧಿಗಳನ್ನು "ಭವಿ"ಗಳೆಂದೇ ಕರೆಯುತ್ತಾರೆ. ಅಂದರೆ ಶೈವ ವಿರೋಧಿಗಳು ಧರ್ಮ ದ್ರೋಹಿಗಳೆಂದೇ ಅವರ ಭಾವನೆ. ಅಲ್ಲದೆ ಭಕ್ತರೆಲ್ಲರೂ ಸಮಾನ ಎಂಬ ಭಾವನೆ ಈ ನೂತನ ಶೈವ ಸಂಪ್ರದಾಯದ ಜೀವಾಳ ಆಗಿರುವುದರಿಂದ, ಒಕ್ಕಟ್ಟು ಮೂಡಿ, ಇಸ್ಲಾಮಿಯರನ್ನು

ಎದುರಿಸುವಂತೆ ಪ್ರೇರೇಪಿಸಿದೆ. ಈ ಎಲ್ಲಾ ಅಂಶಗಳಿಂದ ತೊಘಲಕನ ಆಡಳಿತ ದಕ್ಷಿಣದಲ್ಲಿ ಬೇರು ಬಿಡಲಾಗಲಿಲ್ಲ.[೭೪]

೧೩೩೬ರಲ್ಲಿ ವಿಜಯನಗರ ಸ್ಥಾಪನೆಯಾಗುವುದಕ್ಕೂ ಮೊದಲೇ ದಕ್ಷಿಣ ಭಾರತದಲ್ಲಿ ಆರು ಹಿಂದೂ ಸಾಮ್ರಾಜ್ಯಗಳು ರಾಜ್ಯವಾಳಿ ಮೆರೆದು ಅಳಿವಿನ ಸ್ಥಿತಿಯಲ್ಲಿದ್ದವೆಂದು ಹೇಳಬಹುದು. ಅವರುಗಳೆಂದರೆ ದೇವಗಿರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಯಾದವರು, ಓರಂಗಲ್ಲನ್ನು ರಾಜಧಾನಿಯನ್ನು ಮಾಡಿಕೊಂಡಿದ್ದ ಕಾಕತೀಯರು, ತಂಜಾವೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಚೋಳರು, ಮಧುರೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಪಾಂಡ್ಯರು, ತಿರುವನಂತಪುರ, ಕೊಚ್ಚಿನ್, ಕಲ್ಲಿಕೋಟೆಗಳನ್ನು ಆಳುತ್ತಿದ್ದ ಚೇರರು ಮತ್ತು ಹಳೆಬೀಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ ಹೊಯ್ಸಳರು ಕ್ರಿ.ಶ. ೧೨೯೪ರಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಯಾದವ ವಂಶಸ್ಥರನ್ನು ಸೋಲಿಸಿ ದೆಹಲಿಗೆ ಹಿಂದಿರುಗುವಾಗ ಆರುನೂರು ಮಣಗಳಷ್ಟು ಮುತ್ತುಗಳನ್ನು, ಒಂದು ಸಾವಿರ ಮಣಗಳಷ್ಟು ಬೆಳ್ಳಿಯನ್ನು, ಎರಡು ಮಣಗಳಷ್ಟು ವಜ್ರ, ಕೆಂಪುಪಚ್ಚೆ, ನೀಲ ಮುಂತಾದ ರತ್ನಗಳನ್ನು ಹಾಗೆಯೇ ಸುಮಾರು ನಾಲ್ಕು ಸಾವಿರ ರೇಷ್ಮೆ ಬಟ್ಟೆಗಳ ಸುರಳಿಗಳನ್ನು ಮೊದಲಾದ ಅಮೂಲ್ಯ ವಸ್ತುಗಳನ್ನು ಅಪಹರಿಸಿಕೊಂಡು ಹೋದನೆಂದು ಫರಿಷ್ತಾ ಸ್ಪಷ್ಟವಾಗಿ ತಿಳಿಸಿದ್ದಾನೆ.[೭೫]

೧೪ನೆಯ ಶತಮಾನದ ಆದಿಯಲ್ಲಿ ಮುಸಲ್ಮಾನರು ದಕ್ಷಿಣ ಭಾರತಕ್ಕೆ ದಂಡೆಯಾತ್ರೆ ಕೈಗೊಂಡು ಪ್ರಸಿದ್ಧ ಹಿಂದೂ ಸಾಮ್ರಾಜ್ಯಗಳನ್ನು ಕೊಳ್ಳೆ ಹೊಡೆದರು. ಅಲ್ಲಾವುದ್ದೀನ್ ಖಿಲ್ಜಿಯ ಪ್ರಸಿದ್ಧ ದಂಡನಾಯಕನಾಗಿದ್ದ ಮಲ್ಲಿಕಾಫರನು ಕ್ರಿ.ಶ. ೧೩೦೬ ರಿಂದ ಕ್ರಿ.ಶ. ೧೩೩೦ರವರೆಗೆ ದಕ್ಷಿಣ ಭಾರತವನ್ನು ತನ್ನ ಹತೋಟಿಗೆ ಒಳಪಡಿಸಿಕೊಳ್ಳಲು ಪ್ರಯತ್ನಿಸಿದನು. ದೇವಗಿರಿಯನ್ನು ಗೆದ್ದು ಅಲ್ಲಿಯ ರಾಜನನ್ನು ಶೂಲಕ್ಕೇರಿಸಿದನು. ಓರಂಗಲ್ಲಿನ ಉತ್ತರ ಪ್ರಾಂತ್ಯವನ್ನು ಜಯಿಸಿದನು. ಮುಂದುವರೆದು ಕೇರಳದ ಅನೇಕ ದೇವಾಲಯಗಳನ್ನು ನಾಶಮಾಡಿ ರಾಮೇಶ್ವರದಲ್ಲಿ ತನ್ನ ಪ್ರತಿನಿಧಿಯನ್ನಿರಿಸಿದನು. ಪಾಂಡ್ಯರ ರಾಜ್ಯಕ್ಕೆ ಬಂದು ವಿಶ್ವವಿಖ್ಯಾತ ಮಧುರೆ ದೇವಾಲಯವನ್ನು ಕೊಳ್ಳೆ ಹೊಡೆದನು. ವೀರ ಕಂಪಣ್ಣನ ರಾಣಿ ಕವಯತ್ರಿ ಗಂಗಾದೇವಿಯು ತನ್ನ ಮಧುರಾ ವಿಜಯಂ ಎನ್ನುವ ಐತಿಹಾಸಿಕ ಕಾವ್ಯದಲ್ಲಿ ಶ್ರೀರಂಗಂ ಮೊದಲಾದ ಸ್ಥಳಗಳು ಇವನ ದಬ್ಬಾಳಿಕೆಗೆ ಹಾಳಾದುದನ್ನು ವರ್ಣಿಸಿದ್ದಾಳೆ.

೧೨೯೬ರಿಂದ ೧೩೩೬ರವರೆಗಿನ ಸುಮಾರು ನಲವತ್ತು ವರ್ಷಗಳ ಕಾಲ ಖಿಲ್ಜಿ ಮತ್ತು ತುಘಲಕ್‌ರ ಸಾಮ್ರಾಜ್ಯಗಳಿಂದಾಗಿ ಸೃಷ್ಟಿಯಾದ ಶಕ್ತಿಶೂನ್ಯತೆಯ ಫಲವಾಗಿ ದಕ್ಷಿಣ ಭಾರತದಲ್ಲಿ,

ನಿರ್ದಿಷ್ಟವಾಗಿ ಕರ್ನಾಟಕದಲ್ಲಿ ವಿಜಯನಗರ ಸಾಮ್ರಾಜ್ಯವು ಒಂದು ರಾಜಕೀಯ ಶಕ್ತಿಯಾಗಿ ಉದಯಿಸಿತು. ದೆಹಲಿ ಸುಲ್ತಾನಿಯ ಮೊದಲ ಅರಸ ಅಲ್ಲಾವುದ್ದೀನ್ ಖಿಲ್ಜಿಯು ದಕ್ಷಿಣ ಭಾರತದ ಮೇಲೆ ಧಾಳಿ ಮಾಡಿದನು. ಆಗ ದಕ್ಷಿಣದಲ್ಲಿದ್ದ ದೇವಗಿರಿಯ ಸೇವುಣರು, ವರಂಗಲ್ಲಿನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು, ಮತ್ತು ಮಧುರೆಯ ಪಾಂಡ್ಯರು ಸ್ಥಾಪಿಸಿಕೊಂಡಿದ್ದ ಶಕ್ತಿ ಸಮತೋಲನಕ್ಕೆ ಅವನಿಂದಾಗಿ ಅಪಾಯದ ಭೀತಿ ಒದಗಿತು. ಮಹಮ್ಮದ್ ಬಿನ್ ತುಘಲಕ್‌ನ ಆಳ್ವಿಕೆಯಲ್ಲಿ (ಕ್ರಿ.ಶ. ೧೩೨೫ ರಿಂದ ೧೩೫೧) ದಕ್ಷಿಣ ಭಾರತದ ಶಕ್ತಿ ಸಮತೋಲನವು ಇನ್ನಷ್ಟು ನಾಶವಾಯಿತು. ಒಂದು ಬಗೆಯ ಶೂನ್ಯತೆ ಆವರಿಸಿತು.

ದಕ್ಷಿಣ ಭಾರತಕ್ಕೆ ಅನ್ವಯವಾಗುವಂತೆ, ಖಿಲ್ಜಿ ಆಡಳಿತಕ್ಕೂ, ತುಘಲಕ್ ಆಡಳಿತಕ್ಕೂ ನಡುವೆ ಭಿನ್ನತೆಗಳಿದ್ದವು. ಖಿಲ್ಜಿ ಅರಸೊತ್ತಿಗೆಯು ಹಾಲಿ ಇದ್ದ ರಾಜ್ಯಗಳನ್ನೇ ತನ್ನ ಅಧೀನ ರಾಜ್ಯಗಳನ್ನಾಗಿಸಿಕೊಂಡರೆ, ತುಘಲಕ್ ಆಡಳಿತವು ಇರುವ ದೇಶೀಯ ರಾಜ್ಯಗಳನ್ನು ನಾಶ ಮಾಡಿ ನೇರವಾಗಿ ತನ್ನ ನಿಯಂತ್ರದಲ್ಲಿರುವ ಆಡಳಿತ ವ್ಯವಸ್ಥೆಯನ್ನು ಕಟ್ಟಲು ಪ್ರಯತ್ನಿಸಿತು. ದೆಹಲಿಯಿಂದ ದೇವಗಿರಿಯ ರಾಜಧಾನಿಯನ್ನು ಬದಲಾಯಿಸುವ ವಿಚಾರ ಬಂದದ್ದೇ ಈ ಹೊಸ ನೀತಿಯಿಂದ ಈ ಧಾಳಿಯಿಂದ ದೇಶೀಯ ರಾಜ್ಯಗಳು ಸಂಪೂರ್ಣವಾಗಿ ಅಳಿದುಹೋದವು. ಆದರೂ ದಕ್ಷಿಣದಲ್ಲಿ ರಾಜಕೀಯ ಸ್ಥಿರತೆಯನ್ನು ಮೂಡಿಸುವಲ್ಲಿ ತುಘಲಕ್ ಅರಸೊತ್ತಿಗೆಯು ವಿಫಲವಾಯಿತು. ಅದಕ್ಕೆ ಬದಲಾಗಿ ಈ ಪ್ರದೇಶದಲ್ಲಿ ತಕ್ಕಮಟ್ಟಿಗೆ ಇದ್ದ ಸ್ಥಿರತೆಯ ಜಾಗದಲ್ಲಿ ರಾಜಕೀಯ ಶೂನ್ಯತೆಯು ಉಂಟಾಯಿತು.

ಉತ್ತರದಿಂದ ಬಂದ ಧಾಳಿಕೋರರು ಸಂಸ್ಕೃತಿಯಲ್ಲೂ, ಧರ್ಮದಲ್ಲೂ ದಕ್ಷಿಣದ ರಾಜರುಗಳಿಗಿಂತ ಬೇರೆಯಾಗಿದ್ದುದರಿಂದ, ಅದುವರೆಗೆ ತಮ್ಮ ಧಾರ್ಮಿಕ ವಿಶಿಷ್ಟತೆಯನ್ನು, ಸಂಸ್ಕೃತಿಯನ್ನು ರಕ್ಷಿಸಿದ್ದ ರಾಜಕೀಯ ಶಕ್ತಿಗಳು ದಿಢೀರನೆ ಕುಸಿದು ಹೋದಾಗ ಜನರಿಗೆ ಬಹುಶಃ ಉತ್ಕಟವಾದ ಅಭದ್ರತೆಯ ಭಾವನೆ ಮನೆಮಾಡಿತು. ಜನತೆಯ ಈ ಅಭದ್ರತೆಯ ಭಾವನೆಯನ್ನು ಉಪಯೋಗಿಸಿಕೊಂಡು ಕೆಲವು ಸಾಹಸಿಗಳು ತಮ್ಮದೇ ಆದ ಒಂದು ರಾಜ್ಯವನ್ನು ರೂಪಿಸಲು ಪ್ರಯತ್ನಿಸಿದರು. ಜನರ ಧರ್ಮ, ಮತ್ತು ಸಂಸ್ಕೃತಿಗಳ ರಕ್ಷಣೆ ಮತ್ತು ಪಾಲನೆ ಸ್ಫೂರ್ತಿಯ ಮೂಲವಾಗಿ ರಾಜ್ಯ ನಿರ್ಮಾಣ ಪರಿಣಮಿಸಿತು. ಈ ಸಮಯದಲ್ಲಿ ಹೊಯ್ಸಳ ಮತ್ತು ಯಾದವ ವಂಶದ ಉತ್ತರಾಧಿಕಾರಿಯಾಗಿ ವಿಜಯನಗರದ ಪ್ರಾರಂಭದ ಬೆಳವಣಿಗೆ ಕರ್ನಾಟಕದಲ್ಲಿ ಆಯಿತು. ತುಂಗಾಭದ್ರಾನದಿಯ ದಕ್ಷಿಣ ದಂಡೆಯುದ್ದಕ್ಕೂ ಹಾಗೂ ಸ್ವಲ್ಪ ಮಟ್ಟಿಗೆ ಉತ್ತರ ದಂಡೆಯ ಸಣ್ಣ ಪುಟ್ಟ ಪ್ರದೇಶಗಳಿಗೆ ಅದು ವಿಸ್ತರಿಸಿತ್ತು.[೬]

ವಿಜಯನಗರ ಮುಂಚಿನ ಕಾಲದ ರಾಜನೀತಿಯು ಕೆಲ ಹೊಸ ಅಂಶಗಳ ಪ್ರಭಾವದಿಂದ ಹೊಸ ತಿರುವನ್ನು ಪಡೆಯಿತು. ಹಿಂದೆ ಸಮಾನ ಜನಾಂಗದ ಧಾರ್ಮಿಕ ಮತ್ತು ಸಾಮಾಜಿಕ ಪಂಗಡಗಳ ನಡುವೆ ವೈಮನಸ್ಯವಿದ್ದುದು, ಈಗಲಾದರೂ ಬೇರೆಯೇ ಧರ್ಮಕ್ಕೆ ಸೇರಿದ, ಬೇರೆಯೇ ಆದ ಸಾಂಸ್ಕೃತಿಕ ವರ್ಗವಾದ ರಾಜಕೀಯ ವೈರಿಗಳು ದಖ್ಖನಿನ ವ್ಯವಹಾರಗಳಲ್ಲಿ ಸಕ್ರಿಯವಾದ ಆಸಕ್ತಿ ತೋರಿದರು. ವಿಜಯನಗರ ಮತ್ತು ಬಹಮನಿ ರಾಜರು, ಆ ಮೇಲೆ ದಖ್ಖನ್ನಿನ ಸುಲ್ತಾನರು ತಮ್ಮ ಜೀವಮಾನ ಪೂರ್ತಿಯಾಗಿ, ಈ ಪ್ರದೇಶದ ಮೇಲೆ ಪರಮ ಪ್ರಭುತ್ವವನ್ನು ಸ್ಥಾಪಿಸುವ ಸಲುವಾಗಿ ಅತ್ಯಂತ ಉಗ್ರವಾದ ಯುದ್ಧಗಳಲ್ಲಿ ನಿರತರಾದರು. ರಾಜಕೀಯ ಹೋರಾಟವು ಕರ್ನಾಟಕಕ್ಕೆ ಮಾತ್ರವಲ್ಲದೆ ಭಾರತದಾದ್ಯಂತ ಕಂಡುಬರುವ ಖಾಯಂ ಲಕ್ಷಣ. ಆದರೆ ಕರ್ನಾಟಕದಲ್ಲಿ ಪಕ್ಷಗಳೇ ಬೇರೆ ಬೇರೆಯಾಗಿದ್ದು, ನಮ್ಮ ಇತಿಹಾಸಕ್ಕೆ ವೈವಿಧ್ಯವನ್ನು ಕೂಡಿಸಿದವು. ಯುದ್ಧಗಳು, ದಂಡೆಯಾತ್ರೆಗಳು, ವಿಜಯಗಳು ಮತ್ತು ಸಂಘಟನೆಗಳು ಆ ಕಾಲದ ಸಾಮಾನ್ಯ ಅಂಶಗಳಾಗಿದ್ದು, ಈ ಹಿಂದೆ ಇದ್ದುದುಕ್ಕಿಂತ ಬೇರೆಯಾದ ರಂಗನ್ನು ಪಡೆದವು. ಗಂಗರು, ಕದಂಬರು, ಚಾಲುಕ್ಯರು, ಪಲ್ಲವರು, ರಾಷ್ಟ್ರಕೂಟರು, ಚೋಳರು ಇವರಿಗೆ ಬದಲಾಗಿ ಹೊಯ್ಸಳರು ಮತ್ತು ಟರ್ಕರ ನಡುವೆ ವಿಜಯನಗರ ಮತ್ತು ಬಹಮನಿಗಳ ನಡುವೆ ನಡೆಯುವ ಯುದ್ಧಗಳಾದವು.

ದಕ್ಷಿಣದ ರಾಜರುಗಳಿಗಿಂತಲೂ ಉತ್ತರದಿಂದ ಬಂದ ಧಾಳಿಕೋರರು ಸಂಸ್ಕೃತಿಯಲ್ಲೂ, ಧರ್ಮದಲ್ಲೂ ಬೇರೆಯಾಗಿರುವುದರಿಂದ, ಅದುವರೆಗೂ ತಮ್ಮ ಧಾರ್ಮಿಕ ವಿಶಿಷ್ಟತೆಯನ್ನು, ಸಂಸ್ಕೃತಿಯನ್ನು ರಕ್ಷಿಸಿದ್ದ ರಾಜಕೀಯ ಶಕ್ತಿಗಳು ದಿಢೀರನೆ ಕುಸಿದುಹೋದಾಗ ಬಹುಶಃ ಜನರಿಗೆ ಉತ್ಕಟವದ ಅಭದ್ರತೆಯ ಭಾವನೆ ಮನೆಮಾಡಿತು. ಈ ಕಾಲದಲ್ಲಿ ಜನರ ಧರ್ಮ ಮತ್ತು ಸಂಸ್ಕೃತಿಗಳ ರಕ್ಷಣೆ ಮತ್ತು ಪಾಲನೆಯ ಸ್ಫೂರ್ತಿಯ ಮೂಲವಾಗಿ ರಾಜ್ಯ ನಿರ್ಮಾಣ ಪರಿಣಮಿಸಿತು. ಈ ಸಮಯದಲ್ಲಿ ಹೊಯ್ಸಳ ಮತ್ತು ಯಾದವ ವಂಶದವರ ಉತ್ತರಾಧಿಕಾರಿಯಾಗಿ ವಿಜಯನಗರದ ಪ್ರಾರಂಭದ ಬೆಳವಣಿಗೆಯು ಕರ್ನಾಟಕದಲ್ಲಿ ಆಯಿತು. ತುಂಗಭದ್ರಾ ನದಿಯ ದಕ್ಷಿಣ ದಂಡೆಯುದ್ದಕ್ಕೂ ಹಾಗೂ ಸ್ವಲ್ಪಮಟ್ಟಿಗೆ ಉತ್ತರ ದಂಡೆಯ ಸಣ್ಣಪುಟ್ಟ ಪ್ರದೇಶಗಳಿಗೆ ಅದು ವಿಸ್ತರಿಸಿತ್ತು.[೭]

ಕ್ರಿ.ಶ. ೧೩೩೬ರಲ್ಲಿ ಸಂಗಮ ಸಹೋದರರಾದ ಹರಿಹರ ಮತ್ತು ಬುಕ್ಕರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರು. ವಿದ್ಯಾರಣ್ಯರು ಹಾಗೂ ಕಾಳಾಮುಖ ಸಂಪ್ರದಾಯದ ಕಾಶೀವಿಲಾಸ ಕ್ರಿಯಾಶಕ್ತಿ ಎಂಬ ಮುನಿಗಳೂ ಕಾರಣಪುರುಷರು. ಶೃಂಗೇರಿಯ ಮಠವು ನಿರ್ವಹಿಸಿದ ಮಹತ್ವದ ಪಾತ್ರವನ್ನು ಇಲ್ಲಿ ಪರಿಗಣಿಸಬೇಕು. ಅಧಿಕಾರವನ್ನು ತಮ್ಮ ಕೈಯಲ್ಲಿ ಇಟ್ಟುಕೊಂಡಿದ್ದ ದಳವಾಯಿಗಳು ಅಥವಾ ಸೇನಾನಾಯಕರು ತಮಗೆ ದೊರಕುವ ಸೈನ್ಯ ಮತ್ತು ಸಂಪನ್ಮೂಲಗಳನ್ನು ಕೂಡಿಸಿಕೊಂಡು ಧಾಳಿ ಮಾಡುವ ವೈರಿಯನ್ನು ಪ್ರತಿಭಟಿಸಬೇಕಾಗಿತ್ತು. ಸಂಗಮ ಸಹೋದರರಿಗೆ ಹೊಯ್ಸಳರ ನೈತಿಕ

ಬೆಂಬಲ ಇದ್ದಿತು. ಸುತ್ತುಮುತ್ತಲಿನ ಮಲೆನಾಡು ಪ್ರದೇಶದ ದಷ್ಟಪುಷ್ಟರಾದ ಜನರಿಂದ ಅವರಿಗೆ ಜನಬಲ ದೊರೆಯುತ್ತಿತ್ತು. ಅಲ್ಲದೇ ಶೃಂಗೇರಿ ಮಠದ ಅನುಗ್ರಹ ಅವರಿಗಿತ್ತು. ಆ ಕಾಲಕ್ಕೆ ಅದು ಆ ಸ್ಥಳದ ಅತ್ಯಂತ ಪ್ರಭಾವಶಾಲಿಯಾದ, ಜನತೆಯ ಆಧ್ಯಾತ್ಮಿಕ ತೃಷೆಯನ್ನು ಪೂರೈಸುವ ಧರ್ಮ ಸಂಸ್ಥೆಯಾಗಿತ್ತು.[೭೮]

ವಿಜಯನಗರ ಸಾಮ್ರಾಜ್ಯದ ಭವ್ಯತೆಯು ಕ್ರಿ.ಶ. ೧೩೩೬ರಿಂದ ೧೫೬೫ರವರೆಗೆ ಪಸರಿಸಿತ್ತು. ಸುಮಾರು ೨೨೦ ವರ್ಷಗಳ ಆಳ್ವಿಕೆ ನಾಲ್ಕು ರಾಜವಂಶಗಳಾದ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಆಳ್ವಿಕೆ ನಡೆಸಿದವು. ಹೊರಗಿನ ಅಧಿಕಾರ, ಕೀರ್ತಿಗಳು, ಎಷ್ಟೇ ಇದ್ದರೂ ಹೆಚ್ಚು ಕಡಿಮೆ ಎಲ್ಲಾ ವಂಶಗಳೂ ಸಿಂಹಾಸನಕ್ಕಾಗಿ ಹೋರಾಡಿದವು. ಹಿಂದೆ ಪಡೆದ ಗೆಲುವುಗಳು ಅಪಾರ ಸಂಪತ್ತಿನ ಸಂಗ್ರಹ ಇವುಗಳಿಂದಾಗಿ, ಪ್ರತಿಯೊಬ್ಬ ರಾಜನು ಸತ್ತಾಗಲೂ ಸಿಂಹಾಸನಕ್ಕೆ ಒಬ್ಬನಲ್ಲ ಹಲವಾರು ಹಕ್ಕುದಾರರು ತಲೆಯೆತ್ತುತ್ತಿದ್ದರು. ನಿರಾಶೆಗೊಂಡವರು ಹಲವಾರು ಮುಖಂಡರ ಮನಸ್ಸಿನಲ್ಲಿ ನಿಷ್ಠಾಹೀನತೆಯ ಬೀಜವನ್ನು ಬಿತ್ತುತ್ತಿದ್ದರು. ಇಂಥವರ ಮೂಲಕವೇ ರಾಜನು ಅಗಾಧವಾದ ಸಾಮ್ರಾಜ್ಯವನ್ನು ಆಳಬೇಕಾಗಿತ್ತು. ಅಧಿಕಾರವನ್ನು ತನ್ನ ಹಿಡಿದಲ್ಲಿಟ್ಟುಕೊಳ್ಳಬೇಕಾಗಿತ್ತು. ಸಮಯ ಸಂದರ್ಭಕ್ಕನುಗುಣವಾಗಿ ಸಾಮಂತರ ನಿಷ್ಠೆಯು ಬದಲಾಗುತ್ತಿತ್ತು. ತಮ್ಮ ಸ್ವತಂತ್ರ ಆಡಳಿತವನ್ನು ನಡೆಸಲು ಸಾಮಂತರು ಸಾಮ್ರಾಜ್ಯದ ವಿರುದ್ಧವೇ ದಂಗೆ ಏಳುತ್ತಿದ್ದರು.

೧ನೇ ಹರಿಹರನಿಗೆ ಹೊಯ್ಸಳ ೩ನೇ ಬಲ್ಲಾಳನ ಅನುಗ್ರಹವಿದ್ದಿತು. ತನ್ನ ಕಷ್ಟಕರವಾದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ತನ್ನ ಮಗ ವಿರೂಪಾಕ್ಷ ೪ನೇ ಬಲ್ಲಾಳನು ಪರಿಸ್ಥಿತಿಯನ್ನು ನಿಭಾಯಿಸಲು ತೀರಾ ಅಸಮರ್ಥ ಎಂದು ಮನಗಂಡು, ತನ್ನ ಸಮಸ್ತ ಅಧಿಕಾರವನ್ನು ಹರಿಹರನಿಗೆ ಒಪ್ಪಿಸಿಕೊಟ್ಟನು. ಕ್ರಿ.ಶ. ೧೩೩೬ರಿಂದ ಒಂದು ದಶಕದ ಕಾಲ ಹರಿಹರನು ಸೈನಿಕ ಚಟುವಟಿಕೆಗಳಲ್ಲಿ ಮಗ್ನನಾಗಿದ್ದನೆಂದು ಶಾಸನಗಳಿಂದ ತಿಳಿದುಬರುತ್ತದೆ.[೭೯] ವಿಶಾಲ ಹೊಯ್ಸಳ ಸಾಮ್ರಾಜ್ಯದ ಉತ್ತರ ಭಾಗದ ಆಡಳಿತದ ಹೊಣೆಹೊತ್ತಿದ್ದ ಹರಿಹರನು ಮಹಾಮಂಡಲೇಶ್ವರನಾಗಿಯೇ ಇದ್ದುಕೊಂಡು ಬಹುಶಃ ತನ್ನ ಪ್ರಭುವಿನ ಅಪ್ಪಣೆ ಪಡೆದು ಒಂದು ರಾಜ್ಯವನ್ನು ಕಟ್ಟಲು ನಿಶ್ಚಯಿಸಿದನು. ಇದರಿಂದ ಶತೃವಿನ ದಾಳಿಯನ್ನು ತಡೆಯಲು ಒಂದು ಅಡ್ಡ ಗೋಡೆಯನ್ನು ನಿರ್ಮಿಸಿದಂತಾಗಿ ತನ್ನ ಪ್ರಭುವಿನ ಶಕ್ತಿಯು ಮತ್ತಷ್ಟು ಹೆಚ್ಚುವುದೆಂದು ಅವನು ಯೋಚಿಸಿರಬೇಕು. ಹೀಗೆ ಸಣ್ಣ ಪ್ರಮಾಣದಲ್ಲಿ ನಡೆಸಿದ ಪ್ರಯತ್ನ ದಿನೇ ದಿನೇ ಪ್ರಗತಿ ಹೊಂದಿ ಕಾಲಕ್ರಮೇಣ ಹೆಮ್ಮರವಾಗಿ ಬೆಳೆಯಿತು.[೮೧] ವಿಜಯನಗರದ ಪ್ರಾರಂಭಿಕ ಅರಸರು ಹೊಯ್ಸಳೇಶ್ವರರಿಗೆ ತಮ್ಮ ನಿಷ್ಠೆಯನ್ನು ತೋರಿಸುವುದಕ್ಕಾಗಿ ಮಹಾಮಂಡಲೇಶ್ವರ, ಒಡೆಯ ಇತ್ಯಾದಿ ಬಿರುದುಗಳನ್ನು ಧರಿಸಿದ್ದರು. ಕ್ರಿ.ಶ. ೧೩೪೨ರಲ್ಲಿ ೩ನೇ

ಬಲ್ಲಾಳನು ಕಗ್ಗೊಲೆಗೊಂಡಾಗ, ಆ ವರ್ಷವೇ ಸುಭದ್ರವಾಗಿ ವಿಜಯನಗರದ ತಳಹದಿಯನ್ನು ಹಾಕಲಾಯಿತು.

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾಗಿ ಸಾಮ್ರಾಜ್ಯ ವಿಸ್ತರಣೆ, ಸ್ವತಂತ್ರವಾಗಿ ಆಡಳಿತ ನಡೆಸಲು ಕಾತುರರಾಗಿದ್ದ ಸಾಮಂತ ನಾಯಕರ ವಿರುದ್ಧ ಅನೇಕ ಯುದ್ಧಗಳನ್ನು ಮಾಡಬೇಕಾಗಿ ಬಂದಿತು. ಕ್ರಿ.ಶ. ೧೩೪೬ರ ೧ನೇ ಹರಿಹರನ ಪ್ರಸಿದ್ಧ ಶಾಸನವು,[೮೧] ಅವನು ತನ್ನ ತಮ್ಮ ಅಲ್ಲಪ್ಪ ದಣ್ಣಾಸಯಕ, ಹಾಗೂ ಅಳಿಯ ಸೋವಣ್ಣರೊಂದಿಗೆ ಶೃಂಗೇರಿಗೆ ಹೋದನು. ಈ ಸಮಯದ ವೇಳೆಗೆ ಶತೃಗಳನ್ನು ನಾಶಪಡಿಸಿ ಸಾಮ್ರಾಜ್ಯವನ್ನು ಸ್ಥಾಪನೆ ಮಾಡುವ ತನ್ನ ಉದ್ದೇಶವನ್ನು ಅವನು ಸ್ಥಾಪನೆ ಮಾಡಿದ್ದನು. ಕ್ರಿ.ಶ. ೧೩೪೩ ಮತ್ತು ೧೩೫೩ರ ವೇಳೆಗೆ ಅವನು ತನ್ನ ಅಧಿಕಾರಿಗಳ ಮೂಲಕವಾಗಿ ಹಾಸನ, ಉತ್ತರ ಕನ್ನಡ ಮತ್ತು ಬಿಜಾಪುರ ಜಿಲ್ಲೆಗಳನ್ನು ವಶಪಡಿಸಿಕೊಂಡಿದ್ದನು.[೮೨]

೧ನೆಯ ಹರಿಹರನ ನಂತರ ೧ನೇ ಬುಕ್ಕನು (೧೩೫೭–೧೯೭೭) ಅಧಿಕಾರಕ್ಕೆ ಬಂದನು. ಇವನು ತನ್ನ ಮಗ ೨ನೆಯ ಕಂಪಣ್ಣನ ನೆರವಿನಿಂದ ಸಂಬುವರಾಯನನ್ನು ಸೋಲಿಸಿದನು. ಅವನ ಮಗ ಹಾಗೂ ಉತ್ತರಾಧಿಕಾರಿ ೨ನೆಯ ವೆನ್ರುಮಂಕೊಂಡಾನ್ ಯುದ್ಧವನ್ನು ಮುಂದುವರೆಸಿ ೧೩೬೦ರಲ್ಲಿ ಕೊಲ್ಲಲ್ಪಟ್ಟನು. ಇದರಿಂದ ಆ ಚಿಕ್ಕ ಪ್ರಾಂತ್ಯವನ್ನು ಸಾಮ್ರಾಜ್ಯಕ್ಕೆ ಸೇರಿಸಿಕೊಂಡಂತಾಯಿತು. ವಿಜಯನಗರವು ತಮಿಳು ದೇಶದ ಒಡತಿಯೆನಿಸಿತು.[೮೩] ನಂತರದಲ್ಲಿ ತೊಂಡೈಮಂಡಲ, ಮುಸ್ಲಿಂ ಮಲಬಾರ ಅರಸರಿಂದ ಕಣ್ಣಾನೂರು, ಕೊಪ್ಪಂಗಳನ್ನು ವಶಪಡಿಸಿಕೊಂಡನು. ಬಹಮನಿ ರಾಜ್ಯದಲ್ಲಿ ೧ನೆಯ ಮಹಮ್ಮದ್‌ಶಾಹನು ಅರಸನಾದ ಮೇಲೆ ತುಂಗಭದ್ರಾ ಮತ್ತು ಕೃಷ್ಣಾನದಿ ಬಯಲು ಪ್ರದೇಶದ ಮೇಲಿನ ಒಡೆತನಕ್ಕಾಗಿ ವಿಜಯನಗರದ ಅರಸರೊಂದಿಗೆ ಅನೇಕ ಯುದ್ಧಗಳನ್ನು ಮಾಡಿದನು. ವರಂಗಲ್ಲನ್ನು ಮತ್ತೆ ಮತ್ತೆ ಕೊಳ್ಳೆಹೊಡೆಯುತ್ತಿದ್ದನು. ಕೊನೆಗೆ ಗೋಲ್ಕೊಂಡವನ್ನು ವಶಪಡಿಸಿಕೊಂಡನು. ಈ ಯುದ್ಧಗಳಿಂದ ಆಂಧ್ರದ ನಾಯಕರು ಬಳಲಿ, ತಮ್ಮ ಸಂಪತ್ತೆಲ್ಲವನ್ನು ಕಳೆದುಕೊಂಡಿದ್ದರು. ಈ ಸಮಯದಲ್ಲಿ ೧ನೇ ಬುಕ್ಕನು ಪ್ರವೇಶ ಮಾಡಿ ಆತ್ಮ ಸಂರಕ್ಷಣೆ, ವೈರಿಗಳನ್ನು ತಡೆಯುವ ಸಲುವಾಗಿ ಹಾಗೂ ಕೃಷ್ಣಾ ನದಿ ತೀರದವರೆಗೆ ರಾಜ್ಯದ ಗಡಿಯನ್ನು ವಿಸ್ತರಿಸಿದನು. ತನ್ನ ಅಂತಿಮ ಕಾಲದಲ್ಲಿ ೧೯೭೭ರಲ್ಲಿ ಬುಕ್ಕನು ಬಹಮನಿಯ ಮುಜಾಹಿದನೊಂದಿಗೆ ಯುದ್ಧ ಮಾಡಿದನು.[೮೪]

ಇವನ ನಂತರ ೨ನೇ ಹರಿಹರನು ಕ್ರಿ.ಶ. ೧೩೭೭ರಲ್ಲಿ ಪಟ್ಟಕ್ಕೆ ಬಂದನು. ಇವನು ಮಹಾರಾಜಾಧಿರಾಜ ಮೊದಲಾದ ಚಕ್ರವರ್ತಿ ಸೂಚಕವಾದ ಬಿರುದುಗಳನ್ನು ಧರಿಸಿದ ವಿಜಯನಗರದ ಅರಸರಲ್ಲಿ ಇವನೇ ಮೊದಲಿಗನು.[೮೫] ೨ನೆಯ ಹರಿಹರನು ತನ್ನ ಮಕ್ಕಳಾದ ೧ನೆಯ ದೇವರಾಯ,

೨ನೇ ಬುಕ್ಕ, ೨ನೇ ವಿರುಪಾಕ್ಷನ ಸಹಾಯದಿಂದ ಕ್ರಿ.ಶ. ೧೩೮೦ರಲ್ಲಿ ಬಾರಕೂರಿನ ಭೈರರಸ ನಾಯಕರನ್ನು ಆಮೇಲೆ ಚೋಳ ಮತ್ತು ಪಾಂಡ್ಯ ಪ್ರದೇಶದ ತುಂಡೀರ ನಾಯಕರ ದಂಗೆಯನ್ನು ಶಮನಗೊಳಿಸಿದನು.[೮೬] ೧೩೯೧ರ ಸುಮಾರಿನಲ್ಲಿ ರಾಜ್ಯ ವಿಸ್ತರಿಸುವ ಸಲುವಾಗಿ ಚಾಲ್, ದಬೋಲ್, ಮತ್ತು ಖಾರೇ ಪಟ್ಟಣಗಳನ್ನು ಜಯಿಸಲಾಯಿತು.[೮೭]

ಕ್ರಿ.ಶ. ೧೪೦೪ರಲ್ಲಿ ೨ನೇ ಹರಿಹರನು ಮರಣ ಹೊಂದಿದ ನಂತರ ಇವನ ಮಗನಾದ ೧ನೇ ದೇವರಾಯನು ಅರಸನಾದನು. ೧ನೇ ದೇವರಾಯನು ಪಿರೋಜ್ ಷಾ ಬಹಮನಿಯೊಡನೆ ಕೃಷ್ಣ ಮತ್ತು ಗೋದಾವರಿ ನಡುವಣ ಪ್ರದೇಶಗಳ ಅಧಿಪತ್ಯಕ್ಕಾಗಿ ಯುದ್ಧಗಳನ್ನು ನಡೆಸಿದನು. ದೇವರಾಯನು ಬಲಿಷ್ಠ ಯೋಧ ಮಾತ್ರವಲ್ಲದೆ ರಚನಾಶೀಲನಾದ ದೊರೆಯೂ ಆಗಿದ್ದನು. ಇವನು ತುಂಗಭದ್ರಾ ನದಿಗೆ ಅಡ್ಡಲಾಗಿ ಆಣೆಕಟ್ಟನ್ನು ನಿರ್ಮಿಸಿ, ನಾಲೆಗಳನ್ನು ತೋಡಿಸಿ ರಾಜಧಾನಿಗೆ ನೀರನ್ನು ಪೂರೈಸಲು ವ್ಯವಸ್ಥೆ ಮಾಡಿದನು. ೧೪೨೨ರಲ್ಲಿ ದೇವರಾಯನು[೮೮] ಮೃತನಾದ ನಂತರ ಇವನ ಮಗನಾದ ವಿಜಯನು ರಾಜನಾದನು. ಶಾಸನಗಳಲ್ಲಿ ಇವನನ್ನು ೩ನೇ ವಿಜಯ ಬುಕ್ಕ ಎಂದೂ ವಿಜಯಭೂಪತಿ ಎಂದೂ ಕರೆಯಲಾಗಿದೆ. ಇವನ ನಂತರ ಇವನ ಮಗನಾದ ೨ನೇ ದೇವರಾಯನು ಆಡಳಿತ ಸೂತ್ರಗಳನ್ನು ವಹಿಸಿಕೊಂಡನು. ಕ್ರಿ.ಶ. ೧೪೪೬ರವರೆಗೆ ಆಳಿದ ಇವನನ್ನು ಪ್ರೌಢದೇವರಾಯ ಅಭಿನವ ವೀರದೇವರಾಯ, ಪ್ರತಾಪದೇವರಾಯ ಎಂದೂ ಕರೆಯಲಾಗಿದೆ. ೨ನೇ ದೇವರಾಯನು ತನ್ನ ಬಹು ಸಮಯವನ್ನು ಯುದ್ಧರಂಗದಲ್ಲಿಯೇ ಕಳೆದನು. ಇದರಿಂದ ಅವನು ಕೇರಳವೂ ಸೇರಿದಂತೆ ಇಡೀ ದಕ್ಷಿಣದಲ್ಲಿ ರಾಜ್ಯವನ್ನು ವಿಸ್ತರಿಸಿದನು. ರೆಡ್ಡಿನಾಯಕರೂ, ಗಜಪತಿಯೂ ಸೋತು ಹೋದರು. ಬಹಮನಿ ಸುಲ್ತಾನನು ವಿಜಯನಗರದ ಕೆಲವು ಭಾಗಗಳನ್ನು ವಶಪಡಿಸಿಕೊಳ್ಳಬೇಕೆಂದು ಮಾಡಿದ ಪ್ರಯತ್ನಗಳೆಲ್ಲವೂ ವಿಫಲಗೊಂಡವು. ರಾಜ್ಯದ ಪೂರ್ವಮುಖಿ ವಿಸ್ತರಣ, ಕ್ರೋಢೀಕರಣ ಮತ್ತು ರಾಜ್ಯದ ಬಲವರ್ಧನಗಳ ಕೀರ್ತಿಯು ದೇವರಾಯನಿಗೆ ಸಲ್ಲುತ್ತದೆ.

ಇಮ್ಮಡಿ ದೇವರಾಯನ ನಂತರ ೨ನೇ ವಿಜಯ, ಮಲ್ಲಿಕಾರ್ಜುನ ಪಟ್ಟಕ್ಕೆ ಬಂದರು. ಇವರ ಆಡಳಿತವು ಅಷ್ಟೊಂದು ದಕ್ಷವಾಗಿರಲಿಲ್ಲ. ಇವರ ನಂತರ ಮುಮ್ಮಡಿ ವಿರೂಪಾಕ್ಷನು ಅರಸನಾದನು. ಇವನು ತನ್ನ ಆಳ್ವಿಕೆಯಲ್ಲಿ ಸಾಮ್ರಾಜ್ಯವನ್ನು ಮತ್ತಷ್ಟು ಹಾಳುಗೆಡವಿದನು. ಈ ಸಮಯವನ್ನರಿತ ವಿರೋಧಿಗಳು ಕೊಂಕಣ ಮತ್ತು ಗೋವೆಗಳನ್ನು ವಶಪಡಿಸಿಕೊಂಡರು. ಇಂಥ ಸುಸಂದರ್ಭವನ್ನು ಹಾಗೂ ರಾಜನ ಅಸಹಾಯಕತೆಯನ್ನು ಉಪಯೋಗಿಸಿಕೊಂಡು ಸಾಳುವ ನರಸಿಂಹನು ವಿಜಯನಗರ ಸಾಮ್ರಾಜ್ಯದ ಆಡಳಿತ ಸೂತ್ರವನ್ನು ಹಿಡಿದುಕೊಂಡನು. ಇಲ್ಲಿಗೆ ಸಂಗಮವಂಶವು ಕೊನೆಗೊಂಡು ಸಾಳುವ ಮನೆತನದವರು ಅರಸರಾಗಿ ಆಳ್ವಿಕೆ ನಡೆಸಿದರು.

ಸಂಗಮ ವಂಶದ ವಿರೂಪಾಕ್ಷವನ್ನು ಸಿಂಹಾಸನದಿಂದ ಕೆಳಗಿಳಿಸಿ ಸಾಳುವ ಮನೆತನದ ನರಸಿಂಹನು ಪಟ್ಟಕ್ಕೆ ಬಂದನು. ಇಲ್ಲಿಗೆ ಸಂಗಮ ವಂಶವು ಕೊನೆಗೊಂಡು ಸಾಳುವ ಮನೆತನದ ಆಳ್ವಿಕೆ ಪ್ರಾರಂಭವಾಯಿತು. ಕ್ರಿ.ಶ. ೧೪೮೬ರಲ್ಲಿ ಸಿಂಹಾಸನವನ್ನೇರಿದ ನರಸಿಂಹನು ಕೇವಲ ಆರು ವರ್ಷಗಳು ಮಾತ್ರ ಆಳ್ವಿಕೆ ನಡೆಸಿದನು. ನರಸಿಂಹನು ತನ್ನ ಕಡಿಮೆ ಅವಧಿಯ ಆಡಳಿತದಲ್ಲಿ ಆಂಧ್ರದ ಕರಾವಳಿಗೆ ದಕ್ಷಿಣದ ಬಾಗಿಲಿನಂತಿದ್ದ ಉದಯಗಿರಿ ಕೋಟೆಯನ್ನು ಗೆದ್ದನು. ಮಹಮ್ಮದ್ ಶಾಹನಿಂದ ಮಸಲಿ ಪಟ್ಟಣವನ್ನು, ಕೊಂಡವೀಡು ಕೋಟೆಯನ್ನು ಗೆದ್ದುಕೊಂಡನು. ದಕ್ಷಿಣದಲ್ಲಿ ಪಾಂಡ್ಯ ದೊರೆ ಭುವನೈಕವೀರ ಸಮರ ಕೋಲಾಹಲ, ಚೆಲುವನಪೋತನ ದಂಗೆಗಳನ್ನು ಅಡಗಿಸಿದನು. ನರಸಿಂಹನ ನಂತರ ಅವನ ಮಗನು ಕಿರಿಯನಾಗಿದ್ದರಿಂದ ನರಸನಾಯಕನನ್ನು ರಾಜಪ್ರತಿನಿಧಿಯಾಗಿ ನೇಮಕ ಮಾಡಲಾಗಿತ್ತು. ನರಸಿಂಹನ ಹಿರಿಯ ಮಗನಾದ ತಿಮ್ಮನು ಸಿಂಹಾಸನಕ್ಕೆ ಬಂದ ಮೇಲೆ ಕೊಲೆಗೀಡಾಗಬೇಕಾಯಿತು. ನಂತರ ಇಮ್ಮಡಿ ನರಸಿಂಹನು ಅಧಿಕಾರಕ್ಕೆ ಬಂದನು. ಅವನು ನಾಮಮಾತ್ರಕ್ಕೆ ರಾಜನಾಗಿದ್ದನು. ವಾಸ್ತವ ಅಧಿಕಾರಗಳೆಲ್ಲ ನರಸನಾಯಕನ ಕೈಯಲ್ಲಿದ್ದವು. ಅವನನ್ನು ರಕ್ಷಾಕರ್ತ ಸ್ವಾಮಿಕರ್ತ ಎಂದು ಕರೆಯಲಾಗಿದೆ. ಅವನು ದಳಪತಿಯೂ, ಮಹಾಪ್ರಧಾನನೂ ಆಗಿದ್ದನು. ಭಂಡಾರ, ವರಮಾನಗಳು ಮತ್ತು ನಾಡಿನ ಆಡಳಿತ ಇವುಗಳನ್ನು ಅವನು ತಾನೇ ನಿರ್ವಹಿಸುತ್ತಿದ್ದನೆಂದು ನ್ಯೂನಿಜ್ ಹೇಳುತ್ತಾನೆ. ಶಾಸನಗಳು ಈ ಸಂಗತಿಯನ್ನು ಸ್ಥಿರಪಡಿಸುತ್ತವೆ. ಸಿವೆಲ್ ಈ ಹೇಳಿಕೆಯನ್ನು ಸಂದೇಹಿಸಿದ್ದರೂ ವೆಂಕಟರಮಣಯ್ಯ ಅದನ್ನು ಸ್ಥಿರಪಡಿಸಿದ್ದಾರೆ.[೮೯]

ನರಸನಾಯಕನಿಗೂ ಮತ್ತು ನರಸಿಂಹನಿಗೂ ಕಾಲಾಂತರದಲ್ಲಿ ವೈಮನಸ್ಸು ಉಂಟಾಗಿ ನರಸನಾಯಕನು ನರಸಿಂಹನನ್ನು ಗೃಹಬಂಧನದಲ್ಲಿರಿಸಿದನು. ಇದರಿಂದ ನರಸನಾಯಕನು ವಸ್ತುತಃ ರಾಜನಂತಾದನು. ಕ್ರಿ.ಶ. ೧೫೦೩ರವರೆಗೆ ನರಸನಾಯಕನು ಆಡಳಿತ ನಡೆಸಿ ತೀರಿಕೊಂಡನು. ಇವನ ನಾಲ್ಕು ಜನ ಮಕ್ಕಳಲ್ಲಿ ಹಿರಿಯವನಾದ ವೀರನರಸಿಂಹನು ತಂದೆಯ ಸ್ಥಾನದಲ್ಲಿ ರಾಜಪ್ರತಿನಿಧಿಯಾಗಿ ನೇಮಕಗೊಂಡು ಆಡಳಿತವನ್ನು ನಡೆಸಿದನು. ಕ್ರಿ.ಶ. ೧೫೦೫ರಲ್ಲಿ ಇಮ್ಮಡಿ ನರಸಿಂಹನು ಮಡಿದ ನಂತರ ತಾನೇ ಸಿಂಹಾಸನಾರೋಹಣ ಮಾಡಿ ಸಾರ್ವಭೌಮನೆನಿಸಿಕೊಂಡನು. ಇಲ್ಲಿಗೆ ಸಾಳುವ ವಂಶವು ಕೊನೆಗೊಂಡು ತುಳುವ ವಂಶವು ಅಧಿಕಾರ ವಹಿಸಿಕೊಂಡಿತು.

ವೀರನರಸಿಂಹ, ಕೃಷ್ಣದೇವರಾಯ, ಅಚ್ಯುತದೇವರಾಯ, ಶ್ರೀರಂಗರಾಯ ಇವರನು ನರಸನಾಯಕನ ಮಕ್ಕಳೆಂದು ಶಾಸನಗಳಲ್ಲಿ ಹೇಳಿದೆ. ತುಳುವ ವಂಶದ ಮೊದಲನೆಯ ದೊರೆಯಾಗಿ ವೀರನರಸಿಂಹನು ಕ್ರಿ.ಶ. ೧೫೦೫ರಿಂದ ಕ್ರಿ.ಶ. ೧೫೦೯ರವರೆಗೆ ಕೇವಲ ನಾಲ್ಕು ವರ್ಷಗಳ ಕಾಲ ಆಳ್ವಿಕೆ ಮಾಡಿ ಆಡಳಿತದ ಅವಧಿಯಲ್ಲಿ ಸಾಮ್ರಾಜ್ಯದ ಆಗುಹೋಗುಗಳನ್ನು ರೂಪಿಸತೊಡಗಿದನು. ಆದರೆ ರಾಜ್ಯದ ಆಡಳಿತದಲ್ಲಿ ಒಳಸಂಚುಗಳು ಮತ್ತು ಸಾಮಂತರ ವಿರೋಧ, ಸಾಮ್ರಾಜ್ಯದ

ಸುತ್ತಮುತ್ತಲ ಅರಸರ ಧಾಳಿಗಳು ಯಥೇಚ್ಛವಾದುದರಿಂದ ಇವನು ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ತರುವುದರಲ್ಲಿ ಶ್ರಮಿಸಿ ಕೊನೆಗೂ ಸಫಲವಾಗದೆ ತನ್ನ ಆಡಳಿತದ ಕೊನೆಯ ಅವಧಿಯಲ್ಲಿ ಅಸ್ವಸ್ಥನಾದನು. ವೀರನರಸಿಂಹನು ಈ ಸಮಯದಲ್ಲಿ ತನ್ನ ಮಗನನ್ನೇ ಸಿಂಹಾಸನಕ್ಕೆ ತರಬೇಕೆಂದು ಬಯಸಿ ಕೃಷ್ಣದೇವರಾಯನನ್ನು ಕೊಲ್ಲಿಸಲು ಒಳಸಂಚು ಮಾಡಿದನು. ಆದರೆ ಮಂತ್ರಿ ತಿಮ್ಮರಸನು ರಾಜಕುಮಾರನ ರಕ್ಷಣೆಗೆ ಬಂದನು. ಕ್ರಿ.ಶ. ೧೫೦೯ರಲ್ಲಿ ವೀರನರಸಿಂಹನು ಮಡಿಯಲು ಶ್ರೀಕೃಷ್ಣದೇವರಾಯನು ಪಟ್ಟಕ್ಕೆ ಬಂದನು.

ಕೃಷ್ಣದೇವರಾಯನು ಪಟ್ಟಕ್ಕೆ ಬಂದಾಗ ವಿಜಯನಗರ ಸಿಂಹಾಸನವು ಮುಳ್ಳಿನ ಹಾಸಿಗೆಯಾಗಿದ್ದಿತು. ಅರಸನು ಆಂತರಿಕ ದಂಗೆಗಳನ್ನು ಅಡಗಿಸುತ್ತಾ, ಹೊರಗಿನ ಶತೃಗಳ ಧಾಳಿಗಳನ್ನು ಸಮರ್ಥವಾಗಿ ಎದುರಿಸಿದನು. ರಾಯನು ತನ್ನ ರಾಜ್ಯವನ್ನು ಆಂತರಿಕವಾಗಿ ಭದ್ರಪಡಿಸಿಕೊಳ್ಳುವ ಉದ್ದೇಶದಿಂದ ಮೊದಲ ಹಂತವಾಗಿ ಮೈಸೂರಿನ ಪಕ್ಕದಲ್ಲಿರುವ ಉಮ್ಮತ್ತೂರಿನ ಮೇಲೆ ಕ್ರಿ.ಶ. ೧೫೧೦ ಮತ್ತು ಕ್ರಿ.ಶ. ೧೫೧೨ರಲ್ಲಿ ಎರಡು ಸಾರಿ ದಂಡಯಾತ್ರೆ ಮಾಡಿದ್ದು, ಮೊದಲನೆಯ ದಂಡಯಾತ್ರೆಯ ವಿವರಗಳನ್ನು ಕಾಂಚಿವರಂನ ಶಾಸನಗಳು ನಿರೂಪಿಸುತ್ತವೆ.[೧೦] ರಾಯನು ಕ್ರಿ.ಶ. ೧೫೧೦, ಮಾರ್ಚ್ ತಿಂಗಳ ಸುಮಾರಿಗೆ ಮುದಗಲ್ಲು ಮತ್ತು ರಾಯಚೂರು ಕೋಟೆಗಳನ್ನು ವಶಪಡಿಸಿಕೊಂಡನು. ಅನಂತರ ತನ್ನ ಸೈನ್ಯವನ್ನು ಗೋಲ್ಕೊಂಡದ ಕಡೆಗೆ ತಿರುಗಿಸಿದನು.[೧೧]

ಬಹಮನಿ ೩ನೆಯ ಸುಲ್ತಾನ ಮಹಮ್ಮದ್‌ನ ಸ್ಥಾನದಲ್ಲಿ ೨ನೇ ಮಹಮದ್ ಅರಸನಾದನು. ಇವನು ರಾಯನ ವಿರುದ್ಧ ಜಿಹಾದ್ (ಧರ್ಮಯುದ್ಧ) ನಡೆಸಬೇಕೆಂದು ಒತ್ತಡ ಹಾಕಿ ತಾನೇ ಒಂದು ದಂಡಯಾತ್ರೆಯನ್ನು (೧೫೦೯–೧೦) ನಡೆಸಿದನು. ಮುಸ್ಲಿಂ ರಾಜ್ಯಗಳಾದ ಬಿಜಾಪುರ, ಗೋಲ್ಕೊಂಡ ಮತ್ತು ಅಹಮದ್ ನಗರಗಳ ಸೈನ್ಯಗಳು ಕೃಷ್ಣ ನದಿ ದಂಡೆಯಲ್ಲಿ ಬೀಡು ಬಿಟ್ಟಿದ್ದವು. ಯೋಜನೆಯ ಪ್ರಕಾರ ರಾಯನು ಮಾಡಿದ ಭೀಕರ ಆಕ್ರಮಣದಿಂದ ಶತೃ ಸೈನ್ಯವು ನುಚ್ಚುನೂರಾಯಿತು. ವಿಜಯನಗರದ ಸೈನಿಕರು ಕೋವಿಲಕೊಂಡದವರೆಗೆ ಮುಸ್ಲಿಂ ಸೈನ್ಯವನ್ನು ಬೆನ್ನಟ್ಟಿ ಅಂತಿಮವಾಗಿ ಮತ್ತೆ ಸೋಲಿಸಿದರು. ಓರಿಸ್ಸಾದ ದೊರೆ ಪ್ರತಾಪ ಗಜಪತಿ ರುದ್ರದೇವನನ್ನು ಸೋಲಿಸುವ ಸಲುವಾಗಿ ಅವನ ವಿರುದ್ಧ ರಾಯನು ಯುದ್ಧವನ್ನು ಘೋಷಿಸಿದನು. ಕ್ರಿ.ಶ. ೧೫೧೩ರಲ್ಲಿ ಪ್ರಾರಂಭವಾದ ಉದಯಗಿರಿ ದಂಡಯಾತ್ರೆಯು ಹಲವು ಹಂತಗಳಲ್ಲಿ ನಡೆಯಿತು. ಗಜಪತಿಯು ಆಕ್ರಮಿಸಿಕೊಂಡಿದ್ದ ಉದಯಗಿರಿಯ ಮೇಲೆ ಧಾಳಿ ಮಾಡಿ ಅವನನ್ನು ಸೋಲಿಸಿ ಕೊಂಡವೀಡುವರೆಗೆ ಅಟ್ಟಿಸಿಕೊಂಡು ಹೋಗಲಾಯಿತು. ಕೊಂಡವೀಡು ಜಯಸಿಕೊಳ್ಳುವ ಮುನ್ನ ಅದ್ದಂಕಿ, ವಿನುಕೊಂಡ, ಬೆಲ್ಲಂಕೊಂಡ, ನಾಗಾರ್ಜುನಕೊಂಡ, ತೆಂಗಡ ಮತ್ತು ಕೇತಾವರಗಳನ್ನು ಗೆದ್ದುಕೊಂಡನೆಂದು ತಿಳಿಯುತ್ತದೆ.[೧೨]

ಕೃಷ್ಣದೇವರಾಯನು ಕ್ರಿ.ಶ. ೧೫೧೫ರಲ್ಲಿ ವಿಜಯನಗರದಿಂದ ಹೊರಟು ವಿಜಯವಾಡವನ್ನು ಸೇರಿಕೊಂಡು ಆ ಪ್ರದೇಶವನ್ನು ವಶಪಡಿಸಿಕೊಂಡನು. ಅನಂತರ ವಿಜಯವಾಡದಿಂದ ಕೊಂಡಪಲ್ಲಿಗೆ ಕಾರ್ಯಾಚರಣೆಯನ್ನು ಸಾಗಿಸಿ ಕ್ರಿ.ಶ. ೧೫೧೬ರಲ್ಲಿ ಅದನ್ನು ವಶಪಡಿಸಿಕೊಂಡನು. ಈ ಮಧ್ಯೆ ನಲ್ಗೊಂಡದ ಭಾಗಗಳು ಮತ್ತು ವರಂಗಲ್ಲನ್ನೂ ಗೆಲ್ಲಲಾಯಿತು. ರಾಯನು ಮುಂದುವರೆದು ರಾಜಮಹೇಂದ್ರಿ, ಸಿಂಹಾದ್ರಿ, ಪೋಟ್ನೂರು, ಮೇಡೂರುಗಳನ್ನು ವಶಪಡಿಸಿಕೊಂಡನು.

ತಿರುಪತಿ ಮತ್ತು ಕಾಳಹಸ್ತಿಯ ಶಾಸನಗಳಲ್ಲಿ ತೆಲಂಗಾಣದ ಅನಂತಗಿರಿ, ವಿರ್ಲಕೊಂಡಿ, ಆರುಪಲ್ಲಿ, ಜಲ್ಲಿಪಲ್ಲಿ, ಕಂಡಿಕೊಂಡ, ಕಪ್ಪಲುವಾಯಿ, ನಲ್ಲಕೊಂಡ, ಶಂಕರಗಿರಿ ಮತ್ತು ಕಂಭಂಮೆಟ್ಟು ಇತ್ಯಾದಿಗಳನ್ನು ವಶಪಡಿಸಿಕೊಂಡಿರುವ ವಿವರಗಳಿವೆ. ಓರಿಸ್ಸಾದ ರಾಜಧಾನಿ ಕಟಕ್‌ಗೆ ವಿಜಯನಗರದ ಸೈನ್ಯ ಮುತ್ತಿಗೆ ಹಾಕಿದ್ದನ್ನು ಕಂಡು ಪ್ರತಾಪರುದ್ರ ಗಜಪತಿಯು ಸಂಧಿಯನ್ನು ಯಾಚಿಸಿದನು. ಇಬ್ಬರ ನಡುವೆ ಶಾಂತಿ ಒಪ್ಪಂದಗಳು ಏರ್ಪಟ್ಟು ಗಜಪತಿಯು ತನ್ನ ಮಗಳು ಜಗನ್ಮೋಹಿನಿಯನ್ನು ರಾಜನಿಗೆ ಮದುವೆ ಮಾಡಿಕೊಟ್ಟನು. ಇತಿಹಾಸದಲ್ಲಿ ಈ ಪ್ರಸ್ತುತ ಘಟನೆಯು ಕ್ರಿ.ಶ. ೧೫೧೩ ರಿಂದ ೧೫೧೮ರವರೆಗೆ ಆರು ವರ್ಷಗಳನ್ನು ಒಳಗೊಂಡಿತ್ತು.

ಮುಂದೆ ಕೃಷ್ಣದೇವರಾಯನು ಶಾಹಿ ಸುಲ್ತಾನರ ವಿರುದ್ಧ ಯುದ್ಧಗಳನ್ನು ಪದೇ ಪದೇ ಮಾಡಬೇಕಾಗಿ ಬಂದಿತು. ಬಿಜಾಪುರದ ಆದಿಲ್‌ಷಾಹನು ರಾಯಚೂರನ್ನು ಪುನಃ ಗೆದ್ದುಕೊಂಡಿದ್ದನು. ರಾಯನು ಪೋರ್ಚುಗೀಸ್ ಬಂದೂಕು ದಾರಿ ಪಡೆಯ ಸಹಾಯದೊಂದಿಗೆ ಕ್ರಿ.ಶ. ೧೫೨೦ರಲ್ಲಿ ರಾಯಚೂರನ್ನು ಮರಳಿ ವಶಪಡಿಸಿಕೊಂಡನು. ಅನಂತರದಲ್ಲಿ ಬಿಜಾಪುರದ ಮೇಲೆ ದಂಡೆತ್ತಿ ಹೋಗಿ ಫಿರೂಜಾಬಾದನ್ನು ಹಿಡಿದು ಹಸನ್‌ಕಾಡನ್ನು ಗೆದ್ದು ಸಾಗರವನ್ನು ತಲುಪಿದನು. ಬಿಜಾಪುರದ ಮುತ್ತಿಗೆಯು ರಾಯಚೂರು ಆಕ್ರಮಣದ ಮುಂದುವರೆದು ಭಾಗವಾಗಿ ಪರಿಣಮಿಸಿತು. ಇದಾದ ನಂತರ ಅರಸನು ಗುಲಬರ್ಗಾದ ಮೇಲೆ ಧಾಳಿ ಮಾಡಿ ಅಲ್ಲಿನ ಕೋಟೆಯನ್ನು ನೆಲಸಮ ಮಾಡಿ ಸುತ್ತಮುತ್ತಣ ಪ್ರದೇಶಗಳನ್ನು ನೆಲಸಮ ಮಾಡಿದನು.[೯]

ಈ ಯುದ್ಧಗಳ ನಂತರ ಕೃಷ್ಣದೇವರಾಯನ ಆರೋಗ್ಯವು ಕ್ಷೀಣಿಸುತ್ತಾ ಇರಲಾಗಿ ತನ್ನ ಮಗನ ಮೇಲಿನ ವಾತ್ಸಲ್ಯದಿಂದಾಗಿ ತನ್ನ ಮಗನನ್ನು ಸಿಂಹಾಸನಕ್ಕೆ ಕೂರಿಸಬೇಕೆಂಬ ಆಸೆಯು ಅಂತಪುರದಲ್ಲಿನ ಒಳಸಂಚುಗಳಿಂದ ವಿಫಲವಾಗಿ ತಿರುಮಲನು ಮರಣಹೊಂದಿದನು. ಈ ಘಟನೆ ರಾಜನ ಮನಸ್ಸನ್ನು ತೀವ್ರವಾಗಿ ಘಾಸಿಗೊಳಿಸಿತು. ರಾಜನು ಕಾಯಿಲೆ ಮಲಗಿ ೧೫೨೯ರಲ್ಲಿ ಮರಣಹೊಂದಿದನು. ಕೃಷ್ಣದೇವರಾಯನು ಮಡಿಯುತ್ತಲೇ ಅಧಿಕಾರಕ್ಕಾಗಿ ಅರಮನೆಯಲ್ಲಿ ಒಳಸಂಚುಗಳು ಪ್ರಾರಂಭವಾದವು. ರಾಯನು ತನ್ನ ಮಲಸಹೋದರ ಅಚ್ಯುತರಾಯನನ್ನು ತನ್ನ

ಉತ್ತರಾಧಿಕಾರಿಯಾಗಿ ನಿಯಮಿಸಿದ್ದನು. ರಾಮರಾಯನು ಶಿಶುವಾಗಿದ್ದ ಮಗನ ಹಕ್ಕನ್ನು ಎತ್ತಿಹಿಡಿದು, ಅಚ್ಯುತನು ಚಂದ್ರಗಿರಿಯಲ್ಲಿದ್ದಾಗ ರಾಜಧಾನಿಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಆದರೆ ಈ ಪ್ರಯತ್ನವನ್ನು ಸಾಳುವ ನರಸಿಂಹರಾಜ ದಂಡನಾಯಕ ವಿಫಲಗೊಳಿಸಿದನು. ಆದರೆ ಅಚ್ಯುತರಾಯನು ರಾಮರಾಯನು ಒಂದಾದಾಗ ಅಚ್ಯುತನ ಸೋದರಮಾವ ಸಕಲರಾಜ ತಿರುಮಲನು ನರಸಿಂಹರಾಯನನ್ನು ಸೋಲಿಸಿದನು. ಇತರ ರಾಜರೂ ಶರಣಾದರು.

ರಾಜನಾಥ ಡಿಂಡಿಮನ ಅಚ್ಯುತರಾಯಾಭ್ಯುದಯಂ ಕೂರಹಚೆರ್ಲದ ಯುದ್ಧದಲ್ಲಿ ತಿಮ್ಮನು ಮಡಿದು ಇಸ್ಲಾಯಿಲ್ ಮುದಗಲ್ಲು, ರಾಯಚೂರು ಕೋಟೆಗಳನ್ನು ವಶಪಡಿಸಿಕೊಂಡನು. ಆದರೆ ಇಸ್ಮಾಯಿಲ್‌ನ ಮರಣಾನಂತರ ಬಿಜಾಪುರದಲ್ಲಿ ಉಂಟಾದ ಅವ್ಯವಸ್ಥೆಯು ಅಚ್ಯುತರಾಯನಿಗೆ ಮುದಗಲ್ಲು, ರಾಯಚೂರು ಕೋಟೆಗಳನ್ನು ವಶಪಡಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಿತು. ಮುದಗಲ್ಲು, ರಾಯಚೂರು ಕೋಟೆಗಳನ್ನು ವಶಪಡಿಸಿಕೊಂಡ ನಂತರ ಅಚ್ಯುತರಾಯನು ತಿರುಪತಿಗೆ (ಕ್ರಿ.ಶ.೧೫೩೩) ಹೋದನು. ಈ ಸಮಯದಲ್ಲಿ ರಾಮರಾಯನು ಅಚ್ಯುತನಿಗೆ ನಿಷ್ಠರಾಗಿದ್ದ ಹಲವು ಅಧಿಕಾರಿಗಳನ್ನು ತೆಗೆದುಹಾಕಿ ಆ ಸ್ಥಾನಗಳಲ್ಲಿ ತನ್ನ ಬಂಧುಗಳನ್ನು, ಮಿತ್ರರನ್ನು ನೇಮಿಸಿ ತನ್ನ ಅಧಿಕಾರವನ್ನು ಸ್ಥಿರಪಡಿಸಿಕೊಂಡನು. ಅಚ್ಯುತನನ್ನು ಹಿಡಿದು ಸೆರೆಗೆ ದೂಡಿದನು. ಆದರೆ ಮುಖ್ಯನಾಯಕರು ತನಗೆ ವಿರುದ್ಧವಾಗಿದ್ದುದರಿಂದ ಸದಾಶಿವನನ್ನು ಸಿಂಹಾಸನದ ಮೇಲೆ ಕೂಡಿಸಿದನು. ನಾಯಕರು ಮಧುರೈ, ತಂಜಾವೂರು, ಜಿಂಜಿಗಳಲ್ಲಿ ತಮ್ಮ ಬೆಂಬಲವನ್ನು ಸ್ಥಾಪಿಸಿದರು. ಇವರನ್ನು ಹತ್ತಿಕ್ಕಲು ರಾಮರಾಯನು ಹೋದಾಗ ತಿರುಮಲನ ಸಹಾಯದಿಂದ ಅಚ್ಯುತನು ಸೆರೆಯಿಂದ ಹೊರಬಂದನು. ಅಚ್ಯುತನ ಮರಣಾನಂತರ ಅವನ ಮಗ ೧ನೆಯ ವೆಂಕಟನನ್ನು ತಿರುಮಲನು ಸಿಂಹಾಸನದಲ್ಲಿ ಕುಳ್ಳಿರಿಸಿ ತಾನು ರಾಜಪ್ರತಿನಿಧಿಯಾದನು. ಅಧಿಕಾರ ಮೋಹದಿಂದ ತಿರುಮಲನು ವೆಂಕಟ ಮತ್ತು ಅವನ ಸಂಬಂಧಿಕರನ್ನು ಕೊಲೆ ಮಾಡಿಸಿಬಿಟ್ಟನು. ರಾಮರಾಯನು ತಿರುಮಲನನ್ನು ಸೋಲಿಸಿ ಸದಾಶಿವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಸಮಸ್ತ ಅಧಿಕಾರವನ್ನು ತನ್ನ ಕೈಯಲ್ಲಿರಿಸಿಕೊಂಡನು.

ಶಾಹೀ ಸುಲ್ತಾನರಲ್ಲಿಯೇ ಅವಿರತವಾಗಿ ಹೋರಾಟಗಳು ನಡೆಯುತ್ತಿದ್ದವು. ದಖ್ಖನ್ನಿನ ಪ್ರಭುತ್ವಕ್ಕಾಗಿ ನಿರಂತರ ಯುದ್ಧ ನಡೆಯುತ್ತಿತ್ತು. ರಾಮರಾಯನು ಅವರ ರಾಜಕಾರಣದಲ್ಲಿ ಮಧ್ಯಪ್ರವೇಶ ಮಾಡಿ, ಒಬ್ಬರ ಮೇಲೊಬ್ಬರನ್ನು ಎತ್ತಿಕಟ್ಟಿ, ತನಗೆ ಅನುಕೂಲವಾಗುವಂತೆ ಮೈತ್ರಿಯನ್ನು ಬದಲಾಯಿಸಿಕೊಳ್ಳುತ್ತಿದ್ದನು. ಸುಲ್ತಾನರು ತಮ್ಮ ಉಳಿವಿಗಾಗಿ ಅನಿವಾರ್ಯ ತೀರ್ಮಾನಕ್ಕೆ ಬಂದರು. ತಾವು ಉಳಿದುಕೊಳ್ಳಬೇಕಾದರೆ ಮೊದಲು ಒಗ್ಗಟ್ಟಾಗಿ ನಿಲ್ಲಬೇಕು. ತಮ್ಮ ನಡುವಣ ಭಿನ್ನಾಭಿಪ್ರಾಯಗಳನ್ನು ಬಗೆಹರಿಸಿಕೊಳ್ಳಬೇಕು. ತಮ್ಮ ಎಲ್ಲ ಸಂಪನ್ಮೂಲಗಳನ್ನು ಕ್ರೋಢೀಕರಿಸಿಕೊಂಡು, ತಮ್ಮ ಸಮಾನ ವೈರಿಯಾದ ರಾಮರಾಯನ ರಾಜಕೀಯ ಶಕ್ತಿ ಮತ್ತು ಸೈನಿಕಶಕ್ತಿಗಳನ್ನು ನಾಶಪಡಿಸಬೇಕು.

ಶಾಹೀ ಸುಲ್ತಾನರ ವ್ಯವಹಾರಗಳಲ್ಲಿ ರಾಮರಾಯನು ಅತಿಯಾಗಿ ತೊಡರಿಸಿಕೊಂಡಿದ್ದೇ ವಿಜಯನಗರ ಸಾಮ್ರಾಜ್ಯಕ್ಕೆ ಮುಳುವಾಯಿತು.

ಅಂತಿಮ ಯುದ್ಧದ ಮೊದಲನೆಯ ಹೆಜ್ಜೆಯಾಗಿ ಒಕ್ಕೂಟವು ಸೇನೆಯೊಂದಿಗೆ ದಕ್ಷಿಣ ಮುಖವಾಗಿ ನಡೆದು ಬಿಜಾಪುರದ ಬಳಿಯ ತಾಳಿಕೋಟೆಯಲ್ಲಿ ಬೀಡುಬಿಟ್ಟಿತು. ರಾಮರಾಯನು ತನ್ನ ಸೋದರರಾದ ತಿರುಮಲ ಮತ್ತು ವೆಂಕಟಾದ್ರಿಯೊಂದಿಗೆ ಎಂದಿನಂತೆಯೇ ಧೈರ್ಯ, ಪರಾಕ್ರಮಗಳಿಂದ ತನ್ನ ಬಲವನ್ನೆಲ್ಲಾ ಪ್ರಯೋಗಿಸಿ ವೈರಿಯನ್ನೆದುರಿಸಲು ನಿರ್ಧರಿಸಿದನು. ಯುದ್ಧದ ಸಂದರ್ಭದಲ್ಲಿ ರಾಮರಾಯನ ಕೈಕೆಳಗಿದ್ದ ಇಬ್ಬರು ಮುಸ್ಲಿಂ ಮುಸ್ಲಿಂ ಸೇನಾಪತಿಗಳು ಒಡೆಯನಿಗೆ ದ್ರೋಹ ಮಾಡಿ ತಮ್ಮ ಸೇನೆಯೊಂದಿಗೆ ತಮ್ಮ ಧರ್ಮೀಯರನ್ನು ಸೇರಿಕೊಂಡರು. ಈ ಗೊಂದಲದಲ್ಲಿ ರಾಮರಾಯನನ್ನು ಸೆರೆಹಿಡಿದು, ನಿಜಾಂಶಾಹನು ಅವನನ್ನು ಗುಂಡಿಟ್ಟು ಕೊಂದನು.

ಕ್ರಿ.ಶ. ೧೫೬೫ರ ತಾಳಿಕೋಟೆ ಅಥವಾ ರಕ್ಕಸ ತಂಗಡಗಿ ಯುದ್ಧದಲ್ಲಿ ಮಹಾನ್ ವಿಜಯನಗರ ಸಾಮ್ರಾಜ್ಯವು ನಾಶವಾಯಿತು. ಯುದ್ಧದಲ್ಲಿ ಜೀವಸಹಿತ ಉಳಿದುಕೊಂಡ ತಿರುಮಲನು ೧೫೦ ಆನೆಗಳ ಮೇಲೆ ಕೊಂಡೊಯ್ಯಬಹುದಾದಷ್ಟನ್ನು ಸಂಪತ್ತನ್ನು ತೆಗೆದುಕೊಂಡು, ಶಾಸನಬದ್ಧ ರಾಜ, ಅರಮನೆಯ ಸ್ತ್ರೀಯರು ಮತ್ತು ಬಂಧುಗಳೊಡನೆ ಚಂದ್ರಗಿರಿಗೆ ತೆರಳಿದನು. ಅಲ್ಲಿಂದ ವಿವಿಧ ಅರಸರು ಆಳ್ವಿಕೆ ನಡೆಸಿದರು. ಕ್ರಿ.ಶ. ೧೬೭೯ರಲ್ಲಿ ೩ನೇ ಶ್ರೀರಂಗನು ಬೇಲೂರಿನಲ್ಲಿ ಆಳುತ್ತಿದ್ದಂತೆ ತಿಳಿಯುತ್ತದೆ. ಆದರೆ ಅವನೊಂದಿಗೆ ಅರವೀಡು ವಂಶವೂ ವಿಜಯನಗರ ಸಾಮ್ರಾಜ್ಯವು ವಿಸ್ಮೃತಿಗೆ ಸರಿದುಹೋದವು.[೯]

ವಿಜಯನಗರ ಅರಸರ ಕಾಲದಲ್ಲಿ ಸಾಹಸಿಗಳಿಗೆ, ಪ್ರತಿಭಾವಂತರಿಗೆ ತಮ್ಮದೇ ಆದ ಸಂಸ್ಥಾನವನ್ನು ಹುಟ್ಟು ಹಾಕಲು ವಿಫುಲವಾದ ಅವಕಾಶಗಳಿದ್ದವು. ಒಂದಿಲ್ಲೊಂದು ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೇವೆಯನ್ನು ಸಲ್ಲಿಸಿದವರೇ ಬಹುಮಟ್ಟಿಗೆ ಈ ಸಂಸ್ಥಾನಗಳ ಹುಟ್ಟಿಗೆ ಕಾರಣಕರ್ತರಾಗಿರುವುದು ಕಂಡುಬರುತ್ತದೆ.

ರಾಜಕೀಯ ಆಡಳಿತ ಪ್ರಕ್ರಿಯೆಯ ವಿಜಯನಗರ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಅನೇಕ ಪರಿಣಾಮಗಳನ್ನು ಹೊಂದಿತ್ತು. ವಿಧೇಯತೆ, ನಿಷ್ಠೆಯನ್ನು ಒಂದು ವ್ಯವಸ್ಥಿತವಾದ ರೂಪದಲ್ಲಿ ಸರಣಿ ಕ್ರಿಯೆಯಾಗಿ ನಿಲ್ಲುವಂತೆ ಮಾಡಿತು. ಒಳ ಜಗಳಗಳನ್ನು, ರಾಜಕೀಯ ಅಧಿಕಾರಕ್ಕಾಗಿ ಕಚ್ಚಾಟವನ್ನೂ ಕನಿಷ್ಠ ಪ್ರಮಾಣಕ್ಕಿಳಿಸಲು ಪ್ರಯತ್ನಿಸಿತು. ವಿಜಯನಗರ ಕಾಲದ ಭೂದಾನ ಶಾಸನಗಳು ಸೇನಾಧಿಕಾರಿಗಳ ವಿಶಿಷ್ಟ ವರ್ಗವೊಂದು ಅಸ್ತಿತ್ವದಲ್ಲಿದ್ದುದಕ್ಕೆ ಸಾಕಷ್ಟು ಆಧಾರವನ್ನು ಒದಗಿಸುತ್ತವೆ. ಸೈನ್ಯದಲ್ಲಿನ ಹುದ್ದೆಯ ಅಂತಸ್ತನ್ನು ಅಮರ ಎಂಬುದು ಸೂಚಿಸುತ್ತದೆ ಎನ್ನುವುದು ಕೆಲವು

ವಿದ್ವಾಂಸರ ಅಭಿಪ್ರಾಯವಾಗಿದೆ. ವಿಜಯನಗರದ ಸಾರ್ವಭೌಮನಿಗೆ ಕಪ್ಪಕಾಣಿಕೆಯನ್ನು ನೀಡುವುದು ಜೊತೆಗೆ ನಿರ್ದಿಷ್ಟ ಪ್ರಮಾಣದ ಅಶ್ವಬಲವನ್ನು ಕೇಂದ್ರಸರಕಾರದ ಸಹಾಯಕ್ಕೋಸ್ಕರ ಇಟ್ಟುಕೊಳ್ಳಬೇಕಾಗಿತ್ತು.

ಅಮರನಾಯಕರಿಗೆ ಭೂಮಿಯನ್ನು ಮಂಜೂರು ಮಾಡಲಾಗಿತ್ತು. ಅವುಗಳಿಗೆ 'ಅಮರಂ' ಎಂದು ಹೆಸರು. ಅವುಗಳಿಂದ ಅವರಿಗೆ ರಾಜಕೀಯ, ಆಡಳಿತೀಯ, ಆರ್ಥಿಕ ಮತ್ತು ನ್ಯಾಯ ಅಧಿಕಾರಿಗಳು ತಮ್ಮ ಅಮರಂ ಪ್ರದೇಶ ವ್ಯಾಪ್ತಿಗೆ ಅನ್ವಯಿಸುವಂತೆ ದೊರಕುತ್ತಿದ್ದವು. ಸೈನ್ಯ ಮತ್ತು ಹಣಕಾಸಿಗೆ ಸಂಬಂಧಿಸಿದ ತಮ್ಮ ಕರ್ತವ್ಯಗಳನ್ನು ಪೂರೈಸುತ್ತಿರುವವರಿಗೆ ಅವರಿಗೆ ಅರಸರಿಂದ ಯಾವುದೇ ಬಗೆಯ ಕಷ್ಟವಿರುತ್ತಿರಲಿಲ್ಲ. ಶಾಸನಗಳಲ್ಲಿ ಚಕ್ರವರ್ತಿಯು ಈ ಅಮರನಾಯಕರಿಗೆ ಭೂಮಿಯನ್ನು ಮಂಜೂರು ಮಾಡಿದ ವಿಚಾರವನ್ನು ನೋಡುತ್ತೇವೆ.[೯೦] ವಿಜಯನಗರ ರಾಜ್ಯವು ಏಕಕಾಲದಲ್ಲಿ ಸಾಮಂತ, ಒಕ್ಕೂಟ ಹಾಗೂ ವಿಕೇಂದ್ರಿಕೃತ ಅಂಶಗಳನ್ನು ಒಳಗೊಂಡಿದ್ದಿತು. ನ್ಯೂನಿಜ್ ಮತ್ತು ಪೇಸ್ ಪ್ರಸ್ತುತ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚುರವಾಗಿದ್ದು, ಊಳಿಗಮಾನ್ಯ ಪದ್ಧತಿ ಎಂದು ತಾವು ಭಾವಿಸಿದ ವ್ಯವಸ್ಥೆಯನ್ನು ವರ್ಣಿಸಿದ್ದಾರೆ. ದೊಡ್ಡ, ಚಿಕ್ಕ ರಾಜ್ಯ ಭಾಗಗಳನ್ನು ಅನೇಕ ಸಂದರ್ಭಗಳಲ್ಲಿ ಒಂದೇ ಒಂದು ಹಳ್ಳಿಯನ್ನು ಗಣ್ಯ ಜನರಿಗೆ ವಹಿಸಲಾಗುತ್ತಿತ್ತು. ಅಗತ್ಯ ಬಂದಾಗ ನಿರ್ದಿಷ್ಟ ಸಂಖ್ಯೆಯ ಸೇನೆಯನ್ನು ಒದಗಿಸಬೇಕು ಎಂಬುದೇ ಷರತ್ತಾಗಿತ್ತು. ಒಂದು ರೀತಿಯಲ್ಲಿ ಇವರು ವಿಜಯನಗರ ರಾಜ್ಯಾಡಳಿತದ ಆಧಾರ ಸ್ತಂಭಗಳಾಗಿ ವರ್ತಿಸುತ್ತಿದ್ದರು.

ವಿಜಯನಗರದಲ್ಲಿ ಗೆದ್ದ ಸ್ಥಳೀಯ ಸಾಮಂತ ಕುಟುಂಬವನ್ನು ನಾಶಮಾಡದೆ ವಿಜಯನಗರ ರಾಜಕೀಯ ರಚನೆಯ ಮುಖ್ಯವಾಹಿನಿಗೆ ಸೇರಿಸಲಾಗುತ್ತಿತ್ತು. ಕೆಲವೇ ಕೆಲವು ಸಂದರ್ಭಗಳಲ್ಲಿ ಹಳೆಯ ಮನೆತನಗಳನ್ನು ನಾಶ ಮಾಡಲಾಗುತ್ತಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಈ ರೀತಿಯಾಗಿ ವಿವಿಧ ಆಡಳಿತ ಘಟಕಗಳನ್ನು ಕಟ್ಟುಗೂಡಿಸಿ ಇಡಲಾಗಿತ್ತು. ಸಾಮ್ರಾಜ್ಯದ ರಾಜಕೀಯ ಅಧಿಕಾರವು ಕೇಂದ್ರದಲ್ಲಿ ಸಂಚಯಗೊಳ್ಳದೆ ಹಲವಾರು ಮಿಲಿಟರಿ ಆಡಳಿತೀಯ ಘಟಕಗಳ ಮೂಲಕ ಕೆಳಮುಖವಾಗಿ ಹಂಚಿಹೋಗಿತ್ತು. ಅಮರನಾಯಕರು ಮೂಲತಃ ಸೈನ್ಯಾಧಿಕಾರಿಗಳಾಗಿದ್ದವರು. ರಾಜನಿಂದ ಅವರು ಭೂಮಿಯನ್ನು ಸೇನಾ ಸೇವೆಯನ್ನು ಸಲ್ಲಿಸುವ ಷರತ್ತಿನ ಮೇಲೆ ಪಡೆದುಕೊಂಡಿದ್ದರು ಟಿ.ವಿ.ಮಹಾಲಿಂಗಂ ಪ್ರಕಾರ 'ಭೂಮಿಯೆಲ್ಲವೂ ರಾಜನಿಗೆ ಸೇರಿದ್ದು. ಅವನು ತನ್ನನ್ನು ಅವಲಂಬಿಸಿದವರಿಗೆ ಅದನ್ನು ಹಂಚುತ್ತಿದ್ದನು. ಹಾಗೆ ಭೂಮಿಯನ್ನು ರಾಜನಿಂದ ಪಡೆದುಕೊಂಡವರನ್ನು ನಾಯಕರೆಂದು ಕರೆಯುತ್ತಿದ್ದರು.'[೯೧] ಅಮರನಾಯಕರ ಸ್ಥಾನಮಾನದ ಮೇಲೆ ಸಮಕಾಲೀನ ಶಾಸನಗಳು ಹಾಗೂ ವಿಜಯನಗರದ ಅರಸರು ನಾಯಕರಿಗೆ ನೆಲವನ್ನು ದಾನವಾಗಿ ನೀಡಿದ ವಿಚಾರದ ಮೇಲೆ ಸ್ವಾಗತಾರ್ಹವಾದ ಬೆಳಕು ಚೆಲ್ಲುತ್ತದೆ.[೯೨]

ಅಮರನಾಯಕರನ್ನು ಅವರು ಪಡೆದ ಭೂಭಾಗದ ವಿಸ್ತಾರದ ಮೇಲೆ ಮೂರು ವರ್ಗಗಳಾಗಿ ವಿಂಗಡಿಸಲಾಗಿದೆ. ನ್ಯೂನಿಜ್‌ನ ಹೇಳುತ್ತಾನೆ "ಎಲ್ಲಾ ಭೂಮಿಯು ರಾಜನಿಗೆ ಸೇರಿದೆ, ಅವನಿಂದ ಪಡೆದು ಸೇನಾನಾಯಕರು ಅದನ್ನು ಆಳುತ್ತಾರೆ."[೯೮] ಬಿಸ್ನಾಗರ್ ರಾಜ್ಯವು ಇನ್ನೂರಕ್ಕೂ ಹೆಚ್ಚು ಜನ ನಾಯಕರಲ್ಲಿ ವಿಭಾಗಗೊಂಡಿದೆ. ಅವರೆಲ್ಲರೂ ವಿಧರ್ಮೀಯರು, ಅವರು ಹೊಂದಿರು ಭೂಪ್ರದೇಶ ಮತ್ತು ಅವರಿಗಿರುವ ವರಮಾನಗಳ ಆಧಾರದಿಂದ ರಾಜನು ಅವರು ಕಾಪಾಡಲೇಬೇಕಾದ ಸೈನ್ಯದ ಪ್ರಮಾಣವನ್ನು, ಪ್ರತಿವರ್ಷ ತನಗೆ ಕೊಡಬೇಕಾದ ವರಮಾನವನ್ನು ನಿಗದಿ ಮಾಡುತ್ತಾನೆ. ಅದನ್ನು ಅವರು ಸೆಪ್ಟೆಂಬರ್ ತಿಂಗಳ ಮೊದಲ ಒಂಬತ್ತು ದಿನದೊಳಗಾಗಿ ಪಾವತಿ ಮಾಡಬೇಕಾಗುತ್ತದೆ.[೯೯] ಅಮರನಾಯಕರ ಮೊದಲನೆಯ ವರ್ಗವನ್ನು ಕುರಿತು ಅವನು ಹೇಳುವುದು "ಈ ರಾಜ್ಯದ ನಾಯಕರು ಡೋಲಿಗಳನ್ನು, ಪಲ್ಲಕ್ಕಿಗಳನ್ನು ಉಪಯೋಗಿಸುತ್ತಾರೆ. ಆದರೆ ಜನರು ಉತ್ತಮ ಅಶ್ವಾರೋಹಿಗಳಾಗಿದ್ದ ಹೊರತು ಡೋಲಿಗಳನ್ನು ಬಳಸುವುದಕ್ಕೆ ಅವಕಾಶವಿರುವುದಿಲ್ಲ.[೧೦೦] ನಾಯಕರು ಮತ್ತು ಗಣ್ಯ ಜನರು ರಾತ್ರಿ ವೇಳೆ ಎಣ್ಣೆಯಿಂದ ಉರಿಯುವ ಪಂಜುಗಳನ್ನು ಉಪಯೋಗಿಸುತ್ತಾರೆ. ಅವರವರ ಸ್ಥಾನಮಾನಕ್ಕೆ ತಕ್ಕಂತೆ ೪ ರಿಂದ ೧೨ ಪಂಜುಗಳು ಉರಿಯುತ್ತವೆ. ಅತ್ಯಂತ ಉನ್ನತ ಸ್ಥಾನದಲ್ಲಿರುವವನಿಗೆ ಹೆಚ್ಚೆಂದರೆ ೧೨ ಪಂಜುಗಳು ಇರುತ್ತವೆ.[೧೦೧]

ಪ್ರಥಮ ಶ್ರೇಣಿಗೆ ಸೇರಿದವರು ಚಕ್ರವರ್ತಿಗೆ ತಿಳಿಸದೇ ಭೂಮಿಯನ್ನು ಹಳ್ಳಿಗಳನ್ನು ಪರಭಾರೆ ಮಾಡುವ ಹಕ್ಕನ್ನು ಪಡೆದಿದ್ದರು. ಈ ವರ್ಗದ ಸೇನಾನಾಯಕರು ಸರದಿಯಲ್ಲಿ ತಮ್ಮ ಅಧೀನರಾದ ನಾಯಕರನ್ನು ನಿರ್ಮಿಸಿಕೊಳ್ಳಬಹುದಾಗಿತ್ತು. ಕೋಟೆಗಳನ್ನು ಕಟ್ಟಲು, ತಮ್ಮ ಸ್ವಂತದ ಸೇನೆಯನ್ನು ಇಟ್ಟುಕೊಳ್ಳಲು ಅವರಿಗೆ ಅವಕಾಶವಿದ್ದಿತು. ಕೆಳದಿಯ ನಾಯಕರು ಈ ಹಕ್ಕುಗಳನ್ನು ಅನುಭವಿಸುತ್ತಿದ್ದರು.[೧೦೨]

ಎರಡನೆಯ ವರ್ಗದ ನಾಯಕರಿಗೆ ಈ ಅಧಿಕಾರಗಳಲ್ಲಿ ಕೆಲವು ಇರುತ್ತಿರಲಿಲ್ಲ. ತಮ್ಮ ಪ್ರದೇಶದ ಯಾವುದೇ ಭೂಮಿಯನ್ನು ಚಕ್ರವರ್ತಿಯ ಹೆಸರನ್ನು ಉಲ್ಲೇಖಿಸದೆ ಪರಭಾರೆ ಮಾಡಲು ಅವರಿಗೆ ಅಧಿಕಾರವಿರಲಿಲ್ಲ. ಈ ವರ್ಗಕ್ಕೆ ಸೇರಿದ ಅಮರನಾಯಕರು ಕೆಲವು ಹಳ್ಳಿಗಳನ್ನು ಮಾತ್ರ ತಮ್ಮ ಹತೋಟಿಯಲ್ಲಿಕೊಂಡಿದ್ದರು. ಪರಿಣಾಮವಾಗಿ ಅವರ ಬಲವೂ ಸಂಪನ್ಮೂಲವೂ ಸೀಮಿತವಾಗಿದ್ದವು. ಅವರು ಒದಗಿಸಬೇಕಾಗಿದ್ದ ಸೈನ್ಯವೂ ಚಿಕ್ಕ ತುಕಡಿ ಎಲ್ಲಕ್ಕಿಂತ ಮಿಗಿಲಾಗಿ ಅವರು ತಮ್ಮ ಅಧೀನರಿಗೋ ಅಥವಾ ದೇವಾಲಯಗಳಿಗೋ ಭೂಮಿಯನ್ನು ದಾನ ಮಾಡುವಾಗ ತಪ್ಪದೆ ಚಕ್ರವರ್ತಿಯನ್ನು ಹೆಸರಿಸಲೇಬೇಕಾಗಿತ್ತು. ಸಾಳುವ ನರಸಿಂಹನ ಕಾಲದಲ್ಲಿ ವರದರಾಜದೇವನು ಚನ್ನಪಟ್ಟಣ ಪ್ರದೇಶದ ರಾಜನಾಗಿದ್ದನು. ಅವನು ಚಕ್ಕಲೂರು ಗ್ರಾಮವನ್ನು ಎಲ್ಲಾ ತೆರಿಗೆಗಳು ಹಕ್ಕುಗಳ ಸಮೇತವಾಗಿ ಯಾವುದೇ ಮಧ್ಯ ಪ್ರವೇಶದಿಂದ ಮುಕ್ತವಾಗಿ "ದೊಡ್ಡಯ್ಯ ಎಂಬುವವನಿಗೆ

ಕೊಟ್ಟನು ಹಾಗೆ ಕೊಡುವಾಗ ವಿಜಯನಗರದ ತನ್ನ ಪರಮ ಪ್ರಭುವಿಗೆ ಸಕಲ ಸಂತೋಷಗಳನ್ನು ಧರ್ಮಗಳನ್ನು ಪ್ರಾರ್ಥಿಸಿದನು.[೧೦೩] ಕೃಷ್ಣದೇವರಾಯನ ಕಾಲದಲ್ಲಿ ಕೆಂಚಸೋಮಣ್ಣ ನಾಯಕನು ಚನ್ನಪಟ್ಟಣ ಸೀಮೆಯ ಅಮರನಾಯಕನಾಗಿದ್ದನು. ಅವನು ಭಗವಾನ್ ಜನಾರ್ಧನ ನೈವೇದ್ಯಕ್ಕಾಗಿ ವಾಣಿಯಗೆರೆಯನ್ನು ದಾನ ಮಾಡಿದನು. ಆ ಶಾಸನದಲ್ಲಿ ಅವನು ತನ್ನ ಪ್ರಭುವಾದ ಚಕ್ರವರ್ತಿಗೆ ಕೂಡಲೂರು ಕೆರೆಯನ್ನು ದುರಸ್ತಿಗೊಳಿಸಿದುದ್ದಕ್ಕಾಗಿ ಕೃತಜ್ಞತೆಯನ್ನು, ಸಕಲ ಅಭ್ಯುದಯಗಳನ್ನು ಧರ್ಮವನ್ನು ಕೋರಿ ಪ್ರಾರ್ಥನೆ ಸಲ್ಲಿಸಿದನು.[೧೦೪]

ಮೂರನೆಯ ವರ್ಗದ ಅಮರನಾಯಕರು ಒಂದೆರಡು ಸ್ಥಳಗಳನ್ನೋ ಒಂದು ಹಳ್ಳಿಯನ್ನೋ ಪಡೆದಿದ್ದರು. ಇವರು ಚಕ್ರವರ್ತಿಯ ನೇರ ನಿಯಂತ್ರಣದಲ್ಲಿ ಇರುತ್ತಿದ್ದರು. ಅಥವಾ ಮೊದಲನೆಯ ವರ್ಗದ ಅಮರನಾಯಕರ ಅಧೀನದಲ್ಲಿರುತ್ತಿದ್ದರು. ಅವರು ಯಾವಾಗ ಭೂಮಿಯನ್ನು ದಾನ ಮಾಡಬೇಕಾದರೂ ಚಕ್ರವರ್ತಿಯ ಪೂರ್ವಾನುಮತಿಯನ್ನು ಪಡೆಯಬೇಕಾಗಿತ್ತು.

ಅಚ್ಯುತರಾಯನ ಕಾಲದಲ್ಲಿ ಹೊಳಲ್ಕೆರೆ ಪ್ರದೇಶದಲ್ಲಿ ಹಡಪದ ಭೈಯಪೇಂದ್ರ ನಾಯಕ ಒಬ್ಬ ಅಮರನಾಯಕನಾಗಿದ್ದನು. ಅವನು ವಿದ್ವಾಂಸರಾಗಿದ್ದ ಬ್ರಾಹ್ಮಣರಿಗೆ ಸ್ವಲ್ಪ ಭೂಮಿಯನ್ನು ದಾನವಾಗಿ ಕೊಡಬೇಕೆಂದು, ಅಚ್ಯುತರಾಯನ ಅನುಮತಿಯನ್ನು ಕೋರಿದನು. ಅವನು ಅನುಮತಿ ನೀಡಿದನು. ಈ ವರ್ಗದ ಅಮರನಾಯಕರು ಯಾವುದೇ ಭೂದಾನ ಮಾಡುವ ಮೊದಲು ಚಕ್ರವರ್ತಿಯ ಅನುಮತಿ ಪಡೆಯಬೇಕಾಗಿದ್ದನ್ನು ಇದು ತೋರಿಸುತ್ತದೆ.[೧೦೫]

ವಿಜಯನಗರದ ಅರಸರು ಬೃಹತ್ ಸಾಮ್ರಾಜ್ಯವನ್ನು ಕಟ್ಟಿ ಅಮರನಾಯಕರಿಗೆ ಸೈನ್ಯ ಸೇವೆಗಾಗಿ ಭೂಪ್ರದೇಶಗಳನ್ನು ಕೊಡತೊಡಗಿದರು. ಕಾಲಕ್ರಮದಲ್ಲಿ ಅವು ಅನುವಂಶಿಕವಾಗಿ, ಈ ಅಮರನಾಯಕರು ಸಾಮ್ರಾಜ್ಯದ ವ್ಯವಹಾರಗಳಲ್ಲಿ ಮುಖ್ಯವಾದ ಪಾತ್ರವನ್ನು ವಹಿಸತೊಡಗಿದರು. ಅಲ್ಲದೆ ತಮ್ಮ ಅಧಿಕಾರ ವ್ಯಾಪ್ತಿಯ ಪ್ರದೇಶದಲ್ಲಿ ಕಾನೂನು ಸುವ್ಯವಸ್ಥೆಯ ಪಾಲನೆಯೂ ಅವರ ಹೊಣೆಗಾರಿಕೆಯಾಯಿತು. ಅದರಿಂದ ಚಕ್ರವರ್ತಿಗೆ ಅಗಾಧವಾದ ಸಾಮ್ರಾಜ್ಯವನ್ನು ಅಂಕೆಯಲ್ಲಿ ಇಟ್ಟುಕೊಳ್ಳಲು ಸಹಾಯವಾಯಿತು. ಜೊತೆಗೆ ಯುದ್ಧಗಳಲ್ಲಿ ಮತ್ತು ಗೆದ್ದ ಪ್ರದೇಶಗಳ ಸಂಘಟನೆಯಲ್ಲಿ ಈ ನಾಯಕರು ಚಕ್ರವರ್ತಿಗೆ ಸಹಾಯ ಮಾಡುತ್ತಿದ್ದರು. ಇವರು ಸಾಮ್ರಾಜ್ಯದ ಸಂಘಟನೆಯಲ್ಲಿ ಚಕ್ರವರ್ತಿಯ ಸೈನ್ಯವನ್ನು ಸೇರಿಸಿಕೊಳ್ಳುತ್ತಿದ್ದರು. ಈ ನಾಯಕರು ತಮ್ಮ ಭಾಧ್ಯತೆಗಳನ್ನು ಸರಿಯಾಗಿ ನೆರವೇರಿಸುತ್ತಿರುವವರೆಗೆ ರಾಜನು ಅವರ ವ್ಯವಹಾರಗಳಲ್ಲಿ ಮಧ್ಯ ಪ್ರವೇಶ ಮಾಡುತ್ತಿರಲಿಲ್ಲ. ಆದರೆ ಕರ್ತವ್ಯ ನಿರ್ವಹಣೆಯಲ್ಲಿ ಅವರು ಲೋಪ ತೋರಿದರೆ ಅಥವಾ ಅವಿಧೇಯವಾಗಿ ವರ್ತಿಸಿದರೆ ಅವರನ್ನು ಶಿಕ್ಷಿಸಲು ರಾಜನು ಸ್ವಲ್ಪವೂ ಹಿಂಜರಿಯುತ್ತಿರಲಿಲ್ಲ.

ಕ್ರಿ.ಶ. ೧೪೯೯ರ ಸುಮಾರಿಗೆ ಮಲೆನಾಡಿನ ಸಣ್ಣಹಳ್ಳಿ ಕೆಳದಿಯಲ್ಲಿದ್ದ ರೈತರಾದ ಚೌಡಪ್ಪ ಭದ್ರಪ್ಪ ಸಹೋದರರ ಧೈರ್ಯ, ಸಾಹಸದ ವಿಷಯ ವಿಜಯನಗರದ ಅರಸರ ಗಮನಕ್ಕೆ ಬಂದು, ಅವರಿಗೆ ಭೂಮಿಯಲ್ಲಿ ಸಿಕ್ಕ ಗುಪ್ತಧನದ ಬಗ್ಗೆ ವಿಚಾರಿಸಲು ತಮ್ಮ ಆಸ್ಥಾನಕ್ಕೆ ಕರೆಸಿಕೊಂಡು ವಿಚಾರಣೆ ನಡೆಸಿದರು. ಈ ಸಹೋದರರ ಧ್ಯೇಯ, ಉದ್ದೇಶ, ಧಾರ್ಮಿಕ ನಡುವಳಿಕೆಗೆ ಮಾರುಹೋದ ವಿಜಯನಗರದ ಅರಸನಾದ ಕೃಷ್ಣದೇವರಾಯನು, ತನ್ನ ರಾಜ್ಯಕ್ಕೆ ತುರುಕರು, ಶಬರರು ದೊಡ್ಡ ವೈರಿಗಳಾಗಿದ್ದಾರೆ. ಹಲವು ತುಂಡು ಪಾಳೆಯಗಾರರು ವಿರೋಧಿಗಳಾಗಿ ತೊಂದರೆ ಕೊಡುತ್ತಿದ್ದಾರೆ. ಆದ ಕಾರಣ ಸಹೋದರರು ತನ್ನ ಶತೃಗಳನ್ನು ನಿಗ್ರಹಿಸಿ ಸಾಮ್ರಾಜ್ಯಕ್ಕೆ ಸಹಾಯಕರಾಗಬೇಕೆಂದು ಒಪ್ಪಿಸಿ, ಅವರಿಗೆ ಕುದುರೆ, ರಥ, ಛತ್ರಿ, ಚಾಮರ, ಉಡುಗೊರೆ ಆಭರಣ ಕೊಟ್ಟು ನಿಯಮಿಸಿದನು. ಸೋದರರು ಅತ್ಯಂತ ಯಶಸ್ವಿಯಾಗಿ ಅದನ್ನು ನೆರವೇರಿಸಿದರು. ಇದರಿಂದ ಸಂತೋಷಗೊಂಡ ಚಕ್ರವರ್ತಿಯು ವೀಳೆಯನ್ನಿತ್ತು ಅವರಿಗೆ ಕೆಳದಿ, ಇಕ್ಕೇರಿ, ಪೆರ್ಬಯಲು, ಯಲಗಳಲೆ, ಮೋದೂರು, ಕಲಿಸೆ, ಮತ್ತು ಲಾಟವಾಡಿ ಈ ಎಂಟು ಮಾಗಾಣಿಗಳನ್ನು ನೀಡಿ ಗೌರವಿಸಿದನು. ಅವರಿಗೆ ನಾಯಕ ಎಂಬ ಬಿರುದನ್ನು ಕೊಟ್ಟನು. ಅಲ್ಲಿಂದ ಮುಂದಕ್ಕೆ ಚೌಡಪ್ಪನನ್ನು ಕೆಳದಿ ಸಂಸ್ಥಾನದ ಮನ್ನೆಯ ಚೌಡಪ್ಪನಾಯಕ ಎಂದು ಕರೆದರು. ಅವನು ಕೆಳದಿಯಲ್ಲಿ ಸಿಂಹಾಸನವನ್ನೇರಿದುದಲ್ಲದೆ ಒಂದು ಅರಮನೆಯನ್ನು ಕಟ್ಟಿಸಿಕೊಂಡನು.[೧೦೬] ಪ್ರಾರಂಭದಲ್ಲಿ ಉಮ್ಮತ್ತೂರು ಪಾಳೆಯ ಪಟ್ಟು ವಿಜಯನಗರದೊಡನೆ ಮಧುರವಾದ ರಾಜಕೀಯ ಸಂಬಂಧವನ್ನೇ ಹೊಂದಿತ್ತು. ಕ್ರಿ.ಶ. ೧೪೬೬–೯೭ ರಲ್ಲಿ ಮಹಾಮಂಡಲೇಶ್ವರ ಮಲ್ಲಪ್ಪ ಒಡೆಯರ್‌ನ ಮಗನೂ ಹಾಗೂ ಇಮ್ಮಡಿ ಹರಿಹರನ ಸಹೋದರನಾದ ನಾರಾಯಣ ದೇವನು ಉಮ್ಮತ್ತೂರು ಸಂಸ್ಥಾನದಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಂಗತಿಯ ಶಾಸನವೊಂದರಿಂದ ತಿಳಿದುಬರುತ್ತದೆ.[೧೦೭] ರಣಭೈರೇಗೌಡ ಎಂಬುವನು ಒಬ್ಬ ಕೃಷಿಕ ಹಾಗೂ ಯಲಹಂಕ ಅರಸರ ವಂಶದ ಸ್ಥಾಪಕ.[೧೦೮] ಅನಂತರದಲ್ಲಿ ಈ ವಂಶದ ೧ನೇ ಕೆಂಪೇಗೌಡನು ಅಚ್ಯುತರಾಯನಿಂದ ಅನುಮತಿಯನ್ನು ಪಡೆದು ೧೫೩೭ರಲ್ಲಿ ಒಂದು ಮಣ್ಣಿನ ಕೋಟೆಯನ್ನು ನಿರ್ಮಿಸಿದನು.[೧೦೯] ಇವನ ಉತ್ಸಾಹ, ದಕ್ಷತೆ, ನಿಷ್ಠೆ, ಕ್ರಿಯಾಶೀಲತೆಗಳಿಗೆ ಫಲವಾಗಿ ಅಚ್ಯುತರಾಯನು ಅವನಿಗೆ ಹಳೆಯ ಬಂಗಳೂರು, ವೋತೂರ್ರು, ಯಲಹಂಕ, ಬೇವೂರು, ಹಲಸೂರು, ತಂಚೇರಿ, ತಲೆಗಟ್ಟಪುರ, ದಿಗರಿ ಕುಂಬಳಗೋಡು, ಕನಹಳ್ಳಿ, ಬಾಣಾವರ ಮತ್ತು ಹೆಸರಘಟ್ಟ ಈ ಸ್ಥಳಗಳನ್ನು ಕೊಟ್ಟನು.[೧೧೦]

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಂತಹ ಸಂಸ್ಥಾನಗಳಲ್ಲಿ ಚಿತ್ರದುರ್ಗ ತುಂಬಾ ಪ್ರಮುಖವಾದುದು. ವಿಜಯನಗರ ಸಾಮಂತ ಒಕ್ಕೂಟ ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಭಾಗವಾಗಿದ್ದ ಈ ಸಂಸ್ಥಾನದ ನಾಯಕತ್ವಕ್ಕೆ ಬಲವಾದ ತಳಹದಿಯನ್ನು ಹಾಕಿದವನು ತಿಮ್ಮಣ್ಣನಾಯಕ.

ಎಂ.ಎಸ್.ಪುಟ್ಟಣ್ಣನವರು "ಸಬಗಡಿ ಓಬಣ್ಣನಾಯಕ, ಜಡವಿನಾಯಕ ಮತ್ತು ಬುಳ್ಳನಾಯಕ ಇವರು ವಾಲ್ಮೀಕಿ ಗೋತ್ರಕ್ಕೆ ಸೇರಿದವರು. ದೆಹಲಿಯಲ್ಲಿ ಸೇವಕರಾಗಿದ್ದವರು ಉತ್ತರದ ಜಡಕಲ್ ದುರ್ಗದಿಂದ ಬಂದವರು ತಮ್ಮೊಂದಿಗೆ ಕುಲದೈವ ಅಹೋಬಲ ನರಸಿಂಹ ಸ್ವಾಮಿಯನ್ನು, ಇತರ ವಸ್ತುಗಳನ್ನು ತೆಗೆದುಕೊಂಡು ದಕ್ಷಿಣಕ್ಕೆ ಬಂದು ನೆಲಸಿದರು. ದಾರಿಯಲ್ಲಿ ವಿಜಯನಗರದಲ್ಲಿ ಸ್ವಲ್ಪ ಕಾಲ ತಂಗಿದ್ದು ಹಂಪಿಯಲ್ಲಿ ಭಗವಾನ್ ವಿರೂಪಾಕ್ಷನ ದರ್ಶನ ಮಾಡಿದರು.[೧೧೧] ಈ ಸೋದರರನ್ನು ವಿಜಯನಗರದ ಅರಸನು ಕರೆಸಿರುವುದರಿಂದ ಅವರು ರಾಜಧಾನಿಗೆ ಬಂದಿರಬೇಕು. ಅವರ ನಡವಳಿಕೆ ಮೆಚ್ಚಿ, ಅವರು ತನಗೆ ನಿಷ್ಠರಾಗಿ ಉಳಿಯುತ್ತಾರೆ. ರಾಜ್ಯದ ಪ್ರತಿನಿಧಿಗಳು, ವಿಧೇಯ ಸೇವಕರೂ ಆಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ ಎಂದು ಭಾವಿಸಿ ಅವರನ್ನು ನಾಯಕರನ್ನಾಗಿ ನೇಮಿಸಿ ಹೊಳಲ್ಕೆರೆಗೆ ಕಳುಹಿಸಿರಬೇಕು.

ಚಿತ್ರದುರ್ಗದ ನಾಯಕತ್ವಕ್ಕೆ ವಾಸ್ತವಾಗಿ ಬಲವಾದ ತಳಹದಿಯನ್ನು ಹಾಕಿದವರು ತಿಮ್ಮಣ್ಣನಾಯಕ, ಕೃಷ್ಣದೇವರಾಯನಿಂದ ಉಂಬಳಿಯಾಗಿ ಹೊಳಲ್ಕೆರೆಯನ್ನು ಪಡೆದು ತನ್ನ ರಾಜಕೀಯ ಜೀವನವನ್ನು ಅಮರನಾಯಕನಾಗಿ ಪ್ರಾರಂಭಿಸಿದನು.[೧೧೨]

ಹಾಗಲವಾಡಿ ಪಾಳೆಯಗಾರರು ವಿಜಯನಗರದ ಕಾಲದಲ್ಲಿ ಮತ್ತು ವಿಜಯನಗರಾನಂತರದ ಅವಧಿಯಲ್ಲಿ ಸ್ವತಂತ್ರವಾದ ಸಾಮಂತ ರಾಜ್ಯವನ್ನು ಕಟ್ಟಿ ವಿಶಾಲವಾದ ಭೂಪ್ರದೇಶವನ್ನು ಆಳಿ ಕರ್ನಾಟಕದ ಸಾಂಸ್ಕೃತಿಕ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಯನ್ನು ನೀಡಿರುವರು. ಹಾಗಲವಾಡಿ ರಾಜ್ಯವನ್ನು ಸ್ಥಾಪಿಸಿದ ಮೊದಲನೆಯ ಪಾಳೆಯಗಾರ ಎರಿಮಡಣಾಯಕ. ಇವನು ತುಮ್ಮಲ ಎಂಬ ಸ್ಥಳದಿಂದ ಬಂದು ವನವಾಸದುರ್ಗ ಎಂಬ ಸ್ಥಳದಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದನು.[೧೧೩] ಹಾಗಲವಾಡಿಯ ಪೂರ್ವಕ್ಕೆ ಮದ್ದಗಿರಿ ರಾಜ್ಯ ಮತ್ತು ಕೆಂಪೇಗೌಡರ ರಾಜ್ಯಗಳಿದ್ದವು. ನೈರುತ್ಯಕ್ಕೆ ಚನ್ನಪಟ್ಟಣದ ಜಗದೇವರಾಯನ ರಾಜ್ಯವಿದ್ದಿತು, ಉತ್ತರಕ್ಕೆ ಸೀರ್ಯ ಮತ್ತು ಚಿತ್ರದುರ್ಗಗಳಿದ್ದು. ಇವುಗಳ ನಡುವೆ ಇದ್ದ ಪ್ರದೇಶವೇ ಹಾಗಲವಾಡಿ ರಾಜ್ಯವಾಗಿತ್ತು.[೧೧೪] ಯೆರಿಮಾದ ನಾಯಕನಿಗೆ (ಕ್ರಿ.ಶ. ೧೪೭೮-೧೫೦೮) ವಿಜಯನಗರದ ಅರಸ ಕೃಷ್ಣದೇವರಾಯನು ಚಿಕ್ಕನಾಯಕನಹಳ್ಳಿ ಪ್ರದೇಶವನ್ನು ನೀಡಿ ಅವನನ್ನು ಅಮರನಾಯಕನನ್ನಾಗಿ ನೇಮಿಸಿದ್ದನು. ಅವನ ಮಗ ಸಳನಾಯಕನು (೧೫೦೮-೪೪) ತುರುವೇಕೆರೆ, ನೊಣವಿನಕೆರೆ, ಸೆಟ್ಟಿಕೆರೆ, ಕಂದಿಕೆರೆ ಮೊದಲಾದ ಸ್ಥಳಗಳನ್ನು ಕೂಡಿಸಿದನು.[೧೧೫]

ನಿಡಗಲ್ಲು ನಾಯಕರ ಮೂಲಪುರುಷ ತಿಪ್ಪನಾಯಕನೆಂದೂ ಅವನು ಹರತಿ ಸಾರವಾಡ ಪ್ರಾಂತ್ಯಕ್ಕೆ ಸೇರಿದವನೆಂದೂ ದಾಖಲೆಗಳು ಹೇಳುತ್ತವೆ.[೧೧೬] ತಿಪ್ಪನಾಯಕನು ಸಾಹಸ ಪ್ರವೃತ್ತಿಯವನಾಗಿದ್ದು, ಕರ್ನಾಟಕದ ದಕ್ಷಿಣ ಭಾಗದಲ್ಲಿ ಸೂಕ್ತ ಪ್ರದೇಶವನ್ನು ಹುಡುಕುತ್ತಾ ವಲಸೆ ಬರುವ ಸಂದರ್ಭದಲ್ಲಿ

ವಿಜಯನಗರಕ್ಕೆ ಭೇಟಿ ನೀಡಿದನು. ಈ ಸಮಯದಲ್ಲಿ ಮಲ್ಲಿಕ್ ಎನ್ನುವ ಪೈಲ್ವಾನನು ವಿಜಯನಗರದ ಪೈಲ್ವಾನರನ್ನು ಕುರಿತು ಅವಹೇಳನಕಾರಿಯಾಗಿ ಮಾತನಾಡಿದಾಗ ತಿಪ್ಪನಾಯಕನು ದೊರೆಗಳ ಅನುಮತಿ ಪಡೆದು ತನ್ನ ಕೈಯಲ್ಲಿದ್ದ ಕತ್ತಿಯ ಮೊನೆಗೆ ಕಸ್ತೂರಿ ಹಚ್ಚಿಕೊಂಡು ಚಮತ್ಕೃತಿಯಿಂದ ಅವನ ತಲೆಯ ಮೇಲೆ ಹೊಡೆದು ಕೊಂದನು.[೧೧೭] ಇದರಿಂದ ಸಂತೋಷಗೊಂಡ ಚಕ್ರವರ್ತಿಯು ಅವನಿಗೆ ಭೂಚಕ್ರದ ಕೊಡೆ, ನೀಲಿಕೊಡೆ, ಪಂಚವರ್ಣದ ವುಡಾಸು, ಧವಳ, ಶಂಕ, ಚಕ್ರ, ನೀಡಿ ಕಸ್ತೂರಿ ಕೋಲಾಹಲ, ಕಟಾರಿ ಚೆಲ್ವರ ಗಂಡ, ಬಹದರ ಮಲಕ ಸಪ್ತಾಂಗ ಹರಣ ಎಂಬ ಬಿರುದನ್ನು ದಯಪಾಲಿಸಿದರು.[೧೧೮]

ಸುಮಾರು ೧೫ನೆಯ ಶತಮಾನದ ಪೂರ್ವಾರ್ಧದಲ್ಲಿ ವಿಜಯನಗರದ ಅರಸು ಇಮ್ಮಡಿ ದೇವರಾಯನು ತನ್ನ ಬಳಿ ಇದ್ದ ದಕ್ಷನೂ, ಶೂರನೂ, ನಿಷ್ಠಾವಂತನೂ ಆದ ಗೊಲ್ಲ ಜನಾಂಗದ ಕಾಚನಾಯಕ ಎಂಬುವನಿಗೆ ತಮ್ಮ ಸಾಮ್ರಾಜ್ಯಕ್ಕೆ ಸೇರಿದ ಸೂಜಿಗಲ್ಲೆಂಬ ದುರ್ಗವನ್ನು ಬಳುವಳಿಯಾಗಿ ನೀಡಿದನು. ಅಲ್ಲದೆ ಬಲ್ಲೆಹ, ಪದಕ, ಚೌಕುಳಿ, ಬೊಲ್ಲನೆಂಬ ಕುದುರೆಯನ್ನು ನೀಡಿದನು. ಈ ಘಟನೆಯ ಬಹುಶಃ ಕ್ರಿ.ಶ. ೧೪೩೦-೩೫ರ ಸಮಯದಲ್ಲಿ ನಡೆದಿರುವಂತಿದೆ.

ಗುಮ್ಮನಾಯಕನಹಳ್ಳಿ ಪಾಳೆಯಗಾರರ ಮೂಲಪುರುಷ ಖಾದ್ರಿಪತಿನಾಯಕ. ಈ ಪಾಳೆಯಗಾರರ ವಂಶದವನಾದ ಶಿಂಗಿರಪ್ಪನಾಯಕ ವಿಜಯನಗರದ ಚಕ್ರವರ್ತಿಯಾದ ದೇವರಾಯನ ಸಾಮಂತಿಕೆಯನ್ನು ಪಡೆದುಕೊಂಡ ಅಂದಿನಿಂದ ಗುಮ್ಮನಾಯಕನ ಪಾಳೆಯಗಾರಿಕೆಯು ವಿಜಯನಗರಕ್ಕೆ ಕಪ್ಪ ಕಾಣಿಕೆಯನ್ನು ಕೊಡುವ ಸಂಪ್ರದಾಯವನ್ನು ಪ್ರಾರಂಭಿಸಿತೆಂದು ತಿಳಿದುಬರುತ್ತದೆ.[೧೧೯]

ಗುಜ್ಜಲವಂಶದ ಬೇಡ ಪಾಳೆಯಗಾರರು ಕನಕಗಿರಿಯಲ್ಲಿ ಆಳ್ವಿಕೆ ನಡೆಸಿರುವರು. ಈ ವಂಶದ ಪರಸಪ್ಪ ಉಡಿಚನಾಯಕನು ಕ್ರಿ.ಶ. ೧೪೩೬ರಲ್ಲಿ ಈ ಸಂಸ್ಥಾನವನ್ನು ಸ್ಥಾಪಿಸಿದನು. ವಿಜಯನಗರದ ಪ್ರೌಢದೇವರಾಯನು ಈತನಿಗೆ ೧೨ ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು. ಗುಡೇಕೋಟೆ ಪಾಳೆಯಗಾರರ ಮೂಲಪುರುಷ ಗಡಿಯಾಂಕಭೀಮ, ಕುಮಾರರಾಮನ ಕೈಪಿಯತ್ತಿನ ಪ್ರಕಾರ ಇವರು ಮೂಲತಃ ಕಂಪಲಿಯ ಕುಮಾರರಾಮನ ವಂಶಜರು. ಈ ವಂಶದ ಬೊಮ್ಮಂತರಾಜನಿಗೆ ಕೃಷ್ಣದೇವರಾಯನು ೭ ಸೀಮೆಗಳನ್ನು ದಯಪಾಲಿಸಿದನು. ಜರಿಮಲೆಯವರು ಆಂಧ್ರದ ಕದ್ರಿ ಮೂಲದವರೆಂದು ಕರೆದುಕೊಂಡವರು.[೧೨೦] ಈ ಪಾಳೆಯ ಪಟ್ಟಿನ ಸ್ಥಾಪಕನಾದ ಪಾಪಣ್ಣನಾಯಕನು ವೀರ ನರಸಿಂಹನ ಸೇವಕನಾಗಿದ್ದನು. ಅರಸನ ಪ್ರೀತಿಗೆ ಪಾತ್ರನಾಗಿದ್ದರಿಂದ ವಡ್ಡು, ದರೋಜಿ ಗ್ರಾಮಗಳು ಬಳುವಳಿಯಾಗಿ ಬಂದವು. ಈತನ ಮಗನಾದ ಪೆನ್ನಪ್ಪನಾಯಕನಿಗೆ ಅಚ್ಯುತದೇವರಾಯ ಜಹಗೀರು ನೀಡಿ ೫೦೦ ಅಶ್ವದಳ, ೩೦೦೦ ಕಾಲ್ದಳ ಪಡೆ ಹೊಂದಲು ಅನುಮತಿ ನೀಡಿದ್ದನು.

ಬಳ್ಳಾರಿ ಹಂಡೆ ಪಾಳೆಯಗಾರರ ಬಾಲದ ಹನುಮಪ್ಪನಾಯಕನು ವಿಜಯನಗರದ ಅಳಿಯ ರಾಮರಾಯನಿಗೆ ಮುಸ್ಲಿಂ ನವಾಬರ ವಿರುದ್ಧ ಸಹಾಯ ಮಾಡಿದ್ದರಿಂದ, ಅವನು ಧೈರ್ಯ ಸಾಹಸಾದಿಗಳನ್ನು ಮೆಚ್ಚಿ ರಾಮರಾಯನು ಅವನಿಗೆ ಪೂರ್ವ ಭಾಗದಲ್ಲಿ ನಂದ್ಯಾಲ, ಬುಕ್ಕರಾಯ ಸಮುದ್ರ, ಧರ್ಮಾವರ ಮತ್ತು ಕಣೇಕಲ್ಲು ಗ್ರಾಮಗಳನ್ನು ಮತ್ತು ಪಶ್ಚಿಮ ಭಾಗದಲ್ಲಿ ಬಳ್ಳಾರಿ, ಕುರುಗೋಡು, ಗ್ರಾಮಗಳನ್ನು ಉಂಬಳಿ ಹಾಕಿಕೊಟ್ಟನು.

ವಿಜಯನಗರದ ಅರಸರು ತಮ್ಮ ಸೇವಕರಿಗೆ, ಧೈರ್ಯ, ಸಾಹಸಗಳನ್ನು ತೋರಿ ಆಪತ್ತಿನ ಕಾಲದಲ್ಲಿ ನೆರವಾದವರಿಗೆ ಸಮಾಜದ ಗಣ್ಯರಿಗೆ ತಮ್ಮದೇ ಆದ ಅಧೀನ ಸಂಸ್ಥಾನಗಳನ್ನು ಹೊಂದಲು ಅವಕಾಶ ಮಾಡಿಕೊಟ್ಟರು. ಅಲ್ಲದೆ ಸಾಮ್ರಾಜ್ಯದ ಯುದ್ಧದ ಸಂದರ್ಭಗಳಲ್ಲಿ ನೆರವಾದವರಿಗೆ ಹೆಚ್ಚುವರಿಯಾಗಿ ಉಂಬಳಿಗಳನ್ನು, ಗ್ರಾಮಗಳನ್ನು ಬಳುವಳಿಯಾಗಿ ಕೊಟ್ಟಿರುವುದು ಶಾಸನಗಳಿಂದ ತಿಳಿದುಬರುತ್ತದೆ.

ಕೆಳದಿಯ ಸದಾಶಿವನಾಯಕನು ವಿಜಯನಗರದ ಚಕ್ರವರ್ತಿಗೆ ಪರಮ ನಿಷ್ಠನಾಗಿದ್ದನು. ಅವನು ಕಲ್ಯಾಣ ಮತ್ತು ಗುಲಬರ್ಗಾ ರಾಜರ ಮೇಲೆ ಯಶಸ್ವಿಯಾಗಿ ದಂಡಯಾತ್ರೆಯನ್ನು ನಿರ್ವಹಿಸಿದನು.[೧೧] ಅಹಮ್ಮದ್ ನಗರ,[೧೨] ಬಿಜಾಪುರದ ಮುಸ್ಲಿಂ ಪಡೆ,[೧೩] ಬಿದರೆಯ ಸುಲ್ತಾನ,[೧೪] ಬಿಜಾಪುರದ ಸುಲ್ತಾನ ಅವನ ಅಧೀನ ನಾಯಕರನ್ನು ಸೋಲಿಸಿದನು.[೧೫] ವಿಜಯನಗರ ಸಾಮ್ರಾಜ್ಯಕ್ಕೆ ಅವನು ಸಲ್ಲಿಸಿದ ಸೇವೆಯನ್ನು ಗಮನಿಸಿ ವಿಜಯನಗರದ ಅರಸನು ಚಂದ್ರಗುತ್ತಿ, ಬಾರಕೂರು, ಮಂಗಳೂರು, ಅರಗೆ, ತುಳು ರಾಜ್ಯಗಳನ್ನು ಅಮರ ಮಾಗಾಣಿಯಾಗಿ ಪಡೆದನು.[೧೬] ದೊಡ್ಡ ಸಂಕಣ್ಣನಾಯಕನು ರಾಮರಾಯನ ಆದೇಶದ ಮೇರೆಗೆ ಪೋರ್ಚುಗೀಸರ ಮೇಲೆ ದಂಡೆತ್ತಿ ಹೋಗಿ ಅವರನ್ನು ಸೋಲಿಸಿ ಅವರ ಗವರ್ನರ್‌ನ್ನು ಸೆರೆಹಿಡಿದನು. ಇದರಂದ ಸಂತೋಷಗೊಂಡ ರಾಮರಾಯನು ಮಹದೇವಪುರವನ್ನು ಬಳುವಳಿಯಾಗಿ ನೀಡಿದನು.[೧೭] ಕ್ರಿ.ಶ.೧೫೬೯ರಲ್ಲಿ ಸದಾಶಿವರಾಯನ ಮಹಾಮಂಡಲೇಶ್ವರನಾಗಿದ್ದ ತಿರುಮಲರಾಜನು ಹಿರಿಯೂರನ್ನು ಹದಿನಾಡು ಪ್ರಾಂತ್ಯದ ರಾಜ ರಾಮರಾಜನಾಯಕನಿಗೆ ಪಲ್ಲಕ್ಕಿ ಉಂಬಳಿಯಾಗಿ ನೀಡಿದನು. ಕುದುರೆ ಮತ್ತು ಮೂಕಹಳ್ಳಿ ಗ್ರಾಮಗಳನ್ನು ಉಂಬಳಿಯಾಗಿ ನೀಡಲಾಯಿತು.

ಸಾಮ್ರಾಜ್ಯಕ್ಕೆ ಸಲ್ಲಿಸಿದ ಸೇವೆಯನ್ನು ಗುರುತಿಸಿ ತುಳುವ ವೀರನರಸಿಂಹನು ಕ್ರಿ.ಶ. ೧೫೦೮-೦೯ ರಲ್ಲಿ ಜರಿಮಲೆ ಮನೆತನದ ಪೆನ್ನಪ್ಪ ನಾಯಕನಿಗೆ ಜರಿಮಲೆ, ಗುಡೆಕೋಟೆ ಭೂಪಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ಕೊಟ್ಟನು. ಶ್ರೀಕೃಷ್ಣದೇವರಾಯನು ಕುಮಾರರಾಮನ ಮೂಲ ವಂಶಸ್ಥರಾದ ಬೊಮ್ಮಂತ ರಾಜರಿಗೆ ಕುಡುತಿನಿ, ಸಂಡೂರು, ಜರಿಮಲೆ, ವಡ್ಡು, ದರೋಜಿ, ಗುಡೆಕೋಟೆ, ಬಾಣರಾವಿ, ಉಜಯಿನಿ ಈ ಏಳು ತಾಲ್ಲೂಕುಗಳನ್ನು ಜಾಗೀರು ಕೊಟ್ಟನು.[೧೮]

ವಿಜಯನಗರದ ಅರಸರು ಕೆಲವು ಪ್ರದೇಶಗಳಿಗೆ ಗಣ್ಯರನ್ನು, ಸೇವಕರನ್ನು, ರಾಜರನ್ನಾಗಿ ನಿಯಮಿಸಿದಂತೆ ಕೆಲವು ಸ್ಥಳಗಳಿಗೆ ಅಧಿಕಾರಿಗಳನ್ನು ತಮ್ಮ ಪ್ರತಿನಿಧಿಗಳಾಗಿ ನಿಯಮಿಸಿದ ವಿವರಗಳು ದೊರಕುತ್ತವೆ. ತಮಗೆ ನಿಷ್ಠಾವಂತರಾಗಿದ್ದ, ನಂಬಿಕಸ್ತ ಅಧಿಕಾರಿಗಳನ್ನು ವಿಜಯನಗರದ ಅರಸರು ಕೆಲವೊಂದು ರಾಜ್ಯಗಳಿಗೆ ಪ್ರತಿನಿಧಿಗಳನ್ನಾಗಿ ನಿಯಮಿಸುತ್ತಿದ್ದರು.

ತುಳುನಾಡು ಎಂದು ಕರೆಯುತ್ತಿದ್ದ ಕರ್ನಾಟಕದ ಕರಾವಳಿ ಪ್ರದೇಶವು ವಿಜಯನಗರ ಹತೋಟಿಯಲ್ಲಿನ ಬಹುಮುಖ್ಯ ಪ್ರದೇಶವಾಗಿತ್ತು. ಪಾಶ್ಚಿಮಾತ್ಯ ದೇಶಗಳೊಂದಿಗೆ ನಡೆಸುತ್ತಿದ್ದ ವಾಣಿಜ್ಯದ ಬಹುಭಾಗವು ಇಲ್ಲಿಂದಲೇ ನಡೆಯುತ್ತಿತ್ತು. ವಿಜಯನಗರದ ರಾಜರು ಈ ತುಳುನಾಡನ್ನು ಬಾರಕೂರು ರಾಜ್ಯ ಮತ್ತು ಮಂಗಳೂರು ರಾಜ್ಯ ಎಂದು ಎರಡು ಭಾಗವಾಗಿ ಮಾಡಿ ಈ ಘಟಕಗಳನ್ನು ನೋಡಿಕೊಳ್ಳಲು ಇಬ್ಬರು ಕೇಂದ್ರ ಪ್ರತಿನಿಧಿಗಳನ್ನು ನೇಮಿಸಿದ್ದರು. ರಾಜಪ್ರತಿನಿಧಿಗಳು ಘಟಕಗಳ ಮೇಲ್ವಿಚಾರಣೆಯ ಹೊಣೆಯನ್ನು ನೇರವಾಗಿ ವಿಜಯನಗರದ ಚಕ್ರವರ್ತಿಗಳಿಂದಲೇ ಪಡೆದಿರುತ್ತಿದ್ದರು. ಮಲಯ ದಂಡನಾಯಕ ಕ್ರಿ.ಶ. ೧೩೪೫-೬೫ರವರೆಗೆ ಹಾಗೂ ಶಂಕರದೇವ ಒಡೆಯ ಕ್ರಿ.ಶ. ೧೪೦೮-೨೦ರವರೆಗೆ ರಾಜಪ್ರತಿನಿಧಿಗಳಾಗಿದ್ದರು. ಸದಾಶಿವರಾಯನು ಕ್ರಿ.ಶ. ೧೫೫೧ರಲ್ಲಿ ಎಕದಲಖಾನನ್ನು ಬಾರಕೂರು ರಾಜ್ಯಕ್ಕೆ ಉಸ್ತುವರಿಯಾಗಿ ನೇಮಿಸಿದನು. ಶ್ರೀಕೃಷ್ಣದೇವರಾಯನು ರಾಮಯ್ಯ ಭಾಸ್ಕರನನ್ನು ಕೊಂಡವೀಡು ದುರ್ಗದ ಅಧಿಪತಿಯನ್ನಾಗಿ ನೇಮಿಸಿದ್ದನು. ರಾಜಪ್ರತಿನಿಧಿಗಳ ಕಾರ್ಯಾವಧಿಯು ಒಂದೋ, ಎರಡೋ ವರ್ಷಕ್ಕಿಂತ ಕಡಿಮೆಯಾಗಿರುತ್ತಿತ್ತು. ಹೆಚ್ಚು ಕಾಲ ಒಬ್ಬನನ್ನೇ ಬಿಟ್ಟರೆ ಅವನು ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳಬಹುದೆಂಬ ಭೀತಿಯಿಂದ ಚಕ್ರವರ್ತಿಯು ಯಾರೊಬ್ಬನನ್ನೂ ದೀರ್ಘಕಾಲ ಅಧಿಕಾರದಲ್ಲಿರಲು ಬಿಡುತ್ತಿರಲಿಲ್ಲವೆಂದು ಕಂಡುಬರುತ್ತದೆ.

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಉದಯಿಸಿದ ಸಾಮಂತ ಅರಸು ಮನೆತನಗಳು ಕೆಳವರ್ಗಕ್ಕೆ ಸೇರಿದವುಗಳಾಗಿವೆ. ವೈದಿಕ ಪರಂಪರೆಯಲ್ಲಿ ವರ್ಣ ವ್ಯವಸ್ಥೆಗೆ ಪ್ರಾಧಾನ್ಯತೆ ಇದ್ದಿತು. ಈ ವ್ಯವಸ್ಥೆಯಲ್ಲಿ ಬರುವ ಬ್ರಾಹ್ಮಣ, ಕ್ಷತ್ರೀಯ, ವೈಶ್ಯರಿಗೆ ಗೋತ್ರಗಳು ಉಂಟು, ಶೂದ್ರರಿಗೆ ಗೋತ್ರವಿಲ್ಲ. ಆದರೆ ವೇದೋತ್ತರ ಕಾಲದ ಭಾರತದ ಇತಿಹಾಸದಲ್ಲಿ ಶೂದ್ರ ಸಮೂಹಗಳಿಂದ ಸಾಹಸಿಗಳಾದವರು. ಕ್ಷತ್ರೀಯ ವರ್ಗಕ್ಕೆ ಬಡ್ತಿ ಪಡೆದುಕೊಂಡರು. ಅಂತಹ ಸಂದರ್ಭದಲ್ಲಿ ಅವರ ಅಧಿಕಾರಕ್ಕೆ ಮನ್ನಣೆ ಸೂಚಿಸುವ ಸಲುವಾಗಿಯೂ ಮತ್ತು ಸಾಮಾಜಿಕವಾಗಿಯೂ ಅವರ ಅಂತಸ್ಸು ಏರಿದ್ದರ ಸೂಚನೆಯಾಗಿಯೂ ಗೋತ್ರಗಳನ್ನು ಸೃಷ್ಟಿಸಲಾಯಿತು.

ಈ ಸಾಮಂತ ಅರಸು ಮನೆತನಗಳು ಮೂಲತಃ ಕೆಳವರ್ಗದ ವ್ಯಕ್ತಿಗಳಿಂದ ಸ್ಥಾಪನೆಗೊಂಡು, ಅವರ ಅಧಿಪತ್ಯದಲ್ಲೇ ಸಾಗಿದವು. ಕೆಲದಿನಗಳ ತರುವಾಯ ಮೇಲ್ವರ್ಗದ ಮಡಿಲನ್ನು ಬಯಸಿ

ಹೋದವು. ಬಹುಶಃ ಪ್ರಭುಸತ್ತೆಯಿಂದ ಮಾತ್ರ ಪ್ರಬಲರಾಗಿ ಗೌರವ ಸಂಪತ್ತಗಳಿಗೆ ಒಡೆಯರಾಗಿದ್ದ ಇವರು ಕೆಳಜಾತಿಯ ವಿಷಯ ಬಂದಾಗ ತಲೆ ತಗ್ಗಿಸುವ ವಾತಾವರಣ ಅಂದು ಉಂಟಾಗಿರಬಹುದು. ಪುರೋಹಿತಶಾಹಿಯ ಪ್ರಾಬಲ್ಯದಿಂದಾಗಿ ಉಂಟಾದ ಈ ತೊಂದರೆಯನ್ನು ತಪ್ಪಿಸಿಕೊಳ್ಳಲು ಕೆಲವು ಅರಸರು ಮುಕ್ತ ಧೋರಣೆಯ ವೀರಶೈವ ಧರ್ಮವನ್ನು ಸ್ವೀಕರಿಸಿರುವುದು ಕಂಡುಬರುತ್ತದೆ.

ಹಾಗಲವಾಡಿ ಸಂಸ್ಥಾನದ ಮೂಲಪುರುಷನು ಕೆಲವು ಆಕರಗಳ ಪ್ರಕಾರ ಬೇಡ ಜಾತಿಗೆ ಸೇರಿ ಪ್ರಾಣಿಗಳನ್ನು ಭೇಟೆ ಮಾಡುವ ವೃತ್ತಿಯನ್ನು ಪಾಲಿಸಿದ್ದನು ಎಂಬುದಾಗಿ ತಿಳಿದುಬರುತ್ತದೆ.[೧೨೯] ಕೆಳದಿ ಅರಸುಮನೆತನದ ಸಂಸ್ಥಾಪಕರಾದ ಚೌಡಪ್ಪ ಮತ್ತು ಭದ್ರಪ್ಪ ಇಬ್ಬರೂ ರೈತರಾಗಿದ್ದು ಕೃಷಿಕ ಕುಟುಂಬದಿಂದ ಬಂದವರೆಂದು ತಿಳಿದುಬರುತ್ತದೆ. ಯಲಹಂಕನಾಡ ಪ್ರಭುಗಳು ಮೂಲತಃ ಕಾಂಚೀಪುರದ ಬಳಿ ಇರುವ ಅತ್ತೂರಿಗೆ ಸೇರಿದವರು. ಅನಂತರದಲ್ಲಿ ಇಂದಿನ ಬೆಂಗಳೂರು ಜಿಲ್ಲೆಯಲ್ಲಿರುವ ಆವತಿಗೆ ಬಂದು ನೆಲಸಿದವರು. ರಣಭೈರೇಗೌಡ ಎಂಬುವನು ಒಬ್ಬ ಉದ್ಯಮಶೀಲನಾದ ಕೃಷಿಕ ಹಾಗೂ ಈ ವಂಶದ ಸ್ಥಾಪಕ.[೧೩೦] ಚಿತ್ರದುರ್ಗವನ್ನು ತಮ್ಮ ಆಳ್ವಿಕೆಯ ಕೇಂದ್ರಬಿಂದುವನ್ನಾಗಿ ಮಾಡಿಕೊಂಡು ಸುಮಾರು ೨೩೧ ವರ್ಷಗಳಷ್ಟು ಆಳ್ವಿಕೆ ನಡೆಸಿದ ಚಿತ್ರದುರ್ಗ ನಾಯಕರು ಬೇಡ ಜನಾಂಗಕ್ಕೆ ಸೇರಿದವರು. ಇವರು ಶಾಸನಗಳಲ್ಲಿ ತಮ್ಮನ್ನು ಕಾಮಗೇತಿ ವಂಶದವರು ಎಂದು ಕರೆದುಕೊಂಡಿರುವರು. ಸಿರಾದ ಸುಬೇದಾರರು ಬೇಡ ಜನಾಂಗಕ್ಕೆ ಸೇರಿದವರಾಗಿದ್ದು ಇವರು ತಮ್ಮನ್ನು ಯನುಮಲ ವಂಶವಾಮೀಕಾ ಗೋತ್ರದವರೆಂದು ಗುರುತಿಸಲ್ಪಡುತ್ತಾರೆ.[೧೩೧] ಹರಪನಹಳ್ಳಿಯನ್ನು ಸ್ಥಾಪಿಸಿದ ದಾದೇಯನಾಯಕನು ಬೇಡ ಜನಾಂಗದವನಾಗಿದ್ದು, ಇವರನ್ನು ಪುವ್ವಲ ವಂಶೀಯರೆಂದು ಕರೆಯಲಾಗಿದೆ.[೧೩೨]

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ರಾಜಕೀಯವಾಗಿ ಎಲ್ಲೆಲ್ಲೂ ಗೊಂದಲ–ಅನಾಯಕತ್ವಗಳಿದ್ದ ಕಾಲ, ನಾಯಕರು ತಮಗೆ ಅನುಕೂಲವೆನಿಸಿದ ಹಾಗೆಲ್ಲಾ, ನಿಷ್ಠೆಯೆಂಬ ಪರಿಕಲ್ಪನೆಯನ್ನೇ ಗಾಳಿಗೆ ತೂರಿ ಪಕ್ಷ ಬದಲಾಯಿಸುತ್ತಿದ್ದರು. ಶುದ್ಧಾಂಗವಾಗಿ ಅಧಿಕಾರದ ರಾಜಕೀಯವಾಗಿತ್ತು. ನಾಯಕರು ಚದುರಂಗದ ಮೇಲಿನ ಕಾಯಿಗಳಂತೆ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಂಗೆ ಚಲಿಸುವುದು ಕಂಡುಬರುತ್ತದೆ.

ಸಾಮಂತ ಅರಸು ಮನೆತನಗಳು ವಿಜಯನಗರದೊಂದಿಗೆ ಇರಿಸಿಕೊಂಡಿದ್ದ ಸಂಬಂಧವನ್ನು ಗಮನಿಸಿದಾಗ ದುರ್ಬಲವಾದ ಅರಸು ಅಧಿಕಾರಕ್ಕೆ ಬಂದಾಗ ಸಾಮಂತರು ಅರಸರ ಅಧಿಕಾರವನ್ನು ವಿರೋಧಿಸಿ ಬಂಡಾಯವೇಳುತ್ತಿದ್ದರು. ಮತ್ತು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಳ್ಳಲು ತುದಿಗಾಲಲ್ಲಿ ನಿಂತಿರುತ್ತಿದ್ದರು. ಅರಸರು ಈ ಬಂಡಾಯವನ್ನು ಅಡಗಿಸಲು ಇತರ ಸಾಮಂತರ ನೆರವನ್ನು ಪಡೆಯುತ್ತಿರುವುದು ಕಂಡುಬರುತ್ತದೆ. ಕೆಲವೊಮ್ಮೆ ಈ ಸಾಮಂತ ಅರಸರು ಅವಿಧೇಯತೆ ತೋರಿದಾಗ ಅವರನ್ನು ಬಂಧಿಸಿ ಸೆರೆಮನೆಗೆ ಹಾಕುವುದು ಕಂಡುಬರುತ್ತದೆ.

ವಿಜಯನಗರದ ಸಾಮಂತನಾಗಿದ್ದ ಯಲಹಂಕನಾಡ ಪ್ರಭು ಕೆಂಪೇಗೌಡನು ಕೃಷ್ಣದೇವರಾಯನ ಪ್ರೀತಿಗೆ ಪಾತ್ರನಾಗಿದ್ದನು. ಅಚ್ಯುತದೇವರಾಯನು ಇವನನ್ನು ದಸರೆಯ ಸಂದರ್ಭದಲ್ಲಿ ರಾಜಧಾನಿಗೆ ಬರಮಾಡಿಕೊಂಡು ಸನ್ಮಾನಿಸಿದ್ದನು. ಆದರೆ ಸದಾಶಿವರಾಯನ ಕಾಲದಲ್ಲಿ ಇವನು ಸಾಮಂತ ಗೌರವಗಳಿಂದ ತೃಪ್ತನಾಗದೆ ರಾಜಪದವಿಯ ಸಕಲ ಮರ್ಯಾದೆಗಳನ್ನು ರೂಢಿಸಿಕೊಳ್ಳುತ್ತಾನೆ. ಒಂದು ಟಂಕಸಾಲೆಯನ್ನು ಸ್ಥಾಪಿಸಿ ತನ್ನದೇ ಆದ ನಾಣ್ಯಗಳನ್ನು ಹಾಕಿಸಿದನು. ಇದರಿಂದ ಕೆರಳಿದ ಅಳಿಯ ರಾಮರಾಯನು ಕೆಂಪೇಗೌಡನನ್ನು ಬಂಧಿಸಿ ಆನೆಗುಂದಿಯ ಸೆರೆಮನೆಗೆ ತಳ್ಳಿದನು.[೧೩೩] ಚಿತ್ರದುರ್ಗದ ನಾಯಕ ತಿಮ್ಮಣ್ಣನಾಯಕನು ರಾಜ್ಯ ವಿಸ್ತಾರದ ಆಕಾಂಕ್ಷೆಯ ಕಾರಣವಾಗಿ ವಿಜಯನಗರದ ಚಕ್ರವರ್ತಿಯ ಬಂದಿಯಾದನು. ತಿಮ್ಮಣ್ಣನಾಯಕನನ್ನು ಅವಿಧೇಯತೆಯ ಅಪರಾಧಕ್ಕಾಗಿ ಬಂಧಿಸಿ ಸೆರೆಮನೆಯಲ್ಲಿಡಲಾಯಿತು.[೧೩೪]

ಕೆಳದಿಯ ಸದಾಶಿವನಾಯಕನು ವಿಜಯನಗರದ ಅರಸನ ಅಣತಿಯ ಮೇರೆಗೆ ಇಕ್ಕೇರಿಯ ಮಲ್ಲನಗೌಡ, ನಲ್ಲೂರು ಪುಟ್ಟೇಗೌಡ, ನರಗುಪ್ಪೇ ಪುಟ್ಟೇಗೌಡ, ಮಾಲತಿ ಪುಟ್ಟೇಗೌಡ, ಯಲಗಲ್ಲಿ ಪುಟ್ಟೇಗೌಡ, ಆವಗುಡಿಯ ವೀರಣ್ಣ, ಕಣಲೆಯ ಪುಟ್ಟಣ್ಣ ಮತ್ತು ಇತರರು ವಿಜಯನಗರದ ವಿರುದ್ಧವಾಗಿ ಬಂಡೆದ್ದಾಗ ಅವರನ್ನು ಬಗ್ಗು ಬಡೆದು ಆ ಪ್ರದೇಶಗಳನ್ನು ವಿಜಯನಗರದ ಅಂಕೆಗೆ ತಂದನು.[೧೩೫] ಹಾಗೆಯೇ ಚಂದ್ರಗುತ್ತಿಯ ಅವಿಧೇಯ ನಾಯಕರನ್ನು ಸೋಲಿಸಿದನು.[೧೩೬] ಬಂಕಾಪುರದ ಮಾದರಸ ಹಾಗೂ ತರೀಕೆರೆಯ ಸಾಳುವ ತಿಮ್ಮರೆಂಬ ಅವಿಧೇಯ ನಾಯಕರನ್ನು ಸೋಲಿಸಿ ಅಡಿಗಿಸಿದನು.[೧೩೭] ಒಂದನೆಯ ಸಂಕಣ್ಣನಾಯಕನು ಚಕ್ರವರ್ತಿಯ ಅಣತಿಯಂತೆ ದಂಗೆಯೆದ್ದಿದ್ದ ಈರಪ್ಪಣ್ಣ, ಕಾರ್ಕಳದ ಭೈರರಸ ಒಡೆಯ, ಗೇರುಸೊಪ್ಪೆಯ ಭೈರಾದೇವಿ, ಜಂಬೂರಿನ ವಿರುಪಣ್ಣ ಒಡೆಯರ್, ಇವರುಗಳನ್ನು ತಕ್ಷಣವೇ ಅಡಗಿಸಿದನು.[೧೩೮]



ವಿಜಯನಗರ ಸಾಮ್ರಾಜ್ಯದಲ್ಲಿ ತಲೆದೋರಿದ ಅರಾಜಕತೆ, ಅನ್ಯೈಕ್ಯತೆ, ಆಂತರಿಕ ಗಲಭೆ, ಅಧಿಕಾರ ಹಸ್ತಾಂತರ, ದುರ್ಬಲ ರಾಜರ ಕಾಲ ಮೊದಲಾದ ಸಂದರ್ಭಗಳಲ್ಲಿ ಕೆಲವು ಬಲಾಢ್ಯ ಅಮರನಾಯಕರು ಸ್ವತಂತ್ರರಾಗಲು ಪ್ರಯತ್ನಿಸಿದರು. ಕೆಲವು ಅಮರನಾಯಕರು ಕೃಷ್ಣದೇವರಾಯನಂತಹ ಸಮರ್ಥ ಚಕ್ರವರ್ತಿಯ ಕಾಲದಲ್ಲಿಯೇ ಸ್ವತಂತ್ರರಾಗಲು ಪ್ರಯತ್ನಿಸಿದ್ದು ಅವರ ಸಾಮರ್ಥ್ಯ, ಮಿಗಿಲಾಗಿ ಸ್ವಾತಂತ್ರ್ಯ ಪ್ರವೃತ್ತಿಯನ್ನು ತೋರಿಸುತ್ತದೆ. ಕೃಷ್ಣದೇವರಾಯನು ಕ್ರಿ.ಶ. ೧೫೧೦ ಮತ್ತು ೧೫೧೨ರಲ್ಲಿ ಎರಡು ಸಾರಿ ದಂಡಯಾತ್ರೆ ಮಾಡಿ ಗಂಗರಾಜನನ್ನು ಸೋಲಿಸಿದನು.

ಕೇಂದ್ರ ಸರಕಾರವು ಬಲವಾಗಿರುವವರೆಗೆ ಸಾಮಂತರು ವಿಜಯನಗರಕ್ಕೆ ನಿಷ್ಠರಾಗಿದ್ದರು. ಯಾವಾಗ ಅವರು ದುರ್ಬಲರಾದರೋ ಆಗ ತಮ್ಮ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಳ್ಳಲು ತೊಡಗಿದರು.

ಆದರೆ ವಿಜಯನಗರದ ಅರಸರು ಈ ರೀತಿ ಬಂಡೆದ್ದ ನಾಯಕರನ್ನು ಇತರ ಅಮರನಾಯಕರ ಸಹಾಯದಿಂದ ಸೋಲಿಸಿ ಸಾಮ್ರಾಜ್ಯದ ಅಖಂಡತೆಯನ್ನು ಕಾಪಾಡಿಕೊಳ್ಳುತ್ತಿದ್ದರು.

**ಧಾರ್ಮಿಕ ಪರಿಸ್ಥಿತಿ**

ಧರ್ಮವಿಲ್ಲದ ಸಂಸ್ಕೃತಿಯೊಂದನ್ನು ಇತಿಹಾಸವು ನಮಗೆ ಕಾಣಿಸಲಾರದು. ಧರ್ಮದ ಅಂತಃಶಕ್ತಿಯೆಂದರೆ ಉನ್ನತವಾದುದರ ಕಡೆಗೆ ಚಲನೆಯನ್ನು ಪ್ರಚೋದಿಸುವುದಾಗಿದೆ. ಧರ್ಮ ಸಮಾಜದ ಅವಿಭಾಜ್ಯ ಅಂಗ. ಬೇರೆ ಬೇರೆ ಮತ ಧರ್ಮಗಳು ಸಮಾಜವನ್ನು ಪೋಷಿಸುತ್ತಾ ಮತ್ತು ಸಮಾಜದಿಂದ ಪೋಷಿಸಲ್ಪಡುತ್ತಾ ಬೆಳೆದು ಬಂದಿದ್ದನ್ನು ಕಾಣಬಹುದು. 'ಧೃ' ಎಂಬ ಧಾತುವಿಗೆ 'ರ್ಮ' ಎಂಬ ಪ್ರತ್ಯಯವನ್ನು ಸೇರಿಸುವುದರಿಂದ ಧರ್ಮ ಶಬ್ದದ ಅರ್ಥವು ರೂಪುಗೊಂಡಿರುತ್ತದೆ. 'ಧಾರಣಾಧರ್ಮ ಇತ್ಯಹುಃ ಧರ್ಮೋಧಾರಯತಿ ಪ್ರಜಾಃ' ಎಂದರೆ ಜನರನ್ನು ಹಿಡಿದು ನಿಲ್ಲಿಸಿರುವ, ಒಗ್ಗೂಡಿಸಿ ಪರಸ್ಪರವಾಗಿ ಸಹಾನುಭೂತಿಯಿಂದ ಸಹಕರಿಸುವಂತೆ ಪ್ರೇರೇಪಿಸುತ್ತಿರುವ ತತ್ವ ಅಥವಾ ಶಕ್ತಿಗೆ 'ಧರ್ಮ'ವೆಂದು ಹೆಸರು. ಧರ್ಮದ ಅರ್ಥವನ್ನು ಹುಡುಕಿದರೆ "ಜಾತಿ-ಪಂಗಡಗಳಿಗೆ ಸೇರಿದ ಆಚಾರ-ವಿಚಾರ ಹಾಗೂಭಕ್ತಿ ಔಚಿತ್ಯವೆಂದರ್ಥವಾಗುತ್ತದೆ."[೧೩೯] ಇಂಗ್ಲೀಷ್ ಭಾಷೆಯ 'ರಿಲಿಜಿಯನ್' ಎಂಬ ಶಬ್ದಕ್ಕೆ ಇಂಗ್ಲೀಷ್-ಕನ್ನಡ ನಿಘಂಟಿನಲ್ಲಿ 'ಮಾನವನು ತಾನು ಒಂದು ಅತಿಮಾನುಷ ಶಕ್ತಿಯ ಅಧೀನನೆಂದೂ ಮುಖ್ಯವಾಗಿ ತನ್ನ ವಿಧೇಯತೆಗಳು ಸಲ್ಲತಕ್ಕ ದೇವರೊಬ್ಬನು ಇದ್ದಾನೆಂದೂ ಇಟ್ಟುಕೊಂಡಿರುವ ತಿಳುವಳಿಕೆ ಅಥವಾ ನಂಬಿಕೆ'[೧೪೦] ಎಂದಿದೆ. ಮಾನವನ ಸಹಜವಾದ ನೈತಿಕ ಪ್ರವೃತ್ತಿಯ ಬೆಳವಣಿಗೆ ಮತ್ತು ನಂಬಿಕೆಗಳ ಮೂಲ ಧರ್ಮವಾಗಿದೆ ಎಂದು ಹೇಳಬಹುದು. 'ವ್ಯಕ್ತಿ ಒಂದು ಕಡೆ ಭವ್ಯವೂ, ಪರಮೋನ್ನತವೂ ಆದ ತತ್ವವೂ ಇನ್ನೊಂದು ಕಡೆ ಈ ಎರಡರ ನಡುವಣ ಸಂಪರ್ಕ ಬಿಂದುವೇ ಧರ್ಮ'[೧೪೧] ಮನುಷ್ಯನು ಹುಟ್ಟಿನಿಂದಲೇ ಧರ್ಮದ ಜೊತೆಯಲ್ಲಿಯೇ ಬೆಳೆದು ಬಂದಿದ್ದಾನೆ. ಪ್ರತ್ಯಕ್ಷ್ಯವಲ್ಲದಿದ್ದರೂ, ಪರೋಕ್ಷವಾಗಿಯಾದರೂ ಅದು ಅವನ ಜೊತೆಗಿರುತ್ತದೆ. ಸಾಂಸ್ಕೃತಿಕ ಅಂಶಗಳಲ್ಲಿ ಧರ್ಮದ ಪರಿಕಲ್ಪನೆಯೂ ಒಂದು. 'ಧರ್ಮ' ಎಂಬುದಕ್ಕೆ ಯಾವುದೇ ನಿರ್ದಿಷ್ಟ ವ್ಯಾಖ್ಯೆ ಅಥವಾ ವಿವರಣೆಗಳು ಬದಲಾಗಿ ಇದೊಂದು ಮಾನವನ ಜೀವನ ಅವಿಭಾಜ್ಯ ಅಂಗ. ಆದ್ದರಿಂದ ಇಲ್ಲಿ ಧರ್ಮವನ್ನು ಒಂದು ಜನಸಮುದಾಯದ 'ಜೀವನ ಮಾಡುವ ಕ್ರಮ ಅಥವಾ ವಿಧಾನ' ಎಂದು ಪರಿಗಣಿಸಲಾಗಿದೆ.

ವಿಜಯನಗರ ಕಾಲದ 'ಹಿಂದೂ ಧರ್ಮವು' ಎರಡು ಪ್ರಮುಖ ಪಂಥಗಳಲ್ಲಿ ವಿಭಜಿತವಾಗಿತ್ತು. ಆರಾಧನೆಯ ನೆಲೆಯಲ್ಲಿ 'ಶೈವ' ಹಾಗೂ 'ವೈಷ್ಣವ' ಅನುಯಾಯಿಗಳ ಎರಡು ಪಂಥಗಳಿದ್ದವು. ವಿಷ್ಣುವನ್ನು ಆರಾಧಿಸುವ ವೈಷ್ಣವರಿಗೂ, ಶಿವನನ್ನು ಆರಾಧಿಸುವ ಶೈವರಿಗೂ ಆಚಾರ-ವಿಚಾರಗಳಲ್ಲಿ ಭಿನ್ನತೆಗಳಿದ್ದವು.

೧೨ನೆಯ ಶತಮಾನದಲ್ಲಿ ಬಸವಾದಿ ಶಿವಶರಣರು ವೀರಶೈವ ಸಿದ್ಧಾಂತದ ತಳಹದಿಯ ಮೇಲೆ ಕಲ್ಯಾಣದಲ್ಲಿ ಕ್ರಾಂತಿಯನ್ನು ಮಾಡಿ ಅನುಭವ ಮಂಟಪವನ್ನು ಸ್ಥಾಪಿಸಿ, ವಚನ ಸಾಹಿತ್ಯವನ್ನು ಹೇರಳವಾಗಿ ರಚಿಸಿ, ಎಲ್ಲಾ ಕ್ಷೇತ್ರಗಳಲ್ಲೂ ಹೊಸ ಬದಲಾವಣೆಗಳನ್ನು ತರಲು ಪ್ರಯತ್ನಿಸಿದರು. ಆದರೆ ಬಸವೇಶ್ವರರ ನಂತರ ಶಿವಶರಣರು ಚದುರಿ ಹೋದರು. ಅನಂತರದಲ್ಲಿ ವೀರಶೈವ ಧಾರ್ಮಿಕ ಚಟುವಟಿಕೆಗಳು ವಿಜಯನಗರ ಕಾಲದವರೆಗೂ ಹೆಚ್ಚಾಗಿ ಕಂಡುಬರುವುದಿಲ್ಲ. ವಿಜಯನಗರ ಕಾಲದಲ್ಲಿ ವೀರಶೈವ ಧರ್ಮ ಹೊಸ ಜೀವಂತಿಕೆಯನ್ನು ಪಡೆದುಕೊಮಡಿತು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೂ ಮೊದಲು ವೀರಶೈವ ಧರ್ಮದ ಕುರುಹುಗಳು ಈ ಪ್ರದೇಶದಲ್ಲಿ ಕಂಡುಬರುತ್ತಿವೆ. ಹರಿಹರ-ರಾಘವಾಂಕರಿಗೆ ವಿರೂಪಾಕ್ಷ ದೇವಾಲಯವೇ ಕೇಂದ್ರ ಸ್ಥಾನವಾಗಿದ್ದಿತು. ಕ್ರಿಶ. ೧೦೧೮ರ ಪೂರ್ವದಲ್ಲಿಯೇ ವಿರೂಪಾಕ್ಷ ದೇವಾಲಯ ನಿರ್ಮಾಣವಾಗಿರಬೇಕು. ಈ ಕಾಲಕ್ಕಿಂತ ಹಿಂದೆ ವಿರೂಪಾಕ್ಷ ದೇವಾಲಯದ ಉಲ್ಲೇಖ ಶಾಸನದಲ್ಲಿ ಬರುವುದಿಲ್ಲ. ಪುರದ (ಕುಷ್ಟಗಿ) ಶಾಸನದಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯದ ಉಲ್ಲೇಖ ಬರುತ್ತದೆ.[೧೪೨] ಕ್ರಿ.ಶ.೧೧೯೯ರ ಹಂಪೆಯ ದುರ್ಗಾದೇವಿ ದೇವಾಲಯದಲ್ಲಿನ ಶಾಸನದಲ್ಲಿ ಮಾದೆಯನಾಯಕನ ಮೈದುನ ಚೌಡಯ್ಯ ಎಂಬುವವನು ಪಂಪಾದೇವಿಗೆ ಕಂಚಿನ ಕಳಶವನ್ನು ಮಾಡಿಸಿ, ಅಲ್ಲಿನ ಬ್ರಹ್ಮೇಶ್ವರ, ಪಂಪಾದೇವಾಲಯ, ಭೈರವ ದೇವಾಲಯಗಳಿಗೆ ಸುಣ್ಣ ಬಳಸಿ, ಪೂಜಾ ಪರಿಕರಗಳನ್ನು ನೀಡಿದ ಉಲ್ಲೇಖವಿದೆ.[೧೪೩]

ವಿರೂಪಾಕ್ಷ ದೇವಾಲಯವು ವಿಜಯನಗರ ಕಾಲದಲ್ಲಿ ಪ್ರಸಿದ್ಧವಾಯಿತು. ರಾಜಧಾನಿ ಪಂಪಾ ವಿರೂಪಾಕ್ಷನ ಸನ್ನಿಧಿಯಲ್ಲಿ ಇದ್ದುದೇ ಇದಕ್ಕೆ ಕಾರಣ. ವಿಜಯನಗರವನ್ನಾಳಿದ ಮೊದಲ ರಾಜವಂಶಜರಾದ ಸಂಗಮರು ಶೈವ ಪಂಥೀಯರು. ಹರಿಹರ ಮತ್ತು ಬುಕ್ಕರಾಯರು ಶಿವನ ಆರಾಧಕರಾಗಿದ್ದು, ಆ ಪಂಥದ ವಿಚಾರಗಳಿಂದ ಪ್ರಭಾವಿತರಾಗಿದ್ದರು. ಶೈವ ಪಂಥ ಹಾಗೂ ಅದರ ತಾತ್ವಿಕ ವಿಚಾರಗಳ ಪಾಲನೆಯಲ್ಲಿ ಸಂಗಮರ ಕಾಲವು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿತ್ತು. ಸಂಗಮ ರಾಜರು ತಮ್ಮ ಶಾಸನಗಳಲ್ಲಿ ತಮ್ಮ ಹೆಸರಿನ ಅಥವಾ 'ಒಪ್ಪ'ದ ಬದಲು ವಿರೂಪಾಕ್ಷನ ಹೆಸರನ್ನೇ ಬಳಸಿರುತ್ತಾರೆ. ವಿರೂಪಾಕ್ಷನ ಮಹಿಮೆಯು ಸಂಗಮರು ಈ ಕ್ಷೇತ್ರವನ್ನು ತಮ್ಮ ರಾಜ್ಯದ ಕೇಂದ್ರಬಿಂದುವನ್ನಾಗಿ ಮಾಡಿಕೊಂಡ ಮೇಲೆ ಇನ್ನೂ ಅಧಿಕವಾಯಿತು. ಸಾಮಂತರು ಅನೇಕ ಕಡೆಗಳಲ್ಲಿ ತಮ್ಮ ಅಧಿರಾಜರ ಅಧಿದೈವದ ಹೆಸರಿನಲ್ಲಿ ಅನೇಕ ದೇವಾಲಯಗಳನ್ನು ಕಟ್ಟಿಸಿರುತ್ತಾರೆ.

ಶೈವರಲ್ಲಿ ಲಕುಲೀಶ, ಪಾಶುಪತ, ಕಾಳಾಮುಖ, ವೀರಶೈವ, ಅದ್ವೈತ, ಶ್ರೀಕಾಂತ, ಶೈವಾಗಮ, ಶೈವಸಿದ್ಧಾಂತಿ ಮೊದಲಾದ ಉಪಶಾಖೆಗಳು ಇದ್ದದ್ದು ಕಂಡುಬರುತ್ತವೆ. ಉಪಶಾಖೆಯವರು ತಮ್ಮ ವಿಚಾರ ವೈಶಿಷ್ಟ್ಯಗಳ ಮೂಲಕ ಭಿನ್ನವಾಗಿ ಗುರುತಿಸಿಕೊಳ್ಳುತ್ತಿದ್ದರು. ಕೆಲವು ಆಚಾರ-ವಿಚಾರ,

ಪೂಜಾ ವಿಧಾನಗಳ ಮಧ್ಯೆಯಿದ್ದ ತಾರತಮ್ಯಗಳು ಲಕುಲೀಶ ಮತ್ತು ಕಾಳಾಮುಖರನ್ನು ಪ್ರತ್ಯೇಕಿಸುತ್ತಿದ್ದವು. ಲಕುಲೀಶನಿಂದ ಸ್ಥಾಪನೆಗೊಂಡ ಉಪಶಾಖೆಯು 'ಪಾಶುಪತೀಯ' ಅನುಯಾಯಿಗಳಿಂದ ಗುರುತಿಸಿಕೊಳ್ಳುವಂತೆ ಮಾಡಿದೆ. ಇದರ ಅನುಯಾಯಿಗಳು ಕಾರ್ಯ, ಕಾರಣ, ಯೋಗ, ವಿಧಿ, ದುಃಖಾಂತ ಎಂಬ ಐದು ಸೂತ್ರಗಳನ್ನು ಅನುಸರಿಸಿದರು. ಕಾಳಾಮುಖ ಶೈವರಿಗೂ ಆಚರಣೆಗಾಗಿ ಆರು ಮುಖ್ಯವಾದ ಮುದ್ರೆಗಳಿದ್ದವು. ಪೂಜಾವಿಧಾನಗಳಿಗೆ, ಊಟೋಪಚಾರಗಳಿಗೆ ಸಂಬಂಧಿಸಿದ ಈ ಮುದ್ರೆಗಳನ್ನು ಇವುಗಳನ್ನು ಆಚರಿಸುತ್ತಿದ್ದರು.

ವಿಜಯನಗರ ಕಾಲಘಟ್ಟದಲ್ಲಿ ಶೈವ ಪಂಥೀಯರಲ್ಲಿನ ವೀರಶೈವರು ಅಥವಾ ಶಕ್ತಿ ವಿಶಿಷ್ಟದ್ವೈತೆಗಳ ಹಾಗೂ ಅವರ ಆಚರಣೆಗಳು ಮಹತ್ವವನ್ನು ಪಡೆದಿದ್ದವು. ಇವರಲ್ಲೂ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ ಮತ್ತು ಶಿವಾಚರಣೆಗಳೆಂಬ 'ಶಿವಯೋಗಿ' ಐದು ಪ್ರಕ್ರಿಯೆಗಳನ್ನು ಗುರುತಿಸಬಹುದು. ವೀರಶೈವರಲ್ಲಿ ಎರಡು ಮುಖ್ಯ ಉಪವಿಭಾಗಗಳಿದ್ದವು. ಲಿಂಗ ಮತ್ತು ಜನಿವಾರವನ್ನು ಧರಿಸಿ ಶಿವನನ್ನು ಆರಾಧಿಸುವ ಆರಾಧ್ಯ ಶೈವರು, ಲಿಂಗಾಯತ ಶೈವರು ವೀರಭದ್ರನ ಆರಾಧಕರಾಗಿದ್ದು, ಲಿಂಗ, ವಿಭೂತಿ, ರುದ್ರಾಕ್ಷಿ, ಪಂಚಾಕ್ಷರಿ, ತೀರ್ಥ ಮತ್ತು ಪ್ರಸಾದಗಳೆಂಬ 'ಅಷ್ಟವರ್ಣ'ಗಳಿಗೆ ಹೆಚ್ಚಿನ ಮಹತ್ವವನ್ನು ಕೊಡುವರು.[೧೪೪]

ಶಂಕರಾಚಾರ್ಯರಿಂದ ಪ್ರತಿಪಾದಿತವಾದ 'ಅದ್ವೈತ ಸಿದ್ಧಾಂತ'ವು ಬ್ರಹ್ಮಾಂಡ ನಿರ್ಜೀವ ಜಡವಸ್ತುವಲ್ಲ ಎಂಬ ವಾದವನ್ನು ಮಂಡಿಸುತ್ತದೆ. ಇದರ ಅನುಯಾಯಿಗಳು ಶೈವ ಪಂಥದಲ್ಲಿನ ಇನ್ನೊಂದು ಶಾಖೆಯಾಗಿದೆ. ಇವರನ್ನು ಅದ್ವೈತಿಗಳೆಂದು ಕರೆಯಲಾಗಿದೆ. ಈ ಸಿದ್ಧಾಂತದ ವಿದ್ಯಾರಣ್ಯರ ಪ್ರೇರಣೆಯು ಸಾಮ್ರಾಜ್ಯದ ಸ್ಥಾಪನೆ ಹಾಗೂ ಬೆಳವಣಿಗೆಗೆ ಕಾರಣವಾಯಿತು. ಸಂಗಮ ವಂಶಜರಿಗೆ ಅದ್ವೈತ ತಾತ್ವಿಕರ ಮಾರ್ಗದರ್ಶನ ದೊರಕಿತ್ತು. ಅದ್ವೈತದ ಪವಿತ್ರ ಕ್ಷೇತ್ರವೆಂದು ಶೃಂಗೇರಿ ಮಠವು ಪರಿಗಣಿಸಲ್ಪಟ್ಟಿದೆ.

ಆಗಮ ಹಾಗೂ ವೇದಾಂತಗಳ ಮೂಲಕ ಶಿವನನ್ನು ಗುರುತಿಸಿ ಪೂಜಿಸುವ ಪರಿಪಾಠ ಶ್ರೀಕಾಂತ ಶೈವಾಗಮ ಮತ್ತು ಶೈವ ಸಿದ್ಧಾಂತಿಗಳದ್ದು. ಈ ಎರಡೂ ಶೈವ ಪಂಥೀಯ ಶಾಖೆಗಳಾಗಿವೆ. ವಿಜಯನಗರವನ್ನಾಳಿದ ತುಳುವ ಮತ್ತು ಅರವೀಡು ಮನೆತನಗಳ ಕಾಲದಲ್ಲಿ ಇವರುಗಳು ಪ್ರಾಶಸ್ತ್ಯ ಪಡೆದಿದ್ದರು.[೧೪೫]

ವೀರಶೈವರನ್ನು ಲಿಂಗವಂತರು, ಲಿಂಗಾಂಗಿಗಳು, ಲಿಂಗಧಾರಿಗಳೂ ಎಂದು ಕರೆಯುವರು.[೧೪೬] ಶಾಸನಗಳಲ್ಲಿ ಇವರನ್ನು ಶಿವಭಕ್ತರು,[೧೪೭] ಶಿವಾಚಾರದವರೂ ಎಂದು ಸಂಭೋದಿಸಲಾಗಿದೆ.[೧೪೮] ನಗರಪ್ರದೇಶಗಳಲ್ಲಿಯೂ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿದ್ದ ವೀರಶೈವರು ವ್ಯಾಪಾರ

ಮತ್ತು ವ್ಯವಸಾಯ ಎರಡರಲ್ಲೂ ಪ್ರಧಾನ ಪಾತ್ರ ವಹಿಸಿದ್ದರು. ರಾಜರು, ಅಧಿಕಾರಿಗಳು, ಜನಸಾಮಾನ್ಯರು ಮಹಿಳೆಯರು ತಾವು ಅನುಸರಿಸುತ್ತಿದ್ದ ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ದೇವಾಲಯಗಳ ನಿರ್ಮಾಣ, ಪುನರುಜ್ಜೀವನ, ದಾನ ಧರ್ಮಾಧಿಗಳನ್ನು ಕೊಟ್ಟಿರುವುದು ದಾಖಲೆಗಳಲ್ಲಿ ಕಂಡುಬರುತ್ತದೆ. ಕ್ರಿ.ಶ. ೧೩೬೬ರಲ್ಲಿ ವಿರೂಪಾಕ್ಷ ದೇವಾಲಯಕ್ಕೆ ವೀರ ಬುಕ್ಕರಾಯನು ದಾನ ನೀಡಿದ ಉಲ್ಲೇಖವಿದೆ.[೧೪೯] ಇಮ್ಮಡಿ ಹರಿಹರನ ಕಾಲದ ಶಾಸನವೊಂದರಲ್ಲಿ ವಿರೂಪಾಕ್ಷ ದೇವರಿಗೆ ದಾನ ನೀಡಿದ ಉಲ್ಲೇಖವಿದೆ. ಕ್ರಿ.ಶ. ೧೩೬೨ರಲ್ಲಿ ಹೇಮಕೂಟದಲ್ಲಿನ ಜಡೆಯ ಶಂಕರ ದೇವರ ಎದುರು ವೀರ ಹರಿಹರನ ಪತ್ನಿ ಬುಕ್ಕವ್ವೆ ದೀಪಮಾಲೆ ಕಂಬವನ್ನು ಮಾಡಿಸಿದಳು.[೧೫೦] ಕ್ರಿ.ಶ. ೧೩೮೦ರ ಶಾಸನದಲ್ಲಿ ಮುದ್ದದಂಡೇಶನು ವಿರೂಪಾಕ್ಷನ ಪೂಜೆಗೆ ಹೆಬ್ಬಾಳು ಮತ್ತು ದಂಡನಾಥ ಪುರಗಳನ್ನು ನೀಡಿದ್ದಾನೆ.[೧೫೧] ಕ್ರಿ.ಶ. ೧೪೨೮ರಲ್ಲಿ ಮಾಧವಾಮಾತ್ಯನ ಮಗ ಶಶಿಧರನು ದೀಪದ ಕಂಬವನ್ನು ಮಾಡಿಸಿ ಅದನ್ನು ವಿರೂಪಾಕ್ಷನಿಗೆ ಸಮರ್ಪಿಸಿದನು.[೧೫೨] ಲಕ್ಕಣ್ಣನ ಶಿವತತ್ವ ಚಿಂತಾಮಣಿಯಲ್ಲಿ ಪ್ರೌಢದೇವರಾಯನು ವಿರೂಪಾಕ್ಷನ ರಥಬೀದಿಯನ್ನು ಮಾಡಿಸಿ ಆ ರಥಬೀದಿಯಲ್ಲಿ ವಿರೂಪಾಕ್ಷನ ಮತ್ತು ವಿನಾಯಕನ ರಥೋತ್ಸವಗಳು ನಡೆಯುವಂತೆ ಮಾಡಿಸಿದನೆಂದು ತಿಳಿದುಬರುತ್ತದೆ.

ಶೈವಧರ್ಮದ ಮುಖ್ಯ ಕೇಂದ್ರ ಶಿವನ ಗುಡಿ. ಅಂತಹ ಗುಡಿಗಳ ವ್ಯವಸ್ಥೆಗೆ ಭಕ್ತರು ದಾನಗಳನ್ನು ನೀಡುತ್ತಿದ್ದರು. ಶಿವರಾತ್ರಿಯು ಶೈವರಿಗೆ ಅತಿ ಪವಿತ್ರವಾದ ದಿನವಾಗಿದ್ದು, ಅಂತಹ ಕಾಲದಲ್ಲಿ ಶಿವದೇವಾಲಯಗಳಿಗೆ ದಾನ ಮಾಡುವುದು ಪುಣ್ಯದ ಕೆಲಸವೆಂದು ಜನರು ನಂಬಿದ್ದರು.[೧೫೩] ದೇವಾಲಯದ ವಿವಿಧ ಸೇವೆಗಳಿಗೆ ಮನೆವಣ ಮುಂತಾದ ತೆರಿಗೆಗಳನ್ನು ಶಿವಾರ್ಪಿತವಾಗಿ ದಾನವಾಗಿ ನೀಡುವ ವಿವರಗಳು ಶಾಸನಗಳಲ್ಲಿ ಕಾಣಸಿಗುತ್ತವೆ.[೧೫೪] ದಾನಿಗಳು ಶಿವ ದೇವಾಲಯಗಳಿಗೆ ಲಿಂಗ ಮುದ್ರೆಯುಳ್ಳ ಸ್ತಂಭಗಳನ್ನು ಹಾಕಿಸಿ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸುತ್ತಿದ್ದರು.[೧೫೫]

ಕ್ರಿ.ಶ. ೧೪ನೆಯ ಶತಮಾನಕ್ಕೆ ಸೇರಿದ ದಾಖಲೆಯೊಂದು ಸಿಂಗೆನಾಯಕನ ಮಗನಾದ ವೀರ ಕಂಪಿಲನು ತಮ್ಮ ತಾಯಿ ಮಾದನಾಕಿತಿ ತಂದೆ ಸಿಂಗಿಯನಾಯಕ ಮತ್ತು ಪೆರುಡಿಯ ನಾಯಕನ ಹೆಸರಲ್ಲಿ ಮೂರು ಲಿಂಗಗಳನ್ನು ಪ್ರತಿಷ್ಠೆ ಮಾಡಿ ಶಿವಾಲಯ ಕಟ್ಟಿಸಿದನ್ನು ಹೇಳುತ್ತದೆ.[೧೫೬] ಕಾಲದ ಉಲ್ಲೇಖವಿಲ್ಲದ ಒಂದು ಶಾಸನದಲ್ಲಿ ಅಗಸರ ಕುಲಕ್ಕೆ ಸೇರಿದ ಕಾಚೆನಯ, ಬೋಮ, ಹಂಪೆಯ ಮಚೆಯ ಮುಂತಾದ ೧೨೦ ಹಲರು ಸೇರಿ ಶಿವನ ದೇವಾಲಯ ನಿರ್ಮಿಸಿರುವುದು ಕಂಡುಬರುತ್ತದೆ.[೧೫೭] ಶ್ರೀ ಕೃಷ್ಣದೇವರಾಯನು ಗಂಡೀಕೋಟೆ ಸೀಮೆಯ ಮಹಾರಾಮೇಶ್ವರದ ರಾಮಯ್ಯ ದೇವರಿಗೆ ಚೆನ್ನೂರು ಸೀಮೆಯ ಪಯಿಂಡಾಲೆ ಎಂಬ ಗ್ರಾಮವನ್ನು ಸೇವೆಗಳಿಗೆ ಸಮರ್ಪಿಸಿದನು.[೧೫೮] ಕಾಳಹಸ್ತಿಯ ಕಾಳಹಸ್ತೀಶ್ವರ ದೇವರಿಗೆ ಒಂದು ಮುತ್ತಿನ ಕಂಠಮಾಲೆ, ಚಿನ್ನದ ಬಟ್ಟಲು ಇತರ ಅಮೂಲ್ಯ ವಸ್ತುಗಳನ್ನು ನೀಡಿದ್ದಾನೆ.[೧೫೯] ಇನ್ನೊಂದು ಶಾಸನದಲ್ಲಿ ಇದೇ ದೇವರಿಗೆ ಚಿನ್ನದ

ಲೋಟ, ಒಂದು ಚಿನ್ನದ ತಟ್ಟೆ, ೩೫ ಬೆಳ್ಳಿಯ ಲೋಟಗಳನ್ನು ದಾನವಾಗಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ಶ್ರೀ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ದಿನ ವಿರೂಪಾಕ್ಷದೇವರ ಅಮೃತಪಡಿ ಮತ್ತು ನೈವೇದ್ಯ ಸೇವೆಗಾಗಿ ಸಿಂಗನಾಯಕನ ಹಳ್ಳಿಯನ್ನು ನೀಡುತ್ತಾನೆ. ವಿರುಪಾಕ್ಷದೇವರ ಮುಂದಿನ ಮಹಾರಂಗ ಮಂಟಪವನ್ನು, ಅದರೆದುರಿಗೆ ಸಣ್ಣ ಗೋಪುರವನ್ನು ನಿರ್ಮಿಸಿ, ದೊಡ್ಡ ಗೋಪುರವನ್ನು ದುರಸ್ತಿಗೊಳಿಸಿ ಬೆಲೆಬಾಳುವ ರತ್ನಗಳಿಂದ ಅಲಂಕೃತವಾದ ಚಿನ್ನದ ಕಮಲ, ನಾಗಾಭರಣ, ನೈವೇಧ್ಯ ಮಾಡಲು ಒಂದು ಚಿನ್ನದ ಹರಿವಾಣ, ಚಿನ್ನದ ಎರಡು ಆರತಿಗಳು, ೨೩ ಬೆಳ್ಳಿಯ ಆರತಿಗಳನ್ನು ದೇವರ ಸೇವೆಗಾಗಿ ನೀಡಿದನು.[೧೬೦] ಕ್ರಿ.ಶ. ೧೫೧೫ರಲ್ಲಿ ಶ್ರೀ ಕೃಷ್ಣದೇವರಾಯನು ಪೂರ್ವದ ದಿಗ್ವಿಜಯ ಯಾತ್ರೆಯನ್ನು ಕೈಗೊಂಡು ಧರಣೀಕೋಟೆ ಅಮರೇಶ್ವರಕ್ಕೆ ಹೋಗಿ ದೇವರ ಸನ್ನಿಧಿಯಲ್ಲಿ ತುಲಾಪುರುಷ ಮಹಾದಾನವನ್ನು ಮಾಡಿ ನಂತರ ಶ್ರೀಶೈಲಕ್ಕೆ ಬಂದು ದೇವರ ತೇರು ಬೀದಿಯಲ್ಲಿ ಶಿಲಾಮಂಟಪವನ್ನು ಕಟ್ಟಿಸಿ ಮಲ್ಲಿಕಾರ್ಜುನ ದೇವರ ಮಹಾ ನೈವೇಧ್ಯಕ್ಕೆ ಗ್ರಾಮಗಳನ್ನು ದತ್ತಿಯಾಗಿ ಬಿಟ್ಟಿರುವನು.[೧೬೧] ಹಂಪೆಯ ಶ್ರೀ ಪ್ರಸನ್ನ ವಿರುಪಾಕ್ಷ ದೇವರ ಪೂಜೆ ಉತ್ಸವಗಳಿಗೆ ಸಮರ್ಪಿಸಿದ್ದಾನೆ. ಕ್ರಿ.ಶ. ೧೫೧೦ರಲ್ಲಿ ನರಸನಾಯಕನ ತಾಯಿ ಬುಕ್ಕಾಜಿ ಅಮ್ಮನು ಹಂಪೆಯ ತಿರುಮಲಭಟ್ಟನ ಮಗ ಸಾಯಿಭಟ್ಟನಿಗೆ ವಿರುಪಾಕ್ಷದೇವರ ನೈವೇಧ್ಯಕ್ಕಾಗಿ ಭೂದಾನ ಮಾಡಿದ ಉಲ್ಲೇಖವಿದೆ.[೧೬೨] ೧೫೪೫ರ ಶಾಸನದಲ್ಲಿ ಜಂಗಮಯ್ಯನು ಮುದ್ದುವೀರಣ್ಣನ ಪ್ರತಿಷ್ಠೆ ಮಾಡಿಸಿ ದೇವರಿಗೆ ಚಿನ್ನ, ಬೆಳ್ಳಿ, ಆಭರಣಗಳನ್ನು ದೇವರ ಕಾರ್ಯಗಳಾದ ನಿತ್ಯ ನೈವೇಧ್ಯ, ಪಂಚಪರ್ವ, ರಥಮಹೋತ್ಸವ, ಬ್ರಾಹ್ಮಣ ವಿನಿಯೋಗ, ಅಂಗರಂಗ ವೈಭೋಗ ಮೊದಲಾದವುಗಳಿಗಾಗಿ ದಾನ ಮಾಡಿದ ಉಲ್ಲೇಖವಿದೆ.[೧೬೩]

ಮಲಿಗೆ ನಾಯಕನ ಮಗ ಬದ್ಧಯನಾಯಕನು ಬೇಟೆಗಾರ ಹೆಬ್ಬಾಗಿಲಿನ ಪೂರ್ವ ದಿಕ್ಕಿನಲ್ಲಿ ಒಂಟೆಯ ಮೈಲಾರ ದೇವರನ್ನು ಪ್ರತಿಷ್ಠಾಪಿಸಿದ ಉಲ್ಲೇಖ ೧೩೮೦ರ ಶಾಸನದಲ್ಲಿದೆ.[೧೬೪] ಕ್ರಿ.ಶ. ೧೫೯೯ರ ಶಾಸನದಲ್ಲಿ ಕಂನಿಸೆಟ್ಟಿ, ವಿಚ್ಚಾರಿಸೆಟ್ಟಿ ಮತ್ತು ಅವನ ದಾಯಾದಿಗಳು ಒಳಕೋಟೆಯ ರಮ್ಮು ದಿಡ್ಡಿ ಬಳಿಯ ಮಡುವಿನ ತೋಟ ಮತ್ತು ಗದ್ದೆಯಲ್ಲಿನ ರಾಮಚಂದ್ರದೇವರ ರಾಜಪಾಲನ್ನು ಅಳೆದು ಉಳಿದಿದ್ದನ್ನು ವಿರುಪಾಕ್ಷದೇವರ ಅಮೃತ ಪಡಿಗೆ ನೀಡುತ್ತಿರುವ ಉಲ್ಲೇಖವಿದೆ.[೧೬೫]

ವಿಜಯನಗರ ಸಾಮ್ರಾಜ್ಯದಲ್ಲಿನ ಸಾಮಂತರು ಶೈವ ಧರ್ಮಕ್ಕೆ ಸಂಬಂಧಿಸಿದಂತೆ ಅನೇಕ ದೇವಾಲಯಗಳಿಗೆ ದಾನ ನೀಡಿದ್ದನ್ನು ಕಾಣಬಹುದು. ನರಸರಾಜನು ಗೂಳ್ಳಿಂದ ವಿರುಪಾಕ್ಷ ದೇವರ ದೇವಾಲಯವನ್ನು ನಿರ್ಮಿಸಿ, ಹೊಲವನ್ನು ದತ್ತಿಯಾಗಿ ನೀಡಿದನು.[೧೬೬] ರಾಯಸದ ಕೊಂಡಮರಸಯ್ಯನು ಕಂಭದೂರಿನ ಮಲ್ಲಿಕಾರ್ಜುನ ದೇವರಿಗೆ ಹೊಲವನ್ನು ದತ್ತಿಯಾಗಿ ನೀಡಿದ್ದಾನೆ.[೧೬೭] ಸುಂಕಣ್ಣನಾಯಕ ಎಂಬುವನು ಚೆರವು ಬೆಳಗಲ್ಲಿನ ವೀರಭದ್ರನ ದೇವರಿಗೆ ಭೂಮಿಯನ್ನು ದೊರೆಗೆ

ಪುಣ್ಯವಾಗಲು ಎಂದು ನೀಡಿದನು.[೧೬೮] ಬಾಗಿಲ ಕೃಷ್ಣರಾಯ ನಾಯಕನು ದೊಡ್ಡ ಬಸವಣ್ಣ ದೇವರ ಅಮೃತ ಪಡಿಗೆ ಭೂಮಿಯನ್ನು ದಾನ ಕೊಟ್ಟ ವಿಷಯ ಅಲ್ಲಿನ ಶಾಸನದಿಂದ ತಿಳಿಯುತ್ತದೆ.[೧೬೯] ಕುರುಗೋಡಿನ ಮಲ್ಲಪ್ಪನಾಯಕರ ಹೆಂಡತಿಯಾದ ಬಲ್ಲಕುಂದೆಯ ಮಲ್ಲಮ್ಮ ಹೊಜೆಹಾಳ ಶಾಂತಮಲ್ಲಿಕಾರ್ಜುನ ದೇವರ ದೇವಾಲಯದ ಭೂಮಿಯನ್ನು ಜೀರ್ಣೋದ್ಧಾರ ಮಾಡಿ ದಾನವಾಗಿ ಬಿಟ್ಟಿರುವಳು.[೧೭೦] ಕುರಿಕುಪ್ಪೆಯ ಹೆಗ್ಗರಸನ ಮಗನಾದ ಬೆನಕರಸನು ವಿರುಪಾಕ್ಷ ದೇವಾಲಯವನ್ನು ಕಟ್ಟಿಸಿ ಬಸವಾದೀಕ್ಷಿತರಿಂದ ಭೂಮಿಯನ್ನು ಪಡೆದು ದಾನವಾಗಿ ನೀಡುತ್ತಾನೆ.[೧೭೧] ಅಚ್ಯುತರಾಯನ ಸಾಮಂತ ಅಧಿಕಾರಿಯಾಗಿದ್ದ ಬಯಕಾರ ರಾಮಪ್ಪನು ೧೫೩೯ರಲ್ಲಿ ತಿಮ್ಮಾಪುರದಲ್ಲಿ ಶಿವದೇಗುಲ, ಮಲ್ಲಿಕಾರ್ಜುನ, ವೀರಭದ್ರ, ದೇವೇಶ ಮತ್ತು ಕಾಶೀ ವಿಶ್ವನಾಥ ದೇವಾಲಯಗಳನ್ನು ನಿರ್ಮಿಸಿದನು.

೧೪೫೦ರ ದಾಖಲೆಯಲ್ಲಿ ಸಾಮಾನ್ಯ ಸ್ತ್ರೀಯಾಗಿದ್ದ ಲಕ್ಷ್ಮೀ ಬೋಯಿ ಅವ್ವೆ ತರಿಯೂರಿನಲ್ಲಿ ನಂದೀಕೇಶ್ವರ ದೇವರ ಪ್ರತಿಷ್ಠಾಪನೆ ಮಾಡಿರುವುದು ತಿಳಿದುಬರುತ್ತದೆ.[೧೭೨] ಕ್ರಿ.ಶ. ೧೪೦೧ರಲ್ಲಿ ತುಲುವಕ್ಕ ಹೆಗ್ಗಡಿತಿಯು ತುಳುವೇಶ್ವರ ಹಾಗೂ ಆ ದೇವರ ಸತ್ರಕ್ಕೆ ಭೂಮಿಗಳನ್ನು ದಾನ ಮಾಡಿದುದು ಕಂಡುಬರುತ್ತದೆ.[೧೭೩] ಅರಮನೆಯ ಹೊನ್ನಮವ್ವ[೧೭೪] ಮತ್ತು ಭೀಮಣ್ಣ ಎಂಬ ಭಂಡಾರಿಯ ಮರಿಮಗಳಾಗಿದ್ದ ಸುಂಕಮ್ಮ ಮೊದಲಿತ[೧೭೫] ಮಲ್ಲಿಕಾರ್ಜುನ ದೇವರಿಗೆ ಹಾಗೂ ಐವರು ಜಂಗಮರ ಆಹಾರಕ್ಕಾಗಿ ಜಮೀನುಗಳನ್ನು ಮತ್ತು ಮಹಾದೇವ ದೇವರ ಮೊಸರನ್ನ ನೈವೇಧ್ಯಕ್ಕಾಗಿ ಅರವತ್ತು ವರಾಹಗಳನ್ನು ಅರ್ಪಣೆ ಮಾಡಿದರು ಎಂದು ಕ್ರಿ.ಶ. ೧೫೧೦ರ ಶಾಸನಗಳು ತಿಳಿಸುತ್ತವೆ.

ಎರಡನೆಯ ಹರಿಹರ, ಒಂದನೆಯ ದೇವರಾಯ, ಕೃಷ್ಣದೇವರಾಯ, ಸದಾಶಿವರಾಯ, ಮೊದಲಾದವರು ಶಿವನ ನಾಣ್ಯವಿರುವ ಚಿನ್ನದ, ಬೆಳ್ಳಿಯ, ತಾಮ್ರದ ನಾಣ್ಯಗಳನ್ನು ಹೊರಡಿಸಿರುವುದು ಕಂಡುಬರುತ್ತದೆ.[೧೭೬]

ಹೊಯ್ಸಳ ಸಾಮ್ರಾಜ್ಯದ ಅವನತಿಯೊಂದಿಗೆ ವಿಜಯನಗರಕ್ಕೆ ಬಂದ ವೈಷ್ಣವ ಪಂಥದವರಿಗೆ ವಿಜಯನಗರದ ಮೊದಲ ರಾಜರಾದ ಸಂಗಮ ವಂಶಸ್ಥರು ಆಶ್ರಿತರಾಗಿದ್ದರು. ಅನಂತರದಲ್ಲಿ ವೈಷ್ಣವ ರಚನೆಗಳು ವಿಜಯನಗರ ಸಾಮ್ರಾಜ್ಯದಲ್ಲೆಲ್ಲೂ ಹರಡಿದವು. ಕ್ರಿ.ಶ. ೧೩೯೦ರಲ್ಲಿ ಅಂದರೆ ಇಮ್ಮಡಿ ಹರಿಹರನ ಕಾಲದಲ್ಲಿ ಸಾಯಣಯ್ಯ, ಅಕ್ಷುಗನಾಥ ಒಡೆಯ ಇವರ ಆಡಳಿತದಲ್ಲಿ ಶ್ರೀನಲಾನು ಚಕ್ರವರ್ತಿ ಅಯ್ಯ ಎನ್ನುವವನು ಪಂಪಾತೀರದ ತುಂಗಭದ್ರೆಯ ತಟದಲ್ಲಿ ನರಸಿಂಹ ದೇವರ ಮಂಟಪವನ್ನು ಕಟ್ಟಿಸಿದ ವಿವರವಿದೆ. ಈ ದೇವರನ್ನು ಅಹೋಬಲ ನರಸಿಂಹನೆಂದು ಕರೆದಿದೆ.[೧೭೭] ಕ್ರಿ.ಶ. ೧೩೮೭ರ ಇನ್ನೊಂದು ಶಾಸನದ ಪ್ರಕಾರ ಬುಕ್ಕರಾಯನ ಮಗ ವೀರ

ಹರಿಹರರಾಯನ ಆಳ್ವಿಕೆಯಲ್ಲಿ ಪಂಪಾ ಕ್ಷೇತ್ರದ ನರಸಿಂಹ ದೇವರ ಪಶ್ಚಿಮಕ್ಕೆ ಕ್ಷೇತ್ರಪಾಲನ ಆಲಯವನ್ನು ಹಿರಿಯ ತಮ್ಮ ಮತ್ತು ಚಿಕ್ಕ ತಮ್ಮಗಳು ಮಾಡಿಸಿದ ಉಲ್ಲೇಖವಿದೆ. ವೈಷ್ಣವ ಧರ್ಮವು ಸಂಗಮರ ಕಾಲಕ್ಕೆ ಶೈಶಾವ್ಯಸ್ಥೆಯಲ್ಲಿ ಇರುವುದು ಕಂಡುಬರುತ್ತದೆ. ೧೪ನೆಯ ಶತಮಾನದ ಧಾರ್ಮಿಕ ವಲಯದಲ್ಲಾದ ಬದಲಾವಣೆಗಳು ಅವುಗಳು ಒಳನೋಟಗಳು ತುಂಬಾ ವಿಭಿನ್ನತೆಯಿಂದ ಕೂಡಿದ. ತಮ್ಮ ತಮ್ಮ ಉಳಿವಿಗೆ ಶ್ರಮಿಸಿದ ಪರಿ ಮಹತ್ವವಾದದ್ದು. ವಿಜಯನಗರ ಕಾಲದಲ್ಲಿ ತುಳುವ ಮನೆತನಕ್ಕಿಂತ ಪೂರ್ವದ ಸಾಳುವ ವಂಶದಲ್ಲಿಯೇ ವೈಷ್ಣವ ಧರ್ಮವು ಪ್ರಾಬಲ್ಯಕ್ಕೆ ಬಂದಿತು. 'ಹರಿಯೇ ಪರಮ ಸತ್ಯ. ಜಗತ್ತು ಮಿಥ್ಯವಲ್ಲ, ಸತ್ಯವೇ, ಎಂಬ ಸಿದ್ಧಾಂತದ ಪ್ರತಿಪಾದಕರು ವೈಷ್ಣವರು ಮಧ್ವಾಚಾರ್ಯರು (ಕ್ರಿ.ಶ. ೧೨೩೮–೧೩೧೭) ಈ ಪಂಥದ ಮೂಲಸ್ಥಾಪಕರು. ವಿಜಯನಗರವನ್ನಾಳಿದ ಎರಡನೆಯ ರಾಜಮನೆತನವಾದ ಸಾಳುವ ವಂಶದ ಕಾಲಕ್ಕೆ ಈ ವೈಷ್ಣವ ಧರ್ಮವು ಹೆಚ್ಚಿನ ಪ್ರಾಶಸ್ತ್ಯ ಪಡೆಯಿತು. ಅಲ್ಲಿಯವರೆಗೂ ಪ್ರಚಲಿತದಲ್ಲಿದ್ದ ಶೈವ ಪಂಥದ ಸ್ಥಾನವನ್ನು ಅಲಂಕರಿಸಿತು. ಶೈವ ಪಂಥದಷ್ಟೇ ಜನಮನ್ನಣೆಯನ್ನು ಪಡೆಯಿತು.

ವಿಷ್ಣುವಿನ ಆರಾಧಕರಲ್ಲೂ ಎರಡು ಪ್ರಮುಖ ಬಣಗಳಿರುವುದು ಕಂಡುಬರುತ್ತದೆ. ಅಂದಿನ ಧಾರ್ಮಿಕ ಪರಿಸರದ ಮೇಲೆ ಈ ಬಣಗಳ ಆಚಾರ–ವಿಚಾರಗಳು ಪ್ರಭಾವ ಬೀರಿವೆ. ಮಧ್ವಾಚಾರ್ಯರರನ್ನು ತಮ್ಮ ಪಂಥದ ಮೂಲ ಪ್ರವರ್ತಕರನ್ನಾಗಿ ಗುರುತಿಸಿಕೊಂಡು ಅವರ ಅನುಯಾಯಿಗಳಾಗಿ 'ದ್ವೈತಿ'ಗಳು ಧರ್ಮ ಪ್ರಚಾರ ಮಾಡಿದರು. ಈ ಪಂಥದವರು ಪುರಿಯ ಜಗನ್ನಾಥ ಸ್ವಾಮಿ ಸನ್ನಿಧಿಯನ್ನು ತಮ್ಮ ಮುಖ್ಯ ಧಾರ್ಮಿಕ ಕ್ಷೇತ್ರವನ್ನಾಗಿ ಪರಿಗಣಿಸುತ್ತಾರೆ. ವಿಜಯನಗರ ಕಾಲದಲ್ಲಿ ಪದ್ಮನಾಭತೀರ್ಥ, ನರಹರಿತೀರ್ಥ, ಮಾಧವತೀರ್ಥ, ಜಯತೀರ್ಥ, ವ್ಯಾಸತೀರ್ಥ, ವಾದಿರಾಜತೀರ್ಥ ಮೊದಲಾದವರು ದ್ವೈತ ಸಿದ್ಧಾಂತವನ್ನು ಪ್ರಚಾರ ಮಾಡಿದರು. ಇವರನ್ನು ವೈಷ್ಣವರೆಂದು ಕರೆಯಲಾಗಿದೆ.

ವಿಶಿಷ್ಟಾದ್ವೈತಿಗಳು ರಾಮಾನುಜಾಚಾರ್ಯರನ್ನು ಮುಖ್ಯ ಪ್ರವರ್ತಕರೆಂದು ತಿಳಿದು ಅವರ ತತ್ವಗಳನ್ನು ಪ್ರಚಾರ ಮಾಡಿದರು. ಇವರ ಅನುಯಾಯಿಗಳನ್ನು ಶ್ರೀವೈಷ್ಣವವರೆಂದು ಕರೆಯಲಾಗಿದೆ. ಶ್ರೀವೈಷ್ಣವರು ವಿಜಯನಗರವನ್ನಾಳಿದ ಕೃಷ್ಣದೇವರಾಯ, ಅಚ್ಯುತದೇವರಾಯ, ಸದಾಶಿವರಾಯ, ರಾಮರಾಯನ ಕಾಲದವರೆಗೂ ಹೆಚ್ಚಿನ ಪ್ರಾಬಲ್ಯವನ್ನು ಪಡೆದಿದ್ದರು. ಈ ಕಾಲದಲ್ಲಿ ವೇದಾಂತ ದೇಶಿಕರು, ತಾತಾಚಾರ್ಯರು, ಶ್ರೀವೈಷ್ಣವ ಧರ್ಮವನ್ನು ಪ್ರಚಾರ ಮಾಡಿದರು. ವೆಂಕಟೇಶ್ವರನ ನಿವಾಸಸ್ಥಾನ ತಿರುಮಲವು ಈ ಪಂಥದವರ ಮುಖ್ಯ ಆರಾಧನಾ ಕ್ಷೇತ್ರವಾಗಿದೆ.

ವೈಷ್ಣವ ಧರ್ಮವು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಪ್ರಮುಖವಾದ ಸ್ಥಾನವನ್ನು ಪಡೆಯಲು ಇಲ್ಲಿನ ರಾಜರು, ಅಧಿಕಾರಿಗಳು, ಜನಸಾಮಾನ್ಯರು, ದೇವಾಲಯಗಳ ನಿರ್ಮಾಣ,

ಪುನರುದ್ಧಾರ, ದಾನಾದಿಗಳ ಕೊಡುವ ಮೂಲಕ ಕಾರಣಕರ್ತರಾಗಿದ್ದಾರೆ. ಕ್ರಿ.ಶ. ೧೪೧೦ರಲ್ಲಿ ನಾಗಯನಾಯಕನು ತನ್ನ ತಂದೆ ಕೇಶವನಾಯಕನ ಹೆಸರಿನಲ್ಲಿ ಗೋಪಿನಾಥ ದೇವರನ್ನು, ಮಹಾಲಕ್ಷ್ಮೀ ಮಂಟಪವನ್ನು ನಿರ್ಮಿಸಿದನು.[೧೭೮] ಕಾಲದ ಉಲ್ಲೇಖವಿಲ್ಲದ ಮತ್ತೊಂದು ಶಾಸನ ತಿಮ್ಮಪ್ಪನು ತನ್ನ ತಂದೆ ತಿರುಮಲಭದ್ರನಿಗೆ ಪುಣ್ಯವಾಗಬೇಕೆಂದು ತಿರುವೆಂಗಳನಾಥ ದೇವರ ಮಧ್ಯಾಹ್ನದ ಅವಸರದ ನೈವೇಧ್ಯ ಮತ್ತು ಆ ನೈವೇಧ್ಯದಲ್ಲಿ ಬ್ರಾಹ್ಮಣರ ಭೋಜನಕ್ಕೆಂದು ಸೂಗೂರಲ್ಲಿ ೪ ವಿತ್ತಿಗಳನ್ನು ದಾನವಾಗಿ ನೀಡಿದ್ದನ್ನು ನೋಡಬಹುದು.[೧೭೯] ಕೃಷ್ಣದೇವರಾಯನು ಸಾಮ್ರಾಜ್ಯದಲ್ಲಿ ವಿಭಿನ್ನ ಧರ್ಮಗಳಿಗೆ ಪ್ರೋತ್ಸಾಹ ನೀಡಿ ಧರ್ಮ ಸಮನ್ವಯತೆಯನ್ನು ಕಾಪಾಡಿಕೊಂಡು ಬಂದಿದ್ದನು. ಆತನಿಗೆ ವೈಷ್ಣವಧರ್ಮದಲ್ಲಿ ವಿಶೇಷ ಒಲುವು ಇದ್ದದ್ದು ಕಂಡುಬರುತ್ತದೆ. ಕ್ರಿ.ಶ. ೧೫೧೩ರಲ್ಲಿ ಕೃಷ್ಣದೇವರಾಯನು ಉದಯಗಿರಿಯಿಂದ ತಂದಂಥ ಬಾಲಕೃಷ್ಣ ದೇವರ ಪ್ರತಿಷ್ಠೆ ಮಾಡಿಸಿ ಆಭರಣಗಳನ್ನು, ಪೂಜಾಸಾಮಾಗ್ರಿಗಳನ್ನು ಸಮರ್ಪಿಸುತ್ತಾನೆ. ದೇವರ ನಿತ್ಯ ನೈಮಿತ್ತಿಕೆಗಳು ಕ್ರಮವಾಗಿ ನಡೆಯುವಂತೆ ಅತ್ತಿವಡೆ, ಮುದಲಾಪುರ, ದೇವಲಾಪುರ, ಹರಿಯ ಸಮುದ್ರ, ಬಾದನಹಟ್ಟಿ, ರುದ್ರಪಾದಗಳನ್ನು ಕೃಷ್ಣಪುರದ ಸ್ಥಳ ಸುಂಕವನ್ನು ದೇವರಿಗೆ ಸಮರ್ಪಿಸಿದನು.[೧೮೦] ಶ್ರೀ ಕೃಷ್ಣದೇವರಾಯನಿಗೆ ತಿರುಮಲೆಯ ತಿರುವೇಂಗಳನಾಥನು ಕುಲದೈವವಾಗಿದ್ದನು. ತನ್ನ ಆಡಳಿತದ ಅವಧಿಯಲ್ಲಿ ಏಳು ಸಲ ತೀರ್ಥಯಾತ್ರೆ ಕೈಗೊಂಡು ದೇವಾಲಯದಲ್ಲಿ ಭಕ್ತ ವಿಗ್ರಹಗಳಾಗಿ ತನ್ನ ಹಾಗೂ ತನ್ನ ಇಬ್ಬರು ರಾಣಿಯರ ವಿಗ್ರಹಗಳನ್ನು ನಿಲ್ಲಿಸಿದನು. ತನ್ನ ಮಗನಿಗೆ ತಿರುಮಲರಾಯನೆಂದು ಹೆಸರಿಟ್ಟನು. ಶ್ರೀ ಕೃಷ್ಣದೇವರಾಯನು ಕೊಂಡವೀಡು ಮತ್ತು ಉದಯಗಿರಿಗಳನ್ನು ಜಯಿಸಿ ಬರುವ ಕಾಲಕ್ಕೆ ತಿರುಮಲೆಯ ದೇವರಿಗೆ ಕನಕಾಭಿಷೇಕ ಮಾಡಿಸುವ ಸಲುವಾಗಿ ವೆಂಕಟೇಶ್ವರನ ಚಿತ್ರವಿರುವ ೧೧೭ ಗ್ರೇನ್ ತೂಕವಿರುವ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇದನ್ನು ಶಾಸನಗಳು ದೃಢಪಡಿಸುತ್ತವೆ. ರಾಯನು ನವರತ್ನ ಮಾಲಿಕೆಯನ್ನು ದೇವರಿಗೆ ಅರ್ಪಿಸಿದ ವಿವರಗಳು ತಿರುಮಲೆಯ ದೇವಾಲಯದ ಶಾಸನಗಳಲ್ಲಿ ವಿವರವಾಗಿ ಹೇಳಲ್ಪಟ್ಟಿವೆ.[೧೮೧] ಒರಿಸ್ಸಾ ರಾಜ್ಯದ ಮೇಲೆ ವಿಜಯವನ್ನು ಸಾಧಿಸಿ, ಅಲ್ಲಿಂದ ತಂದ ಬಾಲಕೃಷ್ಣನ ವಿಗ್ರಹವನ್ನು ಹಂಪೆಯಲ್ಲಿ ಪ್ರತಿಷ್ಠಾಪಿಸಿ ಅದರ ಜ್ಞಾನಕಾರ್ಥವಾಗಿ ೫೨/೧೩ ಗ್ರೇನ್ ತೂಕದ ಬಾಲಕೃಷ್ಣನ ಚಿತ್ರವಿರುವ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದ. ಈ ಬಾಲಕೃಷ್ಣನ ಬಲಗೈಯಲ್ಲಿ ಬೆಣ್ಣೆಯ ಮುದ್ದೆಯಿದೆ.[೧೮೨] ಕೃಷ್ಣದೇವರಾಯನ ಅಧಿಕಾರಿಗಳು ವೇಂಗಡದ ದೇವರಿಗೆ ಹಲವು ಬಗೆಯ ಸೇವೆಗಳನ್ನು ಸಲ್ಲಿಸಿದ್ದರು. ಪ್ರಧಾನಮಂತ್ರಿ ಸಾಳುವ ತಿಮ್ಮಣ್ಣ ದಂಡನಾಥನು, ಸಾಳುವ ಗೋವಿಂದ ರಾಜನೂ ಕ್ರಿ.ಶ. ೧೫೧೨-೨೨ರ ಸುಮಾರಿಗೆ ಪರಾಂದಲೂರು, ಮೇಲ್‌ಪಾಡಿ ಗ್ರಾಮಗಳನ್ನು ದೇವಾಲಯಕ್ಕೆ ನೀಡಿದರು.[೧೮೩] ರಾಯನ ಸೇನಾಧಿಪತಿಯಾಗಿದ್ದ ಓಬಳನಾಯಕ್ಕರ್ ಕ್ರಿ.ಶ. ೧೫೧೪ರ ಸುಮಾರಿಗೆ ವೆಂಕಟೇಶ್ವರ ದೇವರೆದುರಿಗೆ ೨೫೦ ಹಸುಗಳನ್ನು ದಾನವಾಗಿ

ನೀಡಿದನು.[೧೮೪] ರಾಯಸಂ ಕೊಂಡಮರಸಯ್ಯನು ದೇವಾಲಯದ ಬೊಕ್ಕಸಕ್ಕೆ ಮುಲುಂಬುಂಡಿ ಎಂಬ ಗ್ರಾಮದ ಉತ್ಪತ್ತಿಯನ್ನು ಸಲ್ಲಿಸಿದನು.[೧೮೫] ಶ್ರೀಕೃಷ್ಣದೇವರಾಯನು ಸಾಮ್ರಾಜ್ಯದ ಹಲವಾರು ವೈಷ್ಣವ ಕ್ಷೇತ್ರಗಳನ್ನು ದರ್ಶಿಸಿ ಹಲವು ದತ್ತಿಗಳನ್ನು ನೀಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ.

ಶ್ರೀ ಕೃಷ್ಣದೇವರಾಯನು ಶ್ರೀರಂಗಪಟ್ಟಣದ ಶ್ರೀರಂಗನಾಥ ದೇವರಿಗೆ ಗ್ರಾಮದಾನ ನೀಡಿದನು.[೧೮೬] ಅಹೋಬಲ ನರಸಿಂಹ ದೇವರಿಗೆ,[೧೮೭] ಸಿಂಧನೂರು ಜನಾರ್ಧನ ದೇವರಿಗೆ,[೧೮೮] ಹಂಪೆಯ ವಿಠ್ಠಲ ದೇವಾಲಯಕ್ಕೆ,[೧೮೯] ಹಂಪೆಯ ಬಾಲಕೃಷ್ಣ ದೇವಾಲಯಕ್ಕೆ,[೧೯೦] ಪುಷ್ಪಗಿರಿಯ ಚನ್ನಕೇಶವ ದೇವರಿಗೆ,[೧೯೧] ನಾಗಲಾಪುರ ಕರಿಯಾ ಮಾಣಿಕ್ಯಪೆರುಮಾಳ ದೇವಾಲಯಕ್ಕೆ,[೧೯೨] ಅಣ್ಣಿಯೂರು ವರದರಾಜ್ ಪೆರುಮಾಳ್ ದೇವರಿಗೆ,[೧೯೩] ಕಂಚೀಪುರಂನ ಗೋವಿಂದರಾಜ ದೇವರಿಗೆ,[೧೯೪] ಬೇಲೂರಿನ ಚೆನ್ನಕೇಶವ ದೇವಾಲಯಕ್ಕೆ,[೧೯೫] ಚಿನ್ನ ಅಹೋಬಲಂನ ನರಸಿಂಹ ದೇವರಿಗೆ,[೧೯೬] ಉಮ್ಮತ್ತೂರಿನ ತಿರುಮಲ ದೇವರಿಗೆ ಗ್ರಾಮದ ಸರ್ವಮಾನ್ಯ[೧೯೭] ನಾಗಲಾಪುರದ ನಾಗೇಂದ್ರಶಯನ ದೇವಾಲಯದ ನಿರ್ಮಾಣ,[೧೯೮] ರಾಮಘಡದ ರಾಮನಾಥ ದೇವಾಲಯ ನಿರ್ಮಾಣ,[೧೯೯] ಶ್ರೀಕೃಷ್ಣದೇವರಾಯನಲ್ಲಿರುವ ವೈಷ್ಣವ ಧರ್ಮದ ಪ್ರೋತ್ಸಾಹ ಮತ್ತು ನಿಷ್ಠೆಯನ್ನು ದೇವಾಲಯಗಳಿಗೆ ನೀಡಿದ ದಾನದತ್ತಿ, ದೇವಾಲಯಗಳ ನಿರ್ಮಾಣ ಕಾರ್ಯ, ದೇವಾಲಯಗಳ ಜೀರ್ಣೋದ್ಧಾರ ಕಾರ್ಯದಿಂದ ತಿಳಿದುಬರುತ್ತದೆ. ಕೃಷ್ಣದೇವರಾಯನ ರಾಣಿಯಾಗಿದ್ದ ತಿರುಮಲದೇವಿ ಹಾಗೂ ಚಿನ್ನಾದೇವಿ ತಿರುಪತಿಯ ಭಗವಂತನಿಗೆ ಚಿನ್ನದ ಬಟ್ಟಲು, ತಟ್ಟೆ, ಕಂಠೀಹಾರ, ಪದಕಹಾರ, ಗ್ರಾಮ ಇತ್ಯಾದಿಗಳನ್ನು ಅರ್ಪಿಸಿದರು ಮತ್ತು ಅಚ್ಯುತರಾಯನ ರಾಣಿ ವರದಾಂಬಿಕಾ ಅದೇ ದೇವರ ಪೊಂಗಲ್ ನೈವೇಧ್ಯಕ್ಕಾಗಿ ಆರು ಹಳ್ಳಿಗಳನ್ನು ಕಾಣಿಕೆಯಾಗಿ ನೀಡಿದಳು ಎಂಬುದು ತಿರುಮಲೈ ತಿರುಪತಿ ದೇವಸ್ಥಾನದ ದಾಖಲೆ ಹಾಗೂ ಇತರ ಶಾಸನಗಳಿಂದ ತಿಳಿದುಬರುತ್ತದೆ.

ಕ್ರಿ.ಶ. ೧೫೩೨ರ ಶಾಸನದಲ್ಲಿ ಅಚ್ಯುತದೇವರಾಯನು ಬಾಲಕೃಷ್ಣ ದೇವರಿಗೆ ೮೦೦ ಗದ್ಯಾಣದ ಶುದ್ಧ ವರಹಗಳನ್ನು ಸಮರ್ಪಿಸಿದನು. ಇದೇ ಶಾಸನದಲ್ಲಿ ವರದಾಜಿದೇವಿ ಅಮ್ಮನು ದೇವರಿಗೆ ೨೪೦ ಚಕ್ರಗದ್ಯಾಣ, ಚಿನ್ನದ ಉಯ್ಯಾಲೆಯ ತಿರುನಾಳಕ್ಕೆ ೩೦೦ ಚಕ್ರ ಗದ್ಯಾಣ, ಕೊಡೆ ತಿರುನಾಳಕ್ಕೆ ೩೦೦ ಚಕ್ರಗದ್ಯಾಣ ಒಟ್ಟು ೩೮೪೦ ಚಕ್ರಗದ್ಯಾಣ ದಾನವನ್ನಾಗಿ ನೀಡಿ ಪೂಜಾ ಪ್ರಸಾದ ಪಂಚನಾಥ ಮತ್ತು ಪರದೇಶಿ ಶ್ರೀ ವೈಷ್ಣವರಿಗೆ ನೀಡಬೇಕೆಂಬ ಉಲ್ಲೇಖವಿದೆ.[೨೦೦]

ವಿಜಯನಗರ ಸಾಮ್ರಾಜ್ಯದಲ್ಲಿ ಜನಸಾಮಾನ್ಯರು ತಮಗಿಷ್ಟ ಬಂದ ಧರ್ಮವನ್ನು ಆಚರಿಸಲು ಸ್ವತಂತ್ರರಾಗಿದ್ದದ್ದು ಕಂಡುಬರುತ್ತದೆ. ಅನೇಕ ಜನಸಾಮಾನ್ಯರು, ಮಹಿಳೆಯರು ತಾವು ಅವಲಂಬಿಸಿದ ಧರ್ಮಕ್ಕೆ ಅನೇಕ ದಾನದತ್ತಿ, ಕೊಡುಗೆಗಳನ್ನು ಕೊಟ್ಟಿರುವುದನ್ನು ಕಾಣಬಹುದಾಗಿದೆ. ಸದಾಶಿವರಾಯನ

ಆಳ್ವಿಕೆ ಕಾಲದಲ್ಲಿ ಪಾತ್ರದ ಬೆಂಪಾಯಿ ಎನ್ನುವಳು ಬಾಲಕೃಷ್ಣ ದೇವರ ಏಕಾಂತರ ಅವಸರದ ಪರಮಾನ್ನ ನೈವೇಧ್ಯಕ್ಕೆ ೩ ಕೂಳಿಗ ಹೊಲ ಬಿಡುತ್ತಾಳೆ.[೨೦೧] ಕುರುಬ ಜಾತಿಯ ಗೋವಿಂದಿ ಶ್ರೀ ವೆಂಕಟೇಶ ಪರಮಾತ್ಮನ ನೈವೇದ್ಯಕ್ಕೆ ಬ್ರಹ್ಮೋತ್ಸವದಲ್ಲಿ ೭ ದಿನಗಳ ಸೇವೆಗಾಗಿ ೨೧೮೦ ಪಣವನ್ನು,[೨೦೨] ತಿರುಮಲಮ್ಮನ್ ಶ್ರೀ ಗೋವಿಂದರಾಜ ದೇವಸ್ಥಾನಕ್ಕೆ ೪೦೦ ಪಣವನ್ನು ಅರ್ಪಿಸಿದಳು ಎನ್ನುವ ವಿವರಗಳು ೧೫೪೧ ಹಾಗೂ ೧೫೪೫ರ ದಾಖಲೆಗಳಲ್ಲಿವೆ.[೨೦೩] ಬಯಕಾರ ರಾಮಪ್ಪನ ತಂದೆ ತಿಮ್ಮರಸಯ್ಯನು ಕೊಂಡವೀಡು ಸೀಮೆಗೆ ಸೇರಿದ ಮೂರು ಗ್ರಾಮಗಳನ್ನು ತಿರುಪತಿಯ ಗೋವಿಂದರಾಜಸ್ವಾಮಿ ಅಭಿಷೇಕಕ್ಕಾಗಿ ದಾನವಾಗಿ ನೀಡಿದ್ದನು. ಬಯಕಾರ ರಾಮಪ್ಪನು ತನ್ನ ತಂದೆಯ ದಾನವನ್ನು ನವೀಕರಿಸಿದ್ದಲ್ಲದೆ, ಇನ್ನೂ ಹಲವಾರು ಗ್ರಾಮಗಳನ್ನು ಗೋವಿಂದರಾಜ ಸ್ವಾಮಿಗೂ ಆ ದೇಗುಲದ ಆವರಣದಲ್ಲಿರುವ ಪರಿವಾರ ದೇವೆಗಳ ಪೂಜೆಗಾಗಿ ಕ್ರಿ.ಶ. ೧೫೪೪ರಲ್ಲಿ ದಾನವಾಗಿ ನೀಡಿದನು. ಕ್ರಿ.ಶ. ೧೫೫೯ರಲ್ಲಿ ತಿಮ್ಮಲಾಪುರದಲ್ಲಿ ತನ್ನ ತಂದೆಯಾದ ಹಿರಿಯ ತಿಮ್ಮರಸಯ್ಯ ಮತ್ತು ತಾಯಿ ಹಿರಿಯ ಲಕಲೀಶಮ್ಮನಿಗೆ ಪುಣ್ಯವಾಗಬೇಕೆಂದು ಬಯಕಾರ ರಾಮಪ್ಪನು ಗೋಪಿನಾಥ ತಿರುವೆಂಗಳನಾಥ ದೇವರಿಗೆ ಕೋನಸಮುದ್ರ ಗ್ರಾಮವನ್ನು ದಾನವಾಗಿ ಅರ್ಪಿಸಿದನು.[೨೦೪] ಕಂಡಾದ ರಾಮಾನುಜ ಅಯ್ಯಂಗಾರ್ ನಡೆಸುತ್ತಿದ್ದ ಛತ್ರದಲ್ಲಿ ಆಹಾರ ದಾನಕ್ಕಾಗಿ ಬಂಗಾರ ದಾನ ಮಾಡಿದ ಓರ್ವ ಮಹಾಮಂಡಳೇಶ್ವರನ ರಾಣಿ ನರಸಮ್ಮನ್, ಮೇಲು ಕೋಟೆಯ ೫೨ ಜನ ಶ್ರೀವೈಷ್ಣವ ಬ್ರಾಹ್ಮಣರಿಗೆ ದತ್ತಿಗಳನ್ನು ನೀಡಿದ ನಾಚಾರಮ್ಮ ಮುಂತಾದವರನ್ನು ೧೪೯೭ರ ಶಾಸನಗಳು ಸ್ತುತಿಸಿವೆ.[೨೦೫]

ಪ್ರಾಚೀನ ನಾಣ್ಯಗಳು ಆ ಕಾಲದ ಧಾರ್ಮಿಕ ಸ್ಥಿತಿಗತಿಗಳನ್ನು ತಿಳಿಯುವುದಕ್ಕೆ ಸಹಾಯಕವಾಗಿವೆ. ಎನ್ನುವುದು ತಿಳಿದ ಅಂಶವೇ ಆಗಿದೆ. ವಿಜಯನಗರ ಕಾಲದ ನಾಣ್ಯಗಳು ಆ ಕಾಲದ ಧಾರ್ಮಿಕ ಸ್ಥಿತಿಗತಿಗಳನ್ನು ಯಾವ ರೀತಿಯಾಗಿ ಪ್ರತಿಬಿಂಬಿಸುತ್ತವೆ ಎನ್ನುವುದನ್ನು ನಾಣ್ಯಗಳ ಮೇಲಿರುವ ದೇವ ದೇವತೆಗಳ ಚಿತ್ರಗಳಿಂದ ಕಂಡುಕೊಳ್ಳಬಹುದಾಗಿದೆ.

ವಿಜಯನಗರದ ಅರಸನಾದ ಒಂದನೆಯ ದೇವರಾಯನ ಚಿನ್ನದ ವರಹ ಮತ್ತು ಅರ್ಧ ವರಹಗಳ ಮೇಲೆ ವಿಷ್ಣು ಮತ್ತು ಲಕ್ಷ್ಮೀಯ ಚಿತ್ರವನ್ನು ಕಾಣಬಹುದು.[೨೦೬] ಎರಡನೇ ಹರಿಹರ ಚಿನ್ನದ ನಾಣ್ಯದ ಮೇಲೆ ಇದೇ ದೇವತೆಗಳನ್ನು ಮುದ್ರಿಸಲಾಗಿದ್ದು, ಇದರ ಜೊತೆಗೆ ವಿಷ್ಣುವಿನ ಮತ್ತೊಂದು ಕೈ ಲಕ್ಷ್ಮೀಯನ್ನು ಬಳಸಿದ್ದು, ಉಳಿದ ಕೈಯನ್ನು ಅಭಯ ಮುದ್ರೆಯಲ್ಲಿ ತೋರಿಸಲಾಗಿದೆ.[೨೦೭]

ಸದಾಶಿವರಾಯನ ಚಿನ್ನದ ವರಹಗಳ ಮೇಲೆ ಲಕ್ಷ್ಮೀ ಮತ್ತು ವಿಷ್ಣು ಕಿರೀಟಧಾರಿಗಳಿಗೆ ಮತ್ತು ಇತರ ಆಭರಣಗಳನ್ನು ಧರಿಸಿ ಉತ್ತರದ ಪೀಠದ ಮೇಲೆ ಕುಳಿತಿರುವುದು ಕಂಡುಬರುತ್ತದೆ.

ವಿಷ್ಣು ತನ್ನ ಕೈಗಳಲ್ಲಿ ಶಂಖ ಮತ್ತು ಚಕ್ರಗಳನ್ನು ಹಿಡಿದಿದ್ದಾನೆ.[೨೦೮] ಮೊದಲನೆಯ ಹರಿಹರನು ಮೊಟ್ಟಮೊದಲಿಗೆ ಗರುಡ ದೇವತೆಯನ್ನು ನಾಣ್ಯಗಳ ಮೇಲೆ ಚಿತ್ರಿಸಿದ್ದಾನೆ. ಕೃಷ್ಣದೇವರಾಯನು,[೨೦೯] ಸದಾಶಿವರಾಯನು,[೨೧೦] ವೆಂಕಟಪತಿರಾಯನು,[೨೧೧] ಗರುಡನ ಚಿತ್ರವಿರುವ ನಾಣ್ಯಗಳನ್ನು ಮುದ್ರಿಸಿದ್ದಾರೆ. ಈ ನಾಣ್ಯಗಳು ತಾಮ್ರದವಾಗಿರುವುದು ಕಂಡುಬರುತ್ತದೆ. ಶ್ರೀ ಕೃಷ್ಣದೇವರಾಯನು ವೆಂಕಟೇಶ್ವರನಿಗೆ ಕನಕಾಭಿಷೇಕವನ್ನು ಮಾಡಿಸುವ ಉದ್ದೇಶಕ್ಕಾಗಿ ನಾಣ್ಯಗಳನ್ನು ಟಂಕಿಸಿದ್ದು ಕಂಡುಬರುತ್ತದೆ. ಈ ನಾಣ್ಯದಲ್ಲಿ ಕಮಲದ ಮೇಲೆ ಎತ್ತರವಾದ ಕಿರೀಟ ಧರಿಸಿ ನಿಂತಿರುವ ವೆಂಕಟೇಶ್ವರ ಚಿತ್ರವಿದ್ದು, ನಾಲ್ಕು ಕೈಗಳಲ್ಲಿ ಬಲಗೈ ಚಕ್ರವನ್ನು ಹಿಡಿದಿದ್ದರೆ, ಎಡಗೈ ಶಂಖವನ್ನು ಹಿಡಿದಿದೆ. ಬಲಗಡೆಯ ಮುಂದಿನ ಕೈ ಅಭಯ ಮುದ್ರೆಯಲ್ಲಿದೆ.[೨೧೨] ವೆಂಕಟೇಶ್ವರನಿರು ನಾಣ್ಯಗಳನ್ನು ಶ್ರೀರಂಗರಾಯನು,[೨೧೩] ಎರಡನೆಯ ವೆಂಕಟರಾಯನು,[೨೧೪] ಮೂರನೆಯ ವೆಂಕಟರಾಯನು,[೨೧೫] ಹೊರಡಿಸಿರುವುದು ಕಂಡುಬರುತ್ತದೆ. ಎರಡನೆಯ ಹರಿಹರನ ನಾಣ್ಯಗಳ ಮೇಲೆ ಲಕ್ಷ್ಮೀ ಮತ್ತು ನರಸಿಂಹ ಎತ್ತರವಾದ ಪೀಠದ ಮೇಲೆ ಕುಳಿತಿರುವುದು ಕಂಡುಬರುತ್ತದೆ.[೨೧೬]

ಕೃಷ್ಣದೇವರಾಯನು ಉದಯಗಿರಿಯ ಮೇಲಿನ ತನ್ನ ದಿಗ್ವಿಜಯದ ನಂತರ ಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸಿದ ಘಟನೆಯ ನೆನಪಿಗಾಗಿ ಬಾಲಕೃಷ್ಣ ಮಾದರಿಯ ಏಳು ವಿಭಿನ್ನ ರೀತಿಯ ನಾಣ್ಯಗಳನ್ನು ಹೊರಡಿಸಿರುವುದು ಕಂಡುಬರುತ್ತದೆ.[೨೧೭]

ಅಹಿಂಸೆಯನ್ನೇ ಪ್ರಧಾನ ತಿರುಳನ್ನಾಗಿಸಿಕೊಂಡ ಜೈನಧರ್ಮ ಶತಮಾನಗಳಷ್ಟು ಹಳೆಯದು. ಮಹಾವೀರ ಇದರ ಸಂಸ್ಥಾಪಕ. ಜೈನರಲ್ಲಿ ಶ್ವೇತಾಂಬರ ಹಾಗೂ ದಿಗಂಬರ ಎಂಬ ಎರಡು ಬಣಗಳಿವೆ. ಜೈನ ಧರ್ಮವು ವಿಜಯನಗರ ಸ್ಥಾಪನೆಯ ವೇಳೆಗೆ ಕರ್ನಾಟಕದಲ್ಲಿ ಹರಡಿತ್ತು. ವಿಜಯನಗರದ ಅರಸರು ಜೈನ ಧರ್ಮಕ್ಕೆ ಹಾಗೂ ಅದರ ಅನುಯಾಯಿಗಳಿಗೆ ಪ್ರೋತ್ಸಾಹವನ್ನು ಕೊಟ್ಟಿದ್ದರು. ವಿಜಯನಗರ ಸಾಮ್ರಾಜ್ಯದ ಮಾಂಡಲೀಕರಾಗಿದ್ದ ಚೌಡರು, ಅಜಿಲರು, ಬೈರರು ಜೈನಧರ್ಮಕ್ಕೆ ಆಶ್ರಯದಾತರಾಗಿದ್ದರು. ವಿಜಯನಗರ ಸೈನ್ಯದಲ್ಲಿ ಹಾಗೂ ಮಾಂಡಲೀಕರ ಸೈನ್ಯದಲ್ಲಿ ಜೈನ ಧರ್ಮೀಯರಿಗೆ ಉನ್ನತ ಹುದ್ದೆಗಳನ್ನು ನೀಡಲಾಗಿತ್ತು. ಇರುಗಪ್ಪ ದಂಡನಾಥ, ಲಕ್ಕಣ್ಣ ದಂಡನಾಥ ಅಂಥವರಲ್ಲಿ ಪ್ರಮುಖರು. ವಿಜಯನಗರ ಕಾಲದಲ್ಲಿ ಬಾಹುಬಲಿ ಪಂಡಿತ ಕ್ರಿ.ಶ. ೧೩೫೨, ಕೇಶವವರ್ಣಿ ಕ್ರಿ.ಶ. ೧೩೮೫, ಆಯತವರ್ಮ ಕ್ರಿ.ಶ. ೧೪೦೦, ಚಂದ್ರಕೀರ್ತಿ ಮೊದಲಾದ ಜೈನಕವಿಗಳು ಇದ್ದದ್ದು ಕಂಡುಬರುತ್ತದೆ.

ವಿಜಯನಗರ ಪಟ್ಟಣದಲ್ಲಿರುವ ಕೃಷ್ಣ ದೇವಾಲಯದ ಹತ್ತಿರವಿರುವ ಆಂಜನೇಯ ದೇವಾಲಯದ ಮುಂದೆ ಇರುವ ಶಾಸನವು ಆದಿನಾಥ ಮತ್ತು ಪಾರ್ಶ್ವನಾಥನಿಗೆ ಮಠ, ಮಂಟಪ, ತೋರಣವನ್ನು

ಬಸವ ದಂಡನಾಯಕ ಕಟ್ಟಿಸಿರುವುದನ್ನು ತಿಳಿಸುವುದು.[೨೧೮] ಇನ್ನೊಂದು ಶಾಸನವು ಬೈಚಯ್ಯ ದಂಡನಾಯಕ ಚೈತ್ಯಾಲಯನವನ್ನು ಮತ್ತು ಕುಂತುನಾಥ ತೀರ್ಥಂಕರ ವಿಗ್ರಹದ ಪ್ರತಿಷ್ಠಾಪನೆ ಮಾಡಿಸಿರುವನ್ನು ತಿಳಿಸುವುದು. ಆನೆಗೊಂದಿಯಲ್ಲಿರುವ ಶಾಸನವು ಹರಿಹರನ ಮಹಾದಂಡ ನಾಯಕನಾದ ಇರುಗಪ್ಪ ದಂಡನಾಯಕನು ಚೈತ್ಯಾಲಯವನ್ನು ಕಟ್ಟಿಸಿರುವುದನ್ನು ತಿಳಿಸುವುದು.[೨೧೯] ವಿಜಯನಗರದ ಅರಸ ಎರಡನೆಯ ದೇವರಾಯನು ಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿರುವುದನ್ನು ಇನ್ನೊಂದು ಶಾಸನವು ತಿಳಿಸುತ್ತದೆ. ಎರಡನೆಯ ದೇವರಾಯನ ರಾಣೀ ಭೀಮಾದೇವಿಯು ಶಾಂತಿನಾಥ ಸ್ವಾಮಿಯ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿದ್ದನ್ನು ಶ್ರವಣಬೆಳಗೋಳದ ಮಂಗಾಯಿ ಬಸದಿಯಲ್ಲಿರುವ ಶಾಸನವು ತಿಳಿಸುವುದು.[೨೨೦] ಭಟ್ಕಳದ ರಾಣಿ ವೀರಾಂಬ ಕಲ್ಲು ಬಸದಿಯಲ್ಲಿ,[೨೨೧] ತೀರ್ಥಂಕರ ಕಂದು ಕಂಚಿನ ಮೂರ್ತಿಗಳನ್ನು ಮಾಡಿಸಿ ಪ್ರತಿಷ್ಠೆ ಮಾಡಿಸಿದಳು ಎನ್ನುವುದನ್ನು ೧೫೩೦ರ ಶಿಲಾಶಾಸನ ತಿಳಿಸುತ್ತದೆ.[೨೨೨]

ವಿಜಯನಗರ ಕಾಲದಲ್ಲಿ ವಿವಿಧ ಧಾರ್ಮಿಕ ಪಂಗಡಗಳು ಸಮಾಜದಲ್ಲಿ ತಮ್ಮ ಪ್ರಭಾವವನ್ನು ಬೀರಲು ಸೆಣಸಾಡುವುದನ್ನು ಕಾಣಬಹುದು. ಭಾರತೀಯ ಸಂಸ್ಕೃತಿಯಲ್ಲಿ ಇದು ಸರ್ವ ಸಾಮಾನ್ಯವಾದುದು. ಅಂತೆಯೇ ವಿಜಯನಗರ ಕಾಲದಲ್ಲಿ ವೈಷ್ಣವ, ಶೈವ, ವೀರಶೈವ ಪಂಗಡಗಳು ಪ್ರಭಾವದಲ್ಲಿದ್ದು ಕೆಲವು ವ್ಯಾಜ್ಯಗಳನ್ನು ಕಾಣಬಹುದು. ಆದರೆ ಇಂತಹ ಸಮಯದಲ್ಲಿ ತಮ್ಮ ವೈಯಕ್ತಿಕ ಧಾರ್ಮಿಕ ಆಚರಣೆಯನ್ನು ಬಿಟ್ಟು ಮತ್ತು ಪಂಗಡದ ಜನಸಂಖ್ಯೆಯನ್ನು ಮರೆತು ತೃಪ್ತಿಕರವಾಗಿ ವ್ಯಾಜ್ಯಗಳನ್ನು ನಿರ್ವಹಿಸಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಬುಕ್ಕರಾಯನ ಪ್ರಮುಖ ಮತ್ತು ಪ್ರಸಿದ್ಧವಾದ ಶಾಸನವು ಜೈನರಿಗೆ ಇನ್ನು ಮುಂದೆ ಯಾವುದೇ ಧಾರ್ಮಿಕ ತೊಂದರೆಯಾಗದಿರುವುದಕ್ಕೆ ಇದು ಒತ್ತು ಕೊಡುವುದು. ಜೈನರು ಮತ್ತು ವೈಷ್ಣವರು ಸ್ನೇಹದಿಂದ ಬದುಕುವುದನ್ನು ತಿಳಿಸುವುದು. ಬುಕ್ಕರಾಯನು ಜೈನರ ಕೈಯ ಮೇಲೆ ಶ್ರೀವೈಷ್ಣವರ ಕೈಯನ್ನು ಇಟ್ಟು ಇನ್ನು ಮುಂದೆ ಜೈನ ದರ್ಶನಕ್ಕೂ ಮತ್ತು ವೈಷ್ಣವ ದರ್ಶನಕ್ಕೂ ಯಾವುದೇ ಭಿನ್ನಾಭಿಪ್ರಾಯ ಇಲ್ಲವೆಂದು ಹೇಳಿರುವುದನ್ನು ತಿಳಿಸುತ್ತದೆ.[೨೨೩]

ಧಾರವಾಡ ಜಿಲ್ಲೆಯ ಶಿರಹಟ್ಟಿ ತಾಲ್ಲೂಕಿನ ಲಕ್ಷ್ಮೀಶ್ವರದ ಶಾಸನವು ಶಂಕಬಸದಿಯ ಜೈನ ಗುರುಗಳಾದ ಸೋಮಾಚಾರ್ಯ ಹಾಗೂ ಹೇಮಾಚಾರ್ಯ ಮತ್ತು ಶೈವಗುರುಗಳಾದ ಕಾಳಹಸ್ತದೇವ ಮತ್ತು ಶಿವರಾಮದೇವರ ನಡುವೆ ಲಾಂಛನಗಳ ಉಪಯೋಗದ ಮತ್ತು ಭೂಮಿಯ ಬಗ್ಗೆ ವ್ಯಾಜ್ಯವನ್ನು ಹಳೆಯ ದಾಖಲೆಗಳ ಆಧಾರದ ಮೇಲೆ ತೀರ್ಮಾನ ಕೈಗೊಂಡಿರುವುದನ್ನು ಹೇಳುತ್ತದೆ.[೨೨೪] ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಪಾಶ್ವನಾಥ ಬಸದಿಯಲ್ಲಿರುವ ಶಾಸನವು ಜೈನರಿಗೂ ಮತ್ತು ವೀರಶೈವರಿಗೂ ನಡೆದ ವ್ಯಾಜ್ಯದ ಬಗ್ಗೆ ತಿಳಿಸುತ್ತದೆ. ಹುಚ್ಚಪ್ಪ ದೇವನು ವೀರಶೈವ

ಧರ್ಮದ ಲಿಂಗ ಮುದ್ರೆಯನ್ನು ವಿಜಯ ಬಸ್ತಿಯ ಕಂಬದ ಮೇಲೆ ಬರೆದಿದ್ದನ್ನು ವಿಜಯಪ್ಪ ಅಳಿಸಿರುವುದು, ಇಬ್ಬರೂ ಧಾರ್ಮಿಕ ಮುಖಂಡರು ಸೇರಿ ಹಿಂದಿನಿಂದಲೂ ನಡೆದು ಬಂದ ಪದ್ಧತಿಯನ್ನು ಆಚರಿಸಲು ತೀರ್ಮಾನಿಸಿರುವುದನ್ನು ತಿಳಿಸುತ್ತದೆ.[೨೨೫]

ಭಾರತದ ಸಮಾಜ ವ್ಯವಸ್ಥೆಯಲ್ಲಿ ಐತಿಹಾಸಿಕ ಶಕ್ತಿಗಳು ಏಕರೂಪತೆಗೆ ಬದಲಾಗಿ ಬಹುರೂಪತೆಯನ್ನು ನೀಡಿರುವುದನ್ನು ನೋಡುತ್ತೇವೆ. ಇಸ್ಲಾಂ ಭಾರತಕ್ಕೆ ಬಂದದ್ದೂ ಈ ವೈವಿಧ್ಯದಲ್ಲಿ ಒಂದು ಮುಖ್ಯವಾದ ಅಂಶ. ಮಧ್ಯಯುಗದಲ್ಲಿ ಜನಾಂಗಿಕ ಪಕ್ಷಪಾತ, ಸಾಮಾಜಿಕ ಅಸಮತೆಗಳು, ಆರ್ಥಿಕ ಶೋಷಣೆ, ಪುರೋಹಿತಶಾಹಿಯ ಪ್ರಾಬಲ್ಯ, ವ್ಯಕ್ತಿ ಸ್ವಾತಂತ್ರ್ಯಕ್ಕೆ ಅಗೌರವ ಈ ರೂಪಗಳಲ್ಲಿ ಸಮಾಜವನ್ನು ಹಿಂಸಿಸುತ್ತಿದ್ದ ಪಿಡುಗುಗಳನ್ನು ಮಾನವೈಕ್ಯದ ಪರಿಕಲ್ಪನೆಯು ಹೋಗಲಾಡಿಸಿತು. ಇಸ್ಲಾಂ ಜಾತಿ, ಮತ, ವರ್ಗಗಳ ತಡೆಗಳನ್ನು ಮುರಿದು ಎಲ್ಲರನ್ನೂ ಸಮಾನವಾಗಿ ಪರಿಗಣಿಸಲು ಪ್ರಯತ್ನಿಸಿತು. ಇದು ಆಗ ಪ್ರಚುರವಾಗಿದ್ದ ಭಾರತೀಯ ಸಮಾಜದ ವ್ಯವಸ್ಥೆಯನ್ನು ಕದಡಿತು. ದುಡಿಮೆಗೆ ಗೌರವ, ಉತ್ತಮ ಕೌಟುಂಬಿಕ ಜೀವನ, ಸರ್ವರಿಗೂ ಸಮಾನ ಅವಕಾಶಗಳು, ಸಮಾಜದ ದುರ್ಬಲ ವರ್ಗಗಳನ್ನು ಕುರಿತ ಗೌರವಯುತ ಸಹಾನುಭೂತಿ ಇವು ಭಾರತೀಯ ಸಮಾಜದ ಸಾಂಪ್ರದಾಯಿಕ ವಿನ್ಯಾಸದಲ್ಲಿ ಆಮೂಲಾಗ್ರ ಬದಲಾವಣೆಯನ್ನು ಉಂಟುಮಾಡಿದವು. ಸಾಂಸ್ಕೃತಿಕ ಸ್ವರೂಪ, ಧಾರ್ಮಿಕ ಒಲುವುಗಳಿಂದ ಸಮಾಜ ವ್ಯವಸ್ಥೆಯ ಮೇಲೆ ಅಧಿಕ ಪರಿಣಾಮ ಉಂಟಾಯಿತು. ಭಾರತದ ಮಣ್ಣಿನ ಮೇಲೆ ಇಸ್ಲಾಂ ಒಂದು ಹೊಸ ಧರ್ಮವಾಗಿತ್ತು. ಅದರ ಮುಖ್ಯ ಧ್ಯೇಯಗಳಲ್ಲಿ ಒಂದು ಅದರ ತತ್ವ ಪ್ರಚಾರ. ಅದು ಸಮಾನತೆ, ಐಕ್ಯತೆ, ಎಲ್ಲರಲ್ಲೂ ಸೋದರತೆ, ಪ್ರೇಮಗಳನ್ನು ಭೋದಿಸುತ್ತಿದ್ದುದರಿಂದ ಅದರ ಸಾಮಾಜಿಕ ಮುಖವು ಬಲವಾಗಿತ್ತು. ಒಮ್ಮೆ ಅದರ ತೆಕ್ಕೆಗೆ ಬಂದ ನಂತರ ಮೇಲು–ಕೀಳು, ಜಾತಿ–ಪಂಥ, ಈ ವ್ಯತ್ಯಾಸಗಳು ಮುರಿದು ಬೀಳುತ್ತಿತ್ತು. ಜಾತಿಯ ಕಟ್ಟುಪಾಡುಗಳು ಅತ್ಯಂತ ಕಠೋರವಾಗಿದ್ದ ಕಾಲದಲ್ಲಿ, ಜಾತಿ ಪದ್ಧತಿಯಿಂದ ನೊಂದು ಬಸವಳಿದಿದ್ದ ಕೆಳಹಂತದ ಸಾಮಾನ್ಯ ಜನರು ಮತಾಂತರಗೊಂಡರು. ಇಸ್ಲಾಂ ಸಾಮಾಜಿಕ ಸಮಾನತೆ, ರಾಜಕೀಯ ಅವಕಾಶ ಮತ್ತು ಆರ್ಥಿಕ ಸುಧಾರಣೆಗಳಿಗೆ ಅವಕಾಶ ಮಾಡಿದಾಗ ಅನೇಕರು ಅದನ್ನು ಅಂಗೀಕರಿಸಿದರು.

ಕರ್ನಾಟಕದ ಸಾಮಾಜಿಕ, ಧಾರ್ಮಿಕ ವಲಯದಲ್ಲಿ ಕಂಡುಬಂದ ಅಸಾಧಾರಣವಾದೊಂದು ಬೆಳವಣಿಗೆ ಎಂದರೆ ಇಸ್ಲಾಂ ಧರ್ಮ ಪ್ರಚುರಗೊಂಡಿದ್ದು. ಅದು ಏಕದೇವವಾದ ಮತ್ತು ಪ್ರಜಾಸತ್ತಾತ್ಮಕವಾದ ವ್ಯವಸ್ಥೆಗೆ ಒತ್ತು ಕೊಟ್ಟಿತು. ಪೊಳ್ಳು ಆಚರಣೆಗಳನ್ನು ರಕ್ಷಿಸಿಕೊಳ್ಳುವುದು, ತನ್ನ ಕೆಲವು ಉದಾತ್ತ ವಿಚಾರಗಳನ್ನು ಪುನಶ್ಚೇತನಗೊಳಿಸುವುದು ಅಗತ್ಯವಾಯಿತು.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವುದಕ್ಕೆ ಮೊದಲು ಇಸ್ಲಾಂ ಧರ್ಮವು ಉತ್ತರ ಭಾರತದಲ್ಲಿ ಬಲಿಷ್ಠವಾಗಿ ಹರಡಿತ್ತು. ಅಲ್ಲಾವುದ್ದೀನ್ ಖಿಲ್ಜಿ, ಮಲ್ಲಿಕಾಫರ್ ಮತ್ತು ಮಹಮದ್ ಬಿನ್ ತುಘಲಕ್‌ರ ದಕ್ಷಿಣ ಭಾರತದ ದಾಳಿಗಳ ಪ್ರಭಾವದಿಂದಾಗಿ ಇಸ್ಲಾಂ ಇಲ್ಲಿ ಬೇರೂರಲು ಪ್ರಾರಂಭವಾಯಿತು. ವಿಜಯನಗರ ತತ್‌ಕ್ಷಣದ ಉದಯಕ್ಕೆ ಧರ್ಮವು ಕಾರಣವಾಗಲಿಲ್ಲ.[೨೨೬] ಕಂಪಿಲದೇವ ಅವನ ಮಗ ಕುಮಾರರಾಮ ಇವರು ಮಹಮದ್ ಬಿನ್ ತುಗಲಕ್‌ನ ಸೋದರಳಿಯ ಬಹಾವುದ್ದೀನ್ ಗುರ್ಷಾಸನಿಗೆ ಆಶ್ರಯ ಕೊಟ್ಟು ಆ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ರಾಜ್ಯವನ್ನು, ಪ್ರಾಣವನ್ನು ಅಪಾಯಕ್ಕೆ ಒಡ್ಡಿದರು. ಕಂಪಿಲ ಬಿದ್ದದಕ್ಕೆ ಕಾರಣ ಅವರು ಹಿಡಿದ ಶರಣಾಗತ ರಕ್ಷಣೆಯ ನೀತಿ.[೨೨೭] ೨ನೆಯ ದೇವರಾಯನ ಕಾಲಕ್ಕೆ ವಿಜಯನಗರ ಸೈನ್ಯದಲ್ಲಿ ೨,೦೦೦ ಮುಸ್ಲಿಂ ಬಿಲ್ಗಾರರು, ೧೦,೦೦೦ಕ್ಕೂ ಹೆಚ್ಚು ಟರ್ಕಿ ಯೋಧರು ವಿಜಯನಗರ ಸೈನ್ಯದಲ್ಲಿದ್ದರು.[೨೨೮] ಕ್ರಿ.ಶ. ೧೪೨೦ರಲ್ಲಿ ಒಂದನೆಯ ದೇವರಾಯನ ಕಾಲದಲ್ಲಿ ಮೀಯಾರಾಹುತನಿಗೆ ಪುಣ್ಯವಾಗಬೇಕೆಂದು ಬಸವನಾಯಕನು 'ಗೋರಿ' ಮತ್ತು ಮಸೂಜಿಯನ್ನು ಕಟ್ಟಿಸಿದ ಉಲ್ಲೇಖವಿದೆ.[೨೨೯] ಕ್ರಿ.ಶ. ೧೪೩೯ರಲ್ಲಿ ಇಮ್ಮಡಿ ಪ್ರೌಢದೇವರಾಯನು ತನ್ನ ಸಿಂಹಾಸನದ ಬಳಿಯ ಪವಿತ್ರ ಪೀಠದ ಮೇಲೆ ಕುರಾನ್ ಪ್ರತಿಯನ್ನಿರಿಸಿ ಮುಸ್ಲಿಂ ಮತ ಪ್ರೀತ್ಯಾಧರಗಳಿಗೆ ಪಾತ್ರನಾಗಿದ್ದಾನೆ. ದೇವರಾಯನ ಕಾಲದಲ್ಲಿ ಕಟಗಿಯ ಅಹಮದ್‌ಖಾನನು ರಾಜನಿಗೆ ಧರ್ಮವಾಗಬೇಕೆಂದು ಧರ್ಮಶಾಲೆ ಮತ್ತು ಬಾವಿಯನ್ನು ಕಟ್ಟಿಸಿದ ಉಲ್ಲೇಖವಿದೆ.[೨೩೦] ಕ್ರಿ.ಶ. ೧೪೪೧ರ ಇನ್ನೊಂದು ಶಾಸನದಲ್ಲಿ ದಾವಿಮಯನ ಮಗ ಬರಿಯಮನು ಆರು ವರಹಗಳಿಗೆ ಮನೆಯನ್ನು ಕೊಂಡು ದಾನವಾಗಿ ಬಿಟ್ಟ ವಿಷಯವನ್ನು ಉಲ್ಲೇಖಿಸುತ್ತದೆ.[೨೩೧] ಕ್ರಿ.ಶ. ೧೪೭೨ರಲ್ಲಿ ದಾದಾರಾಹುತನ ಮಗನಾದ ಪಖಲಾದಿರಾಹುತನು ಗುಮ್ಮಟವನ್ನು ಕಟ್ಟಿಸಿರುವುದು ಕಂಡುಬರುತ್ತದೆ.[೨೩೨] ಕ್ರಿ.ಶ. ೧೫೦೫ರಲ್ಲಿ ಸಾಳುವ ವೀರನರಸಿಂಹರಾಯನ ಕಾಲದಲ್ಲಿ 'ಗುಮ್ಮಂತ'ವನ್ನು ಕಟ್ಟಿಸಲು ಮರಿದ ಎಂಬುವನಿಗೆ ಸೈದುಪಿರಿ ಅಲಿ ತಿಳಿಸುತ್ತಾನೆ. 'ಗುಮಂತ'ವನ್ನು ಕಟ್ಟಿಸಲು ಅಬೂಮಗ ಮರಿದನಿಗೆ ದೇವರು ಸ್ವಪ್ನದಲ್ಲಿ ಬಂದು ಹೇಳಿದಂತೆ ದಾಖಲಿಸಿದೆ.[೨೩೩] ಕಾಲದ ಉಲ್ಲೇಖವಿಲ್ಲದ ಕೆಲವು ಶಾಸನಗಳಲ್ಲಿ ಪಿಲಿಕುಂಚಲಕ ಎಂಬುವವನು ಬಯಿರಾವುತನಿಗೆ ಬಾವಿ ದಾನ ಮಾಡಿದ ಉಲ್ಲೇಖವಿದೆ. ಅಚ್ಯುತದೇವರಾಯನ ಕಾಲದ ಶಾಸನವೊಂದರಲ್ಲಿ ಚಿಕ್ಕರಾಯರಿಗೆ ಪುಣ್ಯವಾಗಬೇಕೆಂದು ಸಕಲಜರಾವುತನು ಗುಮ್ಮಟವನ್ನು ಕಟ್ಟಿಸಿದ ಉಲ್ಲೇಖವಿದೆ.[೨೩೪] ಇನ್ನೊಂದು ಶಾಸನದಲ್ಲಿ ಧರಿಯಸೇಖಮಲಿ ಎಂಬುವವನು ಗೋರಿ ಕಟ್ಟಿಸಿದಾಗ ಅದಕ್ಕೆ ವೀರಣ ಧರ್ಮ ಮಾಡಿದ ಉಲ್ಲೇಖವಿದೆ.[೨೩೫] ಕ್ರಿ.ಶ. ೧೫೫೧ರಲ್ಲಿ ಸದಾಶಿವರಾಯನು ಎಕದಲಖಾನ ಎಂಬುವನನ್ನು ಬಾರಕೂರು ರಾಜ್ಯಕ್ಕೆ ಉಸ್ತುವಾರಿ ಅಧಿಕಾರಿಯಾಗಿ ನೇಮಿಸಿದನು.[೨೩೬]

ವಿಜಯನಗರದ ಅರಸರು ಹಿಂದೂ ಧರ್ಮದ ಲಕ್ಷಣವಾದ ಪರಮತ ಸಹಿಷ್ಣುತೆಯನ್ನು ಮೈಗೂಡಿಸಿಕೊಂಡು ಅನ್ಯಮತೀಯರಾದ ಕ್ರೈಸ್ತ, ಇಸ್ಲಾಂ ಧರ್ಮೀಯರಿಗೆ ತಮ್ಮ ಸಾಮ್ರಾಜ್ಯದಲ್ಲಿ

ಆಶ್ರಯ ಕೊಟ್ಟು ಸಲುಹಿದರು. ಸಾಮ್ರಾಜ್ಯದ ವಿವಿಧೆಡೆಯಲ್ಲಿ ದೇವಸ್ಥಾನಗಳಲ್ಲದೆ, ಮಸೀದಿಗಳೂ, ಇಗರ್ಜಿಗಳೂ ಇದ್ದವು. ಎಲ್ಲಾ ಧರ್ಮಗಳಿಗೂ ಸಮಾನ ಅವಕಾಶ ಇದ್ದ ವಿಜಯನಗರದಲ್ಲಿ ಅರಸರು ಹಿಂದೂ ಸಾಧು ಸಂತರನ್ನು, ಕ್ರೈಸ್ತ ಪಾದ್ರಿಗಳನ್ನು, ಇಸ್ಲಾಂ ಪೀರರುಗಳನ್ನು ಸಮಾನ ಗೌರವದಿಂದ ಕಾಣುತ್ತಿದ್ದರು. ಹಂಪೆಯಲ್ಲಿ ಹಿಂದೂ ದೇವಾಲಗಳಲ್ಲದೆ ಜೈನ ಬಸದಿಗಳನ್ನು, ಮುಸ್ಲಿಂರ ಗೋರಿಗಳನ್ನು ಕಾಣಬಹುದು. ವಿಜಯನಗರ ಸಾಮ್ರಾಜ್ಯದಲ್ಲಿ ವಿವಿಧ ಮತಧರ್ಮ, ಪಂಥ, ಉಪಪಂಥಗಳು ಒಟ್ಟೊಟ್ಟಿಗೆ ಸಹಬಾಳ್ವೆ ನಡೆಸುವ ಸೌಹಾರ್ದ ವಾತಾವರಣವನ್ನು ಕಲ್ಪಿಸಿಕೊಟ್ಟಿದ್ದರು. ಶೈವ, ವೈಷ್ಣವ, ಜೈನ, ಇಸ್ಲಾಂ ಮೊದಲಾದ ಪಂಥಗಳು ಸಮಾನ ರೀತಿಯಲ್ಲಿ, ಬದುಕಲು ಉದಾರವಾದ ಧಾರ್ಮಿಕ ಧೋರಣೆಗಳು ಕಾರಣವಾದವು. ಧರ್ಮ ಸಮನ್ವಯತೆ ಜನರ ವಿಶ್ವಾಸವನ್ನು ಗಳಿಸಲು ವಿಜಯನಗರ ಅರಸರು ಮೊತ್ತಮೊದಲು ಮಾಡಿದ ಕಾರ್ಯ. ನಾಡಿನ ವಿವಿಧ ಧರ್ಮಗಳನ್ನು ಏಕ ರೀತಿಯಿಂದ ಕಂಡು ಅವುಗಳ ಧರ್ಮ ಪ್ರಸಾರಕ್ಕೆ ಪ್ರೋತ್ಸಾಹ ನೀಡಿ ಆ ಮೂಲಕ ಜನರನ್ನು ತಮ್ಮೆಡೆಗೆ ಒಲಿಸಿಕೊಳ್ಳುವ ತಂತ್ರದಲ್ಲಿ ನಾಡಿನ ಎಲ್ಲಾ ಧರ್ಮಗಳು ಪ್ರಗತಿ ಹೊಂದಿದವು. ಸಮಾಜದ ಪ್ರತಿಯೊಬ್ಬ ವ್ಯಕ್ತಿಗೂ ಅವನ ಒಲವಿನ ಧರ್ಮವನ್ನು ಸ್ವೀಕರಿಸುವ ಸ್ವಾತಂತ್ರ್ಯ ಇದ್ದಿತು. ವಿಜಯನಗರ ಕಾಲದಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತ ಯಾರೇ ಆಗಲೀ ಧರ್ಮ ಯಾವುದೆಂದು ಪ್ರಶ್ನಿಸದೆ ಅವರವರ ಧಾರ್ಮಿಕ ನಂಬಿಕೆಗಳನ್ನು ಅನುಸರಿಸಲು ಪೂರ್ಣ ಸ್ವಾತಂತ್ರ್ಯವಿದ್ದಿತೆಂದು ವಿದೇಶಿ ಪ್ರವಾಸಿಯಾದ ಬಾರ್ಬೋಸನು ತನ್ನ ವರದಿಯಲ್ಲಿ ಉಲ್ಲೇಖಿಸಿದ್ದಾನೆ. ಮುಸ್ಲಿಮರ ವಾಸಕ್ಕೆ ಶ್ರೀ ಕೃಷ್ಣದೇವರಾಯನು ಪ್ರತ್ಯೇಕ ಪ್ರದೇಶವನ್ನು ನೀಡಿದ್ದನು. ಅದನ್ನು ಗೋರಿ ಕೆಳಗಣ ಗ್ರಾಮವೆಂದೇ ಶಾಸನಗಳು ಹೇಳಿವೆ.[೨೩೭] ವಿಜಯನಗರದಲ್ಲಿ ಮುಸ್ಲಿಂರು ಎಷ್ಟು ನಿರ್ಭೀತರಾಗಿ ಮತ್ತು ಹೆಚ್ಚಿನ ಸಂಖ್ಯೆಯಲ್ಲಿದ್ದರೆಂದರೆ ಒಬ್ಬ ಇತಿಹಾಸಕಾರನು ಅದನ್ನು ಮುಸ್ಲಿಮರ ಊರಿನ ಹಾಗೆಯೇ ಇತ್ತೆಂದು ಹೇಳಿದ್ದಾನೆ.[೨೩೮] ವಿಜಯನಗರ ಸೈನ್ಯದಲ್ಲಿ ಮುಸ್ಲಿಂ ಸೈನಿಕರು ಪ್ರಮುಖರಾಗಿದ್ದು, ನೆಮ್ಮದಿಯಿಂದ ಇದ್ದರು. ಮುಸ್ಲಿಮ್ ಸುಲ್ತಾನರ ವಿರುದ್ಧ ಯುದ್ಧ ಮಾಡುವಾಗ ಇವರ ಪರವಾಗಿ ಯುದ್ಧ ಮಾಡುತ್ತಿದ್ದರು.[೨೩೯]

ವಿಜಯನಗರ ಅರಸರು ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಅವರ ಸಾಮಂತರು, ಮಾಂಡಲೀಕರಲ್ಲೂ ಧರ್ಮ ಸಹಿಷ್ಣುತೆಯ ವಾತಾವರಣವನ್ನು ಕಾಯ್ದಿರಿಸಲಾಗಿತ್ತು. ಸಾಮಂತರು, ಅಧಿಕಾರಿಗಳು ತಮಗೆ ಇಷ್ಟವಾದ ಧರ್ಮವನ್ನು ಅನುಸರಿಸಲು ಯಾವುದೇ ರೀತಿಯ ಅಭ್ಯಂತರ ಇರಲಿಲ್ಲ. ಈ ಕಾಲದ ಹಲವು ಪಾಳೆಯಗಾರರು ತಮ್ಮ ಮೂಲ ಧರ್ಮದಿಂದ ಇನ್ನೊಂದು ಧರ್ಮಕ್ಕೆ ಬದಲಾಗಿರುವುದನ್ನು ಕಾಣಬಹುದಾಗಿದೆ. ಯಾರು ಯಾವ ಧರ್ಮವನ್ನು ಅನುಸರಿಸಿದರೂ, ತಮ್ಮ ಪ್ರಜೆಗಳನ್ನು ಸಮಾನವಾಗಿ ಕಾಣಲಾಗುತ್ತಿತ್ತು. ವಿಜಯನಗರದ ಅರಸರು ಶೈವ ಅಥವಾ

ವೈಷ್ಣವ ಪಂಥಕ್ಕೆ ಸೇರಿದವರಾಗಿದ್ದರೂ ಪಂಥ ಭೇದಕ್ಕೆ ಅವಕಾಶ ಕಲ್ಪಿಸಿರಲಿಲ್ಲ. ವಿಜಯನಗರವು ಸರ್ವಧರ್ಮ ಸಮಾನತೆಯನ್ನು ಸಾಧಿಸಿತ್ತು ಎಂದು ಹೇಳಬಹುದು.

**ಅಡಿಟಿಪ್ಪಣಿಗಳು**

೦೧. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ-೪, (ಸಂ), ಪ್ರಸಾರಾಂಗ, ಕವಿವಿ, ೧೯೯೭.

೦೨. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ-೩, (ಸಂ), ಪ್ರಸಾರಾಂಗ, ಕವಿವಿ, ೧೯೯೭.

೦೩. ಅದೇ, ಪುಟ-೨೪೨.

೦೪. ಅದೇ, ಪುಟ-೨೪೫.

೦೫. ಎ.ಆರ್.ಐ, EPI No.116 of 1923.

೦೬. A.R.I EPI, 1961-62 B 333, Page-79.

೦೭ IbId 1911 No.214.

೦೮. ಅದೇ, ೧೯೦೬, ನಂ.೮೪

೦೯. ರಾಬರ್ಟ್ ಸಿವೆಲ್, ಎ. ಫಾರ್‌ಗಾಟನ್ ಎಂಪಾಯರ್, ನವದೆಹಲಿ, ೧೯೭೦, ಪುಟ-೭೬೦.

೧೦. ಅದೇ, ಪುಟ-೩೭೦-೩೭೧.

೧೧. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ-೨, (ಸಂ), ಪ್ರಸಾರಾಂಗ, ಕವಿವಿ, ೧೯೯೭, ಪುಟ-೨೪೪.

೧೨. ವೆಂಕಟರಮಣಯ್ಯ ಎನ್., (ಸಂ), ಸ್ಟಡೀಸ್ ಇನ್ ದಿ ಹಿಸ್ಟರಿ ಆಫ್ ಥರ್ಡ್ ಡೈನಾಸ್ಟಿ ಆಫ್ ವಿಜಯನಗರ, ಮದರಾಸು, ೧೯೩೫, ಪುಟ-೩೫೪-೩೫೫

೧೩. ಮಹಾಲಿಂಗ ಟಿ.ವಿ., ಪೂರ್ವೋಕ್ತ, ಪುಟ-೧೬-೧೭.

೧೪. ಅದೇ, ಪುಟ-೨೪೬.

೧೫. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ-೨, (ಸಂ), ಪ್ರಸಾರಾಂಗ, ಕವಿವಿ, ೧೯೯೭, ಪುಟ-೨೪೫.

೧೬. ಎಲಿಯಟ್ ಅಂಡ್ ಡಾಸನ್, ದಿ ಹಿಸ್ಟರಿ ಆಫ್ ಇಂಡಿಯಾ ಆನ್ ಟೋಲ್ಡ್ ಬೈ ಇಟ್ಸ್ ವೋನ್ ಹಿಸ್ಟೋರಿಯನ್ಸ್, ಸಂ.೪, ಅಲಹಾಬಾದ್, ೧೯೬೪, ಪುಟ-೧೦೭.

೧೭. ರಾಬರ್ಟ್ ಸಿವೆಲ್, ಪೂರ್ವೋಕ್ತ, ಪುಟ-೨೪೭.

೧೮. ಟೋಫೋಗ್ರಾಫಿಕಲ್ ಲಿಸ್ಟ್ ಸಂ-೧, ೫೭, ಅನಂತಪುರ ಜಿಲ್ಲೆ, ಎಸ್.ಎಂ.ಸಂಖ್ಯೆ-೫, ೬೧೭.

೧೯. ಅದೇ, ಸಂ-೧, ಕರ್ನೂಲ್ ಜಿಲ್ಲೆ, ೫೮೧.

೨೦. ಸಾ.ಇ.ಇ.೯, ೫೩, ಎ.ಆರ್.ಎಸ್.ಐ.ಇ, ೧೯೨೨, ೬೮೧

೨೧. ಅದೇ, ೬೧೮.

೨೨. ಅದೇ, ೫೧೯.

೨೩. ಜೇಮ್ಸ್ ಎಮ್.ಎಲ್, ದಿ ಬುಕ್ ಆಫ್ ಬಾರ್ಬೋಸ್ ಸಂ-೧, ಬಿ.ಎ.ಸಾಲತೊರೆಯವರ ಉಧೃತ, ಸೋಷಿಯಲ್ ಅಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯನಗರ ಎಂಪೈರ್, ಮದರಾಸು, ೧೯೩೪, ಸಂ-೨, ಪುಟ-೩೪.

೨೪. ಅದೇ, ಸಂ-೨, ಪುಟ-೨೫, ಬಿ.ಎ.ಸಾಲತೊರೆಯವರ ಉಧೃತ, ಪೂರ್ವೋಕ್ತ, ಪುಟ-೮೫.

೨೫. A.R.I EPI, 1955-56, 310, Page-48.

೨೬. E.P.I. Carn XII, Tiptur, 67, Page-157.

೨೭. T.T.D. Vol-III, No.11

೨೮. T.T.D.I. III, No.108.

೨೯. ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕವಿವಿ, ೨೦೦೪, ಪುಟ-೧೪.

೩೦. ಅದೇ, ಪುಟ-೧೪

೩೧. ವೆಂಕಟರಮಣಯ್ಯ ಎನ್, ಪೂರ್ವೋಕ್ತ, ಪುಟ-೩೬೦

೩೨. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ-೩, (ಸಂ), ಪ್ರಸಾರಾಂಗ, ಕವಿವಿ, ೧೯೯೭, ಪುಟ-೧೬೪.

೩೩. ಅದೇ, ಪುಟ-೧೬೫.

೩೪. ಬಾರ್ಬೋಸಾ ೧, ಪುಟ-೯೯.

೩೫. F.E. 3, Page-381.

೩೬. ರಾಬರ್ಟ್ ಸಿವೆಲ್, ಎ. ಫಾರ್‌ಗಾಟನ್ ಎಂಪಾಯರ್, ನವದೆಹಲಿ, ೧೯೮೨, ಪುನರ್ ಮುದ್ರಣ, ಪುಟ-೭೪೬.

೩೭. ವಿನುಕೊಂಡ ವಲ್ಲಭಾಮಾತ, ಕ್ರಿದಾಭಿರಾಮಂ, ಪುಟ-೮೧.

೩೮. ರಾಬರ್ಟ್ ಸಿವೆಲ್, ಎ. ಪಾರ್‌ಗಾಟನ್ ಎಂಪಾಯರ್, ನವದೆಹಲಿ, ೧೯೮೨, ಪುನರ್ ಮುದ್ರಣ, ಪುಟ-೭೪೮-೨೪೯.

೩೯. ಎಫಿಗ್ರಾಫೀಯ ಕರ್ನಾಟಕ ಸಂ.೭೨, ೩೩೭.

೪೦. ಎ.ಕ. ಚಾಮರಾಜನಗರ, ೯೩, ಪುಟ-೨೩.

೪೧. ಎ.ಕ.೩ ಶ್ರೀರಂಗಪಟ್ಟಣ ೯೭, ಪುಟ-೨೮, ೮೯, ೮೬.

೪೨. ಅದೇ, ೧೨ ಕ್ಷಿರಾ ೧೦೫, ಪುಟ-೧೦೩, ೧೭೪, ೩೦೪.

೪೩. ಆರಿಮ್ಮೈ ಆಡಿ, ಸಂ.೯೭, ೧೯೨೯, ಪುಟ-೧೮೧-೧೮೨.

೪೪. ಎ.ಕ.೧೨, ಗುಬ್ಬಿ, ತಿರುಪತಿ ತಿರುಮಲ ದೇವಸ್ಥಾನದ ಇನ್ಸ್‌ಕ್ರಿಪ್ಷನ್ಸ್ ಸಂ-೪, ಪುಟ-೩೯, ಸಂ-೨, ಪುಟ-೧೬೪, ೧೭೧, ಸಾ.ಇಂ.ಇ.೪, ಪುಟ-೨೯೫.

೪೫. ಎ.ಕ.೩, ವಿ ನರಸೀಪುರ, ೧೨೦, ಪುಟ-೯೨, ೩೦೭, ೧೭೬.

೪೬. ತಿರುಪತಿ ತಿರುಮಲ ದೇವಸ್ಥಾನದ ಇನ್ಸ್‌ಕ್ರಿಪ್ಸ್‌ನ್ಸ್, ಪುಟ-೮೧.

೪೭. ಅದೇ, ಪುಟ-೮೦,

೪೮. ಪದ್ಮ ಎಂ.ಬಿ., ವಿಜಯನಗರ ಅಧ್ಯಯನ ಸಂ-೧, ವಿಜಯನಗರ ಶಾಸನಗಳಲ್ಲಿ ಮಹಿಳೆ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು.

೪೯. ಅದೇ.

೫೦. ಅದೇ.

೫೧. ಎ.ಇಂ. XXIX, ಪುಟ-೨೦೮-೨೦೯.

೫೨. ಪಿತ್ರದೆಲ್ಲವೊಲ್ಲೆ, ದಿ ಟ್ರಾವೆಲ್ಸ್ ಆಫ್ ಪಿತ್ರದೆಲ್ಲವೊಲ್ಲೆ ಟು ಇಂಡಿಯಾ, ಪುಟ-೨೯೬.

೫೩. ಮೆಕೆಂಜಿ, ಮ್ಯಾನುಸ್ಕ್ರಿಪ್ಟ್ಸ್, ಭಾಗ-೫, ಪುಟ-೩೧-೪೦.

೫೪. ತಿರುಮಲೈ ತಿರುಪತಿ ಎಫಿಗ್ರಾಫಿಕಲ್ ರಿಪೋರ್ಟ್ ಸಂ-II, ಸಂ.೧೩೯೭.

೫೫. ಸೌ.ಇಂ.ಇ. IV, ಸಂ.೯೫೫.

೫೬. ಅದೇ, IV, ಸಂ.೮೧೮, ೧೦೯೯.

೫೭. ಇನ್ಸ್‌ಸ್ಕ್ರಿಪ್ಷನ್ಸ್ ಆಫ್ ಮೆಕೆಂಜೀ ಕಲೆಕ್ಷನ್ಸ್, ನಂ.೧೯.೦೧.೧೯೫೨, ಪುಟ-೧೦.

೫೮. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ–೩, (ಸಂ), ಪ್ರಸಾರಾಂಗ, ಕವಿವಿ, ೧೯೯೭, ಪುಟ–೩೩೨

೫೯. ಚಿನ್ನಸ್ವಾಮಿ ಸೋಸಲೆ ಎನ್. ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕವಿವಿ, ೨೦೦೪, ಪುಟ–೬೮.

೬೦. ಅದೇ, ಪುಟ–೬೮.

೬೧. ಅದೇ, ಪುಟ–೬೮–೬೯.

೬೨. ಅದೇ, ೭೧

೬೩. ಅದೇ, ೭೨

೬೪. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ ಸಂಪುಟ–೩, (ಸಂ), ಪ್ರಸಾರಾಂಗ, ಕವಿವಿ, ೧೯೯೭.

೬೫. ಚಿನ್ನಸ್ವಾಮಿ ಸೋಸಲೆ ಎನ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕವಿವಿ, ೨೦೦೪, ಪುಟ–೭೫.

೬೬ ಅದೇ, ಪುಟ–೭೮.

೬೭ ಅದೇ, ಪುಟ–೬೭.

೬೮. ಅದೇ, ಪುಟ–೬೮.

೬೯. ಗುರುರಾಜ್ ಭಟ್. ಪಿ, ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, ಮಣಿಪಾಲ, ೧೯೭೫, ಪುಟ–೨೬೬–೨೬೭.

೭೦. ಅದೇ, ಪುಟ–೨೬೦.

೭೧. ಅದೇ, ಪುಟ–೨೬೫.

೭೨. ಮಿಜುಂದಾರ್ ಆರ್.ಸಿ., ಹಿಸ್ಟರಿ ಅಂಡ್ ಕಲ್ಚರ್ ಆಫ್ ದಿ ಇಂಡಿಯನ್ ಪೀಪಲ್, Vol-VI, ಪುಟ–೬೨

೭೩. ದಿ ಕ್ರಿಸ್ ಅಂಡ್ ಫಾಲ್ ಆಫ್ ವಿಜಯನಗರ ಇನ್ ಮಾರ್ಗ Vol-XXXIII, ಪುಟ–೯

೭೪. ಶಾಸ್ತ್ರೀ ಕೆ.ಎ.ಎನ್., ದಿ ಹಿಸ್ಟರಿ ಆಫ್ ಸೌತ್ ಇಂಡಿಯಾ, ಪುಟ–೨೩೬

೭೫. ಕೊಟ್ರಯ್ಯ ಸಿ.ಟಿ.ಎಂ., ಹಂಪೆಯ ವೀರಶೈವ ಮಠಗಳು ಮತ್ತು ಸಾಹಿತ್ಯ ಪರಂಪರೆ, ಸ–೨, ಸಂ–೫, ಪುಟ–೯

೭೬. ಚಿನ್ನಸ್ವಾಮಿ ಸೋಸಲೆ ಎನ್. ಸಾಮ್ರಾಜ್ಯ ಮತ್ತು ಸಂಸ್ಥಾನ ಪುಟ–೨೧.

೭೭ ಗೋಪಾಲ್ ಬಾ.ರಾ. ಕರ್ನಾಟಕ ಚರಿತ್ರೆ : ವಿಜಯನಗರ ಇತಿಹಾಸ, ಸಂ-೨, ಪುಟ-೧೯

೭೮. ಅದೇ, ೨೦.

೭೯. ಗೋಪಾಲ್ ಬಿ.ಆರ್., ವಿಜಯನಗರ ಇನ್‌ಕ್ರಿಪ್ಸನ್ಸ್, ಸಂ-೨, ಪೀಠಿಕೆ, ಪುಟ-೩೨

೮೦. ಷೇಕ್ ಅಲಿ ಬಿ, ಕರ್ನಾಟಕ ಚರಿತ್ರೆ, ಸಂ-೩. ಪುಟ-೧೨

೮೧. ಅದೇ, ಪುಟ-೧೫.

೮೨. ಗೋಪಾಲ್ ಬಿ.ಆರ್. ಸಂ: ವಿಜಯನಗರ ಇನ್ ಕ್ರಿಪ್ಷನ್ಸ್, ಸಂ-೨, ಪುಟ-೨೮.

೮೩. ಅದೇ, ಕೆ.ಎನ್. ೨೪೭, ೧೦೦೭, ಪುಟ-೭೧೭.

೮೪. ಅದೇ, ಪುಟ-೨೮೨.

೮೫. ಕರ್ನಾಟಕ ಚರಿತ್ರೆ, ಸಂ-೨.

೮೬. ಅದೇ, ಪುಟ-೨೪.

೮೭ ಅದೇ, ಪುಟ-೨೫.

೮೮. ಅದೇ, ಪುಟ-೨೬.

೮೯. ಎ.ಕ.೩, ಗುಂಡ್ಲುಪೇಟೆ, ೭೮.

೯೦. ನರಸಿಂಹಮೂರ್ತಿ ಎ.ವಿ., ದಿ. ದೆಹಲಿ ಸುಲ್ತಾನೇಟ್, ಪುಟ-೨೦೬.

೯೧. H.I.S.I. ಪುಟ-೨೩೭.

೯೨. ವಾರ್ಚ್ ಪುಟ-೫೮, ಪಂಕ್ತಿ, ೧೬-೨೨.

೯೩. A.R.I.S.E., ೧೯೦೨, Pava-16, SII, IX, ii, No.500, P-514-515.

೯೪. F.E.P. ಪುಟ-೩೨೬.

೯೫. ಅಯ್ಯಂಗಾರ ಎನ್.ಕೆ., ಶ್ರೀರಂಗರಾಯಲು, ಪುಟ-೨೦.

೯೬ ಕರ್ನಾಟಕ ಚರಿತ್ರೆ, ಸಂ-೪, ವಿಜಯನಗರ ರಾಜ್ಯಾಡಳಿತದಲ್ಲಿ ಅಮರನಾಯಕರು, ಪುಟ-೬೨.

೯೭ ಮಹಾಲಿಂಗ ಟಿ.ವಿ., ಸೌತ್ ಇಂಡಿಯನ್ ಪಾಲಿಟಿ, ಪುಟ-೨೩೦.

೯೮. ಎ.ಕ.೧೧, ದಾವಣಗೆರೆ, ೧೦೬, ಕ್ರಿ.ಶ. ೧೫೨೮.

೯೯. ರಾಬರ್ಟ್ ಸಿವೆಲ್, ಫಾರಗಾಟನ್ ಎಂಪೈರ್, ಪುಟ-೨೯೫.

೧೦೦. ಅದೇ, ಪುಟ-೨೯೬

೧೦೧. ಅದೇ, ಪುಟ-೨೯೮

೧೦೨. ಅದೇ, ಪುಟ-೨೬.

೧೦೩. ಕೆ.ಎಸ್.ವಿ. ಪುಟ-೨೬.

೧೦೪. ಎ.ಕ.೧೧, ದೊಡ್ಡಬಳ್ಳಾಪುರ ೫೦, ಕ್ರಿಶ. ೧೫೧೩.

೧೦೫. ಅದೇ, ಚನ್ನಪಟ್ಟಣ ೧೬೪, ೧೫೧೪.

೧೦೬. ಎ.ಕ.IV, ಚಾಮರಾಜನಗರ ೩೭೨, ಕ್ರಿಶ. ೧೪೨೨.

೧೦೭. ಅಯ್ಯಂಗಾರ್ ಎಸ್.ಕೆ., ಕೆಳದಿನೃಪವಿಜಯಂ, ಪುಟ-೧೮.

೧೦೮. ಎ.ಕ.IV, ಚಾಮರಾಜನಗರ, ೩೭೨, ಕ್ರಿಶ. ೧೪೨೨.

೧೦೯. ಎ.ಕ.೯, ಹೊಸಕೋಟೆ ೧೧೭, ಕ್ರಿಶ. ೧೩೬೭.

೧೧೦. ಕ್ಯು.ಜೆ.ಎಂ.ಎಸ್. ೧೪, ಸಂ.೨.

೧೧೧. ಅದೇ, ಪುಟ-೨೭೫.

೧೧೨. ಪುಟ್ಟಣಯ್ಯ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಪುಟ-೧.

೧೧೩. ಅದೇ, ಪುಟ-೪.

೧೧೪. ಪುಟ್ಟಣಯ್ಯ ಎಂ.ಎಸ್., ಹಾಗಲವಾಡಿ ಪಾಳೆಯಗಾರರು, ಪುಟ-೧

೧೧೫. ಅದೇ, ಪುಟ-೧

೧೧೬. ಮೈಸೂರು ಗೆಸಟಿಯರ್ ೧೫, ಪುಟ-೧೨೭೯.

೧೧೭. ನರಸಿಂಹಾಚಾರ್ಯ (ಸಂ), ನಿಡಗಲ್ಲು ಅರಸರ ವಂಶಾವಳಿ, ಕ.ಸಾ.ಪ. ಪತ್ರಿಕೆ.

೧೧೮. ಮೆಕೆಂಜಿ : ಮೆಮೋರೀಸ್ ಆಫ್ ದಿ ವಾರ್ತನ್ ಪರಗಣಾಸ್ ಆಫ್ ಮೈಸೂರು ಸರ್ವೇಯಿಡ್ ಇನ್ ೧೮೦೦.

೧೧೯. ನರಸಿಂಹಾಚಾರ್ಯ, ನಿಡಗಲ್ಲು ಅರಸರ ವಂಶಾವಳಿ.

೧೨೦. ಹಯವದನರಾವ್ ಸಿ. ಮೈಸೂರು ಗೆಸಟಿಯರ್ ಸಂ-೫೬, ಪುಟ-೧೯.

೧೨೧. ಶ್ರೀನಿವಾಸ ಎಂ.ವಿ., ಲಕ್ಷ್ಮಣ ತೆಲಗಾವಿ (ಸಂ) ಜಯಂತಿ ಸಂಸ್ಥಾನದ ವಂಶಾವಳಿ ಚಂದ್ರವಳ್ಳಿ ೧, ಪುಟ-೩೭.

೧೨೨. ಅಯ್ಯಂಗಾರ್ ಎಸ್.ಕೆ., ಸೋರ್ಸ್‌ಸ್ ಆಫ್ ವಿಜಯನಗರ ಬುಕನನ್ ಸಂ-೨, ಪುಟ-೨೮೯

೧೨೩. ರೈಸ್ ಪೂರ್ವೋಕ್ತ ಸಂ-೨, ಪುಟ-೨೮೯.

೧೨೪. ಕ್ಯು.ಜೆ.ಎಂ.ಎಸ್.೨೧, ೩೭೬, ಹೆರಾಸ್ : ಅರವೀಡು, ಪುಟ-೧೭೧

೧೨೫. ಹೆರಾಸ್ : ಅರವೀಡು, ಪುಟ-೧೨೯

೧೨೬. ಅದೇ, ಪುಟ-೧೩೦

೧೨೭. ಸೌ.ಇ.ಇ. ೯-೨, ಪುಟ-೬೬೬.

೧೨೮. ಕ್ಯು.ಜೆ.ಎಂ.ಎಸ್.೨೧, ೩೩೯.

೧೪೯. ಕರ್ನಾಟಕ ಕೈಫಿಯತ್ತುಗಳು ಪುಟ-೪೦೯.

೧೫೦. ವೆಂಕಟರತ್ನಂ. ಎ.ವಿ. ಚಿಕ್ಕನಾಯಕ ಹಳ್ಳಿ ಪಾಳೆಯಗಾರರು ಪುಟ-೩೦೨.

೧೫೧. ಎ.ಕ.೯, ಹೊಸಕೋಟೆ, ೧೧೭, ಕ್ರಿ.ಶ. ೧೩೯೭.

೧೫೨. ಇ.ಪಿ. XII, ಪುಟ-೧೫, ೧೬೮.

೧೫೩. ಶಿವಣ್ಣ ಕೆ.ಎಸ್., ಕರ್ನಾಟಕ ಚರಿತ್ರೆ, ಸಂ-೩, ಪುಟ-೭೮.

೧೫೪. ರೈಸ್ ಬಿ.ಎಲ್., ಪೂರ್ವೋಕ್ತ ಸಂ-೫, ಪುಟ-೫೦೦-೫೦೨.

೧೫೫. ಅದೇ, ಪುಟ-೩೭೬.

೧೫೬ ಅದೇ, ಪುಟ-೩೭೬-೩೭೭.

೧೫೭ ಅಯ್ಯಂಗಾರ್ ಎಸ್.ಕೆ., ಕೆಳದಿ ನೃಪವಿಜಯಂ, ಪುಟ-೬೨.

೧೫೮. ಕನ್ನಡ-ಕನ್ನಡ, ಕಸ್ತೂರಿ ಕೋಶ, ಧಾರವಾಡ, ಪುಟ-೫೧೦.

೧೫೯. ಇಂಗ್ಲೀಷ್-ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾನಿಲಯ, ೧೯೯೯, ಪುಟ-೨೮೫.

೧೬೦. ಕರ್ನಾಟಕ ಚರಿತ್ರೆ ಸಂಪುಟ-೪, ಪ್ರೊ. ಬಿ. ಷೇಕ್ ಆಲಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ೧೯೯೭.

೧೬೧. ಅದೇ ಸಂಪುಟ-೩, ಪುಟ-೨೫೯.

೧೬೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ-೩.

೧೬೩. ಅದೇ, ಪುಟ-೪

೧೬೪. ಅನಂತಕೃಷ್ಣ ಅಯ್ಯರ್, ಮೈಸೂರು ಕಾಸ್ಟ್ಸ್ ಅಂಡ್ ಟ್ರೈಬ್ಸ್ ಸಂ-೪, ಪುಟ-೬.

೧೬೫. ಎ.ಕ.೧೨, ಗುಬ್ಬಿ - ೨೭, ಕೋಡಿಪಾಳ್ಯ, ೧೯೯೬.

೧೬೬. ಎ.ಕ.೧೬, ಚಿಕ್ಕನಾಯಕನ ಹಳ್ಳಿ-೧, ಎಂ.ಎ.ಆರ್. ೧೯೧೮, ಪುಟ-೫೩.

೧೬೭. ಕ.ವಿ.ವಿ. ಶಾಸನ ಸಂ-೩

೧೬೮. ಅದೆ, ಶಾಸನ ಸಂ-೩

೧೬೯. ಅದೇ. ಶಾಸನ ಸಂ-೩

೧೭೦. ಅದೇ. ಶಾಸನ ಸಂ-೩

೧೭೧. ಎ.ಕ. ೧೬, ಚಿಕ್ಕನಾಯಕನಹಳ್ಳಿ, ಶಾ.ಸಂ.೮೩

೧೭೨. ಎ.ಕ.೧೨. ಚಿಕ್ಕನಾಯಕನಹಳ್ಳಿ, ಶಾ.ಸಂ.೩೮.

೧೭೩. ಅದೇ, ತಿಪಟೂರು ಶಾ.ಸಂ.೧೦೮.

೧೭೪. ಕ.ವಿ.ವಿ. ಶಾ.ಸಂ.೩.

೧೭೫. ಅದೇ ಶಾಸನ ಸಂಖ್ಯೆ-೬೪.

೧೭೬ ಮುರಿಗೆಪ್ಪ ಎ., ಕೃಷ್ಣದೇವರಾಯ ಆಯ್ದ ಲೇಖನ ಸಂಪುಟ, ಕ.ವಿ.ವಿ. ಹಂಪಿ, ಪುಟ-೧೭೮.

೧೭೭ ಅದೇ, ಪುಟ-೧೮೦.

೧೭೮. ಕ.ವಿ.ವಿ ಶಾ.ಸಂ-೩, ಶಾಸನ ಸಂಖ್ಯೆ-೩೩.

೧೭೯. ಅದೇ, ಶಾಸನ ಸಂ-೩

೧೮೦. ಕ.ವಿ.ವಿ ಶಾ.ಸಂ-೩, ಶಾಸನ ಸಂಖ್ಯೆ-೩೨.

೧೮೧. ಅದೇ, ಶಾಸನ ಸಂಖ್ಯೆ ೮೪.

೧೮೨. ಅದೇ, ಶಾಸನ ಸಂಖ್ಯೆ ೩೫೫.

೧೮೩. ಅದೇ, ಶಾಸನ ಸಂಖ್ಯೆ ೩೮೪.

೧೮೪. ಕ.ವಿ.ವಿ. ಶಾ.ಸಂ-೫, ಭಾಗ-೧, ಶಾಸನ ಸಂಖ್ಯೆ, ೩೧೬.

೧೮೫. ಅದೇ, ಶಾಸನ ಸಂಖ್ಯೆ ೧೭೩.

೧೮೬. ಅದೇ, ಶಾಸನ ಸಂಖ್ಯೆ ೩೫೫.

೧೮೭ ಕ.ವಿ.ವಿ.ಶಾ.ಸಂ-೧, ಬಳ್ಳಾರಿ ಶಾಸನ ಸಂಖ್ಯೆ-೯.

೧೮೮. ಅದೇ, ಕುರುಗೋಡು ಶಾಸನ ಸಂಖ್ಯೆ

೧೮೯. ಅದೇ, ಸಂಡೂರು ಶಾಸನ ಸಂಖ್ಯ

೧೯೦. ಎ.ಕ.೧೨, ಸರಾ ೧೦೫, ಪುಟ-೧೦೩.

೧೯೧. ಸಾ.ಇಂ.ಇ. ೮(೨) ಸಂಖ್ಯೆ-೪೨೪, ಪುಟ-೪೩೧-೩೨.

೧೯೨. ಅದೇ, ಸಂಖ್ಯೆ-೪೫೮, ಪುಟ-೪೭೦.

೧೯೩. ಅದೇ, ಸಂಖ್ಯೆ-೪೭೯, ಪುಟ-೪೯೩-೯೫.

೧೯೪. ನರಸಿಂಹಮೂರ್ತಿ ಎ.ವಿ., ೧೯೯೧, ಕಾಯಿನ್ಸ್ ಅಂಡ್ ಕರೆನ್ಸಿ ಸಿಸ್ಟಮ್ಸ್ ಇನ್ ವಿಜಯನಗರ ಎಂಪಾಯಿರ್, ವಾರಾಣಾಸಿ.

೧೯೫. ಅದೇ.

೧೯೬. ಅದೇ.

೧೯೭. ಕ.ವಿ.ವಿ. ಶಾ.ಸಂ-೩, ಹಂಪಿ ಶಾಸನ ಸಂಖ್ಯೆ-೧೪೫.

೧೯೮. ಅದೇ, ಶಾ.ಸಂ-೩,

೧೯೯. ಅದೇ, ಶಾ.ಸಂ. ೬೬.

೨೦೦. ಅದೇ, ಶಾ.ಸಂ. ೭೩.

೨೦೧. ವಿ.ವಿ.ದೇ. ವ್ಯಾಲೂಂ ೧, ಸಂಖ್ಯೆ ೧೮೪

೨೦೨. ವಿಜಯನಗರ ನಾಣ್ಯ ಸಂಪತ್ತು ಪುಟ-೪೧.

೨೦೩. ಹಂಪಿ ಪರಂಪರೆ ಪುಟ-೮.

೨೦೪. ತಿ.ತಿ.ದೇ. ಪುಟ-೧೪೩.

೨೦೫. ಅದೇ, ಪು-೧೪೫.

೨೦೬. SII IX-ii ಪು-೪೯೪

೨೦೭. SII IX-ii ಪು-೯೭೫

೨೦೮. ಎ.ಕ-೨, ನಂ.ಗೂ. ಶಾ.ಸಂ.೧೯೦.

೨೦೯. ಕ.ವಿ.ವಿ. ಶಾ.ಸಂ.೨, ಕೊಪ್ಪಳ, ಸಂ-೧೬೦.

೨೧೦. ಅದೇ ಶಾ.ಸಂ-೨,

೨೧೧. SII IX-ii ಪು-೪೯೪.

೨೧೨. SII XVVI ಪು-೬೭೭-೮೪

೨೧೩. ಅದೇ.

೨೧೪. SII XVI, ಪು–೭೧.

೨೧೫. EC, ಪು–೧೫೯.

೨೧೬. SII Vol-XVI, ಪು–೫೩.

೨೧೭. ಎ.ಕ. ಸಂ.೨ ಸಂಖ್ಯೆ–೨೮೫.

೨೧೮. SII IX-ii ಪು–೫೧೦.

೨೧೯. ಆ.ರಿ.ಸೌ.ಇಂ.ಎ. ೪೩೪೪, ಸಂಖ್ಯೆ೨೦

೨೨೦. ತಿರುಪತಿ ತಿರುಮಲ ದೇವಸ್ಥಾನದ ಇನ್ಸ್‌ಕ್ರಿಪ್ಷನ್ಸ್ ಸಂ–೪, ಪುಟ–೫, ಸಂ–೩, ಪುಟ–೧೬೪, ೧೭೧.

೨೨೧. ಕ.ವಿ.ವಿ. ಶಾ.ಸಂ., ಶಾ.ಸಂ.೨೨

೨೨೨. ಅದೇ, ಶಾ.ಸಂ.೭೮.

೨೨೩. ತಿರುಪತಿ ತಿರುಮಲ ದೇವಸ್ಥಾನದ ಇನ್ಸ್‌ಕ್ರಿಪ್ಷನ್ಸ್ ಪುಟ–೮೧.

೨೨೪. ಅದೇ, ಪುಟ–೮೦.

೨೨೫. ವಿಜಯನಗರ ಅಧ್ಯಯನ ಸಂ–೧.

೨೨೬. ಅದೇ.

೨೨೭. ಅದೇ.

೨೨೮. ನರಸಿಂಹಮೂರ್ತಿ ಎ.ವಿ., ೧೯೯೧ ಕಾಯಿನ್ಸ್ ಅಂಡ್ ಕರೆನ್ಸಿ ಸಿಸ್ಟಮ್ ಇನ್ ವಿಜಯನಗರ ಎಂಪಾಯರ್, ವಾರಾಣಾಸಿ

೨೨೯. ಅದೇ.

೨೩೦. ಅದೇ.

೨೩೧. ಅದೇ.

೨೩೨. ಅದೇ.

೨೩೩. ಅದೇ.

೨೩೪. ಅದೇ.

೨೩೫. ಅದೇ.

೨೩೬. ನರಸಿಂಹಮೂರ್ತಿ ಎ.ವಿ., ೧೯೯೧ಮ ಕಾಯಿನ್ಸ್ ಅಂಡ್ ಕರೆನ್ಸಿ, ಸಿಸ್ಟಮ್ ಇನ್ ವಿಜಯನಗರ ಎಂಪಾಯಿರ್, ವಾರಾಣಾಸಿ.

೨೩೭. ಅದೇ.

೨೩೮. ಅದೇ.

೨೩೯. ಆ.ರಿ.ಸೌ.ಇಂ.ಎ. ೧೯೭೫-೭೬, ಸಂಖ್ಯೆ-೯೦೬.

೨೪೦. ಅದೇ, ೧೯೩೫-೩೬, ಸಂ. ೮೩೬.

೨೪೧. ಎ.ಕ.II ಶ್ರವಣಬೆಳಗೊಳ ಸಂ-೪೭೫.

೨೪೨. ಆ.ರಿ.ಸೌ.ಇಂ.ಎ. ೧೯೩೫-೩೬, ಸಂ.೮೩೬

೨೪೩. ಎ.ಕ.V ಬೇಲೂರು ಸಂ.೭೧.

೨೪೪. ಕರ್ನಾಟಕ ಚರಿತ್ರೆ ಸಂ.೩

೨೪೫. ಅದೇ, ಸಂ.೩

೨೪೬. ಅದೇ, ಸಂ.೩

೨೪೭ ಕ.ವಿ.ವಿ.ಶಾಸನ ಸಂ.೩, ಶಾಸನ ಸಂಖ್ಯೆ ೩೧೦.

೨೪೮. ಅದೇ, ಶಾ.ಸಂ. ೩೧೧.

೨೪೯. ಅದೇ, ಶಾ.ಸಂ. ೩೧೨.

೨೫೦. ಅದೇ, ಶಾ.ಸಂ. ೩೧೫.

೨೫೧. ಅದೇ, ಶಾ.ಸಂ. ೩೧೫.

೨೫೨. ಅದೇ, ಶಾ.ಸಂ. ೩೧೪.

೨೫೩. ಅದೇ, ಶಾ.ಸಂ. ೩೧೯.

೨೫೪. ಕರ್ನಾಟಕ ಚರಿತ್ರೆ ಸಂ.೩, ಪುಟ-೯೮.

೨೫೫. Burtonste in Vijayanagara Page-123.

ಅಧ್ಯಾಯ ೩

# ನಾಯಕರ ಉನ್ನತಿ

ಅ. ನಾಯಕರ ಬೆಳವಣಿಗೆ

ಆ. ನಾಯಕರ ಸಾಧನೆಗಳು

ಇ. ಬಯಕಾರ ರಾಮಪ್ಪನ ಕುಟುಂಬದ ಹಿನ್ನೆಲೆ

ಅಧ್ಯಾಯ ೩

# ನಾಯಕರ ಉನ್ನತಿ

## ನಾಯಕರ ಬೆಳವಣಿಗೆ

ಭಾರತದ ಪ್ರಾಚೀನ ಬುಡಕಟ್ಟುಗಳಲ್ಲಿ ನಾಯಕ ಸಮುದಾಯವೂ ಒಂದು. ಈ ಜನಾಂಗವು ಅತ್ಯಂತ ಪ್ರಾಚೀನ ಹಿನ್ನೆಲೆಯನ್ನು ಹೊಂದಿದೆ. ಬೇಡರು ಬೇಟೆಯ ವೃತ್ತಿಯಷ್ಟೇ ಹಳಬ. ಕಾಡು ಮತ್ತು ಬೇಟೆಯ ಸಂಬಂಧದೊಂದಿಗೆ ಬೆಳೆದ ಬೇಡನದು ಮೂಲ ಸಂಸ್ಕೃತಿ. ದೈಹಿಕ ಸಬಲತೆ ಮತ್ತು ಧೈರ್ಯ ಸಾಹಸಗಳಿಗೆ ಹೆಸರಾದ ಬೇಡರ ಇತಿಹಾಸ ಕರ್ನಾಟಕಕ್ಕಾಗಲೀ, ಭಾರತಕ್ಕಾಗಲೀ ಸೀಮಿತವಲ್ಲ. ಆಯಾ ಪ್ರದೇಶಕ್ಕನುಗುಣವಾಗಿ ನಿಷಾದ, ಪುಲಿಂದ, ವ್ಯಾಧ, ಕಿರಾತ, ಶಬರ, ವಾಲ್ಮೀಕಿ, ತಳವಾರ, ಪರಿವಾರ, ಬೇರಾದ್, ಬೋಯಾ, ವೇದಾನ್, ರಾಮೋಶಿ ಮೊದಲಾದ ಹೆಸರುಗಳಿಂದ ಕರೆಸಿಕೊಂಡು ಬಂದ ಬೇಡರು ಮತ್ತು ಅವರ ಬದುಕು ಶತಮಾನಗಳ ಕಾಲಾವಧಿಯಲ್ಲಿ ಅನೇಕ ಮಾರ್ಪಾಡುಗಳನ್ನು ಹೊಂದಿದೆ. ಬೇಡ ಜನಾಂಗವು ಕರ್ನಾಟಕದ ಇತಿಹಾಸದಲ್ಲಿ ಯೋಧ ಜನಾಂಗವೆಂದೇ ಹೆಸರುವಾಸಿಯಾಗಿದೆ.

ಸಂಸ್ಕೃತದ ವ್ಯಾಧ ಎನ್ನುವ ಪದಕ್ಕೆ ಬೇಡ ಎಂಬ ಪದವು ಸಮಾನವಾಗಿದೆ. ದ್ರಾವಿಡ ಭಾಷೆಗಳಲ್ಲಿ 'ಬೇಟೆ'ಗಾಗಿ ಸಮಾನವಾದ ಅನೇಕ ಪದಗಳಿವೆ. ತಮಿಳಿನಲ್ಲಿ ವೇಟೆ, ವೇಡು, ವೇಟ್ಟೈ, ತೆಲುಗಿನಲ್ಲಿ ಏಟ, ಯಾಟ, ವೇಟ, ತುಳುವಿನಲ್ಲಿ ಬೋಣ್ಟೆ ಅಥವಾ ಬೋಂಟೆ, ಮಲಯಾಳಂನಲ್ಲಿ ಬೇಟ್ಟೈ ಮುಂತಾದ ಪದಗಳ ಪ್ರಯೋಗವಿದೆ. ಬೇಟೆ ಶಬ್ದದ ವಿಕಾಸವನ್ನು ವೇಂಟ್ಯೈ>ವೇಟ್ಟೈ>

ವೇಟೆ ಮತ್ತು ವೇಂಟೆ>ಬೇಟೆಯಾಗಿದೆ ಎನ್ನಬಹುದು.[೧] ರೂಢಿಯಲ್ಲಿ ಈ ಪದವು ವೇಡ ನಂತರ 'ಬೇಡ' ಎಂದು ರೂಪಾಂತರವಾಗಿದೆ.[೨] ಬೇಡ ಎಂದರೆ A Tribe of forest people living by the change ಎಂಬ ಅರ್ಥವುಂಟು.[೩] ಮಾನವ ಜನಾಂಗಗಳಲ್ಲಿ ಬೇಡರು ಪ್ರೋಟೋ ಆಸ್ಟ್ರಲಾಯಿಡ್ ಜನಾಂಗಕ್ಕೆ ಸೇರಿದ್ದು, ಭಾರತದಲ್ಲಿ ಇವರು ಮೂಲ ದ್ರಾವಿಡರಾಗಿದ್ದಾರೆ. ಬೇಡ ಎಂದರೆ ಬೇಟೆಗಾರ ಎಂದರ್ಥ. ವೃತ್ತಿಯನ್ನು ಗಮನಿಸಿ ಬೇಟೆಯಾಡುವವರನ್ನು ಬೇಡರು ಎಂದು ಕರೆದಿರಬೇಕು. ಪುಳಿಂದರನ್ನು ಪ್ರಾಚೀನ ಭಾರತದ ಲೋಹಯುಗ ಸಂಸ್ಕೃತಿಯ ಜನರ ಪರಂಪರೆಗೆ ಸೇರಿದ ಮಿಶ್ರ ಬುಡಕಟ್ಟಿನವರೆಂದು ಹೇಳಲಾಗಿದೆ. ಆರ್ಯ ಸಂಸ್ಕೃತಿಯ ವಿಸ್ತರಣೆಯಿಂದ ದಕ್ಷಿಣ ಭಾರತದ ಕಡೆಗೆ ವಲಸೆ ಬಂದು ವಿಂಧ್ಯಪರ್ವತ ಪ್ರದೇಶದಲ್ಲಿ ನೆಲೆಸಿದರು. ನಿಷಾಧರು ಪ್ರಾಚೀನ ಭಾರತದಲ್ಲಿದ್ದ ಆರ್ಯೇತರ ಬುಡಕಟ್ಟು ಜನ ಧೈರ್ಯ ಮತ್ತು ದಿಟ್ಟತನಗಳಿಂದ ಗುಡ್ಡಗಾಡು ಪ್ರದೇಶದಲ್ಲಿ ಬೇಟೆಯಿಂದ ಜೀವಿಸುತ್ತಾ ಬಂದವರನ್ನು ಬೇಡರು ಎಂದು ಕರೆಯಲಾಯಿತು. ಬೇಟೆ ಮತ್ತು ಬೇಡರ ನಡುವೆ ಅವಿನಾಭಾವ ಸಂಬಂಧವಿತ್ತು.

ಆದಿ ಮಾನವನ ಸಂಸ್ಕೃತಿಯೇ ಬೇಟೆಗಾರರ ಸಂಸ್ಕೃತಿಯಾದುದರಿಂದ ಬೇಡ ಜನಾಂಗದ ಪ್ರಾಚೀನತೆಯು ಶಿಲಾಯುಗದಷ್ಟು ಹಿಂದೆ ಹೋಗುತ್ತದೆ. ಪ್ರಾರಂಭದಲ್ಲಿ ಇಪ್ಪತ್ತೆರಡು ಕುಲದ ಬೇಟೆಗಾರರು ಪರಸ್ಪರ ವೈವಾಹಿಕ ಸಂಪರ್ಕಗಳನ್ನು ರೂಢಿಸಿಕೊಂಡು ಒಂದು ಸಮಗ್ರ ಬೇಡರ ಜನಾಂಗವಾಗಿ ಪರಿಣಮಿಸಿದ್ದರೆಂದು ಹೇಳಲಾಗಿದೆ.[೪] ಬೇಡ ಜನಾಂಗದ ಮೂಲ ಪುರುಷನ ಬಗ್ಗೆ ನಿಖರವಾಗಿ ಹೇಳಲಾಗುವುದಿಲ್ಲ. ಐತಿಹ್ಯ, ನಂಬಿಕೆಗಳು ಕೆಲವು ಕಡೆ ಈ ಬಗ್ಗೆ ಮಾಹಿತಿಯನ್ನು ನೀಡುತ್ತದೆ.

ಆದಿ ಮೂಲವಾದ ಭಗವಂತನು ಬೇಡರ ಚಂಚುಲಕ್ಷ್ಮೀಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನೆಂದು ಹೇಳಲಾಗಿದೆ. ವೇದ, ಪುರಾಣ, ಭಾಗವತ ಮುಂತಾದ ಕೃತಿಗಳಲ್ಲಿ ಬೇಡರ ಬಗ್ಗೆ ಉಲ್ಲೇಖಗಳನ್ನು ಕಾಣಬಹುದು. ವೇದಗಳಲ್ಲಿ ಪಂಚಜನಾ ಸಂಪ್ರದಾಯಕ್ಕನುಗುಣವಾಗಿ ಐದು ಬಗೆಯ ಜನಾಂಗವನ್ನು ಇದು ಸೂಚಿಸುತ್ತದೆ. ಅಂದರೆ ನಾಲ್ಕು ವರ್ಣಗಳೊಡನೆ ಸೇರಿರದ ನಿಷಾದರೆಂಬ ಐದನೆಯ ಜಾತಿಯವರೇ 'ಪಂಚಜನಾ' ಎಂದಿದೆ.[೫] ವೇದಗಳಲ್ಲಿ ಅಸುರನೆಂದು ಹೇಳಿದ ಶಂಬರ ಎಂಬುವವನ ಹೆಸರು ಇವರ ಒಂದು ಗುಂಪಿನ ಹೆಸರಾಗಿದೆ. ಈ ಶಂಬರನ ಗುಂಪೇ ಬೇಡರ ಗುಂಪಾಯಿತು. ಅವರನ್ನು ಶಬರರೆಂದು ಕರೆಯಲಾಯಿತು. ಆಂಧ್ರ ಕಿರಾಟ, ಅಸ್ಸಕ, ಆಶ್ಮಕ ಮುಂತಾದ ಅಂತ್ಯವಾಸಿಗಳು ಬ್ರಾಹ್ಮಣಕಗಳಲ್ಲಿಯೂ, ಪುರಾಣಗಳಲ್ಲಿಯೂ ಉಕ್ತರಾಗಿರುವರು.[೬] ನಿಷಾದ ದೇಶದ ನಿಷಾದದ ದೊರೆಯಾಗಿದ್ದ ನಳನು ಸತ್ಯಪರಿ ಪಾಲನೆಗಾಗಿ ಕಷ್ಟಗಳನ್ನು ಅನುಭವಿಸಿ ಪುರಾಣ ಪ್ರಸಿದ್ಧ ಚಕ್ರವರ್ತಿಯಾಗಿದ್ದಾನೆ. ನಿಷಾದರು ಬೇಡ ಜನಾಂಗಕ್ಕೆ

ಸೇರಿದವರೆಂದು ವ್ಯಕ್ತವಾಗಿದೆ. ತ್ರೇತಾಯುಗದಲ್ಲಿ ಜೀವನ ಮೌಲ್ಯಗಳ ಹರಿಕಾರನೆಂದು ಕರೆಯಬಹುದಾದ ಮಹಾಋಷಿ ವಾಲ್ಮೀಕಿ ಬೇಡ ಜನಾಂಗದವನು. ಇದೇ ಯುಗದಲ್ಲಿ ಶ್ರೀರಾಮಚಂದ್ರನಿಗೆ ತಾನು ತಿಂದ ಬೋರೆ ಹಣ್ಣುಗಳನ್ನು ತಿನ್ನಿಸಿದ ಶಬರಿ, ಹರಿಗೋಲಿನ ಮೂಲಕ ನದಿಯನ್ನು ದಾಟಿಸಿದ ಬೇಡರ ದೊರೆ ಗುಹ, ಅರ್ಜುನನಿಗೆ ಸರಿಸಾಟಿಯಾಗಿ ಬಿಲ್ವಿದ್ಯೆಯಲ್ಲಿ ಪರಿಣಿತನಾಗಿದ್ದ ಏಕಲವ್ಯ ನಿಷಾದ ರಾಜ್ಯದ ರಾಜನಾದ ಹಿರಣಧನುವಿನ ಮಗ, ದ್ವಾಪರಯುಗದ ಧರ್ಮವ್ಯಾಧ, ಕಲಿಯುಗದಲ್ಲಿ ತನ್ನ ಬೇಟೆಯಿಂದ ಶಿವನಿಗೆ ಮೃಗದ ಮಾಂಸವನ್ನು ಎಡೆಹಾಕಿದ ಬೇಡರ ಕಣ್ಣಪ್ಪ, ಮುಂತಾದವರು ಪ್ರಸಿದ್ಧ ಇತಿಹಾಸ ಪುರುಷರಾಗಿದ್ದಾರೆ.

ಮನುವಿನ ಏಳನೆಯ ತಲೆಯವನಾಗಿ ಚಂದ್ರವಂಶದಲ್ಲಿ ಹುಟ್ಟಿದ ಕಾರ್ತವೀರ್ಯಾರ್ಜುನನ ಮಕ್ಕಳು, ಪರಶುರಾಮನು ಇಲ್ಲದ ವೇಳೆಯಲ್ಲಿ ಆಶ್ರಮಕ್ಕೆ ನುಗ್ಗಿ ಜಮದಗ್ನಿಯನ್ನು ಕೊಂದರು. ಇದರಿಂದ ಸಿಟ್ಟಿಗೆದ್ದ ಪರಶುರಾಮನು ಇಪ್ಪತ್ತೊಂದು ಸಲ ಭೂ ಪ್ರದಕ್ಷಣೆ ಮಾಡಿ ಕ್ಷತ್ರೀಯ ಕುಲವನ್ನೇ ನಾಶಮಾಡುವುದಾಗಿ ಶಪಥತೊಟ್ಟನು. ಇದರಿಂದ ಹೆದರಿದ ಕ್ಷತ್ರೀಯರೆಲ್ಲರೂ ಕಾಡು ಸೇರಿದರು. ಅಲ್ಲಿಯೇ ನೆಲಸಿ ತಮ್ಮ ನಾಮವನ್ನು ನಾಯಕ ಎಂದು ಬದಲಾಯಿಸಿಕೊಂಡರು.[೭] ಇನ್ನೊಂದು ಕಥೆಯ ಪ್ರಕಾರ ಧ್ರುವ ಚಕ್ರವರ್ತಿಗೆ ಅಂಗನೆಂಬ ಮಗನಿದ್ದು, ಅಂಗನಿಗೆ ವೇನನೆಂದು ಮಗ ಜನಿಸಿದನು. ವೇನನಿಗೆ ಇಬ್ಬರು ಮಕ್ಕಳು. ಹಿರಿಯವನಾದ ಬಾಹುಕ ವಿಲಕ್ಷಣ ರೂಪದವನು. ಕಿರಿಯ ಮಗ ಪೃಥು ಚಕ್ರವರ್ತಿಯಾಗಿ ಪ್ರಖ್ಯಾತಿ ಪಡೆದನು. ಜೇಷ್ಠ ಪುತ್ರನಾದರೂ ಅಧಿಕಾರವಂಚಿತನಾಗಿ ನೊಂದು ಬಾಹುಕನು ತನ್ನ ಸಹವರ್ತಿಗಳೊಂದಿಗೆ ಕಾಡು ಸೇರಿದನು. ಮತ್ತು ಅಲ್ಲಿಯೇ ಜೀವನವನ್ನು ಮುಂದುವರೆಸಿದನು. ಇವರನ್ನು ವ್ಯಾಧರೆಂದು ಕರೆಯಲಾಯಿತು.[೮] ವಾಲ್ಮೀಕಿ ಮತ್ತು ಸನಾತನ ಎಂಬ ದಂಪತಿಗಳಿಗೆ ಕಾಮಗೇತಿ, ಮಂದ, ಮುಳ್ಳ, ಮುಚ್ಚ, ಮಾನಗ, ಮಿಲ್ಲ, ಮಲ್ಯ ಎಂಬ ಏಳು ಮಕ್ಕಳು ಜನಿಸಿದರು. ಅರವತ್ತು ಮೂರು ಪುರಾತನರಲ್ಲಿ ಇವನೂ ಒಬ್ಬ. ಇವನ ವಂಶ ವೃದ್ಧಿಯಾಗಿ ಇಪ್ಪತ್ತೆಂಟು ಬೆಡಗುಗಳಾದವು.[೯] ಕ್ಷತ್ರೀಯನಾದ ವಿಶ್ವಾಮಿತ್ರನು ತನ್ನ ನೂರು ಮಕ್ಕಳಲ್ಲಿ ಐವತ್ತು ಜನರು ವಿಧೇಯರಾಗಿಲ್ಲದ ಕಾರಣ ಕೋಪದಿಂದ ನೀವು ಅಡವಿ ಸೇರಿ ಪೂರ್ವ ದಿಕ್ಕಿನಲ್ಲಿ ಶಬರರೆಂದು, ಉತ್ತರದಲ್ಲಿ ಪುಳಿಂದರೆಂದು, ಪಶ್ಚಿಮದಲ್ಲಿ ವ್ಯಾಧರೆಂದು ಹೆಸರು ಪಡೆದು ಬಾಳಿರೆಂದು ಶಾಪ ಕೊಟ್ಟ ವಿಷಯ ಸಂಸ್ಕೃತದ ಶ್ಲೋಕ ರೂಪದಲ್ಲಿದೆ.[೧೦] ಕ್ಷತ್ರೀಯ ಮೂಲ ಪುರುಷ ಬೇಡ.[೧೧] ಬೇಡರು ಮೂಲತಃ ಕ್ಷತ್ರಿಯ ಕುಲಕ್ಕೆ ಸೇರಿದವರು. ಪೌರಾಣಿಕ ಹಾಗೂ ಅದಕ್ಕೂ ಪೂರ್ವಕಾಲದಿಂದಲೂ ಇವರು ಯೌಧೇಯ (ಕ್ಷಾತ್ರ) ವೃತ್ತಿಗೆ ಹೆಸರಾದ ನಿರ್ಭೀತ ಜನಾಂಗವೆಂದೂ, ಮೂಲದಿಂದಲೂ ಇವರು ಕಿರಾತ ಜನಾಂಗವಾಗಿರದೆ ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದು ಜೀವನ ನಿರ್ವಹಣೆಗಾಗಿ ಬೇಟೆಯ ಉಪಜೀವನವನ್ನು ರೂಢಿಸಿಕೊಂಡರೆಂದು ತಿಳಿಯಬರುತ್ತದೆ.[೧೨]

ಬೇಡರು ಶೌರ್ಯ. ಸಾಮರ್ಥ್ಯ. ಸ್ವಾಮಿನಿಷ್ಠೆಗೆ ಹೆಸರಾದವರು. ಆಗಿನ ಮಹಾರಾಜರು ತಮ್ಮ ಸೈನ್ಯದಲ್ಲಿ ಬಿಲ್ಲುಗಾರ ತಂಡದವರನ್ನು ನಾಯಕರನ್ನಾಗಿ ನೇಮಿಸಿಕೊಳ್ಳುತ್ತಿದ್ದರು.[೧೩] ಕರ್ನಾಟಕದ ರಜಪೂತರೆಂದು ಬೇಡರನ್ನು ಕೆಲವರು ಕರೆದಿದ್ದಾರೆ. ಏಕೆಂದರೆ ಕ್ಷಾತ್ರ ತೇಜಸ್ಸಿನಲ್ಲಿ ಉತ್ತರದಲ್ಲಿ ರಜಪೂತರು ಮಧ್ಯದಲ್ಲಿ ಮರಾಠರು, ದಕ್ಷಿಣದಲ್ಲಿ ನಾಯಕರು ಪ್ರಮುಖರಾಗಿ ಕಂಡುಬರುತ್ತಾರೆ. ಬೇಡರು ಮಹಿಳೆಯರ ಮಾನರಕ್ಷಣೆ, ಪ್ರಜೆಗಳ ಪ್ರಾಣರಕ್ಷಣೆ, ಹಿಂದೂ ಧರ್ಮದ ರಕ್ಷಣೆಗೆ ಪ್ರಾಣವಿಟ್ಟ ಜನಾಂಗ, ಯೋಧರಾಗಿ ದೇಶರಕ್ಷಣೆ, ಧರ್ಮರಕ್ಷಣೆ ಮಾಡಿರುವುದು ಸೀಮೋಲ್ಲಂಘನೆಯಾಗಿದೆ.[೧೪] ಗುಪ್ತರ ಕಾಲದ ಮಧ್ಯಭಾರತದಲ್ಲಿ ಬಹಳಷ್ಟು ಅರಣ್ಯವನ್ನು ಕಡಿದು ಕೃಷಿ ಬಳಕೆಗೆ ತರಲಾಯಿತು. ಆದಿವಾಸಿಗಳು ಕೆಳಸ್ಥಾನಮಾನಗಳಿಗೆ ಬಂದರು. ಬ್ರಾಹ್ಮಣೀಯ ವ್ಯವಸ್ಥೆಯ ವ್ಯಾಪ್ತಿಗೆ ಆದಿವಾಸಿ ಬಣಗಳು ಬಂದವು. 'ಆದಿವಾಸಿ ಬಣನಾಯಕರ ಆಳ್ವಿಕೆಯಲ್ಲಿದ್ದ ಪ್ರದೇಶಗಳು ಇತಿಹಾಸದ ಬೆಳಕಿಗೆ ಬಂದಂತಾಯಿತು. ಆಗ ದಕ್ಷಿಣದ ರಾಜ್ಯಗಳಲ್ಲಿ ಆದಿವಾಸಿ ಬಣಗಳ ಪ್ರದೇಶಗಳಲ್ಲಿ ಬ್ರಾಹ್ಮಣರಿಗೆ ಮಾನ್ಯವಾಗಿ ಭೂಮಿ ನೀಡಿದ್ದರಿಂದ, ಸುತ್ತಿನ ಆದಿವಾಸಿಗಳು ಗೋಸಂಪತ್ತನ್ನು ಕಾಪಾಡುವುದರ ಮಹತ್ವವನ್ನು, ಉತ್ತಮ ಕೃಷಿ ವಿಧಾನಗಳನ್ನು ಕಲಿತರು.[೧೫] ಚಾರಿತ್ರಿಕವಾಗಿ ನೋಡುವುದಾದರೆ ಮೌರ್ಯ ಕಾಲದಲ್ಲಿ ಬೇಡರು ಬೇಟೆಯನ್ನೇ ನಂಬಿದ್ದರು. ರಾಜಾಶ್ರಯ ಕೈ ತಪ್ಪಿದಾಗ ವಲಸೆ ಆರಂಭಿಸಿರಬೇಕು. ಶಾತವಾಹನರ ಕಾಲದಲ್ಲಿ ಇಕ್ಷ್ವಾಕು ವಂಶದ ದೊರೆಗಳು ಬೇಡನನ್ನು 'ಮಹಾ ತಳವಾರ' ಎಂಬ ಹುದ್ದೆಗೆ ನೇಮಿಸಿಕೊಂಡಿದ್ದರು. ಅಶೋಕನ ೧೩ನೇ ಬಂಡೆ ಶಾಸನದ ಪ್ರತಿಗಳಲ್ಲಿ ಬೇಡರನ್ನು ಪುರಿಂದ, ಪುಳಿಂದ ಎಂದು ಉಲ್ಲೇಖಿಸಲಾಗಿದೆ. ಇವನ ಕಾಲದಲ್ಲಿ ಮಧ್ಯ ಪ್ರಾಂತ್ಯದಲ್ಲಿ ಅಡವೀ ರಾಜ್ಯಗಳೆಂಬುವು ಇದ್ದವೆಂದು ತಿಳಿದುಬರುತ್ತದೆ.[೧೬] ಕೌಟಿಲ್ಯನ ಅರ್ಥಶಾಸ್ತ್ರವು ಹೇಳುವ 'ಅಡವಿಬಲ' ಈ ರಾಜ್ಯಗಳಿಗೆ ಸಂಬಂಧಪಟ್ಟಿದೆ. ಇವರು ಲೂಟಿ ಹೊಡೆಯಲು ಯಾವಾಗಲೂ ಕಾತರರಾಗಿರುತ್ತಾರೆಂದು ಕೌಟಿಲ್ಯನು ಹೇಳುತ್ತಾನೆ.[೧೭] ಗುಪ್ತ ದೊರೆಗಳ ಕಾಲಕ್ಕೆ ದಕ್ಷಿಣದಲ್ಲಿ ಬೇಡರ ರಾಜ್ಯ ಹಾಗೂ ರಾಜರುಗಳಿದ್ದ ಬಗ್ಗೆ ತಿಳಿದುಬರುವುದು. ಸಮುದ್ರಗುಪ್ತನು ದಕ್ಷಿಣದಲ್ಲಿ ಗೆದ್ದ ರಾಜರಲ್ಲಿ ಮಹಾಕಾಂತಾರಾದ ವ್ಯಾಘ್ರರಾಜನು ಒಬ್ಬನಾಗಿದ್ದನು. ಇವನು ಶಬರನಾಯಕ.[೧೮] ಶಾತವಾಹನರ ಕಾಲಕ್ಕೆ ತಳವಾರ ಎಂದು ಕರೆಸಿಕೊಂಡು ಹುದ್ದೆಯಲ್ಲಿದ್ದ ಬೇಡರು, ರಾಷ್ಟ್ರಕೂಟರ ಕಾಲಕ್ಕೆ 'ನಾಯಕ' ಪದವಿಗೆ ಬಡ್ತಿ ಪಡೆದಂತಾಯಿತು. ವಿಜಯನಗರ ಪೂರ್ವದಲ್ಲಿಯೇ ಮಹಾನಾಯಕಾಚಾರ್ಯ ಎಂಬ ಬಿರುದುಗಳನ್ನು ಗಳಿಸಿದ್ದರು.[೧೯]

ಕನ್ನಡದ ಮೊದಲ ರಾಜಮನೆತನ ಕದಂಬ ಮನೆತನವಾಗಿದೆ. ಮಯೂರಶರ್ಮನಿಗೆ, ಶಿವಸ್ಕಂದವರ್ಮನ ವಿರುದ್ಧ ಬೇಡ ಸೈನಿಕರು ಶ್ರೀಶೈಲ ಪರ್ವತ ಪ್ರದೇಶದಲ್ಲಿ ಸಹಾಯ ಮಾಡಿದರು. ಶ್ರೀಶೈಲ ಗುಡ್ಡಗಾಡು ಪ್ರದೇಶ ಬೇಡರ ನೆಲೆಗಳಲ್ಲಿ ಒಂದಾಗಿದೆ. ಫ್ರಾನ್ಸಿಸ್ ಬುಕಾನನ್ ಎಂಬ

ವಿದೇಶಿ ವಿದ್ವಾಂಸ ಕದಂಬರು ಬೇಡರು ಎಂದಿರುವನು.[೨೦] ಶ್ರೀಶೈಲ ಪ್ರದೇಶದಿಂದ ಬೇಡರು ಕರ್ನಾಟಕಕ್ಕೆ ವಲಸೆ ಬಂದವರು ಎಂಬ ಅಭಿಪ್ರಾಯವಿದೆ. ಕನ್ನಡ ನಾಡಿನ ಅನೇಕ ಶಾಸನಗಳಲ್ಲಿ ಬೇಡರ ಉಲ್ಲೇಖ ಕಂಡುಬರುತ್ತದೆ. ಬೇಡರನ್ನು ಶಾಸನಗಳಲ್ಲಿ ಮಲೆಪರೆಂದು ಕರೆದಿದ್ದಾರೆ. ಈ ಬುಡಕಟ್ಟಿನಲ್ಲಿ 'ಬೇಡರ ಪಡೆ'ಗಳು ಬಂದು ತುರುಗಳನ್ನು ಅಪಹರಿಸಿದ ನಿದರ್ಶನಗಳು ಶಾಸನಗಳಲ್ಲಿವೆ.[೨೧] ಮಹೇಂದ್ರ ಎಂಬುವನು ಶಿಲಾದಿತ್ಯನೊಡನೆ ಹೋರಾಡುವಾಗ ಬೇಡರನ್ನು ಮಲೆಪರನ್ನು ತನ್ನ ಸಹಾಯಕ್ಕಾಗಿ ತೆಗೆದುಕೊಂಡು ಹೋದನೆಂದು ಶಾಸನವೊಂದು ತಿಳಿಸುತ್ತದೆ.[೨೨] ಗಂಗ, ಚಾಲುಕ್ಯರ ಕಾಲಕ್ಕೆ ಬೇಡರು ಸೈನಿಕರು, ತಳವಾರರು ಆಗಿದ್ದರಿಂದ ರಾಜರು ಆಗಿರಲು ಸಾಧ್ಯವಿದೆ. ಪೆಟ್ಟಣಿ ಸತ್ಯಾಂಕ ಅಥವಾ ಬೇಲಳೆಯ ಮೂಲನೆಂಬುವನು ಬೇಡರಾಯರು ಮತ್ತು ಮಲೆಪರ ಜತೆಗಿನ ಕಾಳಗದಲ್ಲಿ ಸತ್ಯಾಂಶ ಅಥವಾ ಬೇಲಳೆಯ ಮೂಲನೆಂಬುವನು ಬೇಡರಾಯರು ಮತ್ತು ಮಲೆಪರ ಜತೆಗಿನ ಕಾಳಗದಲ್ಲಿ ಮಡಿದು ವೀರ ಸ್ವರ್ಗ ಪಡೆದನೆಂಬುದು, ಬೇಡರ ರಾಜ್ಯಗಳಿದ್ದುದು, ಶಾಸನದ ಅಭಿಪ್ರಾಯ ಎಂದು ಎಂ.ಬಿ.ನೇಗಿನಹಾಳ ಅವರು ಹೇಳಿದ್ದಾರೆ.[೨೩] ಗಂಗರ ರಾಜಧಾನಿಯಾದ ತಲಕಾಡಿನ ಸ್ಥಳನಾಮದ ಹಿನ್ನೆಲೆಯನ್ನು ತಲ ಮತ್ತು ಕಾಡು ಎಂಬ ಬೇಡ ಸಹೋದರರ ಹೆಸರಿರುವುದನ್ನು ಕೈಫಿಯೊತ್ತೊಂದು ತಿಳಿಸುತ್ತದೆ.[೨೪] ಬೇಡ ಜನಾಂಗವು ಗಂಗರ ಕಾಲಕ್ಕೆ ರಾಜಕೀಯದಲ್ಲಿ ಪ್ರಸಿದ್ಧಿಗೆ ಬಂದಿತ್ತು. ಗಂಗರ ೧ನೇ ಶಿವಮಾರನು ಕ್ರಿ.ಶ. ೭೧೩ರ ಶಾಸನದಲ್ಲಿ ಕಿರಾತ ಹೆಣ್ಣು ನವಕಾಮನ ಆಸ್ಥಾನದಲ್ಲಿ ನರ್ತಕಿಯಾಗಿದ್ದಳೆಂದು ಉಲ್ಲೇಖಿತವಾಗಿದೆ.[೨೫] ಗುಡ್ಡಗಾಡು ಜನರನ್ನು ಸೈನ್ಯದ ಕೊರತೆ ಬಿದ್ದಾಗ ಕರೆಯಿಸಿ ಸೈನ್ಯ ತರಬೇತಿ ನೀಡಿ ಪ್ರತ್ಯೇಕ ಪಡೆಯನ್ನಾಗಿ ಮಾಡುತ್ತಿದ್ದರು. ರಾಜ್ಯಗಳ ಉದಯ, ರಾಜ್ಯಗಳ ನಡುವೆ ಸ್ಪರ್ಧೆ ಹೆಚ್ಚಾದಂತೆ ಸೈನ್ಯದ ಅವಶ್ಯಕತೆಯೂ ಹೆಚ್ಚಾಯಿತು. ಆದುದರಿಂದ ಗುಡ್ಡಗಾಡು ಜನರು ಸೈನಿಕರಾಗಿ ಸೈನ್ಯ ಸೇರುವುದು ಹೆಚ್ಚಾಯಿತು. ಗಂಗರು ಬೇಡರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುವ ಕೆಲಸ ಮಾಡಿದರು. ಹೊಯ್ಸಳ ಕಾಲದವರೆಗೂ ಇದು ಮುಂದುವರೆಯಿತು.[೨೬] ತಮ್ಮದೇ ಆದ ಸೈನ್ಯ ಕಟ್ಟಿಕೊಂಡ ಬೇಡರು ಆಗಿನ ರಾಜರುಗಳಿಗೆ ಸವಾಲಾದರು. ಇವರನ್ನು ಅಂಕೆಯಲ್ಲಿಡಲು ಅರಸರು ಪರದಾಡಬೇಕಾಯಿತಾದರೂ ಗಂಗರ ಕೊಂಗಣಿವರ್ಮ ಧರ್ಮರಾಜ ಶಿವಮಾರನು ಕ್ರಿ.ಶ. ೯೭೩ರಲ್ಲಿ ಕಿರಾತರನ್ನು ಹತ್ತಿಕ್ಕುವಲ್ಲಿ ಯಶಸ್ವಿಯಾದನು ಬೇಡರ ಬಿಂಡಿಗನವಿಲೆಯನ್ನು ದಾಳಿ ಮಾಡಿ ಅಲ್ಲಿಯ ಹೆಂಗಸರನ್ನು ಎತ್ತಿಕೊಂಡು ಹೋದಾಗ ಗವರಶೆಟ್ಟಿ ಎಂಬುವನು ಇವರೊಂದಿಗೆ ಹೋರಾಡಿದ್ದನ್ನು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಕಂಬದಹಳ್ಳಿಯ ಕ್ರಿ.ಶ. ೯೭೭ರ ಶಾಸನ ತಿಳಿಸುತ್ತದೆ. ಹಾಸನ ಜಿಲ್ಲೆ ಆಲೂರು ತಾಲ್ಲೂಕಿನ ಕ್ರಿ.ಶ. ೯೮೫ರ ನಲ್ಲೂರು ಶಾಸನವು ಬೇಡರ ಬೀರಮ್ಮನು ತನ್ನ ಕುದುರೆ ಪಡೆಯೊಂದಿಗೆ ನಲ್ಲೂರನ್ನು ದಾಳಿ ಮಾಡಿದಾಗ ಗುಂಡಯ್ಯನು ಮಡಿದ ಸಂಗತಿ ತಿಳಿಯುವುದು. ಚಾಲುಕ್ಯ ಮತ್ತು

ರಾಷ್ಟ್ರಕೂಟರ ಕಾಲದಲ್ಲಿ ಬೇಡ ಪಡೆಗಳು ಕರ್ನಾಟಕ ಸೈನ್ಯದಲ್ಲಿ ಪ್ರಸಿದ್ಧಿಯಾಗಿದ್ದವು. ಕರ್ನಾಟಕ ಸೈನ್ಯವೆಂದರೆ ಬೇಡರ ಸೈನ್ಯವೆಂದೇ ಹೆಸರಾಗಿತ್ತು. ಏಕೆಂದರೆ ಕರ್ನಾಟಕ ಸೈನ್ಯದಲ್ಲಿ ಬೇಡರೇ ಹೆಚ್ಚು ಸಂಖ್ಯೆಯಲ್ಲಿದ್ದರು.[೨೮] ರಾಷ್ಟ್ರಕೂಟರ ಕಾಲಕ್ಕೆ ಬೇಡರು ಅಧಿಕಾರಿಗಳಿಗೆ ಅನೇಕ ಹುದ್ದೆಗಳನ್ನು ಪಡೆದುಕೊಂಡಿದ್ದರು. ನಾಡಗಾವುಂಡರಾಗಿ ಬೇಡರು ನೇಮಕಗೊಂಡಿರುವುದು ಕಂಡುಬರುತ್ತದೆ.[೨೯]

ಕ್ರಿ.ಶ. ೧೦೧೩ರ ಗುಂಡ್ಲುಪೇಟೆ ತಾಲ್ಲೂಕಿನ ಶಾಸನವು ಕುರುವತ್ತಿಯ ಬೇಡಗಾವುಂಡನು ಭೂಮಿಯನ್ನು ದಾನ ಮಾಡಿದ್ದನ್ನು ಉಲ್ಲೇಖಿಸಿದೆ. ಕ್ರಿ.ಶ. ೧೧೪೦ರ ಬೇಲೂರು ತಾಲ್ಲೂಕಿನ ಹಳೆಬೀಡು ಶಾಸನವು ಬೇಟೆಯ ತಿಪ್ಪೆಯನಾಯಕನನ್ನು ಇದೇ ತಾಲ್ಲೂಕಿನ ಇನ್ನೊಂದು ಶಾಸನವು ಬೇಡಗೌಡನು ತುರುಕಾಳಗದಲ್ಲಿ ಹೋರಾಡಿ ತುರುಗಳನ್ನು ಪಡೆದು ಸತ್ತಿದ್ದನ್ನು ತಿಳಿಸುತ್ತದೆ.

ಚೀಲಗವುಡ ಎಂಬುವನು ಒಂದು ಊರಿನ ಹಸುಗಳನ್ನು ಬೇಡರು ಹೊಡೆದುಕೊಂಡು ಹೋಗುವಾಗ ಅವರನ್ನು ಹಿಂಬಾಲಿಸಿ ಸದೆಬಡಿದು ತುರುಗಳನ್ನು ಹಿಂತುರುಗಿಸಿ ಆ ಗ್ರಾಮವನ್ನು ಸಂತೋಷ ಪಡಿಸುವುದು ತಿಳಿದುಬರುತ್ತದೆ.[೩೦] ಕ್ರಿ.ಶ. ೧೨೬೦ರ ಶಾಸನವು ಬೇಡರು ಕಲ್ಲಿಕೆರೆಯ ತುರುಗಳನ್ನು ಮತ್ತು ಹೆಂಗಸರನ್ನು ಅಪಹರಿಸಿ, ದೋಚಿದ ಪ್ರಸಂಗವನ್ನು ಉಲ್ಲೇಖಿಸಿದೆ. ಪ್ರಾಚೀನ ಕಾಲದಲ್ಲಿ ರಾಜರಿಗೆ ಮಲೆಪರು, ಬೇಡರು, ಸಿಂಹಸ್ವಪ್ನ ಸಮಾನರಾಗಿರದಿದ್ದರೂ ತಲೆನೋವಂತೂ ಆಗಿದ್ದರು. ಸಾಮಾನ್ಯ ಜನರಿಗೂ ದುಃಸ್ವಪ್ನವಾಗಿದ್ದರು.[೩೧] ಕ್ರಿ.ಶ. ೧೨೧೬ರ ವೀರಗಲ್ಲಿನಲ್ಲಿ ಸಿಂದರಾಜನಾದ ಈಶ್ವರ ದೇವರಸನು ತನ್ನ ಪಟ್ಟ ಸಾಹಣಿಯಾದ ಚಿಣ್ಣನಿಗೆ ಬೇಡರು ತುರುಗಳನ್ನು ಅಪಹರಿಸಿಕೊಂಡು ಹೋದರೆಂದು ತಿಳಿಸಿದಾಗ ಅವನು ಕೋಪದಿಂದ ಯಮನಾಗುತ್ತಾನೆಂಬ ಉಲ್ಲೇಖವಿದೆ.[೩೨] ಕ್ರಿ.ಶ. ೧೩೨೪ರ ಚಾಮರಾಜನಗರ ಜಿಲ್ಲೆಯ ಹರದನಹಳ್ಳಿಯ ಶಾಸನದಲ್ಲಿ ಬೇಡಗಂಪಣ ರಾಮಣ್ಣನಾಯಕನು ಕುನ್ನಪನಾಗರ ಸೀಮೆಯಿಂದ ಹೊಯ್ಸಳ ದೊರೆ ಮುಮ್ಮಡಿ ಬಲ್ಲಾಳನ ಕಾಲದಲ್ಲಿ ಆಳುತ್ತಿದ್ದ ಬಗ್ಗೆ ಬೆಳಕು ಚೆಲ್ಲುತ್ತದೆ. ದ್ವಾರಕಾ ಪಟ್ಟಣದಿಂದ ತುಂಗಾ ಎಂಬಲ್ಲಿಗೆ ಬಂದು ನೆಲೆಸಿದ ಜೈನ ಕ್ಷತ್ರೀಯ ವಿಕ್ರಮ ಚಂಗಾಳ್ವನು, ಸುತ್ತಮುತ್ತಲ ಬೇಡರ ನಾಯಕರನ್ನು ಸೋಲಿಸಿ ರಾಜ್ಯ ವಿಸ್ತರಿಸಿದನು. ಬೇಡ ನಾಯಕರಲ್ಲಿ ಪ್ರಬಲರಾದವರು. ವಲಸೆ ಬಂದ ಚಂಗಾಳ್ವ ಹೆಣ್ಣುಗಳ ಸೌಂದರ್ಯಕ್ಕೆ ಸೋತು ವಿವಾಹ ಸಂಬಂಧಕ್ಕೆ ಒತ್ತಾಯ ಮಾಡಿದಾಗ ವಿಕ್ರಮ ಚಂಗಾಳ್ವನು ಮೋಸದಿಂದ ಅವರನ್ನು ಕೊಂದನು.[೩೩] ಇಂಗ್ಲೆಂಡಿನ ಇತಿಹಾಸಕಾರ ಜೆ.ಡಿ.ಎಂ.ಡೆರಿಟ್ ಅವರು ತಮ್ಮ ದಿ ಹೊಯ್ಸಳಾಸ್ ಎ ಮೆಡಿವಲ್ ಇಂಡಿಯನ್ ರಾಯಲ್ ಫಾಮಿಲಿಕೃತಿಯಲ್ಲಿ ಹೊಯ್ಸಳರು ಬೇಡರಾಗಿದ್ದರೆಂದು ತಿಳಿಸಿದ್ದಾರೆ.[೩೪] ಹೊಯ್ಸಳರ ಪ್ರಸಿದ್ಧ ದೊರೆ ವಿಷ್ಣುವರ್ಧನನು ಬೇಡರನ್ನು ತನ್ನ ಸೈನಿಕರನ್ನಾಗಿ ನೇಮಿಸಿಕೊಂಡಿದ್ದನು. ಬೇಡರ ಪಡೆಯೇ ಇವನ ಸೈನ್ಯದಲ್ಲಿ ಮುಖ್ಯವಾಗಿತ್ತು. ಕಿರಾತ ಮುಖ್ಯಸ್ಥರು, ಶಕ್ತಿಶಾಲಿ ವೀರರು, ಕ್ರಿ.ಶ. ೧೧೧೭ರಲ್ಲಿ ವಿಷ್ಣುವರ್ಧನನ ಸಹಾಯಕರಾಗಿ ನೇಮಕಗೊಂಡಿದ್ದರು.

ಹೊಯ್ಸಳರಿಗೆ ಮತ್ತು ಸೇವುಣರಿಗೆ ಯುದ್ಧವಾದಾಗ ಬೇಡ ಸೈನಿಕರ ಪಾತ್ರ ನಿರ್ಣಾಯಕವಾಗಿತ್ತು.[೩೫] ಬೇಡರು, ಕಳ್ಳರು, ಮೊದಲಾದ ಗಿರಿಕಂದರವಾಸಿಗಳಿಂದ ಕೂಡಿದ ನಾಡಾಳು ಪಡೆಯು ಹೊಯ್ಸಳ ಸೈನ್ಯದಲ್ಲಿನ ಇನ್ನೊಂದು ಪ್ರಮುಖ ಪಡೆಯಾಗಿತ್ತು.[೩೬] ಬೇಡರು ಹಳ್ಳಿಗಳಲ್ಲಿ ದನಗಳನ್ನು ಅಪಹರಿಸುವ, ದರೋಡೆ ಮಾಡುವ ಕಾರ್ಯಗಳನ್ನೆಸಗಿ ಶಾಂತಿಭಂಗಕ್ಕೆ ಕಾರಣವಾಗುವ ಸಂಭವ ಇದ್ದುದರಿಂದ ಹೊಯ್ಸಳರು ಇವರನ್ನು ಸೈನ್ಯಕ್ಕೆ ಸೇರಿಸಿಕೊಂಡು ಬಂಡಾಯಗಳ ನಿಗ್ರಹಕ್ಕೆ ಹೊಸ ರಾಜ್ಯಗಳ ಆಕ್ರಮಣಕ್ಕೆ ಬಳಸಿಕೊಳ್ಳುತ್ತಿದ್ದರು. ಈ ಕಾರಣದಿಂದ ಹೊಯ್ಸಳರ ಕಾಲದ ಶಾಸನಗಳು ಇವರನ್ನು 'ಹೊಯ್ಸಳ ಬೀಡಿನ ಪರಮ ವಿಶ್ವಾಸಿಗಳು' ಎಂದು ಗೌರವ ಪೂರ್ವಕವಾಗಿ ಕರೆದಿವೆ.[೩೭] ಅಸಂದಿ ನಾಡಿನ ಅನೇಕ ಶಿಲಾಶಾಸನಗಳಲ್ಲಿ ಬೇಡರ ದಾಳಿಗಳನ್ನು ಉಲ್ಲೇಖಿಸಲಾಗಿದೆ. ಬೇಡರ ಬಂಕೆಗಳಿದ್ದ ಬಗ್ಗೆ ತಿಳಿದುಬರುತ್ತದೆ.[೩೮] ಕನ್ನಡ ಶಾಸನಗಳಲ್ಲಿ ಕಂಡುಬರುವ ಲೆಂಕರು ಬೇಡ ವೀರರೇ ಇರಬೇಕು. ಧೈರ್ಯ, ಸಾಹಸ ಮತ್ತು ಪ್ರಾಣದ ಹಂಗು ತೊರೆದು ತಮ್ಮ ಸ್ವಾಮಿಗಾಗಿ ಹೋರಾಡುತ್ತಿದ್ದ ಇವರ ಗುಣಗಳು ಬೇಡರ ಗುಣಗಳಿಗೆ ಸರಿಸಮವಾಗಿವೆ. ಯುದ್ಧ ಶಿಕ್ಷಣ ಹೊಂದಿ ತಮ್ಮ ಊರುಗಳಲ್ಲಿ ಜೀವಿಸುತ್ತಿದ್ದ ಇವರು ಯುದ್ಧ ಸಮಯದಲ್ಲಿ ಸೇನೆಯನ್ನು ಸೇರಿಕೊಳ್ಳುತ್ತಿದ್ದರು. ಇವರಿಗೆ ಕೆಲವು ಊರುಗಳನ್ನು ಬಿಟ್ಟುಕೊಟ್ಟು ಆ ಊರುಗಳ ಆದಾಯವನ್ನು ಅನುಭವಿಸುವಂತೆ ರಾಜನೋ, ಸಾಮಂತನೋ ನೇಮಿಸುತ್ತಿದ್ದನು.[೩೯] ಹೀಗಾಗಿ ಯುದ್ಧದಲ್ಲಿ ಭಾಗವಹಿಸುವುದು ವಂಶಪಾರಂಪರ್ಯವಾಯಿತು. ಈ ವಂಶಪಾರಂಪರ್ಯ ವೃತ್ತಿಯು ಬೇಡರು ಬೆಳೆಯಲು ಸಹಾಯಕವಾಯಿತು.

ಕ್ರಿ.ಶ. ೧೨ನೇ ಶತಮಾನ ಕರ್ನಾಟಕದ ಇತಿಹಾಸದಲ್ಲಿ ಒಂದು ವಿಶಿಷ್ಟವಾದ ಕಾಲ. ಈ ಕಾಲದಲ್ಲಿ ಧಾರ್ಮಿಕ ಜೀವನದ ಲಕ್ಷಣ, ಆಚಾರವಂತಿಕೆ, ಸಾಂಪ್ರದಾಯಕತೆ ಮುಂತಾದ ರಂಗಗಳಲ್ಲಿ ಅನೇಕ ರೀತಿಯ ಸುಧಾರಣೆಗಳು ಕಂಡುಬಂದವು. ಬಸವೇಶ್ವರ ಪ್ರಯತ್ನದ ಫಲವಾಗಿ ನಡೆದ ಸಾಮಾಜಿಕ ಕ್ರಾಂತಿಯಲ್ಲಿ ಕೆಳವರ್ಗಗಳವರೂ ಭಾಗವಹಿಸಿದರು. ಶೂದ್ರವರ್ಗಗಳವರೂ ವಚನಗಳನ್ನು ರಚಿಸಿ ವಚನಕಾರರೆನಿಸಿಕೊಂಡರು. ಈ ಕಾಲದಲ್ಲಿ ಬಡವ-ಬಲ್ಲಿದ, ಮೇಲು-ಕೀಳು ಎನ್ನುವ ಜಾತಿ ಪ್ರಜ್ಞೆಯ ಪ್ರಭಾವ ಕಡಿಮೆಯಾಯಿತು. ಕೆಳವರ್ಗದವರು ಉನ್ನತವರ್ಗದವರು ಅನುಭವಿಸುತ್ತಿದ್ದ ಅವಕಾಶಗಳನ್ನು ಪಡೆಯಲಾರಂಭಿಸಿದರು. ಬೇಡ ನಾಯಕರು ತಮ್ಮಲ್ಲಿದ್ದ ಶೂರತನ ಮತ್ತು ಸಾಹಸದ ಫಲವಾಗಿ ಬಿಜ್ಜಳನ ಕಾಲದಲ್ಲಿ ಬ್ರಾಹ್ಮಣರು ವಹಿಸುತ್ತಿದ್ದ ಉನ್ನತ ವರ್ಗದವರು ಅನುಭವಿಸುತ್ತಿದ್ದ ಅವಕಾಶಗಳನ್ನು ಪಡೆಯಲಾರಂಭಿಸಿದರು. ಬೇಡ ನಾಯಕರು ತಮ್ಮಲ್ಲಿದ್ದ ಶೂರತನ ಮತ್ತು ಸಾಹಸದ ಫಲವಾಗಿ ಬಿಜ್ಜಳನ ಕಾಲದಲ್ಲಿ ಬ್ರಾಹ್ಮಣರು ವಹಿಸುತ್ತಿದ್ದ ಉನ್ನತ ಅಧಿಕಾರಗಳನ್ನು ಪಡೆಯಲಾರಂಭಿಸಿದರು. ಬೇಡರ ರಾಜಕೀಯ ಉನ್ನತಿಯನ್ನು ಮನಗಂಡ ಚೆನ್ನಬಸವಣ್ಣನವರು

ತಮ್ಮ ಒಂದು ವಚನದಲ್ಲಿ 'ಕಿರಾತರು ಹೆಚ್ಚಿ ಪುರಾತನರು ಅಡಗಿದರು' ಎಂದು ಆ ಕಾಲದ ರಾಜಕೀಯ ವಲಯಗಳಲ್ಲಾಗುತ್ತಿದ್ದ ಪರಿವರ್ತನೆಯನ್ನು ಸೂಚಿಸಿದ್ದಾರೆ. ವಿಜಯನಗರ ಸಾಮ್ರಾಜ್ಯದ ಪೂರ್ವ ಹಾಗೂ ವಿಜಯನಗರೋತ್ತರ ಕಾಲದಲ್ಲಿ ತಲೆ ಎತ್ತಿದ ಬಹುತೇಕ ಪಾಳೆಯ ಪಟ್ಟುಗಳಲ್ಲಿ ಬೇಡರವೇ ಅಧಿಕವಾಗಿದ್ದವು.

ಮಧ್ಯಕಾಲೀನ ಇತಿಹಾಸದಲ್ಲಿ ಶೂದ್ರ ಸಮೂಹಗಳಿಂದ ಸಾಹಸಿಗಳಾದವರು ಕ್ಷತ್ರೀಯ ವರ್ಗಕ್ಕೆ ಬಡ್ತಿ ಪಡೆದುಕೊಂಡರು. ಅಂತಹ ಸಂದರ್ಭದಲ್ಲಿ ಅವರ ಅಧಿಕಾರಕ್ಕೆ ಮನ್ನಣೆ ಸೂಚಿಸುವ ಸಲುವಾಗಿಯೂ ಮತ್ತು ಸಾಮಾಜಿಕವಾಗಿ ಅವರ ಅಂತಸ್ತು ಏರಿದ್ದರ ಸೂಚನೆಯಾಗಿಯೂ ವಂಶಮೂಲಗಳನ್ನು ಸೃಷ್ಟಿಸಲಾಯಿತು. ಈ ಕಾಲದ ಪಾಳೆಯಗಾರರು ತಮ್ಮ ಮೂಲವನ್ನು ಹೇಳಿಕೊಳ್ಳುವಾಗ ಸೂರ್ಯ, ಚಂದ್ರ ವಂಶದವರೆಂದು ಹೇಳಿಕೊಂಡಿದ್ದಾರೆ. ಬೇಡರು ತಮ್ಮ ವೀರತ್ವದ ಪ್ರತಿಷ್ಠೆಯ ಜೊತೆಗೆ ಜಾತಿಯ ಪ್ರತಿಷ್ಠೆಯನ್ನು ಸೇರಿಸಿಕೊಳ್ಳುವ ಸಲುವಾಗಿ ತಮ್ಮ ವಂಶಗಳನ್ನು ಹೇಳಿಕೊಳ್ಳುವಲ್ಲಿ ಪುರಾಣ ಕಾಲದ ಸೂರ್ಯ, ಚಂದ್ರ ವಂಶದವರಿಂದ ತಮ್ಮ ವಂಶ ಉತ್ಪನ್ನವಾಯಿತೆಂದು ಹೇಳಿಕೊಳ್ಳುತ್ತಾರೆ.[೪೦]

ವಿಜಯನಗರ ಸ್ಥಾಪನೆಯ ಪೂರ್ವದಲ್ಲಿ ಮಹಮ್ಮದೀಯರ ದಾಳಿಯನ್ನು ಎದುರಿಸಿ ಕೆಲಕಾಲ ತಡೆದು ನಿಲ್ಲಿಸಿ, ಸ್ವರಾಜ್ಯ ಮತ್ತು ಸ್ವಧರ್ಮ ರಕ್ಷಣೆಯ ಆದರ್ಶವನ್ನು ಎತ್ತಿ ಹಿಡಿದ ವಿಜಯನಗರ ಸ್ಥಾಪನೆಗೆ ಮಾರ್ಗ ತೋರಿಸಿ ಕೊಟ್ಟ ವೀರ ಕಂಪಿಲರಾಯ ಹಾಗೂ ಆತನ ಕುಮಾರನಾದ ಗಂಡುಗಲಿ ಕುಮಾರ ರಾಮನಾಥನು ಬೇಡ ಜಾತಿಯವರೇ ಆಗಿರುವರು.[೪೧] ಜಟಿಂಗರಾಮನ ಪರಮಭಕ್ತರಾದ ಕುಮ್ಮಟದ ಅರಸರು ಮೂಲತಃ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಪರಿಸರದಲ್ಲಿದ್ದವರು. ಅನಂತರ ಸಂಡೂರು ಪರಿಸರದ ಹೊಸ ಮಲೆದುರ್ಗದಲ್ಲಿ ರಾಜ್ಯಾಳ್ವಿಕೆಗೆ ನಾಂದಿ ಹಾಡಿದರು. ತದನಂತರದಲ್ಲಿ ಆನೆಗುಂದಿ ಆಸುಪಾಸಿನಲ್ಲಿ ರಾಜ್ಯವನ್ನು ಸ್ಥಾಪಿಸಿ ಕುಮ್ಮಟದುರ್ಗದಲ್ಲಿ ನೆಲೆಸಿದರು. ಈ ಅರಸರಲ್ಲಿ ಮುಮ್ಮಡಿ ಸಿಂಗೆಯನಾಯಕ, ಕಂಪಿಲಿರಾಯ ಮತ್ತು ಕುಮಾರರಾಮ ಪ್ರಮುಖರು. ಕ್ರಿ.ಶ. ೧೨೮೦ ಮತ್ತು ೧೨೮೭ರ ಶಾಸನಗಳು ಮುಮ್ಮಡಿ ಸಿಂಗನು ಕುಮ್ಮಟದುರ್ಗದ ಮೊದಲನೆಯ ಪಾಳೆಯಗಾರ ಎಂಬುದನ್ನು ತಿಳಿಸುತ್ತದೆ. ಉತ್ತರದ ಯಾದವ ಮತ್ತು ದಕ್ಷಿಣದ ಹೊಯ್ಸಳರೊಡನೆ ಹೋರಾಡುವಷ್ಟು ಸಾಮರ್ಥ್ಯವನ್ನು ಹೊಂದಿದ್ದನು.[೪೨] ಸಿಂಗನಾಯಕನು ಅದೃಷ್ಟವಶಾತ್ ತನಗೆ ದೊರೆತ ನಿದಿಯಿಂದ ಗ್ರಾಮ ಮತ್ತು ಅರಮನೆಯನ್ನು ಕಟ್ಟಿಸಿದನು. ಇದೇ ಸಂದರ್ಭದಲ್ಲಿ ವ್ಯಾಘ್ರವೊಂದನ್ನು ಸಿಂಗ ನಾಯಕನು ಕೊಂದನು. ದೇವಗಿರಿಯ ಯಾದವರ ದೊರೆ ರಾಮದೇವನು ಇವನ ಸಾಹಸವನ್ನು ಮೆಚ್ಚಿ 'ಮುಮ್ಮಡಿ' ಎಂಬ ಬಿರುದನ್ನು ಕೊಟ್ಟು ಗೌರವಿಸಿದನು.

ರಾಯದುರ್ಗ ಮಲ್ಲಭೂಪನು ಸಿಂಗರಾಯನಿಗೆ ದಳವಾಯಿ ಪದವಿ ನೀಡಿದನು.[೪೩] ಮುಮ್ಮಡಿ ಸಿಂಗನಾಯಕನ ಸಾಮರ್ಥ್ಯದಿಂದ ಅಂದಿನ ಚಿತ್ರದುರ್ಗ ಜಿಲ್ಲೆಯ, ಹರಿಹರ, ದಾವಣಗೆರೆ, ಜಗಳೂರು, ಮೊಳಕಾಲ್ಮೂರು, ಬಳ್ಳಾರಿ ಜಿಲ್ಲೆಯ ರಾಮದುರ್ಗ, ಸಂಡೂರು ಸಂಸ್ಥಾನವು ಇವನ ಅಧೀನಕ್ಕೆ ಒಳಪಟ್ಟಿದ್ದವು.[೪೪] ಮುಮ್ಮಡಿ ಸಿಂಗನ ಉತ್ತರಾಧಿಕಾರಿಯಾಗಿದ್ದ ಕಂಪಿಲರಾಯನ ಕಾಲದಲ್ಲಿ ಹೊಯ್ಸಳರ ವೀರಬಲ್ಲಾಳ, ಗುತ್ತಿಯ ಚಾಮರಾಜ, ಓರಂಗಲ್ಲಿನ ಪ್ರತಾಪರುದ್ರ ಮುಂತಾದವರು ಕಂಪಿಲರಾಯನ ದೇಶದ ಮೇಲೆ ದಾಳಿ ಮಾಡಿ ಕೆಲವು ಭಾಗಗಳನ್ನು ಗೆದ್ದುಕೊಂಡರು. ಹೀಗಾಗಿ ಕಂಪಿಲ ರಾಜ್ಯವು ಕುಸಿಯಿತು.[೪೫] ಇದೇ ಸಂದರ್ಭದಲ್ಲಿ ಬರಗಾಲದಿಂದ ರಾಜ್ಯವು ತತ್ತರಿಸಿದಾಗ ಪರಿವಾರಕ್ಕೂ ಕುರಿ, ಮೇಕೆ, ಗೋವೃಂದಕ್ಕೆ ವಸತಿಯನ್ನು ಹುಡುಕುತ್ತಾ ಕಂಪಿಲದೇವರಾಯ ಮತ್ತು ಅವನ ಪರಿವಾರವು ವಲಸೆ ಹೊರಟು ನಡುಮಲೆಯಲ್ಲಿ ಹಟ್ಟಿ ಹಾಕಿಕೊಂಡು ಜೀವಿಸುತ್ತಿದ್ದರು.[೪೬] ನಂತರ ಹೊಸಮಲೆ ಅರಣ್ಯಕ್ಕೆ ಬಂದು ಬೇಡ ಪಡೆಯ ಸಹಾಯದಿಂದ ಹೊಸಮಲೆದುರ್ಗ ಕೋಟೆಯನ್ನು ನಿರ್ಮಿಸಿ ರಾಜನಾದನು. ಇವನ ಕಾಲದಲ್ಲಿ ಹೊಸಮಲೆದುರ್ಗ ಯಾದವರ ಆಶ್ರಿತ ಸಂಸ್ಥಾನವಾಗಿತ್ತು. ಅಲ್ಲಾವುದ್ದೀನ್ ಖಿಲ್ಜಿಗೆ ದೇವಗಿರಿಯ ರಾಮಚಂದ್ರನು ಸೋತು ಶರಣಾದ ನಂತರ ಕಂಪಿಲರಾಯನು ಸ್ವಾತಂತ್ರ್ಯ ಘೋಷಿಸಿಕೊಂಡನು. ಅನಂತರದಲ್ಲಿ ಮಲ್ಲಿಕಾಫರನು ನಡೆಸಿದ ದಾಳಿಯನ್ನು ಕಂಪಿಲರಾಯನು ಅತ್ಯಂತ ಯಶಸ್ವಿಯಾಗಿ ಎದುರಿಸಿದನು.[೪೭] ಇದರ ನೆನಪಿಗಾಗಿ 'ಪ್ರತಾಪ ಚಕ್ರವರ್ತಿ' ಎಂಬ ಬಿರುದನ್ನು ಧರಿಸಿದನು.[೪೮] ಈ ಸಮಯದಲ್ಲಿ ಅದು ಅನಂತಪುರ, ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳ ಕೆಲವು ಭಾಗಗಳನ್ನು ಒಳಗೊಂಡಿತ್ತು.

ಕುಮಾರರಾಮನು ತಂದೆಯಂತೆಯೇ ಶೂರ, ಹೋರಾಟಗಾರ, ಸ್ವಾತಂತ್ರ್ಯಾಭಿಮಾನಿಯಾಗಿದ್ದನು. ತಂದೆಗೆ ಸಹಾಯಕನಾಗಿ ನಿಂತು ಅನೇಕ ಯುದ್ಧಗಳನ್ನು ಜಯಿಸಿದನು. ಕುಮಾರರಾಮನ ಅಪೇಕ್ಷೆ ಮೇರೆಗೆ ಕುಮ್ಮಟದುರ್ಗವು ಒಂದು ಹೊಸ ರಾಜಧಾನಿಯಾಗಿ ಮಾರ್ಪಟ್ಟಿತು.[೪೯] ಕುಮಾರರಾಮನ ಭಾವ ಮಲ್ಲ ಎಂಬುವನು ನಾನಾ ದೊರೆಗಳಿಗೆ ಕಳುಹಿಸಿದ ವೀರ ಬೇಡರನ್ನು ಕರೆಸಿಕೊಂಡು ಬೇಡ ಪಡೆಗಳನ್ನು ಏರ್ಪಡಿಸಿದನು. ಬೋಟಿಬೊಮ್ಮ, ಮುದಿಗೊಂಡಲ ಓಬ, ಬೇಟೆ ಸಿಂಗ ಮೊದಲಾದ ಎಪ್ಪತ್ತು ಮಾನ್ಯರ ಅಧೀನದಲ್ಲಿ ಬೇಡ ಸೈನ್ಯವು ತುಕಡಿಗಳಾಗಿ ವಿಂಗಡಿಸಲ್ಪಟ್ಟಿತು. ಸೋದರ ಮಾವಂದಿರು ಅಶ್ವಸೇನಾಪತಿಗಳಾದರು.[೫೦] ಮಧುಗಿರಿ, ಕಡಪ, ಕರ್ನೂಲು, ರಾಯದುರ್ಗ, ಕೊಂಗು, ಮಲೆಯಾಳ, ಮಧುರೆ, ಕೊಡುಗು, ಕೋಲಾರ, ಪೆನುಗೊಂಡೆ, ಮಿಡಿಗೇಶಿ, ಮಾಗಡಿ, ಕೆಳದಿನಾಡು, ಹಾವನೂರು, ಹುಬ್ಬಳ್ಳಿ, ಜರಿಮಲೆ, ಕನಕಾದ್ರಿ, ರಾಯದುರ್ಗ ಮೊದಲಾದ ಸಂಸ್ಥಾನಗಳ ರಾಜರು ರಾಮನಿಗೆ ಉಡುಗೊರೆ, ಕಪ್ಪಗಳನ್ನು ಸಲ್ಲಿಸಿದರು. ರಾಮನು ಅವರಿಗೆಲ್ಲಾ ಸರಿಯಾದ ಉಡುಗೊರೆ ಕೊಟ್ಟು ಕಳುಹಿಸಿದನು.[೫೧] ಕುಮಾರರಾಮನಿಗೆ ಕಪ್ಪ ಕೊಡುತ್ತಾ ಹನ್ನೊಂದು ಅರಸರು

ಮತ್ತು ಇತರೆ ಅನೇಕ ಸಣ್ಣಪುಟ್ಟ ಮಂದಿ ಅವನ ಆಜ್ಞೆಗಳನ್ನು ಪಾಲಿಸುತ್ತಾ ಇದ್ದರು ಎಂಬುದನ್ನು ಕೈಫಿಯತ್ತು ತಿಳಿಸುತ್ತದೆ.[೫೨] ಕಂಪಿಲದೇವರಾಯ ಬಹಾವುದ್ದೀನ್ ಗುರ್ಷಾಸನಿಗೆ ಆಶ್ರಯಕೊಟ್ಟು ಆ ಮಾತನ್ನು ಉಳಿಸಿಕೊಳ್ಳುವುದಾಗಿ ತಮ್ಮ ರಾಜ್ಯವನ್ನು, ಪ್ರಾಣವನ್ನು ಅಪಾಯಕ್ಕೆ ಒಡ್ಡಿದರು. ತುಘಲಕ್‌ನ ಸೈನ್ಯವನ್ನು ಸೋಲಿಸಿದನು.[೫೩] ಆದರೆ ಮೂರನೆಯ ಬಾರಿಗೆ ಮೊಹಮ್ಮದ್ ಬಿನ್ ತುಘಲಕ್‌ನು ಕಂಪಿಲಿಯ ಮೇಲೆ ಆಕ್ರಮಣ ಮಾಡಿದಾಗ ಕುಮಾರರಾಮನು ತಂದೆಯ ಜೊತೆಗೂಡಿ ಹೋರಾಡುತ್ತಾ ರಣರಂಗದಲ್ಲಿ ವೀರಮರಣ ಹೊಂದಿದನು.

ಸ್ವತಂತ್ರವಾಗಿ ೩೧ ವರ್ಷಗಳಷ್ಟು ಕಾಲ ಎಲ್ಲಾ ವಿಧದ ವಿವಿಧ ದಾಳಿಗಳನ್ನು ಎದುರಿಸಿ ವ್ಯವಸ್ಥಿತ, ಸಂಪದ್ಭರಿತ ರಾಜ್ಯವಾಗಿ ಮೆರೆದ ನಾಡು ಕ್ರಿ.ಶ. ೧೩೨೭ರಲ್ಲಿ ನಾಶವಾಗಿ ಹೋಯಿತು.[೫೪] ಕುಮಾರರಾಮ ಒಬ್ಬ ವ್ಯಕ್ತಿ. ಅವನೊಬ್ಬ ದೈವೀ ಶಕ್ತಿ ಎಂಬ ಹಿನ್ನೆಲೆಯಲ್ಲಿ ಬೇಡರ ಆರಾಧ್ಯ ದೈವವಾಗಿ ಇಂದಿಗೂ ಪೂಜಿಸಲ್ಪಡುತ್ತಾನೆ. ಇವನ ಕಲಿತನ ಅವನನ್ನು ಎಷ್ಟು ಉನ್ನತ ಮಟ್ಟಕೇರಿಸಿತೋ ಅವನ ಪರನಾರಿ ಸೋದರತ್ವವೂ ಕಾರಣವಾಯಿತು.[೫೫]

ಮುಸಲ್ಮಾನರ ಸಂಕೋಲೆಯಿಂದ ದೇಶವನ್ನು ಮುಕ್ತಗೊಳಿಸುವ ಪ್ರಯತ್ನವನ್ನು ಅನೇಕ ಬೇಡನಾಯಕರು ಪ್ರಯತ್ನಿಸಿದ್ದನ್ನು ಕಾಣಬಹುದು. ಹಿಂದೂ ಧರ್ಮವನ್ನು ರಕ್ಷಿಸುವುದಕ್ಕಾಗಿ ಪ್ರೋಲಯ ನಾಯಕನೆಂಬುವನು ಹೋರಾಡಿ ೧೩೩೦-೩೫ರಲ್ಲಿ ಮರಣಹೊಂದಿದನು. ಇವನ ಮಗ ಕಾಪಯನಾಯಕನು ಎಪ್ಪತ್ತೈದು ರಾಜರುಗಳ ಕೂಟದ ನಾಯಕನಾಗಿದ್ದನು. ಸುಲ್ತಾನನ ಸಾಮ್ರಾಜ್ಯವನ್ನು ನಿರ್ನಾಮಗೊಳಿಸುವ ಕಾರ್ಯಗತಿಯನ್ನು ಶೀಘ್ರಗೊಳಿಸಲು ದಕ್ಷಿಣದ ಹಿಂದೂ ರಾಜರ ಒಂದು ಒಕ್ಕೂಟವನ್ನು ಸ್ಥಾಪಿಸಲು ಅವನು ಪ್ರಯತ್ನಿಸಿದನು.[೫೬]

ಭಾರತೀಯ ಸಂಸ್ಕೃತಿಗೆ ಆಸ್ತಿಭಾರ ಹಾಕಿದ ಸಾಮ್ರಾಜ್ಯ ವಿಜಯನಗರಕ್ಕೆ ಅಡಿಗಲ್ಲು ಕುಮ್ಮಟ ರಾಜ್ಯ ಎಂದರೆ ಅತಿಶಯೋಕ್ತಿಯಲ್ಲ. ಹಕ್ಕ-ಬುಕ್ಕರು ಪ್ರತಾಪರುದ್ರನ ಸೇನೆಯಲ್ಲಿದ್ದರೆಂದೂ, ಪ್ರತಾಪರುದ್ರನು ಪರಾಭವಗೊಂಡಾಗ ಕಂಪಿಲಿಗೆ ಹೋಗಿ ಸೇರಿಸಿಕೊಂಡರೆಂದೂ, ಕಂಪಿಲರಾಯನು ಬೇಡರ ಜಾತಿಗೆ ಸೇರಿದವನೆಂದೂ, ಹಕ್ಕ-ಬುಕ್ಕರೂ ಕೂಡ ಕಂಪಿಲರಾಯನ ಜಾತಿಯವರೇ ಆಗಿದ್ದರೆಂದೂ ಡಾ. ಭಂಡಾರ್‌ಕರ್, ಡಾ.ವಿ.ಎನ್.ಸ್ಮಿತ್, ಪಂಡಿತ ರಾಮಕೃಷ್ಣಶಾಸ್ತ್ರೀ ಮುಂತಾದ ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಹರಿಹರ ಮತ್ತು ಬುಕ್ಕರು ಕಮ್ಮಟದುರ್ಗದಲ್ಲಿ ಕಾವಲುಗಾರರಾಗಿದ್ದರು. ಅವರು ಕಂಪಿಲರಾಯನ ಭಾವ ಸಂಗಮನ ಮಕ್ಕಳಾಗಿದ್ದರು. ಹೀಗಾಗಿ ಕಂಪಿಲರಾಯನ ಕಡೆ ಅಳಿದುಳಿದ ವಿಜಯನಗರದ ಸ್ಥಾಪನೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದರು.[೫೭]

ವಿಜಯನಗರ ಸಾಮ್ರಾಜ್ಯವು ದಕ್ಷಿಣೋತ್ತರವಾಗಿ ಕೃಷ್ಣ-ಗೋದಾವರಿ ನದಿಗಳವರೆಗೆ, ಪೂರ್ವ ಪಶ್ಚಿಮಗಳಲ್ಲಿ ಸಮುದ್ರಗಳ ಪರ್ಯಂತರ ಮೈಚಾಚಿ ವಿಶಾಲತೆಯ ದೃಷ್ಟಿಯಿಂದ ಅನನ್ಯವಾಗಿತ್ತು.

ಇಂಥ ಬೃಹತ್ತಾದ ಸಾಮ್ರಾಜ್ಯದ ಆಡಳಿತದಲ್ಲಿ ಬಿಗಿ, ಶಿಸ್ತು, ಅಚ್ಚುಕಟ್ಟು ಕುಂಠಿತವಾಗುವುದು ಸಹಜ. ಆದರೆ ಇಂತಹ ನ್ಯೂನ್ಯತೆ ಮಾತ್ರ ವಿಜಯನಗರದ ವಿಷಯದಲ್ಲಿ ಎದ್ದುಕಾಣಲಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ಸಾಮ್ರಾಜ್ಯವನ್ನು ಆಡಳಿತ ಅನುಕೂಲಕ್ಕೆ ತಕ್ಕಂತೆ ಮಾಗಾಣಿ, ಪಚ್ಚಡಿ ಸೀಮೆಗಳನ್ನು ಮಾಡಿ ಅವುಗಳ ರಕ್ಷಣೆ, ಆಡಳಿತ, ಜನಪರ ಕಾರ್ಯಗಳು ರಾಜಾದಾಯಗಳನ್ನು ಸರಿಯಾಗಿ ನೋಡಿಕೊಳ್ಳಲೆಂದು ಸಮರ್ಥರೂ, ಪ್ರಾಮಾಣಿಕರೂ ಆದವರನ್ನು ನಾಯಕರನ್ನಾಗಿ, ಪ್ರತಿನಿಧಿಗಳನ್ನಾಗಿ ನೇಮಿಸಲಾಗುತ್ತಿತ್ತು. ತಮ್ಮ ಶೌರ್ಯ, ಪರಾಕ್ರಮಗಳ ಕಾರಣಗಳಿಂದಲೇ ನಾಯಕರಾಗಿದ್ದವರಿಂದ ವಿಜಯನಗರ ಸಮೃದ್ಧಿಯಿಂದ, ಸುರಕ್ಷಿತವಾಗಿರಲು ಸಾಧ್ಯವಾಯಿತು. ವಿಜಯನಗರ ಸಾಮ್ರಾಜ್ಯವು ನೆರೆಹೊರೆಯ ರಾಜರುಗಳೊಂದಿಗೆ ರಕ್ಷಿಸಿಕೊಳ್ಳಲು ಸದಾ ಜಾಗರೂಕತೆ ವಹಿಸಬೇಕಾಗಿತ್ತು. ಸೈನ್ಯ ಮತ್ತು ರೈತರ ಬೆಂಬಲದಿಂದ ಇದು ಸಾಧ್ಯವಾಗುತ್ತಿತ್ತು. ಬೃಹತ್ ಸಶಕ್ತ ಸೇನೆಯನ್ನು ಕಟ್ಟುವುದು ಪ್ರಧಾನ ಅಗತ್ಯವಾಗಿತ್ತು.

ಬೃಹತ್ ಸೇನೆಯ ನಿರ್ಮಾಣ ಕೇಂದ್ರದ ರಾಜನಿಗೊಬ್ಬನಿಗೆ ಸಾಧ್ಯವಿರಲಿಲ್ಲ. ಅದರಿಂದಾಗಿ ವಿಜಯನಗರದ ಅರಸರು ಅಧಿಕಾರವನ್ನು ವಿಕೇಂದ್ರೀಕರಿಸಲು ದಾರಿಯಾಯಿತು. ಮಾನ್ಯತೆ ಪಡೆದ ನಾಯಕರು ವಿವಿಧ ಪ್ರಾಂತ್ಯಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದು ನಿರ್ದಿಷ್ಟ ಪ್ರಮಾಣದ ಸೈನ್ಯವನ್ನು ಸದಾ ಸನ್ನದ್ಧವಾಗಿಟ್ಟರಬೇಕಾಗಿತ್ತು. ರಾಜರು ಅಗತ್ಯದ ಸಮಯಗಳಲ್ಲಿ ಅವುಗಳನ್ನು ಬಳಸಿಕೊಳ್ಳುತ್ತಿದ್ದರು. ಮುಂದೆ ಪಾಳೆಯಗಾರರಾಗಿ ಬೆಳೆದ ಅಮರ ನಾಯಕರು ವಿಜಯನಗರ ರಾಜ್ಯಾಡಳಿತದಲ್ಲಿ ಮುಖ್ಯ ಸೈನ್ಯಾಡಳಿತಾಧಿಕಾರಿಗಳಾಗಿ ಕಾಣಿಸಿಕೊಂಡರು. ವಿಜಯನಗರ ಸಾಮ್ರಾಜ್ಯದ ಇತಿಹಾಸದ ಭಾಗವಾಗಿ ಮತ್ತು ಅದರ ಆಧಾರ ಸ್ತಂಭಗಳಾಗಿ ಪಾಳೆಯಗಾರರು, ಅಮರನಾಯಕರಾಗಿ ಅಥವಾ ನಾಯಕರಾಗಿ ಕಾಣಿಸಿಕೊಳ್ಳುತ್ತಾರೆ. ವಿಜಯನಗರ ಸಾಮ್ರಾಜ್ಯದ ಸಾರ್ವಭೌಮರು ಇವರ ಅಸ್ತಿತ್ವಕ್ಕೆ ಕಾರಣರಾಗಿದ್ದರು.

ಪ್ರಾಚೀನ ಭಾರತೀಯ ರಾಜಕೀಯ ಚಿಂತನೆಯ ಪ್ರಕಾರ ಒಂದು ರಾಜ್ಯ ಘಟಕಕ್ಕೆ ಏಳು ಮುಖ್ಯ ಅಂಗಗಳು ಅವಶ್ಯಕ. ಅವುಗಳೆಂದರೆ ರಾಜ, ಯುವರಾಜ, ಅಮಾತ್ಯ, ಕೋಶ, ಬಲ, ದುರ್ಗ ಮತ್ತು ಜನಪದ ಇವುಗಳ ಪೈಕಿ ಕೋಶ ಮತ್ತು ಬಲದ ಬೆಂಬಲವನ್ನು ಸೂಕ್ಷ್ಮ ಸ್ತರದ ನಾಯಕರು ಚಕ್ರವರ್ತಿಗಳಿಗೆ ತಂದುಕೊಡುತ್ತಿದ್ದರು. ಜೊತೆಗೆ ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಆಯಾಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿ ರಕ್ಷಣಾ ಕಾರ್ಯದ ಹೊರೆಯನ್ನು ಹೊತ್ತುಕೊಂಡಿದ್ದರು. ಈ ನಾಯಕರಿಗೆ ಭೂಮಿಯನ್ನು ಮಂಜೂರು ಮಾಡಲಾಗಿತ್ತು. ಅವುಗಳಿಗೆ ಅಮರಂ ಎಂದು ಹೆಸರು. ಅವುಗಳಿಂದ ಅವರಿಗೆ ರಾಜಕೀಯ, ಆಡಳಿತೀಯ, ಆರ್ಥಿಕ ಮತ್ತು ನ್ಯಾಯ ಅಧಿಕಾರಿಗಳು ತಮ್ಮ ಅಮರಂ ಪ್ರದೇಶ ವ್ಯಾಪ್ತಿಗೆ ಅನ್ವಯಿಸುವಂತೆ ದೊರಕುತ್ತಿದ್ದವು. ಸೈನ್ಯ ಹಾಗೂ ಹಣಕಾಸಿಗೆ ಸಂಬಂಧಿಸಿದ ತಮ್ಮ ಕರ್ತವ್ಯಗಳನ್ನು ಪೂರೈಸುತ್ತಿರುವವರಿಗೆ ಅವರಿಗೆ

ಅರಸರಿಂದ ಯಾವುದೇ ಬಗೆಯ ಕಷ್ಟವಿರುತ್ತಿರಲಿಲ್ಲ. ಶಾಸನಗಳಲ್ಲಿ ಚಕ್ರವರ್ತಿಯು ಈ ಅಮರ ನಾಯಕರಿಗೆ ಭೂಮಿಯನ್ನು ಮಂಜೂರು ಮಾಡಿದ ವಿಚಾರವನ್ನು ನೋಡುತ್ತೇವೆ.[೫೮] ಟಿ.ವಿ.ಮಹಾಲಿಂಗಂ ಪ್ರಕಾರ "ಭೂಮಿಯೆಲ್ಲವೂ ರಾಜನಿಗೆ ಸೇರಿದ್ದು, ಅವನು ತನ್ನನ್ನು ಅವಲಂಬಿಸಿದವರಿಗೆ ಹಂಚುತ್ತಿದ್ದನು. ಹಾಗೆ ಭೂಮಿಯನ್ನು ರಾಜನಿಂದ ಪಡೆದುಕೊಂಡವರನ್ನು ನಾಯಕರೆಂದು ಕರೆಯುತ್ತಿದ್ದರು.[೫೯] ಅಮರ ನಾಯಕರು ಮೂಲತಃ ಸೈನ್ಯಾಧಿಕಾರಿಗಳಾಗಿದ್ದವರು. ಅವರು ರಾಜನಿಂದ ಸೇನಾ ಸೇವೆಯನ್ನು ಸಲ್ಲಿಸುವ ಷರತ್ತಿನ ಮೇಲೆ ಭೂಮಿಯನ್ನು ಪಡೆದುಕೊಂಡಿದ್ದರು. ಅಮರ ನಾಯಕರಿಗೆ ನೀಡಿದ ಭೂದಾನವನ್ನು ಅಮರಮಾಗಾಣಿ, ಅಮರ ನಾಯಕರ, ಅಮರ ಮಹಲೆ, ಅಮರ ಅಂಬಲಿ, ಅಮರ ತಂದೆಯನಾಯಕ ಎಂದು ವಿಧವಿಧವಾಗಿ ಕರೆಯುತ್ತಿದ್ದರು.[೬೦] ಅಮರನಾಯಕರು ಚಕ್ರವರ್ತಿಯ ಸೇವೆಯಲ್ಲಿ ತೊಡಗಿಸಲು ಸಿದ್ಧವಾಗಿ ಇಡಬೇಕಾಗಿದ್ದ ಸೇನೆಯ ಪ್ರಮಾಣವು ಅವರು ಪಡೆದ ಭೂಭಾಗದ ವಿಸ್ತಾರವನ್ನು ಅವಲಂಬಿಸಿತ್ತು. ಅವರ ಸ್ಥಾನಮಾನಗಳೂ ಅವರು ಪಡೆದ ಭೂಭಾಗದ ವಿಸ್ತಾರದ ಆಧಾರದ ಮೇಲೆ ನಿರ್ಧಾರವಾಗುತ್ತಿತ್ತು. ವಿಜಯನಗರ ಕಾಲದ ಶಾಸನಗಳು ಅಮರನಾಯಕರ ಸ್ಥಾನಮಾನದ ಮೇಲೆ ಹಾಗೂ ವಿಜಯನಗರದ ಅರಸರು ನಾಯಕರಿಗೆ ಸ್ವಾಗತಾರ್ಹವಾದ ಬೆಳಕು ಚೆಲ್ಲುತ್ತವೆ.[೬೧] ರಾಜನಿಗೆ ಅಗತ್ಯ ಬಿದ್ದಾಗಲೆಲ್ಲಾ ಸೈನ್ಯ ಸೇವೆಯನ್ನು ಒದಗಿಸುವುದಾಗಿ ಷರತ್ತನ್ನು ಒಪ್ಪಿ ಅವರು ನೆಲವನ್ನು ಪಡೆಯುತ್ತಿದ್ದರು. ಅಮರ ಎನ್ನುವುದು ಒಂದು ಸಾವಿರ ಕಾಲ್ದಳದ ಒಡೆತನ.[೬೨]

ನ್ಯೂನಿಜ್‌ನು ಎಲ್ಲಾ ಭೂಮಿಯೂ ರಾಜನಿಗೆ ಸೇರಿದೆ. ಅವನಿಂದ ಪಡೆದು ಸೇನಾನಾಯಕರು ಅದನ್ನು ಆಳುತ್ತಾರೆ.[೬೩] ಬಿಸ್ನಾಗರ ರಾಜ್ಯವು ಇನ್ನೂರಕ್ಕೂ ಹೆಚ್ಚು ಜನ ನಾಯಕರಲ್ಲಿ ವಿಭಾಗಗೊಂಡಿದೆ. ಅವರೆಲ್ಲರೂ ವಿಧರ್ಮಿಯರು. ಅವರು ಹೊಂದಿರುವ ಭೂಪ್ರದೇಶ ಮತ್ತು ಅವರಿಗಿರುವ ವರಮಾನಗಳ ಆಧಾರದಿಂದ ರಾಜನು ಅವರು ಕಾಪಾಡಲೇ ಬೇಕಾದ ಸೈನ್ಯದ ಪ್ರಮಾಣವನ್ನು, ಪ್ರತಿವರ್ಷ ತನಗೆ ಕೊಡಬೇಕಾದ ವರಮಾನವನ್ನು ನಿಗದಿಪಡಿಸುತ್ತಾನೆ. ಅದನ್ನು ಅವರು ಸೆಪ್ಟೆಂಬರ್ ತಿಂಗಳ ಮೊದಲ ಒಂಬತ್ತು ದಿನಗಳೊಳಗಾಗಿ ಪಾವತಿ ಮಾಡಬೇಕಾಗುತ್ತದೆ.[೬೪] ಪೇಸ್‌ನು ಅಮರನಾಯಕರನ್ನು ಕುರಿತು ಹೀಗೆ ಹೇಳುತ್ತಾನೆ. ಸೈನ್ಯವನ್ನು ಪಾಲಿಸಿ ಸಿದ್ಧವಾಗಿಟ್ಟುಕೊಳ್ಳುವುದು ಅಮರನಾಯಕರ ಅತಿಮುಖ್ಯವಾದ ಕರ್ತವ್ಯವಾಗಿತ್ತು. ಅವರು ಪದಾತಿದಳದ ಸೈನಿಕರನ್ನು, ಕುದುರೆಗಳನ್ನು, ಆನೆಗಳನ್ನು ಸಾಕುತ್ತಿದ್ದರು.[೬೫] ಪ್ರತಿಯೊಬ್ಬ ನಾಯಕನೂ ಪ್ರತಿವರ್ಷ ನಿರ್ದಿಷ್ಟ ಪ್ರಮಾಣದ ಹಣವನ್ನು ರಾಜನಿಗೆ ಪಾವತಿ ಮಾಡುವುದಲ್ಲದೆ, ಸೈನ್ಯವನ್ನು ಪಾಲಿಸಬೇಕಾಗಿತ್ತು. "ರಾಜನಿಗೆ ಮಗನೋ ಮಗಳೋ ಜನಿಸಿದರೆ ರಾಜ್ಯದ ಎಲ್ಲಾ ನಾಯಕರು ಮತ್ತು ಗಣ್ಯರು ಅವರಿಗೆ ಆಭರಣಗಳನ್ನೋ, ಹಣವನ್ನೋ ಉಡುಗೆರೆಯಾಗಿ ಅರ್ಪಿಸಬೇಕಾಗಿತ್ತು. ಹಾಗೆಯೇ ಪ್ರತಿವರ್ಷವೂ ರಾಜನು ಹುಟ್ಟಿದ ದಿನ ಕಾಣಿಕೆ

ಒಪ್ಪಿಸಬೇಕಾಗಿತ್ತು. "ನೂತನ ವರ್ಷಾರಂಭದ ದಿನವೂ ಈ ನಾಯಕರು ರಾಜನಿಗೆ ಕಾಣಿಕೆಯನ್ನು ಸಲ್ಲಿಸುತ್ತಿದ್ದರು. ಆ ದಿನ ಅವರು ರಾಜನಿಗೆ ಅರ್ಪಿಸುತ್ತಿದ್ದ ಹಣವು ಒಟ್ಟು ಹದಿನೈದು ಲಕ್ಷ ಚಿನ್ನದ ಪರ್ಡಾವೋಗಳಷ್ಟಾಗುತ್ತಿದ್ದಿತು ಎಂದು ಹೇಳಲಾಗುತ್ತದೆ.[೬೬] ನ್ಯೂನಿಜ್‌ನು "ಈ ಚಿತ್ರರಾವ್ ರಾಜನು, ಸಾಮಂತರಾಜರು ವೇತನ ಕೊಡುತ್ತಿದ್ದ ಸೈನಿಕರನ್ನು ಹೊಂದಿದ್ದಾನೆ. ಆರು ಲಕ್ಷ ಯೋಧರು, ಇಪ್ಪತ್ತುನಾಲ್ಕು ಸಾವಿರ ಕುದುರೆಗಳು, ಹಾಗೆ ಸಾಮಂತರಿಂದ ಕಾಪಾಡಲ್ಪಡುತ್ತಿದ್ದರು. ಈ ಸಾಮಂತರು ಒಂದು ರೀತಿಯಲ್ಲಿ ಗುತ್ತಿಗೆದಾರರಿದ್ದ ಹಾಗೆ ರಾಜನಿಂದ ಭೂಮಿಯನ್ನು ಪಡೆದು ಈ ಯೋಧರನ್ನು ಸಾಕುತ್ತಾ ಜೊತೆಗೆ ರಾಜನಿಗೆ ಅರವತ್ತು ಲಕ್ಷ ಹಣವನ್ನು ಕಾಣಿಕೆಯಾಗಿ ಸಲ್ಲಿಸುತ್ತಾರೆ. ಭೂಮಿಯಿಂದ ಅವರಿಗೆ ಒಂದುನೂರ ಇಪ್ಪತ್ತು ಲಕ್ಷ ವರಮಾನವಿದೆ ಎಂದು ಹೇಳುತ್ತಾರೆ. ಅದರಲ್ಲಿ ಸಾಗಾಣಿಕೆ ವೆಚ್ಚ ಇತ್ಯಾದಿಗಳ ನಿರ್ವಾಹಕವಾಗುತ್ತದೆ.[೬೭] ಅವರು ಸದಾಕಾಲವೂ ತಮಗೆ ನಿಗದಿ ಪಡಿಸಿರುವಷ್ಟು ಸಂಖ್ಯೆಯ ಯೋಧರನ್ನು ಒದಗಿಸಿರಲೇಬೇಕು. ಅದು ಕಡ್ಡಾಯ. ಸಂಖ್ಯಾಯೇನಾದರೂ ಕೊರತೆಯಾದರೆ ಆ ಸಾಮಂತನನ್ನು ಉಗ್ರವಾಗಿ ಶಿಕ್ಷಿಸಲಾಗುತ್ತದೆ. ಅವನ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆ.[೬೮]

ವಿಜಯನಗರ ಕಾಲದಲ್ಲಿ ಅಮರನಾಯಕರ ಶೌರ್ಯ, ಪರಿಶ್ರಮ, ಪರಾಕ್ರಮಗಳನ್ನು ಗುರ್ತಿಸಿ ಸಾಮ್ರಾಜ್ಯಕ್ಕೆ ಅವರು ಸಲ್ಲಿಸಿದ ಸೇವೆಯನ್ನು ಲಕ್ಷಿಸಿ ಅವರಿಗೆ ಹೆಚ್ಚು ಭೂಮಿಯನ್ನು ಅಮರ ಮಾಗಾಣಿಯಾಗಿ ಕೊಡಲಾಗುತ್ತಿತ್ತು. ಅಮರನಾಯಕರು ಪಡೆದ ಭೂಭಾಗದಷ್ಟು ವಿಸ್ತಾರವನ್ನು ಅವಲಂಬಿಸಿ ಅವರ ಸೇನೆಯ ಪ್ರಮಾಣವನ್ನು ನಿರ್ದಿಷ್ಟ ಪಡಿಸಲಾಗುತ್ತಿತ್ತು. ಅಮರನಾಯಕರ ಅಂಕೆಯಲ್ಲಿದ್ದ ಭೂವಿಸ್ತಾರ, ಪಡೆದಿದ್ದ ಅಧಿಕಾರ ಮತ್ತು ಗೌರವಗಳ ದೃಷ್ಟಿಯಿಂದ ಅಮರನಾಯಕರನ್ನು ಸ್ಥೂಲವಾಗಿ ಮೂರು ವರ್ಗವಾಗಿ ವಿಂಗಡಿಸಲಾಗಿದೆ.[೬೯]

ಪೇಸನು ತನ್ನ ನಿರೂಪಣೆಯನ್ನು ಹೇಗೆ ಬೇರೆ ಬೇರೆ ನಾಯಕರು ತಮ್ಮ ಭೂವಿಸ್ತಾರಕ್ಕೆ ಅನುಗುಣವಾಗಿ ವರಮಾನವನ್ನು ಕೊಡುತ್ತಿದ್ದರು ಎನ್ನುವುದನ್ನು ಹೀಗೆ ಹೇಳುತ್ತಾನೆ. ಸೇನಾ ನಾಯಕರು ಸೈನ್ಯಗಳ ಮೇಲೆ ಒಡೆತನ ಹೊಂದಿದ್ದಾರೆ, ಅವರು ರಾಜರಿದ್ದ ಹಾಗೆ. ಅವರೇ ನಗರವನ್ನು ಆಳುತ್ತಾರೆ. ರಾಜ್ಯದ ಪಟ್ಟಣಗಳು ಮತ್ತು ಹಳ್ಳಿಗಳನ್ನು ಆಳುತ್ತಾರೆ. ಒಂದು ಮಿಲಿಯನ್ ಅಥವಾ ಒಂದೂವರೆ ಮಿಲಿಯನ್ ಪರ್ಡಾವೋಗಳ ವರಮಾನವುಳ್ಳ ನಾಯಕರಿದ್ದಾರೆ. ಇತರರು ನೂರು ಸಾವಿರ ಪರ್ಡವೋಗಳು ಇತರರು ಇನ್ನೂರು, ಮುನ್ನೂರು, ಐನೂರು ಸಾವಿರ ಪರ್ಡಾವೋಗಳ ವರಮಾನ ಪಡೆದಿದ್ದಾರೆ. ಪ್ರತಿಯೊಬ್ಬನಿಗೆ ಹೀಗೆ ವರಮಾನವಿರುವುದರಿಂದ ಅವನು ಕಾಪಾಡಬೇಕಾದ ಸೈನ್ಯದ ಸಂಖ್ಯೆಯನ್ನು ರಾಜನು ನಿಗದಿ ಪಡಿಸಿದ್ದಾನೆ. ಇಂತಿಷ್ಟು ಪದಾತಿ ಪಡೆ, ಕುದುರೆ, ಆನೆಗಳು ಇತ್ಯಾದಿ. ಈ ಸೇನಾ ಪಡೆಗಳು ಯಾವಾಗಲೂ ಯುದ್ಧಕ್ಕೆ ಸಿದ್ಧವಾಗಿರುತ್ತವೆ. ಯಾವಾಗ ಕರೆದರೂ,

ಎಲ್ಲಿಗೆ ಹೋಗಬೇಕಾದರೂ ಸಿದ್ಧವಾಗಿರುತ್ತವೆ. ಹೀಗೆ ರಾಜನು ಮಿಲಿಯನ್‌ಗಟ್ಟಲೆ ಯೋಧರ ಪಡೆಯನ್ನು ಸದಾ ಕಾಲವೂ ಸಿದ್ಧವಾಗಿಟ್ಟುಕೊಂಡಿದ್ದಾನೆ. ಪ್ರತಿಯೊಬ್ಬ ನಾಯಕನೂ ಅತ್ಯುತ್ತಮ ಸೇನೆಯನ್ನು ಸಜ್ಜುಗೊಳಿಸಲು ಕಷ್ಟಪಡುತ್ತಾನೆ. ಏಕೆಂದರೆ ಅವರಿಗೆ ಅವನು ವೇತನ ಕೊಡುತ್ತಾನೆ. ಈ ದೃಷ್ಟಿಯಿಂದ ನೋಡಿದಾಗ ಅತ್ಯಂತ ಸದೃಢರಾದ ತರುಣರು ಸೇನೆಯಲ್ಲಿ ನಮಗೆ ಕಾಣಿಸಿದರೂ ಒಬ್ಬನೇ ಒಬ್ಬನೂ ಹೇಡಿಯಾಗಿ ನಡೆದುಕೊಳ್ಳುವಂಥವನು ಕಾಣಸಿಗಲಿಲ್ಲ. ಹೀಗೆ ಸೈನ್ಯವನ್ನು ಸಾಕುವುದರ ಜೊತೆಗೆ ಪ್ರತಿಯೊಬ್ಬ ನಾಯಕನೂ ರಾಜನಿಗೆ ವಾರ್ಷಿಕವಾಗಿ ಹಣವನ್ನು ಪಾವತಿ ಮಾಡಬೇಕು. ರಾಜನು ತಾನೇ ವೇತನ ಕೊಡುವ ಒಂದು ಸೇನಾ ಪಡೆಯನ್ನು ಇಟ್ಟುಕೊಂಡಿದ್ದಾನೆ. ಬಿಸ್ನಾಗರ ರಾಜನಿಗೆ ಅಧೀನರೂ ಸಾಮಂತರೂ ಆದ ಐದು ಜನ ರಾಜರಿದ್ದಾರೆ. ಅಲ್ಲದೆ ವಿಶಾಲವಾದ ಭೂಭಾಗವನ್ನು ಅಧಿಕ ವರಮಾನವನ್ನು ಹೊಂದಿರುವ ಇತರ ಅನೇಕ ನಾಯಕರು ಮತ್ತು ರಾಜರು ಇದ್ದಾರೆ. ಪೇಸ್‌ನ ಈ ನಿರೂಪಣೆಯಿಂದ ನಾವು ಹೀಗೆ ತೀರ್ಮಾನಿಸಬಹುದು. ಬೇರೆ ಬೇರೆ ವರ್ಗಗಳ ಅಮರನಾಯಕರಿದ್ದರು. ಅವರು ತಾವು ನಿಯಂತ್ರಿಸುತ್ತಿದ್ದ ಪ್ರದೇಶ ವಿಸ್ತಾರಕ್ಕನುಗುಣವಾಗಿ ರಾಜನಿಗೆ ವರಮಾನವನ್ನು ಪಾವತಿ ಮಾಡುತ್ತಿದ್ದರು. ಅದಕ್ಕೆ ಅನುಗುಣವಾಗಿ ಸಂಖ್ಯೆಯ ಸೈನ್ಯವನ್ನು ಪಾಲಿಸಬೇಕಾಗಿದ್ದಿತು.[೭೦]

ಮೊದಲನೆಯ ವರ್ಗಕ್ಕೆ ಸೇರಿದ ಅಮರನಾಯಕರು ಬಹು ವಿಶಾಲವಾದ ವ್ಯಾಪ್ತಿಯ ಭೂಮಿಯನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿದ್ದರು. ಅವರು ಸೈನ್ಯವನ್ನು, ಕೋಟೆಗಳನ್ನು ತಮ್ಮ ಸಂಪನ್ಮೂಲದಿಂದ ಕಾಪಾಡಿಕೊಂಡಿದ್ದರು. ಪ್ರಥಮ ಶ್ರೇಣಿಗೆ ಸೇರಿದವರು ಚಕ್ರವರ್ತಿಗೆ ತಿಳಿಸದೆಯೇ ಭೂಮಿಗಳನ್ನು, ಹಳ್ಳಿಗಳನ್ನೋ ಪರಭಾರೆ ಮಾಡುವ ಹಕ್ಕನ್ನು ಪಡೆದಿದ್ದರು. ಈ ವರ್ಗದ ಸೇನಾನಾಯಕರು ಸರದಿಯಲ್ಲಿ ತಮ್ಮ ಅಧೀನರಾದ ನಾಯಕರನ್ನು ನಿರ್ಮಿಸಿಕೊಳ್ಳಬಹುದಾಗಿತ್ತು. ಕೋಟೆಗಳನ್ನು ಕಟ್ಟಲು, ತಮ್ಮ ಸ್ವಂತದ ಸೇನೆಯನ್ನು ಇಟ್ಟುಕೊಳ್ಳಲು ಅವರಿಗೆ ಅವಕಾಶವಿತ್ತು. ಕೆಳದಿಯ ನಾಯಕರು ಈ ಹಕ್ಕುಗಳನ್ನು ಅನುಭವಿಸುತ್ತಿದ್ದರು.[೭೧] ಪಂಚವಾದ್ಯಗಳನ್ನು ಉಪಯೋಗಿಸಲು ಅವರಿಗೆ ಅರ್ಹತೆಯಿತ್ತು. ಆ ವಾದ್ಯಗಳು ಕೊಂಬುಕಹಳೆ, ಭೇರಿ, ಜಯಘಂಟೆ ಹಾಗೂ ತಮಟೆ ಅಲ್ಲದೆ ಸಾಮಂತ, ಸಿಂಹಾಸನ, ಚಾಮರ, ಅಶ್ವಾರೋಹಿ ಪಡೆ, ಆನೆಗಳು ಮತ್ತು ಡೋಲಿಗಳು ಇವುಗಳನ್ನು ಇಟ್ಟುಕೊಳ್ಳಬಹುದಾಗಿತ್ತು.[೭೨]

ನ್ಯೂನಿಜ್‌ನು ಬಂಕಾಪುರ, ಕಳಲೆ, ಮಂಗಳೂರು ಮತ್ತು ಬೂದಿಹಾಳುಗಳನ್ನು ಉಲ್ಲೇಖಿಸುತ್ತಾನೆ. ಈ ರಾಜ್ಯದ ನಾಯಕರು ಡೋಲಿಗಳನ್ನು, ಪಲ್ಲಕ್ಕಿಗಳನ್ನು ಉಪಯೋಗಿಸುತ್ತಿದ್ದರು. ಆದರೆ ಜನರು ಉತ್ತಮ ಅಶ್ವಾರೋಹಿಗಳಾಗಿದ್ದ ಹೊರತು ಡೋಲಿಗಳನ್ನು ಬಳಸುವುದಕ್ಕೆ ಅವಕಾಶವಿರುತ್ತಿರಲಿಲ್ಲ.[೭೩] ನಾಯಕರು ಮತ್ತು ಗಣ್ಯ ಜನರು ರಾತ್ರಿ ವೇಳೆ ಎಣ್ಣೆಯಿಂದ ಉರಿಯುವ ಪಂಜುಗಳನ್ನು

ಉಪಯೋಗಿಸುತ್ತಿದ್ದರು. ಅವರವರ ಸ್ಥಾನಮಾನಕ್ಕೆ ತಕ್ಕಂತೆ ೪ ರಿಂದ ೧೨ ಪಂಜುಗಳು ಉರಿಯುತ್ತವೆ. ಅತ್ಯಂತ ಉನ್ನತವಾದ ಸ್ಥಾನದಲ್ಲಿರುವವನಿಗೆ ಹೆಚ್ಚೆಂದರೆ ೧೨ ಪಂಜುಗಳು ಇರುತ್ತವೆ.[೬೪]

ಕೆಳದಿಯ ಚೌಡನಾಯಕನು ವಿಜಯನಗರದ ಅರಸನಿಂದ ಎಂಟು ಮಾಗಾಣೆಗಳನ್ನು ಅಮರ ಮಾಗಾಣಿಯಾಗಿ ಪಡೆದಿದ್ದನು.[೬೫] ಸದಾಶಿವರಾಯನಿಂದ ಕೆಳದಿಯ ನಾಯಕರು ಚಂದ್ರಗುತ್ತಿಯನ್ನು ತುಳುನಾಡನ್ನು ಅಮರ ಮಾಗಾಣಿಯಾಗಿ ಪಡೆದರು.[೬೬] ಯುದ್ಧ ಭೂಮಿಯಲ್ಲಿ ಕೆಂಪೇಗೌಡನ ಪರಾಕ್ರಮವನ್ನು ನೋಡಿ ಮೆಚ್ಚಿದ ಅಚ್ಯುತರಾಯನು ಅವನಿಗೆ ಒಂದು ಕೋಟೆಯನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದನು. ವರ್ಷಕ್ಕೆ ೩೦,೦೦೦ ಪಗೋಡಾಗಳ ವರಮಾನ ಬರುತ್ತಿದ್ದ ಒಟ್ಟು ೧೨ ಹೋಬಳಿಗಳನ್ನು ಅವನಿಗೆ ಉಡುಗೊರೆಯಾಗಿ ಕೊಟ್ಟನು.[೬೬] ವಿಜಯನಗರದ ಅರಸರು ಸಾಧಾರಣ ಅಮರನಾಯಕನಾಗಿದ್ದ ತಿಮ್ಮಣ್ಣನಾಯಕನ ಪರಿಶ್ರಮ ಮತ್ತು ಪರಾಕ್ರಮಗಳನ್ನು ಗುರುತಿಸಿ ಕ್ರಿ.ಶ. ೧೪೩೫ರಲ್ಲಿ ಅವನಿಗೆ ಹೊಳಲ್ಕೆರೆಯ ಅಮರನಾಯಕತ್ವವನ್ನು ನೀಡಿದರು. ಕ್ರಿ.ಶ. ೧೪೯೫ರಲ್ಲಿ ಚಿತ್ರದುರ್ಗದ ನಾಯಕನೆಂದು ಅವನು ಕರೆದುಕೊಂಡನು.

ಎರಡನೆಯ ಶ್ರೇಣಿಯಲ್ಲಿನ ಅಮರನಾಯಕರಿಗೆ ತಮ್ಮ ಅಧಿಕಾರದಲ್ಲಿ ಇತಿಮಿತಿಗಳಿದ್ದವು. ಸೀಮಿತವಾದ ಭೂಪ್ರದೇಶ, ಕಡಿಮೆ ಪ್ರಮಾಣದ ಸೈನ್ಯ, ಕಡಿಮೆ ಪ್ರಾಂತ್ಯದ ಉಸ್ತುವಾರಿಗಳನ್ನು ನೋಡಿಕೊಳ್ಳುತ್ತಿದ್ದರು. ಇವರಿಗೆ ತೆರಿಗೆ, ಗ್ರಾಮಗಳ ಪರಭಾರೆ, ಮಾರಾಟ ಮೊದಲಾದವುಗಳನ್ನು ಪರಭಾರೆ ಮಾಡಲು ಚಕ್ರವರ್ತಿಯ ಹೆಸರನ್ನು ಉಲ್ಲೇಖಿಸಬೇಕಾಗಿತ್ತು. ಯಲಹಂಕನಾಡಿನ ಸಾಮಂತನಾಗಿದ್ದ ಬೈರಿದೇವನು ಕೊಡುಗೆ ಹಳ್ಳಿ ಗ್ರಾಮವನ್ನು ಕರಿಯನಾಯಕನಿಗೆ ಸರ್ವಮಾನ್ಯ ಕೊಡುಗೆ ನೀಡುವಾಗ ಅವನು ವಿಜಯನಗರದ ತನ್ನ ಪ್ರಭುಗಳಾದ ಹರಿಹರ ಮತ್ತು ಬುಕ್ಕರ ಹೆಸರನ್ನು ಉಲ್ಲೇಖಿಸಿದನು.[೬೮] ಕೆಂಚ ಸೋಮಣ್ಣನಾಯಕನು ಕೃಷ್ಣದೇವರಾಯನ ಕಾಲದಲ್ಲಿ ಚನ್ನಪಟ್ಟಣ ಸೀಮೆಯ ಅಮರನಾಯಕನಾಸಗಿದ್ದನು. ಭಗವಾನ್ ಜನಾರ್ಧನನ ನೈವೇಧ್ಯಕ್ಕಾಗಿ ಅವನು ವಾಣಿಗೆರೆಯನ್ನು ದಾನ ಮಾಡುವಾಗ ತನ್ನ ಚಕ್ರವರ್ತಿಗೆ ಕೂಡಲೂರು ಕೆರೆಯನ್ನು ದುರಸ್ತಿಗೊಳಿಸಿಸುದುದಕ್ಕಾಗಿ ಕೃತಜ್ಞತೆಯನ್ನು, ಸಕಲ ಅಭ್ಯುದಯಗಳನ್ನು, ಧರ್ಮವನ್ನು ಕೋರಿ ಪ್ರಾರ್ಥಿಸಿದನು.[೬೯]

ಮೂರನೆಯ ಶ್ರೇಣಿಯ ಅಮರನಾಯಕರು ಚಕ್ರವರ್ತಿಯ ನೇರ ಅಧೀನದಲ್ಲಿರುತ್ತಿದ್ದರು. ಇಲ್ಲವಾದಲ್ಲಿ ಅಧೀನ ರಾಜನ ಹತೋಟಿಯಲ್ಲಿರುತ್ತಿದ್ದರು. ಮಹಾಮಂಡಲೇಶ್ವರರ ಅಧೀನದಲ್ಲಿಯೂ ಇರುತ್ತಿದ್ದ ಇವರು ಯಾವುದೇ ರೀತಿಯ ಭೂದಾನವನ್ನು ಮಾಡುವಾಗ ಚಕ್ರವರ್ತಿಯ ಅನುಮತಿಯನ್ನು ಪಡೆಯಬೇಕಾಗಿತ್ತು. ಚಕ್ರವರ್ತಿಯ ಪೂರ್ವಾನುಮತಿ ದೊರೆತ ನಂತರವೇ ದಾನ ಮಾಡಬೇಕಾಗಿತ್ತು.

ಹೊಳಲ್ಕೆರೆ ಪ್ರದೇಶದಲ್ಲಿ ಅಮರನಾಯಕನಾಗಿದ್ದ ಬೈಯಪೇಂದ್ರ ವಿದ್ವಾಂಸರಾಗಿದ್ದ ಬ್ರಾಹ್ಮಣರಿಗೆ ಭೂಮಿಯನ್ನು ದಾನವಾಗಿ ಕೊಡಬೇಕೆಂದು, ಚಕ್ರವರ್ತಿ ಅಚ್ಯುತರಾಯನ ಅನುಮತಿ ಕೋರಿದನು. ಅನುಮತಿಯ ನಂತರ ದಾನ ಮಾಡಿದನು.[೮೦] ಮಹಾಮಂಡಲೇಶ್ವರ ಕೊಂಡಯ್ಯರಾಜ ಮತ್ತು ಅವನ ಅಧೀನ ಅಮರನಾಯಕ ಕೋರ್ತಿಕುಂಟ ಕೊಂಡಮ ನಾಯಕರ ತನ್ನ ತತ್‌ಕ್ಷಣದ ಒಡೆಯ ಕೊಂಡರಾಜನನ್ನು ಉಲ್ಲೇಖಿಸುತ್ತಾನೆ. ಈ ಸಂದರ್ಭದಲ್ಲಿ ಕೊರ್ಲಕುಂಟೆ ಕೊಂಡಮ ನಾಯಕನು ಮೂರನೆಯ ವರ್ಗದ ಅಮರನಾಯಕನಾಗಿದ್ದನೆಂದು ನಿರ್ಣಯಿಸಬಹುದು.[೮೧]

ಅಮರನಾಯಕರ ಸಹಾಯದಿಂದ ವಿಜಯನಗರದ ಅರಸರು ತಮ್ಮ ಬೃಹತ್ ಸಾಮ್ರಾಜ್ಯವನ್ನು ಅಂಕೆಯಲ್ಲಿಟ್ಟುಕೊಳ್ಳಲು ಸಾಧ್ಯವಾಯಿತು. ಪ್ರತಿಯೊಬ್ಬ ಅಮರನಾಯಕನು ತನ್ನ ಆಡಳಿತ ಪ್ರದೇಶದ ಕಾನೂನು ಸುವ್ಯವಸ್ಥೆಯನ್ನು ಪಾಲಿಸಬೇಕಾಗಿತ್ತು. ಮತ್ತು ಅದಕ್ಕೆ ಅವನೇ ಹೊಣೆಗಾರನಾಗಿದ್ದನು. ಅಮರನಾಯಕನು ಮತ್ತು ಅವರಗಳ ಸೈನ್ಯದಿಂದ ವಿಜಯನಗರದ ಅರಸರು ಹೊಸರಾಜ್ಯಗಳನ್ನು ಗೆಲ್ಲುತ್ತಿದ್ದರು. ಕ್ರೋಢೀಕರಿಸುತ್ತಿದ್ದರು. ಶತ್ರುಗಳೊಂದಿಗೆ ಹೋರಾಡುತ್ತಿದ್ದರು.

ಯುದ್ಧ ಮತ್ತು ಸಾಮ್ರಾಜ್ಯ ರಕ್ಷಣೆಯ ಸಲುವಾಗಿ ಹಾಗೂ ಕಾನೂನು ಸುವ್ಯವಸ್ಥೆಗಳ ಪಾಲನೆಗಾಗಿಯೂ ವಿಜಯನಗರದ ಅರಸರಿಗೆ ದೊಡ್ಡ ಪ್ರಮಾಣದ ಸೈನ್ಯದ ಅಗತ್ಯವಿತ್ತು. ಈ ಅಗಾಧವಾದ ಸೈನ್ಯವನ್ನು ಸಾಕಿ ಸಿದ್ಧವಾಗಿಟ್ಟುಕೊಂಡು ಅಗತ್ಯವಾದಾಗಲೆಲ್ಲಾ ಅಮರನಾಯಕರು ಒದಗಿಸಬೇಕಾಗಿತ್ತು. ಅದು ಅವರ ಅತಿ ಮುಖ್ಯ ಹೊಣೆಗಾರಿಕೆಯಾಗಿತ್ತು.[೮೧] ಸೇವೆಗಾಗಿ ವಿಜಯನಗರದ ಅರಸರು ಅವರಿಗೆ ಭೂಪ್ರದೇಶಗಳನ್ನು ಕೊಡುತ್ತಿದ್ದರು. ತಮ್ಮ ಅಧಿಕಾರಿ ವ್ಯಾಪ್ತಿಯ ಪ್ರದೇಶದ ಕಾನೂನು ಸುವ್ಯವಸ್ಥೆಯ ಪಾಲನೆಯ ಜೊತೆಗೆ ಯುದ್ಧಗಳಲ್ಲಿ ಮತ್ತು ಗೆದ್ದ ಪ್ರದೇಶಗಳ ಸಂಘಟನೆಯಲ್ಲಿ ಅಮರನಾಯಕರು ಚಕ್ರವರ್ತಿಗೆ ಸಹಾಯ ಮಾಡುತ್ತಿದ್ದರು.

ವಿಜಯನಗರದ ಅರಸರು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿ ಅದಕ್ಕೆ ಸೇರಿದ ವಿವಿಧ ಪ್ರದೇಶಗಳ ಮೇಲೆ ನೇರವಾಗಿ ತಾನೇ ಆಳಿಕೆ ನಡೆಸುವುದು ಕಷ್ಟವೆಂದು ತಿಳಿದುಬಂದಾಗ ಆಯಾ ಪ್ರದೇಶದ ಆಡಳಿತ ಉಸ್ತುವಾರಿಯನ್ನು ನೋಡಿಕೊಳ್ಳಲು, ಕಾನೂನು ಸುವ್ಯವಸ್ಥೆ ಪಾಲಿಸಲು, ಕಂದಾಯ ವಸೂಲಿ ಮಾಡಲು ಮೊದಲಾದ ಕಾರಣಗಳಿಗಾಗಿ ಪ್ರಭಾವಶಾಲಿ, ಬಲಿಷ್ಠ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಅಧೀನ ಅಧಿಕಾರಿಗಳೇ ಕ್ರಮೇಣ ಪಾಳೆಯಗಾರ ರೆನಿಸಿಕೊಂಡರು.[೮೩] ವಿಜಯನಗರ ಅರಸರು ಪಾಳೆಯಗಾರಿಗೆ ಸ್ಥಾಪನೆಗೆ ಹಾಗೂ ಪಾಳೆಯಗಾರರಿಗೆ ಮುಕ್ತ ಅವಕಾಶ ಕೊಟ್ಟಿದ್ದರಿಂದ ಅನೇಕ ಪಾಳೆಯಪಟ್ಟುಗಳು ಅಸ್ತಿತ್ವಕ್ಕೆ ಬಂದವು. ವಿಜಯನಗರ ಸಾಮ್ರಾಜ್ಯದಲ್ಲಿ ಒಂದಿಲ್ಲೊಂದು ಸೇವೆಯಲ್ಲಿದ್ದ ಬಹುತೇಕ ಮಂದಿ, ಪಾಳೆಯಪಟ್ಟನ್ನು ಸ್ಥಾಪಿಸಿದರು. ಪಾಳೆಯಗಾರರು ವಿಜಯನಗರ

ಸಾಮ್ರಾಜ್ಯದ ತಳಪಾಯವಾಗಿದ್ದವರು. ಸಾಮ್ರಾಜ್ಯವು ಇವರ ಮೇಲೆ ನಿಂತಿತ್ತು. ವಿಜಯನಗರ ಸಾಮ್ರಾಜ್ಯವು ಸರಿಸುಮಾರು ಇನ್ನೂರಷ್ಟಿದ್ದ ಸಾಮಂತರ ಮೂಲಕ ಆಡಳಿತ ನಡೆಸುತ್ತಿತ್ತು.

ಈ ಸಾಮಂತರದಲ್ಲಿ ಬಹುತೇಕ ಬೇಡರೇ ಅಧಿಕ ಸಂಖ್ಯೆಯಲ್ಲಿದ್ದರು. ಬೇಡ ನಾಯಕರ ಗಣರಾಜ್ಯಗಳಂತಿದ್ದ ಬೇಡವಟ್ಟುಗಳು ಕಾಲಕ್ರಮೇಣ ಸಂಸ್ಥಾನಗಳಾಗಿ ರೂಪುಗೊಂಡವು. ಇವುಗಳ ಅಧಿಕಾರಿಗಳನ್ನು ಪಾಳೆಯಗಾರರೆಂದು ಕರೆಯಲಾಯಿತು. ಪಾಳೆಯಗಾರರನ್ನು ತೆಲುಗಿನಲ್ಲಿ 'ಪಾಳೆಗಾಡು' ತಮಿಳಿನಲ್ಲಿ 'ಪಾಲೈಕ್ಕಾರನ್' ಮರಾಠಿಯಲ್ಲಿ ಪಾಳೇಗಾರ ಎಂದು ಕರೆಯುವರು. ಪಾಳೆಯಗಾರರ ಅಧೀನದಲ್ಲಿದ್ದ ಭೂ ಪ್ರದೇಶಕ್ಕೆ 'ಪೊಲ್ಲಂ' (ರಾಜಕೀಯ ಫವರ್) ಎಂದು ಹೆಸರಿದ್ದ ಕಾರಣ ಇವರಿಗೆ ಪಾಳೆಯಗಾರ ಎಂದು ಹೆಸರು ಬಂದಂತೆ ತೋರುತ್ತದೆ ಎನ್ನುವುದು ವಿದ್ವಾಂಸರ ಅಭಿಪ್ರಾಯವಾಗಿದೆ. ಪಾಳೆಯಗಾರರು ಸಾಮಂತ ನಾಯಕರಾಗಿದ್ದು, ಸ್ಥಳೀಯ ಆಡಳಿತಗಾರರಾಗಿದ್ದರು. ನಂತರ ಸಾಮಂತ ಪದವಿಗೇರಿ ಪೊಗದಿ ಸಲ್ಲಿಸುತ್ತಾ ತಮ್ಮ ತಮ್ಮ ಜಮೀನುಗಳ ಮೇಲೆ ಸ್ವಾಮ್ಯಾಧಿಕಾರಿ ಪಡೆದುಕೊಂಡರು. ಕಷ್ಟ ಸಹಿಷ್ಣುಗರಾಗಿರದ್ದ ಬೇಡರು ಪಾಳೆಯಗಾರರಾದರು. ಮೈಸೂರು ಪ್ರದೇಶದ ಬಹುತೇಕ ಪಾಳೆಯಗಾರರು ಬೇಡ ಜನಾಂಗಕ್ಕೆ ಸೇರಿದ್ದರು.[೮೩] ರಾಜ್ಯವನ್ನು ಆಪತ್ಕಾಲದಲ್ಲಿ ರಕ್ಷಿಸುವ ಹಾಗೂ ಆರ್ಥಿಕ ಸಂಕಷ್ಟ ಸಮಯದಲ್ಲಿ ಸಹಾಯ ಮಾಡುವ ಪಾಳೆಯಗಾರರಿಗೆ ರಾಜರು ತೊಂದರೆಯನ್ನು ಕೊಡಲಿಲ್ಲ. ಅವರಿಂದ ಕಾಣಿಕೆಯನ್ನು ಸ್ವೀಕರಿಸುತ್ತಿದ್ದರು. ವಂಶ ಪಾರಂಪರೆಯ ಪಾಳೆಯಗಾರಿಕೆಯನ್ನು ವಿಜಯನಗರದ ಅರಸರು ಪೋಷಿಸಿದ್ದರಿಂದ ಅವರು ದೊರೆಗಳೆಂದು ಸಾಮಂತರೆಂದು ಕರೆಸಿಕೊಂಡಿರಲ್ಲದೆ ಪ್ರಬಲರಾದರು. ಅಧಿಕಾರಕ್ಕೆ ಬರುತ್ತಲೇ ಈ ಬೇಡ ಸಾಮಂತರು ತಮ್ಮ ಮೂಲ ಗುಣವಾದ ಕ್ರೌರ್ಯವನ್ನು ತ್ಯಜಿಸಿದವರಾಗಿದ್ದರು.[೮೪]

ಎಪ್ಪತ್ತೇಳು ಪಾಳೆಯಗಾರರು ಎಂಬ ತಮ್ಮ ಲೇಖನದಲ್ಲಿ ಪ್ರೊ. ಲಕ್ಷ್ಮಣ ತೆಲಗಾವಿಯವರು ಪಾಳೆಯಗಾರರ ಸಂಖ್ಯೆಯನ್ನು ಕುರಿತಂತೆ ಹೀಗೆ ಅಭಿಪ್ರಾಯ ಕಟ್ಟಿದ್ದಾರೆ. "ಸಾಮಾನ್ಯವಾಗಿ ಈ ಸಂಖ್ಯಾವಾಚಿಯು ಸಾಹಿತ್ಯಿಕ ಕೃತಿಗಳಲ್ಲಿ ಇದು ಕೇವಲ ರೂಢಿಗತವಾಗಿ ಅಥವಾ ಆಶಯ ರೂಪದಲ್ಲಿ ಬಳಕೆಗೆ ಬಂದಿರಬಹುದೆಂದು ಭಾವಿಸಲು ಕಾರಣವೆನಿಸಿದೆ.[೮೫] ಎಂ.ಎಸ್. ಪುಟ್ಟಣ್ಣನವರು ಪಾಳೆಯಗಾರ ಎಂಬ ಪದವನ್ನು ಈ ರೀತಿ ಅರ್ಥೈಸಿದ್ದಾರೆ. ಪಾಳೆಯಗಾರರೆಂಬ ಅಧಿಪತಿಗಳು ವಿಜಯನಗರ ದೊರೆಗಳಿಗೆ ವಶವರ್ತಿಗಳಾಗಿ ಅವರಿಗೆ ಕಪ್ಪ ಮೊದಲಾದವುಗಳೆನ್ನೆಲ್ಲಾ ಕೊಡುತ್ತಾ ಯುದ್ಧ ಪ್ರಸಕ್ತಿ ಬಂದಾಗಲೂ ಇತರ ಕಾಲಗಳಲ್ಲಿಯೂ ಅವರ ಸಹಾಯಕ್ಕೆ ತಮ್ಮ ದಂಡನ್ನು ಕಳುಹಿಸುತ್ತಾ ಇದ್ದರೆಂದು ಗೊತ್ತಾಗಿದೆ. ಇಂತಹ ತಮ್ಮ ಸೇನೆಗಳೊಡನೆ ಈ ಮುಖಂಡರು ವಿಜಯನಗರದ ಮಹಾರಾಜರ ದರ್ಶನಕ್ಕೆ ಹೋಗಿ ರಾಜಧಾನಿಯ ಹೊರಭಾಗದಲ್ಲಿ ಇಳಿದುಕೊಂಡು ಗುನುಗುಜಾರ ಸಮೇತವಾಗಿ ಪಾಳೆಯ ಹಾಕಿ ಇರುತ್ತಿದ್ದ ಕಾರಣ ಆಯಾ ಪ್ರಮುಖರಿಗೆ

ಪಾಳೆಯಗಾರರೆಂದು ಹೆಸರು ಬಂತೋ ಅಥವಾ ವಿಜಯನಗರ ಸಂಸ್ಥಾನದ ದಂಡು ಶತ್ರುಗಳ ಮೇಲೆ ಹೊರಟಾಗ ಈ ಪ್ರಭುಗಳು ತಮ್ಮ ದಂಡಿನೊಡನೆ ಅವರ ಸಹಾಯಕ್ಕೆ ಹೋಗಿ ಒಂದು ಸ್ಥಳದಲ್ಲಿ ಇಳಿದುಕೊಳ್ಳುತ್ತಿದ್ದರಿಂದ ಅವರಿಗೆ ಪಾಳೆಯಗಾರರೆಂದು ಅಭಿದಾನವಾಯಿತೋ ಖಂಡಿತವಾಗಿ ಯಾವ ಮೂಲಕ್ಕೂ ಗೊತ್ತಾಗಿಲ್ಲ. ಒಂದೊಂದು ಚಿಕ್ಕ ಪ್ರಾಂತ್ಯದಲ್ಲಿ ದೊರೆಗಳಂತೆ ಆಳಿಕೊಂಡು ಜನರಿಂದ ಕಂದಾಯ, ಕಾಣಿಕೆ ಮೊದಲಾದ ವರದಿಗಳನ್ನು ತೆಗೆದುಕೊಳ್ಳುತ್ತಾ ದುಷ್ಟರನ್ನು ನಿಗ್ರಹಿಸುತ್ತಾ ಶಿಷ್ಟರನ್ನು ಕಾಪಾಡುತ್ತಾ ಇದ್ದ ಮುಖಂಡರನ್ನು ಪಾಳೆಯಗಾರರು ಎಂಬ ಹೆಸರಿನಿಂದ ಕರೆಯುತ್ತಿದ್ದರು.[೪]

ಪಾಳೆಯ ಎಂಬ ಪದಕ್ಕೆ ಪ್ರದೇಶ ದಂಡು, ಸೈನ್ಯ, ಶಿಬಿರ, ಠಾಣ್ಯ ಮುಂತಾದ ಅರ್ಥಗಳಿವೆ. ಪಾಳೆಯಗಾರ ಇವುಗಳ ಮುಖಂಡನೆನಿಸಿಕೊಳ್ಳುತ್ತಾನೆ. ದಂಡಿನೊಡನೆ ಪಾಳೆಯ ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರು ಪಾಳೆಯಗಾರರು ಎಂದು ಎಂ.ಎಸ್. ಪುಟ್ಟಣ್ಣನವರು ಅಭಿಪ್ರಾಯಪಟ್ಟಿದ್ದಾರೆ. ಪಾಳೆಯಗಾರರನ್ನು ನಾಯಕರು, ಅಮರನಾಯಕರು, ನಾಡಪ್ರಭುಗಳು, ನಾಡಗೌಡರು, ಸಾಮಂತರು ಒಡೆಯರು, ದೊರೆಗಳು, ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು.

ವಿಜಯನಗರ ಕಾಲದಲ್ಲಿ ಸ್ಥಾಪನೆಗೊಂಡು ಹಾಗೂ ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರಗೊಂಡು ಕೆಲವೊಂದು ಹೊಸದಾಗಿ ಸ್ಥಾಪನೆಗೊಂಡ ಪಾಳೆಯ ಪಟ್ಟುಗಳಲ್ಲಿ ಬೇಡ ಜನಾಂಗದ ಪಾಳೆಯ ಪಟ್ಟಗಳೇ ಅಧಿಕವಾಗಿದ್ದವು. ಕರ್ನಾಟಕ ಮತ್ತು ಕರ್ನಾಟಕದ ಹೊರಭಾಗದ ಅನೇಕ ಪ್ರದೇಶಗಳಲ್ಲಿ ಬೇಡ ಜನಾಂಗದ ನಾಯಕರು ಆಡಳಿತವನ್ನು ನಡೆಸಿದ್ದಾರೆ. ಒಂದಾನೊಂದು ಕಾಲದಲ್ಲಿ ಚಿತ್ರದುರ್ಗ, ಹರಪನಹಳ್ಳಿ, ಸಂತೇಬೆನ್ನೂರು, ಹರ್ತಿಕೋಟೆ, ಕನಕಗಿರಿ, ಜರಿಮಲೆ, ಗುಡೇಕೋಟೆ, ನಿಡಗಲ್ಲು, ನಾಯಕನಹಟ್ಟಿ, ಗುಮ್ಮನಾಯಕನಹಳ್ಳಿ, ಹಾಗಲವಾಡಿ, ಮತ್ತೋಡು, ಶಿರಾ, ಗುಡಗುಂಡಿ, ಸುರಪುರ, ಕೊಡೇಕಲ್, ಕೋಸಗಿ, ಕರೇಗುಡ್ಡ, ಗುಂತಗೋಳ, ದೇವದುರ್ಗ, ಅರಕೇರ, ರೂಡ್ಲಬಂಡಿ, ಗುತ್ತಿ, ಅಪ್ಪಲುದುರ್ಗ, ದೂದಿಕೊಂಡಿ, ಕಪಟರಾಳ, ಸೂಂಡಿ, ಪಾಮನಕಲ್ಲು, ಪ್ಯಾಪಲಿ, ರತ್ನಗಿರಿ, ರಾಯದುರ್ಗ, ತರೀಕೆರೆ, ಪಾಮಿಡಿ, ಕೋಮರಕೊಂಡ, ಅಗಳಿ, ಪರಶುರಾಮಪುರ, ತಳಕು, ದೊಡ್ಡೇರಿ, ಆನೆಗೊಂದಿ, ಮೊಳಕಾಲ್ಮೂರು, ಪೆನುಗೊಂಡ, ಮುಂಡೀಕೋಟೆ, ದ್ಯಾವನಹಳ್ಳಿ, ಮುಟ್ಟಿ, ಬೆಳಗುತ್ತಿ, ತಲಚೇರಿ, ದೊರೆಮಳ, ನನ್ನಿವಾಳ, ಗೋವನೂರು, ಮಲೆದುರ್ಗ, ಆದವಾನಿ, ಚಂದ್ರಗಿರಿ, ಚಿಕ್ಕನಾಯಕನಹಳ್ಳಿ, ರಾಯಚೂರು, ಉಚ್ಚಂಗಿದುರ್ಗ, ಚಿಕ್ಕಲದಿನ್ನಿ, ಸಂಡೂರು, ಉಜ್ಜನಿ, ಬಾಣಾರಾವಿ, ವಡ್ಡು, ಕುಡುತಿನಿ, ಹಾವನೂರು, ಮುದಗಲ್ಲು, ಜಡಕಲ್ಲುದುರ್ಗ, ಅನಂತಪುರ, ದುಮ್ಮಿ, ಕುಂದುರ್ತಿ, ಹೊಸಕೋಟೆ, ಹಿರಿಯೂರು, ಬೂದಿಹಾಳು, ಐಮಂಗಲ, ರೋಡಕೆರೆ, ಬುಕ್ಕಪಟ್ಟಣ, ಕ್ಯಾದಿಗೆರಾ, ರಾಮದುರ್ಗ, ರಾಮಗಿರಿ, ರಾಣೆಬೆನ್ನೂರು, ಮಧುರೆ, ಹರತಿ, ಬಿದನೂರು ಮತ್ತಿತರ ಸ್ಥಳಗಳು ಬೇಡರ ಆಳ್ವಿಕೆಗೆ ಒಳಪಟ್ಟಿದ್ದವೆಂದು ತಿಳಿದುಬರುತ್ತದೆ.

## ನಾಯಕರ ಸಾಧನೆಗಳು

ಪ್ರಾಚೀನ ಕಾಲದಲ್ಲಿ ಬೇಡ ಜನಾಂಗವು ಬೇಟೆ ಸಂಸ್ಕೃತಿಯೊಂದಿಗೆ ಸಂಬಂಧ ಹೊಂದಿತ್ತು. ಗುಡ್ಡಗಾಡುಗಳ ತೀರದಲ್ಲೋ, ಅರಣ್ಯದಲ್ಲೋ ನೆಲಸಿದ್ದ ಬೇಡರು ಕ್ರಮೇಣ ನಗರ ಸಂಸ್ಕೃತಿಯಲ್ಲಿ ಬೆರತುಕೊಂಡರು. ತಮ್ಮ ಶಕ್ತಿ, ಶೌರ್ಯಗಳಿಂದ ಬೇಡರೆಂದರೆ ಸೈನಿಕರು, ಸೈನಿಕರೆಂದರೆ ಬೇಡರು ಎನ್ನುವಷ್ಟರ ಮಟ್ಟಿಗೆ ಈ ಜನಾಂಗದವರು ಪ್ರಸಿದ್ಧಿ ಪಡೆದರು. ಬೇಡರನ್ನು ಇಂದಿಗೂ ಯೋಧ ಜನಾಂಗವೆಂದೇ ಕರೆಯಲಾಗುತ್ತದೆ. ಗುಪ್ತರ ಕಾಲದಲ್ಲಿ ಮಧ್ಯ ಭಾರತದ ಬಹಳಷ್ಟು ಅರಣ್ಯವನ್ನು ಕಡಿದು ಕೃಷಿ ಬಳಕೆಗೆ ತರಲಾಯಿತು. ಈ ಸಮಯದಲ್ಲಿ ಆದಿವಾಸಿಗಳು ಕೃಷಿ ಚಟುವಟಿಕೆಗೆ ವಾಲಿದರು. ಆದಿವಾಸಿ ಬಣ ನಾಯಕರ ಆಳ್ವಿಕೆಯಲ್ಲಿದ್ದ ಪ್ರದೇಶಗಳಲ್ಲಿ ಬ್ರಾಹ್ಮಣರಿಗೆ ಮಾನ್ಯವಾಗಿ ಭೂಮಿ ನೀಡಿದ್ದರಿಂದ ಸುತ್ತಲಿನ ಆದಿವಾಸಿಗಳು ಸಂಪತ್ತನ್ನು ಕಾಪಾಡುವುದರ ಮಹತ್ವವನ್ನು, ಉತ್ತಮ ಕೃಷಿ ವಿಧಾನಗಳನ್ನು ಕಲಿತರು.[೮೭] ಮೌರ್ಯರ ಕಾಲದಲ್ಲಿ ಬೇಟೆಯನ್ನೇ ನಂಬಿದ್ದ ಬೇಡರು, ನಂತರ ರಾಜ ಪೋಷಣೆಯ ವಿವಿಧ ಕೆಲಸ ಕಾರ್ಯಗಳಲ್ಲಿ ನಿರತರಾಗಿರಬೇಕು. ಶಾತವಾಹನರ ಕಾಲಕ್ಕೆ ತಳವಾರ ಹುದ್ದೆಯಲ್ಲಿದ್ದ ಬೇಡರು, ರಾಷ್ಟ್ರಕೂಟರು ಕಾಲಕ್ಕೆ ನಾಯಕ ಪದವಿಗೆ ಬಡ್ತಿ ಹೊಂದಿ ವಿಜಯನಗರ ಪೂರ್ವದಲ್ಲಿಯೇ ಮಹಾನಾಯಕಾಚಾರ್ಯ ಎಂಬ ಬಿರುದುಗಳನ್ನು ಗಳಿಸಿದ್ದರು.[೮೮]

ಕ್ರಿ.ಶ.೨ನೇ ಶತಮಾನದ ವೇಳೆಗೆ ಆಂಧ್ರಪ್ರದೇಶದ ನಾಗಾರ್ಜುನ ಕೊಂಡದ ಇಕ್ಷ್ವಾಕು ವಂಶದ ದೊರೆಗಳಿಂದ ಸ್ತಲವರ, ತಳಾವಿ, ತಳವಾರ, ಮಹಾತಲವಾರ, ನಾಡತಳವಾರ ಎಂಬ ಗ್ರಾಮರಕ್ಷಕ ವಿಭಾಗದ ಹುದ್ದೆಗಳು ಸೃಷ್ಟಿಸಲ್ಪಟ್ಟವು. ಸ್ಥಳೀಯ ನಿವಾಸಿಗಳಾಗಿದ್ದ ಬೇಡರಿಗೆ ವಂಶಪಾರಂಪರ್ಯವಾಗಿ ಈ ತಳವಾರಿಕೆ ಅಧಿಕಾರವನ್ನು ಅನುಭವಿಸಲು ಕಟ್ಟಳೆ ಮಾಡಿದರು. ತಳವಾರನ ಮುಖ್ಯ ಕರ್ತವ್ಯ ಗ್ರಾಮ ರಕ್ಷಣೆಯಾಗಿತ್ತು. ಇಕ್ಷ್ವಾಕು ವಂಶದ ದೊರೆಗಳು ಜನಸಂಖ್ಯೆಗೆ ಅನುಗುಣವಾಗಿ ಹುದ್ದೆಗಳನ್ನು ನೀಡಿದ್ದರಿಂದ ಬೇಡರು ದಟ್ಟವಾಗಿ ನೆಲಸಿರುವಲ್ಲಿ ಅಧಿಕಾರಿಗಳಾಗಿ ನೇಮಕಗೊಂಡರು. ಶಾತವಾಹನರ ಕಾಲದಲ್ಲಿ ಬೋಜ, ಬೋಜಕ, ಬೋಜಿ ಎಂಬ ಉನ್ನತ ಹುದ್ದೆಗಳಿದ್ದವು. ಆ ಗೌರವಾನ್ವಿತ ಅಧಿಕಾರ ಸೂಚಕ ಪದಗಳೇ ತದ್ಭವವಾಗಿದೆ. ಬೇಡರ ಪಾಲಿಗೆ ಬೋವ, ಬೋಯ ಎಂಬ ರೂಪಗಳಲ್ಲಿ ಬಳಕೆಯಲ್ಲಿ ಬಂದವು ಎನ್ನುವುದು ವಿದ್ವಾಂಸರ ಅಭಿಪ್ರಾಯವಾಗಿದೆ. ಕದಂಬರ ಅರಸನಾದ ಮಯೂರಶರ್ಮನಿಗೆ ಶ್ರೀಶೈಲ ಪರ್ವತ ಪ್ರದೇಶದಲ್ಲಿ ಶಿವಸ್ಕಂದವರ್ಮನ ವಿರುದ್ಧ ಬೇಡ ಸೈನಿಕರು ಸಹಾಯ ಮಾಡಿದರು. ಇವರ ಸಹಾಯದಿಂದ ಮಯೂರಶರ್ಮನು ರಾಜ್ಯವನ್ನು ಸ್ಥಾಪಿಸಿದನು. ಬುಕಾನನ್ ಕದಂಬರು ಬೇಡರು ಎಂದು ಕರೆದಿರುವನು.[೮೯] ಶಿಲಾಧಿಪತ್ಯನೊಡನೆ ಹೋರಾಡುವಾಗ ಮಹೇಂದ್ರ ಎಂಬುವವನು ಬೇಡರನ್ನು,

ಮಲೆಪರನ್ನು ತನ್ನ ಸಹಾಯಕ್ಕಾಗಿ ತೆಗೆದುಕೊಂಡು ಹೋದನೆಂದು ಶಾಸನವೊಂದು ತಿಳಿಸುತ್ತದೆ.[೯೦] ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಬೇಡ ಪಡೆಗಳು ಕರ್ನಾಟಕ ಸೈನ್ಯದಲ್ಲಿ ಪ್ರಸಿದ್ಧಿಯಾಗಿದ್ದವು. ಕರ್ನಾಟಕ ಸೈನ್ಯವೆಂದರೆ ಬೇಡರ ಸೈನ್ಯವೆಂದೇ ಹೆಸರಾಗಿತ್ತು. ಏಕೆಂದರೆ ಕರ್ನಾಟಕ ಸೈನ್ಯದಲ್ಲಿ ಬೇಡರೇ ಹೆಚ್ಚು ಸಂಖ್ಯೆಯಲ್ಲಿದ್ದರು.[೯೧] ಬೇಡರು ರಾಷ್ಟ್ರಕೂಟರ ಕಾಲಕ್ಕೆ ಅಧಿಕಾರಿಗಳಾಗಿ ಅನೇಕ ಹುದ್ದೆಗಳನ್ನು ಪಡೆದುಕೊಂಡರು. ನಾಡಗಾವುಂಡರಾಗಿ ಬೇಡರು ನೇಮಕಗೊಂಡಿರುವುದು ತಿಳಿದುಬರುತ್ತದೆ.[೯೨] ಬೆಳಗಾವಿ ಜಿಲ್ಲೆಯ ತೊರಗಲ್ಲು, ಧಾರವಾಡ ಜಿಲ್ಲೆಯ ರಟ್ಟಹಳ್ಳಿ, ಉತ್ತರಕನ್ನಡ ಜಿಲ್ಲೆಯ ಅಜಿರಗೋಳ ಸ್ಥಳಗಳಲ್ಲಿ ಭೂತಗ, ಬೀರುಗ ಮತ್ತು ಗೋಯ ಎಂಬ ಬೇಡನಾಯಕರು ಯಾರಿಗೂ ಅಧಿನರಾಗದೆ ಸ್ವತಂತ್ರ್ಯರಾಗಿದ್ದುಕೊಂಡು ತಮ್ಮ ಬೇಡವಟ್ಟುಗಳನ್ನು ನಿರ್ವಹಿಸುತ್ತಾ ಭಯಂಕರವಾಗಿದ್ದರು. ಇವರನ್ನು ಹತ್ತಿಕ್ಕಲು ಇಮ್ಮಡಿ ತೈಲಪನು ದಂಡೆತ್ತಿ ಬರಬೇಕಾಯಿತು ಎನ್ನುವುದು ನಾಗವರ್ಮನ ಕಾವ್ಯವಲೋಕನದಲ್ಲಿ ಉಲ್ಲೇಖವಾಗಿದೆ. ಹೊಯ್ಸಳವಂಶದ ಸ್ಥಾಪಕನಾದ ಸಳನು ಬೇಡ ಜನಾಂಗದವನು ಎನ್ನುವ ಅಭಿಪ್ರಾಯವಿದೆ. ಹೊಯ್ಸಳರ ಸೇನೆಯಲ್ಲಿ ಬೇಡರ ಪಡೆಯ ಮುಖ್ಯವಾಗಿತ್ತು. ಕ್ರಿ.ಶ. ೧೧೧೭ರಲ್ಲಿ ಹೊಯ್ಸಳರಿಗೆ ಮತ್ತು ಸೇವುಣರಿಗೆ ಯುದ್ಧವಾದಾಗ ಬೇಡ ಸೈನಿಕರ ಪಾತ್ರ ನಿರ್ಣಾಯಕವಾಗಿತ್ತು.[೯೩] ಅಸಂದ ನಾಡಿನ ಅನೇಕ ಶಿಲಾಶಾಸನಗಳಲ್ಲಿ ಬೇಡರ ದಾಳಿಗಳನ್ನು ಉಲ್ಲೇಖಿಸಲಾಗಿದೆ. ಹೊಯ್ಸಳರ ಮಾಂಡಲಿಕ ಪೆರುಮಾಳದೇವ ದಂಡನಾಯಕ ಹಾಗೂ ಇನ್ನೊಬ್ಬ ಹೊಯ್ಸಳ ಮಾಂಡಲೀಕ ಅಸಂದಿಯ ಅರಸನಾದ ವೈಜರಸನ ಕಾಲದ ಕಣ್ಣಂಬಿ ಘಟನೆಯಲ್ಲಿ ಬರುವ ಅಗ್ಗದರಾಯನು ಬೇಡ ಜನಾಂಗದವನೆನ್ನುವ ಅಭಿಪ್ರಾಯವಿದೆ. ಕಣ್ಣಂಬಿ ಘಟನೆಯಿಂದ ಬೇಡರ ಬಂಕೆ (ವನ)ಗಳಿದ್ದ ಬಗ್ಗೆ ತಿಳಿದುಬರುತ್ತದೆ.[೯೪]

ವಿಜಯನಗರ ಸ್ಥಾಪನೆಯಾಗುವುದಕ್ಕೆ ಮೊದಲೇ ಆಂಧ್ರ ಪ್ರದೇಶದಲ್ಲಿ ಬೇಡರ ಸಂಸ್ಥಾನಗಳಿದ್ದವು.[೯೫] ಮೂರನೇ ಬಲ್ಲಾಳನು ತನ್ನ ಕೋಟೆಯ ರಕ್ಷಣೆಗಾಗಿ ಕಿರಾತ ಪಡೆಯನ್ನು ಸ್ಥಾಪಿಸಿದನು.[೯೬] ಗುಪ್ತರ ಕಾಲದಿಂದ ಸೈನಿಕ ವೃತ್ತಿಯನ್ನು ಆರಂಭಿಸಿದ ಬೇಡರು, ಕಾಲಕ್ರಮೇಣ ಕೆಲವು ಮುಖ್ಯ ಹುದ್ದೆಗಳನ್ನು ಪಡೆದರು. ಅಂದಿನಿಂದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗುವವರೆಗೂ ಸೈನಿಕರಾಗಿ, ವಿವಿಧ ಅಧಿಕಾರಿಗಳಾಗಿ ವಿವಿಧ ರಾಜಮನೆತನಗಳಲ್ಲಿ ಕೆಲಸ ನಿರ್ವಹಿಸಿದರು. ಬೇಡ ನಾಯಕರ ಗಣರಾಜ್ಯಗಳಿಂತಿದ್ದ ಬೇಡವಟ್ಟುಗಳು ಕಾಲಕ್ರಮೇಣ ಸಂಸ್ಥಾನಗಳಾಗಿ ರೂಪುಗೊಂಡವು. ಹತ್ತನೆಯ ಶತಮಾನದಲ್ಲಿ ಈ ರೀತಿ ಸ್ಥಾಪನೆಯಾಗಿ ಪ್ರಖ್ಯಾತಿ ಹೊಂದಿದ ಪಾಳೆಯ ಪಟ್ಟುಗಳಲ್ಲಿ ಆನೆಗೊಂದಿಯೇ ಮೊದಲನೆಯದು.[೯೭] ಕುಮ್ಮಟದುರ್ಗದ ಮೊದಲ ಪಾಳೆಯಗಾರ ಮುಮ್ಮಡಿ ಸಿಂಗನಾಯಕ ಎಂಬುದನ್ನು ಕ್ರಿ.ಶ. ೧೨೮೦ ಮತ್ತು ೧೨೮೭ರ ಶಾಸನಗಳು ಸಮರ್ಥಿಸುತ್ತವೆ. ಉತ್ತರದ ಯಾದವ ಮತ್ತು ದಕ್ಷಿಣದ ಹೊಯ್ಸಳರೊಡನೆ ಹೋರಾಡುವಷ್ಟು ಸಾಮರ್ಥ್ಯ ಹೊಂದಿದ್ದನು.[೯೮] ಪ್ರಾರಂಭದಲ್ಲಿ

ಸಿಂಗನಾಯಕನು ದೇವಗಿರಿಯ ರಾಮದೇವನ ಅಧಿಕಾರಿಯಾಗಿದ್ದನು. ತನಗೆ ಸಿಕ್ಕಿದ ದ್ರವ್ಯವೊಂದರಿಂದ ಗ್ರಾಮವೊಂದನ್ನು ಮತ್ತು ಅದರಲ್ಲಿ ಅರಮನೆಯನ್ನು ಕಟ್ಟಿಸಿದನು. ಈ ಸಂದರ್ಭದಲ್ಲಿ ವ್ಯಾಘ್ರವೊಂದನ್ನು ಸಿಂಗನಾಯಕನು ಕೊಂದನು. ಇವನ ಧೈರ್ಯ ಸಾಹಸ ಮೆಚ್ಚಿ ರಾಮದೇವನು ಮುಮ್ಮಡಿ ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ಸಿಂಗನಾಯಕನಿಗೆ ರಾಯದುರ್ಗದ ಮಲ್ಲಿಭೂಪನು ದಳವಾಯಿ ಪದವಿ ನೀಡಿದನು.[೯೯] ನಂತರದಲ್ಲಿ ರಾಯದುರ್ಗದ ರಾಜನಾಗಿ ಅಧಿಕಾರ ಸ್ಥಾಪಿಸಿದನು.[೧೦೦] ಮುಮ್ಮಡಿ ಸಿಂಗನಾಯಕನು ತನ್ನ ಸಾಮರ್ಥ್ಯದಿಂದ ರಾಜ್ಯವನ್ನು ಕರ್ನೂಲು, ಕಡಪ, ನೆಲ್ಲೂರು ಜಿಲ್ಲೆಯ ಪಶ್ಚಿಮ ಮಾರ್ಥವಾದ ರಾಮದುರ್ಗ, ಸಂಡೂರು ಸಂಸ್ಥಾನದವರೆಗೆ ವಿಸ್ತರಿಸಿದನು.[೧೦೧] ಮುಮ್ಮಡಿ ಸಿಂಗನ ನಂತರ ಅವನ ಮಗನಾದ ಕಂಪಿಲರಾಯನು ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ಶತೃಗಳ ಆಕ್ರಮಣ ಮತ್ತು ಬರಗಾಲದಿಂದಾಗಿ ಕಂಪಿಲ ರಾಜ್ಯವು ಕುಸಿಯಿತು. ಕಂಪಿಲರಾಯನು ವಲಸೆ ಹೊರಟು ತನ್ನ ಪರಿವಾರದೊಂದಿಗೆ ತನ್ನ ಬೇಡ ಪಡೆಯ ಸಹಾಯದಿಂದ ಹೊಸಮಲೆದುರ್ಗದಲ್ಲಿ ಕೋಟೆಯನ್ನು ಕಟ್ಟಿ ಅದರ ರಾಜನಾದನು. ದೇವಗಿರಿಯ ರಾಮಚಂದ್ರನು ಅಲ್ಲಾವುದ್ದೀನ್ ಖಿಲ್ಜಿಗೆ ಶರಣದ ಮೇಲೆ, ಹುಟ್ಟಾ ಹೋರಾಟಗಾರನಾದ ಕಂಪಿಲರಾಯನಿಗೆ ಇದು ಇಷ್ಟವಾಗದೆ ಸ್ವತಂತ್ರವಾಗಿರುವುದೇ ಒಳ್ಳೆಯದೆಂದು ಬಗೆದು ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ಮಲ್ಲಿಕಾಫರನು ನಡೆಸಿದ ಧಾಳಿಯನ್ನು ಕಂಪಿಲರಾಯನು ಅತ್ಯಂತ ಯಶಸ್ವಿಯಾಗಿ (ಕ್ರಿ.ಶ. ೧೩೧೩–೧೫) ಎದುರಿಸಿದನು.[೧೦೨] ಮಲ್ಲಿಕಾಫರನ ಧಾಳಿಯನ್ನು ತಡೆಹಿಡಿದ ನೆನಪಿಗಾಗಿ 'ಪ್ರತಾಪ ಚಕ್ರವರ್ತಿ' ಎಂಬ ಬಿರುದನ್ನು ಧರಿಸಿ ಸ್ವತಂತ್ರ್ಯವಾಗಿ ಆಡಳಿತ ನಡೆಸುತ್ತಿದ್ದನು.[೧೦೩]

ಈ ಸಮಯದಲ್ಲಿ ಕಂಪಿಲರಾಯನ ರಾಜ್ಯವು ಅನಂತಪುರ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳ ಕೆಲವು ಭಾಗಗಳನ್ನು ಒಳಗೊಂಡಿತ್ತು.[೧೦೪] ತಂದೆಯಂತೆಯೇ ಶೂರ, ಹೋರಾಟಗಾರ, ಸ್ವಾತಂತ್ರ್ಯಾಭಿಮಾನಿ ಯಾಗಿದ್ದನು ಕುಮಾರರಾಮ. ಕುಮಾರರಾಮನು ತಂದೆಗೆ ಸಹಾಯಕನಾಗಿ ನಿಂತು ಅನೇಕ ಯುದ್ಧಗಳಲ್ಲಿ ಯಶಸ್ಸು ಗಳಿಸಿದನು. ಕುಮ್ಮಟದುರ್ಗವು ಕುಮಾರರಾಮನು ಅಪೇಕ್ಷೆಯ ಮೇರೆಗೆ ಒಂದು ಹೊಸ ರಾಜಧಾನಿಯಾಗಿ ಮಾರ್ಪಟ್ಟಿತು.[೧೦೫] ಕುಮಾರರಾಮನ ಭಾವ ಮಲ್ಲ ಎಂಬುವವನು ಬೇಡ ದೊರೆಗಳಿಂದ ಕಳುಹಿಸಲ್ಪಟ್ಟ ವೀರ ಬೇಡ ನಾಯಕರನ್ನು ಕರೆಸಿಕೊಂಡು ಬೇಡ ಪಡೆಗಳನ್ನು ಕಟ್ಟಿದನು. ಬೋಟಿ ಬೊಮ್ಮ ಮುದಿಗೊಂಡಲ ಓಬ, ಬೇಟೆ ಸಿಂಗ ಮೊದಲಾದ ಎಪ್ಪತ್ತು ಮಾನ್ಯರ ಅಧೀನದಲ್ಲಿ ಬೇಡ ಸೈನ್ಯವು ತುಕಡಿಗಳಾಗಿ ವಿಂಗಡಿಸಲ್ಪಟ್ಟಿತು. ಸೋದರ ಮಾವಂದಿರು ಅಶ್ವಸೇನಾಪತಿಗಳಾದರು.[೧೦೬] ಕುಮಾರರಾಮನು ಓರಂಗಲ್ಲಿನ ಪ್ರತಾಪರುದ್ರನನ್ನು ಸೋಲಿಸಿ ಅಲ್ಲಿಂದ ಎಪ್ಪತ್ತರಾಯನ ಬೊಲ್ಲ ಎಂಬ ಪ್ರಸಿದ್ಧ ಅಶ್ವವೊಂದನ್ನು ತೆಗೆದುಕೊಂಡು ಬಂದು ಸಕಲ ಬಿರುದುಗಳನ್ನು ಇಟ್ಟುಕೊಂಡನು.[೧೦೭] ಕುಮಾರರಾಮನಿಗೆ ಕಪ್ಪ ಕೊಡುತ್ತಾ ಹನ್ನೊಂದು

ಅರಸರು ಮತ್ತು ಇತರೆ ಅನೇಕ ಚಿಕ್ಕಪುಟ್ಟ ಮಂದಿ ಅವನ ಆಜ್ಞೆ ಪಾಲಿಸುತ್ತಾ ಇದ್ದರು ಎಂಬುದನ್ನು ಕೈಫಿಯತ್ತು ತಿಳಿಸುತ್ತದೆ.[೧೦೮] ಕುಮಾರರಾಮನಿಗೆ ಕೊಂಗು, ಮಲೆಯಾಳ, ಮಧುರೆ, ಕೊಡಗು, ಕೋಲಾರ, ಪೆನುಗೊಂಡೆ, ನಿಡಗಲ್ಲು, ಮಿಡಿಗೇಶಿ, ಮಾಗಡಿ, ಕಡಪ, ಕರ್ನೂಲು, ರಾಯದುರ್ಗ, ಕೆಳದಿನಾಡು, ಹಾವನೂರು, ಜರಿಮಲೆ, ಕನಕಾದ್ರಿ, ಆನೆಗುಂದಿ, ರಾಯಪೀಠ ಮುಂತಾದ ಪ್ರದೇಶಗಳ ರಾಜರುಗಳು ರಾಮನಿಗೆ ಉಡುಗೊರೆ, ಹೊನ್ನನ್ನು ಒಪ್ಪಿಸಿದರು. ಕುಮಾರರಾಮನು ಅವರಿಗೆಲ್ಲಾ ಉಡುಗೊರೆ ಕೊಟ್ಟು ಕಳುಹಿಸಿದನು.[೧೦೯]

ಮಹಮ್ಮದ್ ಬಿನ್ ತುಘಲಖಿನ ಸೋದರಳಿಯ ರಾಜಕುಮಾರ ಬಹಾಘುದ್ದೀನ್ ಗುರ್ಷಾಸನು ಮಹಮ್ಮದ್ ಬಿನ್ ತುಘಲಖಿನ ವಿರುದ್ಧ ದಂಗೆ ಎದ್ದು ಕಂಪಿಲಿರಾಯನ ಆಶ್ರಯಕ್ಕೆ ಬಂದನು. ಕಂಪಿಲರಾಯನು ಮುಂದೆ ಒದಗಬಹುದಾದ ಆಪತ್ತನ್ನು ಗಮನಿಸಿದೇ ರಾಜಕುಮಾರನಿಗೆ ಆಶ್ರಯ ನೀಡಿ ರಕ್ಷಿಸಿದನು. ಇದನ್ನು ತಿಳಿದ ತುಘಲಖನು ಪ್ರಬಲವಾದ ಸೈನ್ಯವೊಂದನ್ನು ಕಂಪಿಲರಾಯನ ವಿರುದ್ಧ ಕಳುಹಿಸಿದನು. ಕಂಪಿಲರಾಯನು ಅತ್ಯಂತ ವಿರೋಚಿತವಾಗಿ ಈ ಸೈನ್ಯವನ್ನು ಎದುರಿಸಿದನು. ಮಹಮ್ಮದ್ ಬಿನ್ ತುಘಲಕನ ಸೈನ್ಯವನ್ನು ಎರಡು ಬಾರಿ ಸೋಲಿಸಿದನು.[೧೧೦] ನಿರ್ಭಯವಾಗಿ ಹೋರಾಡುತ್ತಿದ್ದ ಬೇಡರ ಪಡೆಗಳು ಒಗ್ಗಟ್ಟಾಗಿ ಮುಸಲ್ಮಾನರ ದಾಳಿಗಳನ್ನು ಎದುರಿಸುತ್ತಿದ್ದವು. ಕುಮ್ಮಟ ದುರ್ಗವನ್ನು ತುರುಕರ ದಂಡು ಮುತ್ತಿದಾಗ ರಾಣಿ ಹರಿಯಾಲದೇವಿ ಸಹೋದರರು ೬೦೦೦ ಗಾವುತರೊಂದಿಗೆ ಹೋಗಿ ದಾರಿಯಲ್ಲಿ ಬರುತ್ತಿದ್ದ ದಂಡನ್ನು ಎದುರಿಸಿದರು.[೧೧೧] ಮಹಮ್ಮದ್ ಬಿನ್ ತುಘಲಕನು ಕಂಪಿಲ ರಾಜ್ಯದ ಮೇಲೆ ಮೂರನೇ ಬಾರಿಗೆ ದಾಳಿ ಮಾಡಿದಾಗ ಕುಮಾರರಾಮನು ತಂದೆ ಕಂಪಿಲರಾಯನ ಜೊತೆಗೂಡಿ ರಣರಂಗದಲ್ಲಿ ಹೋರಾಡುತ್ತಾ ವೀರ ಮರಣ ಹೊಂದಿದನು. ರಾಜನ ಸಲಹೆ ಮೇರೆಗೆ ರಾಜ ಕುಟುಂಬದ ಸ್ತ್ರೀಯರು ಜೌಹರ ಮೂಲಕ ಮರಣವನ್ನು ಆಶ್ರಯಿಸಿದರು.[೧೧೨] ಕುಮಾರರಾಮನು ತನ್ನ ೧೬ನೆಯ ವಯಸ್ಸಿನಲ್ಲಿ ಹೋರಾಡುತ್ತಾ ವೀರ ಸ್ವರ್ಗ ಸೇರಿದನು.[೧೧೩] ಕುಮಾರರಾಮನು ಕಲಿತನ ಎಷ್ಟು ಅವನನ್ನು ಉನ್ನತ ಮಟ್ಟಕ್ಕೇರಿಸಿತೋ, ಅಷ್ಟೇ ಅವನ ಪರನಾರಿ ಸಹೋದರತ್ವವೂ ಕಾರಣವಾಯಿತು. ಕುಮಾರರಾಮ ಒಬ್ಬ ವ್ಯಕ್ತಿ. ಅವನೊಬ್ಬ ದೈವಿಶಕ್ತಿ ಎಂಬ ಹಿನ್ನೆಲೆಯಲ್ಲಿ ಬೇಡರ ಆರಾಧ್ಯ ದೈವವಾಗಿ ಇಂದಿಗೂ ಪೂಜಿಸಲ್ಪಡುತ್ತಿದ್ದಾನೆ.[೧೧೪] ಸುಮಾರು ೩೧ ವರ್ಷಗಳಷ್ಟು ಕಾಲ ಸ್ವತಂತ್ರ್ಯವಾಗಿ ಎಲ್ಲಾ ವಿಧದ ದಾಳಿಗಳನ್ನು ಎದುರಿಸಿ ಸಂಪದ್ಭರಿತ ವ್ಯವಸ್ಥಿತ ರಾಜ್ಯವಾಗಿ ಮೆರೆದ ನಾಡು. ಕ್ರಿ.ಶ. ೧೩೨೭ರಲ್ಲಿ ನಾಶವಾಗಿ ಹೋಯಿತು.[೧೧೫]

ಮಹಮ್ಮದ್ ಬಿನ್ ತುಘಲಖನು ಕಂಪಿಲಿಯನ್ನು ವಶಪಡಿಸಿಕೊಂಡ ನಂತರ ಅದರ ಅಧಿಕಾರಿಯಾಗಿ ಮಲ್ಲಿಕ್ ಮಹಮ್ಮದ್‌ನನ್ನು ನೇಮಿಸಿದನು. ಮಲ್ಲಿಕ್ ಮಹಮ್ಮದನ ಸಹಾಯಕ್ಕಾಗಿ ಸೇನೆಯನ್ನು ಬಿಟ್ಟು ಉತ್ತರದ ಧಾಳಿಗಳ ಕಾರಣವಾಗಿ ಸಂಪತ್ತಿನೊಂದಿಗೆ ಅನೇಕ ಜನರನ್ನು

ಸೆರೆಯಾಳುಗಳನ್ನಾಗಿ ಮಾಡಿಕೊಂಡು ದೆಹಲಿಗೆ ಹೊರಟು ಹೋದನು. ಅಷ್ಟೊತ್ತಿಗೆ ಮುಸಲ್ಮಾನರ ಸಂಕೋಲೆಯಿಂದ ದೇಶವನ್ನು ಮುಕ್ತಗೊಳಿಸುವ ಪ್ರಯತ್ನಗಳು ಆರಂಭವಾಗಿದ್ದವು. ಅನೇಕ ಬೇಡ ನಾಯಕರು ಮುಸಲ್ಮಾನರ ಸಂಕೋಲೆಯಿಂದ ದೇಶವನ್ನು ಮುಕ್ತಗೊಳಿಸುವ ಪ್ರಯತ್ನಗಳನ್ನು ಮಾಡಿದ್ದನ್ನು ಕಾಣಬಹುದಾಗಿದೆ. ಹಿಂದೂ ಧರ್ಮವನ್ನು ರಕ್ಷಿಸುವುದಕ್ಕಾಗಿ ಪ್ರೋಲಯನಾಯಕ ಎಂಬುವನು ಹೋರಾಡಿ ೧೩೩೦-೩೧ರಲ್ಲಿ ಮರಣ ಹೊಂದಿದನು. ಇವನ ಮಗನಾದ ಕಾಪಾಯನಾಯಕನು ಎಪ್ಪತ್ತೈದು ರಾಜರುಗಳ ಕೂಟದ ನಾಯಕನಾಗಿದ್ದನು. ಸುಲ್ತಾನನ ಸಾಮ್ರಾಜ್ಯವನ್ನು ನಿರ್ನಾಮಗೊಳಿಸುವ ಕಾರ್ಯಗತಿಯನ್ನು ತೀವ್ರಗೊಳಿಸಲು ದಕ್ಷಿಣದ ಹಿಂದೂ ರಾಜರ ಒಂದು ಒಕ್ಕೂಟವನ್ನು ಸ್ಥಾಪಿಸಲು ಅವನು ಪ್ರಯತ್ನಿಸಿದನು.[೧೧೬]

ಬೇಡನಾಯಕರ ಪ್ರಯತ್ನಗಳ ಫಲವಾಗಿ ಕಂಪಿಲಿಯ ಜನರು ಬಂಡಾಯವನ್ನು ಆರಂಭಿಸಿದರು. ಹಿಂದೂಗಳನ್ನೇ ಆ ಪ್ರಾಂತ್ಯಕ್ಕೆ ಪ್ರಾಂತ ಪಾಲರನ್ನಾಗಿ ನೇಮಿಸುವುದರ ಮೂಲಕ ಈ ಬಂಡಾಯವನ್ನು ಶಮನಗೊಳಿಸಬಹುದೆಂಬ ವಿಚಾರ ಸುಲ್ತಾನನಿಗೆ ತಲುಪುವುದರಿಂದ ಸುಲ್ತಾನನು ತಾನು ಸೆರೆಯಾಳುಗಳನ್ನಾಗಿ ಮಾಡಿಕೊಂಡು ಬಂದಿದ್ದ ಇಬ್ಬರು ಸಹೋದರರನ್ನು ಕಂಪಿಲಿ ಪ್ರಾಂತ್ಯದ ಪ್ರಾಂತ್ಯಪಾಲಕ ಮತ್ತು ಉಪಪ್ರಾಂತ್ಯಪಾಲರಾಗಿ ನೇಮಕ ಮಾಡಿದನು. ಕೆಲವು ವಿದ್ವಾಂಸರ ಪ್ರಕಾರ ಹಕ್ಕ-ಬುಕ್ಕರು ಪ್ರತಾಪರುದ್ರನ ಸೇನೆಯಲ್ಲಿದ್ದರೆಂದೂ, ಪ್ರತಾಪರುದ್ರನು ಪರಾಭವಗೊಂಡಾಗ ಕಂಪಿಲಿಗೆ ಹೋಗಿ ಸೇರಿಕೊಂಡರೆಂದೂ ಅಭಿಪ್ರಾಯಪಟ್ಟಿದ್ದಾರೆ. ಕ್ರಿಶ. ೧೩೩೬ರಲ್ಲಿ ಹಕ್ಕ-ಬುಕ್ಕರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. ಈ ಹಿಂದೆ ಹರಿಹರ-ಬುಕ್ಕರು ಕುಮ್ಮಟ ದುರ್ಗದಲ್ಲಿ ಕಾವಲುಗಾರರಾಗಿದ್ದರು. ಅವರು ಕಂಪಿಲರಾಯನ ಭಾವ ಸಂಗಮನ ಮಕ್ಕಳಾಗಿದ್ದರು. ಹೀಗಾಗಿ ಕಂಪಿಲರಾಯನ ಕಡೆ ಅಳಿದುಳಿದ ಅನೇಕ ಬೇಡ ನಾಯಕರು ವಿಜಯನಗರ ಸ್ಥಾಪನೆಯಲ್ಲಿ ನಿರ್ಣಾಯಕ ಪಾತ್ರ ವಹಿಸಿದ್ದರು.

ಕುಮ್ಮಟದುರ್ಗ ಹಾಳಾದ ಮೇಲೆ ಚದುರಿ ಹೋದ ನಾಯಕ ಜನಾಂಗದವರು ಮತ್ತೆ ವಿಜಯನಗರಕ್ಕೆ ಮರಳಿ ಬಂದರು. ಅಲ್ಲದೇ ಆಯಾಕಟ್ಟಿನ ಸ್ಥಳಗಳಲ್ಲಿ ಪಾಳೆಯಗಾರಿಕೆಯನ್ನು ಸ್ಥಾಪಿಸಿಕೊಂಡು ವಿಜಯನಗರದ ರಕ್ಷಣಾ ಕಾರ್ಯದಲ್ಲಿ ನಿರತರಾದರು. ಇವರ ಸಹಾಯದಿಂದ ಹಕ್ಕಬುಕ್ಕರು ತಮ್ಮ ರಾಜ್ಯವನ್ನು ವಿಸ್ತರಿಸಲು ಹೆಚ್ಚು ಅನುಕೂಲವಾಯಿತು.[೧೧೭] ಬಹಮನಿ ರಾಜ್ಯ ಸ್ಥಾಪನೆಯಾದ ಮೇಲೆ ಬಹಮನಿ ಸುಲ್ತಾನರು ವಿಜಯನಗರದ ಮೇಲೆ ಸದಾ ಕಾಳಗ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಮುಸ್ಲಿಂ ದಾಳಿಗಳನ್ನು ತಡೆಯುವುದಕ್ಕಾಗಿ ಬೇಡರನ್ನು ನೇಮಕ ಮಾಡಿಕೊಂಡರು. ಈ ಜವಾಬ್ದಾರಿಯನ್ನು ಬೇಡ ಸೈನಿಕರು ಸಮರ್ಥವಾಗಿ ನಿಭಾಯಿಸಿದರು. ಅವರು ಮುಸ್ಲಿಂ ಧಾಳಿಗಳು ಕೃಷ್ಣಾ ನದಿಯನ್ನು ದಾಟದಂತೆ ನೋಡಿಕೊಳ್ಳುವಲ್ಲಿ ಮುಖ್ಯ ಪಾತ್ರ ವಹಿಸಿದ್ದರು.

ವಿಜಯನಗರ ಆಡಳಿತದಲ್ಲಿ ಮೈಸೂರು ಸೀಮೆಯಲ್ಲಿ ಬೇಡರ ಜಾತಿಯ ಅಧಿಕಾರಿಗಳು ಬಹಳಷ್ಟು ಮಂದಿ ಇದ್ದರು. ಎಂಬುದಕ್ಕೆ ಶಿಲಾಶಾಸನಗಳ ಆಧಾರವಿದೆ. ವಿಜಯನಗರದ ಸ್ಥಳೀಯ ಆಡಳಿತದಲ್ಲಿ ಬೇಡರು ಅಧಿಕಾರಿಗಳಿದ್ದರು, ಸೈನ್ಯದಲ್ಲಿ ಹೆಚ್ಚಾಗಿ ಬೇಡರನ್ನೇ ನೇಮಿಸಿಕೊಳ್ಳುತ್ತಿದ್ದರು.[೧೧೮] ಸ್ಥಳೀಯವಾಗಿ ಅಧಿಕಾರವನ್ನು ಹಿಡಿದುಕೊಂಡಿದ್ದ ಬೇಡನಾಯಕರು ದಖನ್ ಪ್ರಸ್ಥಭೂಮಿಯಾದ್ಯಂತ ಹರಡಿಕೊಂಡಿರುವ ಬೆಟ್ಟ ಗುಡ್ಡಗಳ ಮೇಲೆ ದುರ್ಗಗಳನ್ನು ಕಟ್ಟಿಕೊಂಡು ನೆಲಸಿದ್ದರು. ಅವರು ಸಾಮಂತ ನಾಯಕರಾಗಿದ್ದು, ಸ್ಥಳೀಯ ಆಡಳಿತಗಾರರಾಗಿದ್ದರು. ಸದಾ ಕಾಲವೂ ಪರಸ್ಪರ ಅವರು ಕಚ್ಚಾಡುತ್ತಿದ್ದರು. ಕೆಲವೊಮ್ಮೆ ತಮಗಿಂತ ಬಲಿಷ್ಠರಾದ ಅರಸರೊಂದಿಗೆ ಯುದ್ಧ ಮಾಡುವಾಗ ಒಂದುಗೂಡುತ್ತಿದ್ದುದೂ ಉಂಟು. ಇವರ ಬೆಂಬಲವನ್ನು ಪಡೆದೇ ವಿಶಾಲವಾದ ಸಾಮ್ರಾಜ್ಯಗಳು ರೂಪುಗೊಳ್ಳಬೇಕಾಗಿತ್ತು.[೧೧೯]

ಪಾಳೆಯಗಾರಿಕೆ ಸ್ಥಾಪನೆಗೆ ಹಾಗೂ ಪಾಳೆಯಗಾರರಿಗೆ ವಿಜಯನಗರದ ಅರಸರು ಮುಕ್ತ ಅವಕಾಶ ಕಲ್ಪಿಸಿಕೊಟ್ಟಿದ್ದರಿಂದ ಅನೇಕ ಪಾಳೆಯಪಟ್ಟುಗಳು ಅಸ್ತಿತ್ವಕ್ಕೆ ಬಂದವು. ವಿಜಯನಗರ ಸಾಮ್ರಾಜ್ಯದಲ್ಲಿ ಒಂದಿಲ್ಲೊಂದು ಸೇವೆಯಲ್ಲಿದ್ದ ಬಹುತೇಕ ಮಂದಿ ಜನರೇ ಪಾಳೆಯ ಪಟ್ಟನ್ನು ಸ್ಥಾಪಿಸಿದವರಾಗಿದ್ದಾರೆ. ಸಂಗಮ ವಂಶದ ಪ್ರಾರಂಭಿಕ ದೊರೆಗಳಾದ ಹರಿಹರ–ಬುಕ್ಕರ ಸಮಕಾಲೀನ ಹರತಿಯ ತಿಪ್ಪರಾಜನು. ಇವನು ಹರಿಹರ ಬುಕ್ಕರ ಸೈನ್ಯದಲ್ಲಿ ಪ್ರಮುಖ ದಳಪತಿಯಾಗಿದ್ದನು. ನಿಡಗಲ್ಲು ದುರ್ಗಾಧಿಪತಿ ಚಿಕ್ಕಬೊಮ್ಮನಾಯಕನನ್ನು ತಿಪ್ಪರಾಜನು ದ್ವಂದ್ವ ಯುದ್ಧದಲ್ಲಿ ಶಿರಶ್ಛೇದನ ಮಾಡಿದನು. ಆದ್ದರಿಂದ ಆತನಿಗೆ ಹರಿಹರನು 'ಹೊಳಕಲ್ಲು ಬೊಮ್ಮನ ಶಿರಶ್ಸೇದನಂ' ಎಂಬ ಬಿರುದನ್ನು ನೀಡಿದನು. ಬುಕ್ಕರಾಯನು ಇವನು ಹೊಯ್ಸಳರ ಸ್ಥಳವಾದ ಸೊಸೆವೂರನ್ನು ಮುತ್ತಿ ಹಾಳುಗೆಡವಿದ್ದರಿಂದ ಬುಕ್ಕರಾಯನು ಇವನಿಗೆ 'ಹೊಯ್ಸಳ ದಳ ವಿಭಾಡಂ' ಎಂಬ ಬಿರುದನ್ನು ನೀಡಿದನು. ಹಿಂದೂಸ್ಥಾನದ ಅನೇಕ ಪ್ರಾಂತ್ಯಗಳಲ್ಲಿ ಕುಸ್ತಿ ಮಾಡಿ ವಿಜಯದುದುಂಭಿ ಮೊಳಗಿಸಿ ವಿಜಯನಗರಕ್ಕೆ ಬಂದಿದ್ದ ಮಲ್ಲಿಕ್ ಎಂಬ ಪೈಲ್ವಾನನು ವಿಜಯನಗರದ ಚಕ್ರವರ್ತಿಗಳ ಬಳಿಗೆ ಹೋಗಿ ತನ್ನ ಶಕ್ತಿ ಸಾಮರ್ಥ್ಯಗಳನ್ನು ಹೇಳಿಕೊಂಡ. ವಿಜಯನಗರದ ಪೈಲ್ವಾನರೊಂದಿಗೆ ಶಕ್ತಿ ಪ್ರದರ್ಶಿಸಲು ಅನುಮತಿ ಇಲ್ಲವಾದಲ್ಲಿ ರಾಜಧಾನಿಯಲ್ಲಿ ವಿಜಯಸ್ತಂಭವನ್ನು ಸ್ಥಾಪಿಸಲು ಅನುಮತಿ ಅಥವಾ ಳಳ ಗರಡಿಗಳ ಮೇಲಿರುವ ಕಲಶ ತೆಗೆಯಿಸಿ ಎಂಬ ದುರಹಂಕಾರದ ಮಾತುಗಳನ್ನಾಡಿದಾಗ ತಿಪ್ಪನಾಯಕನು ಮುಂದೆ ಬಂದು ರಾಜನ ಅನುಮತಿ ಪಡೆದು ತನ್ನ ಕೈಯಲ್ಲಿದ್ದ ಕತ್ತಿಯ ಮೊನೆಗೆ ಕಸ್ತೂರಿ ಹಚ್ಚಿಕೊಂಡು ಚಮತ್ಕೃತಿಯಿಂದ ಅವನ ತಲೆಯ ಮೇಲೆ ಹೊಡೆದು ಕೊಂದನು. ಚಕ್ರವರ್ತಿಯು ಇದರಿಂದ ಸಂತೋಷಗೊಂಡು ಅವನಿಗೆ ಭೂ ಚಕ್ರದ ಕೊಡೆ, ನೀಲಿ ಕೊಡೆ ಪಂಚ ವರ್ಣದ ವುಡಾಸು, ಧವಳ, ಶಂಖ, ಚಕ್ರ ನೀಡಿ ಕಸ್ತೂರಿ ಕೋಲಾಹಲ, ಕಟಾರಿ ಚೆಲ್ವರಗಂಡ

ಬಹದರ ಮಲಕ ಸಪ್ತಾಂಗ ಹರಣ ಎಂಬ ಬಿರುದು ದಯಪಾಲಿಸಿದರು.[೧೨] ಆ ಕಾಲದಲ್ಲಿ ನಡೆದ ಬಹಮನಿ ವಿಜಯನಗರ ಯುದ್ಧಗಳಲ್ಲಿ ಅಸಂಖ್ಯಾತವಾಗಿ ಮೇಚ್ಚರ ತಲೆಗಳನ್ನು ಕಡಿದುರುಳಿಸಿದುದರಿಂದ ತಿಪ್ಪರಾಜನಿಗೆ 'ಮೆಸನ ತಲೆ ಗುಂಡ ಗಂಡಂ' ಎಂಬ ಬಿರುದು ಲಭ್ಯವಾಯಿತು.

ಇಂತಹ ಅಪ್ರತಿಮ ವೀರನ ಸಾಹಸ ಹೋರಾಟವನ್ನು ಮೆಚ್ಚಿ ಬುಕ್ಕರಾಯನು ವೇದಾವತಿ ತೀರದ ಭೂ ಭಾಗವನ್ನೆಲ್ಲ ಆತನಿಗೆ ಜಹಗೀರಾಗಿ ಕೊಟ್ಟಿದ್ದನು. ನಡಮಿ ದೊಡ್ಡಿಯ ಪಾಳೆಯ ಕೈಫಿಯತ್ತು ತಿಳಿಸುವಂತೆ ಮೇಸ ತಿಮ್ಮನಾಯಕ ಎಂಬುವನು ಬುಕ್ಕರಾಯನ ಜೊತೆಗೂಡಿ ಬಹಮನಿ ಸುಲ್ತಾನನಾದ ಮಹಮ್ಮದನ ಧಾಳಿಯನ್ನು ಎದುರಿಸಿದನು. ಕಾಳಗದಲ್ಲಿ ಗಾಯಗೊಂಡರೂ ಅವನು ಶತ್ರುಗಳ ಸೇನಾನಿ ಸಹಿತ ಅನೇಕ ಸೈನಿಕರನ್ನು ಕೊಂದು ಶತೃಗಳ ತಲೆ ಬುರಡೆಗಳನ್ನು ರಾಯನಿಗೆ ಕಾಣಿಕೆಯೆಂದು ಸಲ್ಲಿಸಿದನು. ರಾಯನು ಕೂಡಲೇ ಅವುಗಳನ್ನು ಪತಾಕೆಯ ಕೋಲುಗಳಿಗೆ ಕಟ್ಟಿಸಿ ತೂಗು ಹಾಕಿಸಿದನು. ರಾಯನು ಬೆಲೆ ಬಾಳುವ ವಸ್ತುಗಳನ್ನು ತಿಮ್ಮನಾಯಕನಿಗೆ ಕೊಟ್ಟು ಸನ್ಮಾನಿಸಿ, ಕುಮ್ಮತ್ತನ್ನು ಜಹಗೀರಿಯಾಗಿ ಕೊಟ್ಟನು.[೧೩]

ಎರಡನೆಯ ಹರಿಹರನ ತಾಮ್ರ ಶಾಸನಗಳಲ್ಲಿ ಗುಮ್ಮನಾಯಕನಹಳ್ಳಿ ಕೆಲವು ಪಾಳೆಯಗಾರರ ಹೆಸರುಗಳು ಕಂಡುಬರುವುದರಿಂದ ಎರಡನೆಯ ಹರಿಹರನ ಕಾಲಕ್ಕಾಗಲೇ ಅಲ್ಲಿ ಪಾಳೆಯಗಾರಿಕೆ ಸ್ಥಾಪನೆಯಾಗಿತ್ತೆಂದು ಹೇಳಬಹುದು. ಗುಮ್ಮನಾಯಕನಹಳ್ಳಿ ಪಾಳೆಯಗಾರ ಕದಿರಪ್ಪನಾಯಕನು ವಿಜಯನಗರದ ಆಪ್ತ ಸೇವಕನಾಗಿದ್ದು, ೨ನೇ ಹರಿಹರನು ಪಾಳೆಯಗಾರರ ಮೇಲೆ ಮತ್ತು ನಾಯಕರುಗಳ ಮೇಲೆ ನಿಗದಿ ಮಾಡಿದ್ದ ಪೊಗದಿಯನ್ನು ವಸೂಲಿ ಮಾಡುವ ಹಿರಿಮೆಯನ್ನು ಪಡೆದಿದ್ದನು. ಪೆನೆಗೊಂಡ, ಅಮರಕೊಂಡ, ಎಲ್ಲುಂಟ್ಲು, ಗುರ್‍ರಂಕೊಂಡ, ಪಾತಪಲ್ಲಿ, ಕೊಂಕ್ಕುಟ್ಟ, ಮೊದಲಾದ ಪ್ರದೇಶದ ಪಾಳೆಯಗಾರರು ಕಪ್ಪ ಕಾಣಿಕೆಯನ್ನು ನಿಲ್ಲಿಸಿದ್ದರು. ಆಗ ವಿಜಯನಗರದ ವೀರ ದಂಡನಾಯಕ ಪೂಜಾಸಿಂಗನ ಜೊತೆಗೂಡಿ ಕದಿರಪ್ಪ ನಾಯಕನು ತನ್ನ ತಮ್ಮಂದಿರೊಂದಿಗೆ ಇವರ ಮೇಲೆ ಧಾಳಿ ಮಾಡಿ ವೈರಿಗಳನ್ನು ಸೋಲಿಸಿ ಕಪ್ಪವನ್ನು ಸಂಗ್ರಹ ಮಾಡಿದನೆಂದು ಶಾಸನಗಳು ತಿಳಿಸುತ್ತವೆ. ಕದಿರಪ್ಪ ನಾಯಕನ ತಮ್ಮಂದಿರನ್ನು ಈ ಯುದ್ಧದಲ್ಲಿ ಮೋಸದಿಂದ ಕೊಲ್ಲಲಾಯಿತು. ಕೋಪಗೊಂಡ ಕದಿರಪ್ಪ ನಾಯಕನು ಶತೃಗಳ ತಲೆಯನ್ನು ಕತ್ತರಿಸಿದನಲ್ಲದೆ, ವಿಜಯನಗರದ ದೊರೆಗಳಿಗೆ ಗುರುತಾಗಿ ಬೆರಳುಗಳನ್ನು ಕಳುಹಿಸಿದನೆಂದು ಹೇಳಲಾಗಿದೆ. ಇದರಿಂದ ಹರ್ಷಗೊಂಡ ೩ನೇ ಹರಿಹರ ಬಾಗೇಪಲ್ಲಿ, ಚೇಳೂರು ಮತ್ತು ಅದಕ್ಕೆ ಸೇರಿದ ೨೩ ಗ್ರಾಮಗಳನ್ನು ಬಳುವಳಿಯಾಗಿ ನೀಡಿ ಮತ್ತು ವಿಜಯನಗರದ ೧೬ ಮಂದಿ ಸೇನಾಪತಿಗಳಲ್ಲಿ ಪ್ರಮುಖ ಸೇನಾಪತಿಯಾಗಿ ಕದಿರಪ್ಪ ನಾಯಕನನ್ನು ನೇಮಿಸಿದರೆಂಬುದಾಗಿ ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ೨೦೦೦ ವರಾಹಗಳನ್ನು, ಬೆಳ್ಳಿ ಅಂಬಾರಿ, ನಗಾರಿ, ಕುದುರೆಗಳು, ಛತ್ರಿ, ಚಾಮರ ಪಟ್ಟದ ಕತ್ತಿ,

ಮುತ್ತಿನ ಕಂಠಿಯನ್ನು ನೀಡಿ ವಿಜಯದಶಮಿಯ ಹಬ್ಬದಂದು ಗೌರವಿಸಲಾಯಿತೆಂದು ಹೆಮ್ಮೆಯಿಂದ ಶಾಸನದಲ್ಲಿ ಹೇಳಿಕೊಳ್ಳಲಾಗಿದೆ.[೧೨]

ಬೇಡ ಮಾಂಡಲೀಕ ರಾಜರು ವಿರೂಪಾಕ್ಷ ವಸಂತೋತ್ಸವಕ್ಕೆ ಇಮ್ಮಡಿ ಹರಿಹರನ ಕಾಲದಲ್ಲಿ ಭಾಗವಹಿಸಿದ ಬಗ್ಗೆ ಅಹೋಬಲ ಪಂಡಿತನು ತನ್ನ ವಿರೂಪಾಕ್ಷ ವಸಂತೋತ್ಸವ ಚಂಪೂ ಎಂಬ ಕಾವ್ಯದಲ್ಲಿ ಮಾಹಿತಿ ನೀಡುತ್ತಾನೆ. ರಾಯದುರ್ಗದ ಅರಸನು ವಿಜಯನಗರರಾಯನ ಸೇನಾಪತಿಯಾಗಿದ್ದನೆಂದು ಹೇಳಿರುವನು. ಚಿತ್ರದುರ್ಗದ ನಾಯಕನ ಬಗ್ಗೆಯೂ ಹೇಳಿರುವನು. ಈ ಚಿತ್ರಕಲ್‌ದುರ್ಗದ ಅರಸ ಸಾಮಂತನು ಶಬರ ಭಟರುಗಳಿಂದ ಕೂಡಿದವನಾಗಿ ಹುಲಿ, ಆನೆ ಚರ್ಮಗಳನ್ನು ಧರಿಸಿಕೊಂಡು ನವಿಲುಗರಿಗಳ ಕುಂಚವನ್ನು ಹಿಡಿದಿರುವರ ಶಬರ ಭಟರ ಪರಿವಾರದಿಂದ ಸುತ್ತಗಟ್ಟಲ್ಪಟ್ಟವನಾಗಿ ಗಂಡಸ್ಥಲದಲ್ಲಿ ರೇಖೆಗಳಿಂದ ಅಲಂಕೃತನಾಗಿ ವಂಶದಿಂದ ಬೇಡರವಾಗಿದ್ದು ಪಂಪೇಶನ ರಥವನ್ನು ನೋಡಲು ಬಂದಿದ್ದನು ಎಂದು ಹೇಳಿದ್ದಾನೆ.[೧೩] ಈ ವರ್ಣನೆಯನ್ನು ಕುರಿತು ಪ್ರೊ. ಲಕ್ಷ್ಮಣ ತೆಲಗಾವಿಯವರು ಈ ರೀತಿಯಾಗಿ ಅಭಿಪ್ರಾಯಪಟ್ಟಿದ್ದಾರೆ. ಈ ವರ್ಣನೆ ತುಂಬಾ ಭೀಭತ್ಸವಾಗಿದೆ. ವನವಾಸಿಗಳಾದ ಸಾಮಾನ್ಯ ಬೇಡರಿಗೆ ಸಹಜವಾದ ವೇಷ ಭೂಷಣ ಮತ್ತು ಜೀವನ ಶೈಲಿಗಳೇ ವಿನಃ ಅರಸನಿಗೆ ಹೊಂದುವಂಥದ್ದು ಖಂಡಿತ ಅಲ್ಲ. ಮಧ್ಯಕಾಲೀನ ಶ್ರೇಣೀಕೃತ ಸಮಾಜ ಮತ್ತು ಆ ನೆಲೆಯ ಅತ್ಯಂತ ಹೀನಾಯವಾದ ಜಾತಿ ವ್ಯವಸ್ಥೆಯ ಪ್ರಭಾವ ಈ ಗ್ರಂಥ ಕರ್ತೃವಿನ ಮೇಲೂ ಆಗಿದ್ದಲ್ಲಿ ಆಶ್ಚರ್ಯವೇನೂ ಇಲ್ಲ.

ರತ್ನಗಿರಿಯ ನಾಯಕನಾದ ಇರಸಪ್ಪನಾಯಕನ ಮಗ ಹಿರೇಗೌಡ ಕ್ರಿ.ಶ. ೧೩೯೯–೧೪೧೮ರಲ್ಲಿ ಆನೆಗೊಂದಿಯಲ್ಲಿ ಕಂಡುಬಂದ ವಿಲ್ಲಂಚ್ಛರ ಹಾವಳಿಯನ್ನು ಎದುರಿಸುವಲ್ಲಿ ಸಹಾಯ ಮಾಡಿದನು. ಇದರಿಂದ ಸಂತೋಷಗೊಂಡ ಆನೆಗೊಂದಿ ಅರಸರು ಈತನಿಗೆ ಅನೇಕ ಬಿರುದು ಬಾವಲಿಗಳನ್ನಿತ್ತು. ಸನ್ಮಾನಿಸಿದ ವಿಷಯವನ್ನು ದಾಖಲೆ ಸ್ಪಷ್ಟಪಡಿಸುತ್ತದೆ.[೧೪] ಈ ಕಾಲದಲ್ಲಿಯೇ ಬೇಡರು ಕೆಲವು ಪ್ರದೇಶಗಳಲ್ಲಿ ರಾಜ್ಯವಾಳುತ್ತಿದ್ದುದು ಕಂಡುಬರುತ್ತದೆ. ಹೊಳೆಲ್ಕೆರೆ ತಾಲ್ಲೂಕಿನ ದುಮ್ಮಿಯಲ್ಲಿ ಗಂಗೇಯ ನಾಯಕರ ಮಗ ಶ್ರೀರಂಗನಾಥನಾಯಕ ಎಂಬ ಬೇಡನು ಕ್ರಿ.ಶ. ೧೪೦೦ರಲ್ಲಿಯೇ ರಾಜ್ಯವಾಳುತ್ತಿದ್ದನು ಎಂದು ತಿಳಿದು ಬರುತ್ತದೆ. ಕಾರುಗನಳ್ಳಿ ಪಾಳೆಯಗಾರನಾಗಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ಈ ಭಾಗದಲ್ಲಿ ಪ್ರಸಿದ್ಧಿಗೆ ಬಂದಿದ್ದ ಮಾರನಾಯಕನು ಬೇಡರವನು. ಮೈಸೂರು ಒಡೆಯರ ಮನೆತನದ ಸ್ಥಾಪಕರಾದ ಯದುರಾಯ ಮತ್ತು ಕೃಷ್ಣರಾಯರು ಈ ಮಾರನಾಯಕನನ್ನು ಸೋಲಿಸಿದರು. ಇವನ ವಂಶಜರು ಈ ಭಾಗದಲ್ಲಿ ಪರಿವಾರದವರೆಂದು ಕರೆಸಿಕೊಳ್ಳುತ್ತಾರೆ.[೧೫]

ತೆಲುಗು ಬೇಡ ವಂಶದ ಅಣ್ಣದೇವನು ಕೃಷ್ಣ ಗೋದಾವರಿ ನದಿಗಳ ಮಧ್ಯದ ಪ್ರದೇಶದಲ್ಲಿದ್ದ ಒಬ್ಬ ಪ್ರಬಲ ನಾಯಕನಾಗಿದ್ದನು. ಈ ಅಣ್ಣದೇವನೊಡನೆ ರಾಜಮಂಡ್ರಿಯ ರೆಡ್ಡಿ ನಾಯಕ

ಕಾಟಯ್ಯವೇಮನು ದೇವರಾಯನ ಬೆಂಬಲದೊಂದಿಗೆ ಹೋರಾಟಕ್ಕೆ ಇಳಿದನು. ಕಾಟಯ್ಯವೇಮನು ಈ ಹೋರಾಟದಲ್ಲಿ ಕೊಲ್ಲಲ್ಪಟ್ಟನು. ಬಹಮನಿ ಸುಲ್ತಾನರು ಅಣ್ಣದೇವನಿಗೆ ಸಹಾಯ ಮಾಡಿದ್ದರು. ಕ್ರಿ.ಶ. ೧೪೩೮ರಲ್ಲಿ ಗುಲಬರ್ಗಾದ ಸುಲ್ತಾನನಿಂದ ಹರಿಹರನ ಕಗ್ಗೊಲೆಯಾಗುತ್ತಿದ್ದುದನ್ನು ಚಿತ್ರದುರ್ಗ ಕಾಮಗೇತಿ ನಾಯಕನು ತಪ್ಪಿಸಿದನು. ಎಂ.ಎಸ್.ಪುಟ್ಟಣ್ಣನವರ ಪ್ರಕಾರ 'ಸಬಗಡಿ ಓಬಣ್ಣನಾಯಕ, ಜಡವಿನಾಯಕ ಮತ್ತು ಬುಳ್ಳನಾಯಕ ಇವರು ವಾಲ್ಮೀಕಿ ಗೋತ್ರಕ್ಕೆ ಸೇರಿದವರು, ದೆಹಲಿಯಲ್ಲಿ ಸೇವಕರಾಗಿದ್ದವರು. ಉತ್ತರದ ಜಡಕಲ್ ದುರ್ಗದಿಂದ ಬಂದವರು. ತಮ್ಮೊಂದಿಗೆ ಕುಲದೈವ ಅಹೋಬಲ ನರಸಿಂಹ ಸ್ವಾಮಿಯನ್ನು ಇತರ ವಸ್ತುಗಳನ್ನು ತೆಗೆದುಕೊಂಡು ಈ ಮೂವರು ಸಹೋದರರು ದಕ್ಷಿಣಕ್ಕೆ ಬಂದು ನೆಲೆಸಿದರು. ದಾರಿಯಲ್ಲಿ ವಿಜಯನಗರದಲ್ಲಿ ಸ್ವಲ್ಪ ಕಾಲ ತಂಗಿದ್ದು, ಹಂಪಿಯಲ್ಲಿ ಭಗವಾನ ವಿರೂಪಾಕ್ಷನ ದರ್ಶನ ಮಾಡಿದರು.[೧೬] ಅವರು ಹಂಪಿಗೆ ಬಂದು ವಿಜಯನಗರದ ಅರಸರ ಕುಲದೈವ ವಿರೂಪಾಕ್ಷನಿಗೆ ಪೂಜೆ ಸಲ್ಲಿಸಿದುದಕ್ಕೂ ಚಕ್ರವರ್ತಿಗಳ ಜೊತೆ ಸಾಮಂತರು ಇರಿಸಿಕೊಳ್ಳುತ್ತಿದ್ದ ಸಂಬಂಧಕ್ಕೂ ಅನೋನ್ಯತೆಯಿದೆ. ವಿಜಯನಗರದ ಅರಸನು ಕರೆಸಿದ್ದರಿಂದ ಅವರು ರಾಜಧಾನಿಗೆ ಬಂದಿರಬಹುದು ಎಂದು ಊಹಿಸಬಹುದಾಗಿದೆ. ಅವರ ನಡುವಳಿಕೆಯಿಂದ ಮೆಚ್ಚಿದ ಅರಸನು ಅವರನ್ನು ನಾಯಕರನ್ನಾಗಿ ನೇಮಿಸಿ ಹೊಳಲ್ಕೆರೆಗೆ ಕಳುಹಿಸಿರಬಹುದು. ತನಗೆ ನಿಷ್ಠರಾಗಿ ಉಳಿಯುತ್ತಾರೆ. ವಿಧೇಯ ಸೇವಕರೂ, ರಾಜ್ಯದ ಪ್ರತಿನಿಧಿಗಳೂ ಆಗಿ ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಾರೆ ಎಂದು ಚಕ್ರವರ್ತಿ ಭಾವಿಸಿರಬಹುದಾಗಿದೆ.

ಸಬಗಡಿ ಓಬಣ್ಣನಾಯಕ ವಿಜಯನಗರದ ಗಡಿ ಪ್ರದೇಶದಲ್ಲಿ ಸೇನಾ ನಾಯಕನಾಗಿದ್ದನು. ಈತನು ವಿಜಯನಗರದ ಏಳು ಸಾವಿರ ಬೇಡರ ಕಗ್ಗೊಲೆ ಪಡೆಗೆ ನಾಯಕನಾಗಿದ್ದನು. ಕ್ರಿ.ಶ.೧೪೭೫ರ ಸುಮಾರಿಗೆ ತಿರುಪತಿ ಕಡೆಯಿಂದ ಚಿತ್ರದುರ್ಗ ಪ್ರದೇಶಕ್ಕೆ ಬಂದ ತಿಮ್ಮಣ್ಣನಾಯಕನನ್ನು ಕ್ರಿ.ಶ.೧೫೦೮ರಲ್ಲಿ ವಿಜಯನಗರದ ಅರಸರು ಹೊಳಲ್ಕೆಯ ನಾಯಕನನ್ನಾಗಿ ನೇಮಿಸಿದರು. ಅನಂತರದಲ್ಲಿ ಹಿರಿಯೂರಿಗೆ ಕೊನೆಗೆ ಚಿತ್ರದುರ್ಗಕ್ಕೆ ಅವನನ್ನು ನಾಯಕನನ್ನಾಗಿ ನಿಯೋಜಿಸಿದನು. ಈ ಸಮಯದಲ್ಲಿ ಅವನು ಚಿತ್ರದುರ್ಗದಲ್ಲಿ ಕೋಟೆ ಕೊತ್ತಲಗಳನ್ನು ಕಟ್ಟಿಸಿದನು. ಈ ಕಾರಣಕ್ಕಾಗಿ ಸಾಳುವ ನರಸಿಂಹನ ನೇತೃತ್ವದಲ್ಲಿ ಹರಪನಹಳ್ಳಿ, ನಿಡಗಲ್ಲು ಮತ್ತು ಬಸವಾಪಟ್ಟಣಗಳ ಪಾಳೆಯಗಾರರು ಒಂದಾಗಿ ಸೇರಿ ತಿಮ್ಮಣ್ಣನಾಯಕನ ಮೇಲೆ ದಾಳಿ ಮಾಡಿದರು. ಈ ಸಮಯದಲ್ಲಿ ಮತ್ತಿ ತಿಮ್ಮಣ್ಣನಾಯಕನು ವೀರಾವೇಶದಿಂದ ಹೋರಾಡಿದನು. ಅತ್ಯಂತ ಕಷ್ಟದ ಪರಿಸ್ಥಿತಿಯಲ್ಲೂ ವೈರಿ ಸೇನಾನಿ ಸಾಳುವ ನರಸಿಂಗರಾಯನ ಅಶ್ವವನ್ನು ಅಪಹರಿಸಿದನು. ಈ ದಾಳಿಯು ಇನ್ನೂ ಇರುವಾಗಲೇ ಸಾಳುವ ನರಸಿಂಗರಾಯನು ಅರಸರ ಸೂಚನೆಯಂತೆ ಕಲಬುರ್ಗಿಯ ಕೋಟೆಯ ಮುತ್ತಿಗೆಗೆ ಹೋಗಬೇಕಾಯಿತು. ಆರು ತಿಂಗಳಾದರೂ ಆ ಕೋಟೆಯನ್ನು ಗೆಲ್ಲಲು ಸಾಧ್ಯವಾಗದಿದ್ದಾಗ ಅರಸರ ಕರೆಯಂತೆ ಮತ್ತಿ

ತಿಮ್ಮಣ್ಣ ನಾಯಕನು ಅಲ್ಲಿಗೆ ಹೋಗಿ ಅತ್ಯಲ್ಪ ಕಾಲದಲ್ಲಿಯೇ ಆ ಕೋಟೆಯನ್ನು ಗೆದ್ದುಕೊಟ್ಟು ಅರಸರ ಮೆಚ್ಚುಗೆಗೆ ಪಾತ್ರನಾದನು. ಅವನ ಸಾಹಸವನ್ನು ಮೆಚ್ಚಿ ಸಾಳುವ ನರಸಿಂಹರಾಯನು ವಿಜಯನಗರಕ್ಕೆ ಕರೆಸಿ ಮತ್ತಿತಿಮ್ಮಣ್ಣ ನಾಯಕನ ಸಾಹಸಗಳನ್ನು ಕೊಂಡಾಡಿ ಸನ್ಮಾನಿಸಿದನು. ಅವನಿಗೆ "ಹಗಲ ಕಗ್ಗೊಲೆ ಮಾನ್ಯ" ಎಂಬ ಬಿರುದನ್ನು ಕೆಲವು ವಿಶೇಷ ಕಾಣಿಕೆ, ಗೌರವಗಳನ್ನು ನೀಡಿದನು. ಆದರೆ ಕೊನೆಗೆ ರಾಜ್ಯ ವಿಸ್ತಾರದ ಆಕಾಂಕ್ಷೆ ವಿಜಯನಗರದ ಅರಸರ ಮತ್ತು ತಿಮ್ಮಣ್ಣನಾಯಕನ ನಡುವಣ ವಿರಸಕ್ಕೆ ಕಾರಣವಾಯಿತು. ಅವಿಧೇಯತೆಯ ಅಪರಾಧಕ್ಕಾಗಿ ತಿಮ್ಮಣ್ಣ ನಾಯಕನನ್ನು ಬಂಧಿಸಿ ಸೆರೆಮನೆಯಲ್ಲಿಡಲಾಯಿತು.[೧೭] ಅಧೀನ ಅರಸರು ವಿಜಯನಗರದ ಅರಸರಿಗೆ ಅವಿಧೇಯತೆಯನ್ನು ತೋರುವಂತಿರಲಿಲ್ಲ. ಒಂದು ವೇಳೆ ಅವಿಧೇಯತೆಯನ್ನು ತೋರಿದ್ದೇ ಆದಲ್ಲಿ ಚಿತ್ರದುರ್ಗದ ಪಾಳೆಯಗಾರರ ಆರಂಭದ ದೊರೆ ಮತ್ತಿತಿಮ್ಮಣ್ಣ ನಾಯಕ ಹಾಗೂ ಯಲಹಂಕನಾಡ ಪ್ರಭುವಿಗೆ ಆದಂತಹ ಸೆರೆಮನೆ ವಾಸದ ಶಿಕ್ಷೆ ಆಗುತ್ತಿತ್ತು.

ಸಂಗಮರ ಕಾಲಕ್ಕೆ ಯುದ್ಧದ ಕೇಂದ್ರ ಬಿಂದುವಾಗಿದ್ದ ಮುದಗಲ್ಲು ಕೋಟೆಯ ಅಧಿಕಾರಿಯಾಗಿ ವರದಣ್ಣನಾಯಕ ಎಂಬುವನು ಸೇವೆ ಸಲ್ಲಿಸುತ್ತಿದ್ದನು. ೨ನೇ ದೇವರಾಯನು ಕುಮಾರರಾಮ ಮತ್ತು ಅವನ ಬೇಡ ಪಡೆಯ ಸಾಹಸಗಳನ್ನು ತಿಳಿದುಕೊಂಡಿದ್ದನು. ಹೀಗಾಗಿ ಬೇಡರನ್ನು ವಿಜಯನಗರದ ಸೈನ್ಯದಲ್ಲಿ ಮತ್ತು ರಾಜ್ಯದ ಆಯಕಟ್ಟಿನ ಸ್ಥಳಗಳಲ್ಲಿ ನೇಮಕ ಮಾಡಿದನು. ಪರಸಪ್ಪ ಉಡಿಚ ನಾಯಕನು ಕ್ರಿಶ. ೧೪೩೭ರಲ್ಲಿ ಇಮ್ಮಡಿ ಪ್ರೌಢದೇವರಾಯನ ಸಹಾಯದಿಂದ ಕನಕಗಿರಿಯಲ್ಲಿ ಪಾಳೆಯಗಾರಿಕೆಯನ್ನು ಆರಂಭಿಸಿದನು. ಕನಕಗಿರಿ ಸಂಸ್ಥಾನವು ವಿಜಯನಗರ ಅರಸರ ರಕ್ಷಣೆಯಲ್ಲಿ ಮೊದಲ ಸ್ಥಾನ ಪಡೆಯಿತು. ಇಮ್ಮಡಿ ಪ್ರೌಢದೇವರಾಯನ ಕಾಲದಲ್ಲಿ ಕೆಲವು ಬಲಿಷ್ಠ ನಾಯಕರು ಸಂಸ್ಥಾನಗಳನ್ನು ಪ್ರಾರಂಭಿಸಿದರು.

ಸಾಳುವ ನರಸಿಂಹನು ಅಧಿಕಾರಕ್ಕೆ ಬಂದಾಗ ಅವನು ಅಧಿಕಾರಕ್ಕೆ ಬರಲು ಸಹಾಯ ಮಾಡಿದ ಅವನ ಬೆಂಬಲಿಗ ಸೇನಾ ನಾಯಕರು ಮತ್ತು ಸಾಮಂತರು ಅವನ ಅಧೀನರಾಗಿರಲು ಒಪ್ಪಲಿಲ್ಲ. ಆದ್ದರಿಂದ ಅವನು ತನ್ನ ಮೊದಲಿನ ಬೆಂಬಲಿಗರು ಮತ್ತು ಸ್ನೇಹಿತರ ವಿರುದ್ಧ ಹೋರಾಡಬೇಕಾಯಿತು. ಸಾಳ್ವ ನರಸಿಂಹನು ನಾಯಕ ಜನಾಂಗದವರನ್ನು ಅಂಗರಕ್ಷಕರನ್ನಾಗಿ ಮಾಡಿಕೊಂಡನು. ಕಾಡಿನಲ್ಲಿದ್ದ ಬೇಡರು, ಶಬರರು, ಕಾಡುಸಂಚರು, ಬಿಲ್ಲರು, ಕಿರಾತರು, ವಾಲ್ಮೀಕರು, ಇವರುಗಳನ್ನು ಪಾಳೆಯ ಪಟ್ಟುಗಳಿಗೆ ಸೇರಿಸಿಕೊಂಡು ಯುದ್ಧದಲ್ಲಿ ಯೋಧರನ್ನಾಗಿ ಮಾಡಿಕೊಂಡನು.[೧೮]

ಜರಿಮಲೆ ಪಾಳೆಯಗಾರರ ಮೊದಲ ಅರಸನಾದ ಪಾಪಣ್ಣನಾಯಕ, ವೀರನರಸಿಂಹನ (ಕ್ರಿಶ೧೪೮೯ ರಿಂದ ೧೫೦೫) ಸೇವಕನಾಗಿ ವಿಜಯನಗರದ ಅರಸರ ಸೇವೆಯನ್ನು ಮಾಡಿಕೊಂಡಿದ್ದನು.

ವೀರನರಸಿಂಹನ ಪ್ರೀತಿ ಪಾತ್ರನಾಗಿದ್ದರಿಂದ ಅವನು ವಡ್ಡು, ದರೋಜಿ ಗ್ರಾಮಗಳನ್ನು ಬಳುವಳಿಯಾಗಿ ಕೊಟ್ಟನು. ಪಾಪಣ್ಣನಾಯಕನ ಮಗನಾದ ತನ್ನ ಚೆನ್ನಪ್ಪನಾಯಕನಿಗೆ ತುಳವ ವೀರನರಸಿಂಹನು ಜರಿಮಲೆ, ಗುಡೇಕೋಟೆ, ಭೂಪಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ಕೊಟ್ಟನು. ಪೆನ್ನಪ್ಪ ನಾಯಕನು ಕಣಕುಪ್ಪ ಕೂಡಲಗಿ, ನಾರಾಯಣ ದೇವರಕೆರೆ, ಡಣಾಯಕನ ಕೆರೆ, ಸೊಂಡೂರು ಪ್ರದೇಶವನ್ನು ತನ್ನ ವಶದಲ್ಲಿಟ್ಟುಕೊಂಡಿದ್ದನು. ಸಾಳ್ವನರಸಿಂಹನು ಶ್ರೀರಂಗಪಟ್ಟಣ, ಬೆಂಗಳೂರನ್ನು ಗೆದ್ದ ಸಮಯದಲ್ಲಿ ಪೆನುಗೊಂಡದಲ್ಲಿ ಅವನು ಸೋಲಿಸಿದ ಮತ್ತೊಬ್ಬ ಪ್ರಬಲ ನಾಯಕ ಪಿಕ್ಕಿಳ್ಳು ಎಂಬ ಬಲಿಷ್ಠ ಶಬರನಾಯಕ, ಪಿಕ್ಕಿಳ್ಳು ಯುದ್ಧದಲ್ಲಿ ಜೀವ ಕಳೆದುಕೊಂಡರೆ, ಉಳಿದವರು ಯುದ್ಧದಲ್ಲಿ ಸೋತು ಪಲಾಯನ ಮಾಡಿದರು.[೧೨೯] ಕ್ರಿ.ಶ.೧೪೩೬ರಲ್ಲಿ ಪರಸಪ್ಪ ಉಡಿಚನಾಯಕನು ಕನಕಗಿರಿಯಲ್ಲಿ ತನ್ನ ಆಳ್ವಿಕೆಯನ್ನು ಸ್ಥಾಪಿಸುತ್ತಾನೆ. ವಿಜಯನಗರದ ಪ್ರೌಢದೇವರಾಯನು ಈತನಿಗೆ ೧೨ ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು. ಕ್ರಿ.ಶ. ೧೪೮೫ರಲ್ಲಿ ಸಾಳ್ವ ನರಸಿಂಹನು ಕನಕಗಿರಿಯ ಉಡಿಚನಾಯಕನಿಗೆ ಗೋಡೆನಹಾಳು ಮತ್ತು ಖ್ಯಾಡ ಎಂಬ ಗ್ರಾಮಗಳನ್ನು ಬಿಟ್ಟುಕೊಟ್ಟು ಕನಕಗಿರಿಯ ಅಭಿವೃದ್ಧಿಗೆ ಕಾರಣನಾದನು. ವಿಜಯನಗರದ ಅರಸರು ಇವರಿಗೆ ಮೊದಲ ಪ್ರಾಶಸ್ತ್ಯವನ್ನು ನೀಡುತ್ತಿದ್ದನು.

ವಿಜಯನಗರದ ಅರಸರಲ್ಲಿ ತುಂಬಾ ಪ್ರಸಿದ್ಧಿ ಪಡೆದ ದೊರೆ ಶ್ರೀ ಕೃಷ್ಣದೇವರಾಯ ವಿಜಯನಗರದ ಸ್ಥಾಪನೆಯ ಉದ್ದೇಶ ಇವನ ಕಾಲದಲ್ಲಿ ನೇರವೇರಿತು. ಇವನ ಕಾಲದ ಆಳ್ವಿಕೆಯನ್ನು ವಿದೇಶಿ ಪ್ರವಾಸಿಗರೂ ಹೊಗಳಿರುವರು. ಶ್ರೀಕೃಷ್ಣದೇವರಾಯನ ತಾಯಿ ನಾಗಲಾದೇವಿ : ಚಾರಿತ್ರಿಕ ಹಿನ್ನೋಟ ಎಂಬ ಲೇಖನದಲ್ಲಿ ಡಾ. ವಿರೂಪಾಕ್ಷಿ ಪೂಜಾರಹಳ್ಳಿಯವರು ಶ್ರೀ ಕೃಷ್ಣದೇವರಾಯನ ತಾಯಿ ನಾಗಲಾದೇವಿ ಬೇಡ ಜನಾಂಗಕ್ಕೆ ಸೇರಿದ್ದಳು. ಆಂಧ್ರದಲ್ಲಿ ಕೃಷ್ಣದೇವರಾಯನನ್ನು (ಆಂಧ್ರಬೋಜ, ಬೋಯ), ಬೇಡನೆಂದು ಕರೆದಿದ್ದಾರೆ. ಇಂದಿಗೂ ಆಂಧ್ರದವರು ಶ್ರೀಕೃಷ್ಣದೇವರಾಯ ಮತ್ತು ಆತನ ಪರಿವಾರವನ್ನು ಬೇಡರೆಂದು ಪರಿಗಣಿಸಿರುವುದು ಕಂಡುಬರುತ್ತದೆ. ನಾಗಲಾದೇವಿ ನರಸನಾಯಕನ ಹೆಂಡತಿ. ನರಸನಾಯಕ ಬೇಡನಾಗಿದ್ದು, ತಳವಾರ ಈಶ್ವರನಾಯಕನ ಮಗ. ಈ ಹಿನ್ನೆಲೆಗಳಿಂದ ನಾಗಲಾದೇವಿಯು ಬೇಡವಂಶಕ್ಕೆ ಸೇರಿದವಳೆಂದು ಉಲ್ಲೇಖಿಸಿದ್ದಾರೆ.[೧೩೦] ತನ್ನ ತಂದೆ, ತಾಯಿಯ ಬಗ್ಗೆ ಶ್ರೀಕೃಷ್ಣದೇವರಾಯನು ಅಪಾರವಾದ ಪ್ರೀತಿಯನ್ನು ಹೊಂದಿದ್ದು ಕೆಲ ಘಟನೆಗಳಿಂದ ತಿಳಿದುಬರುತ್ತದೆ. ಶ್ರೀಕೃಷ್ಣದೇವರಾಯನು ತನ್ನ ತಂದೆ ಮತ್ತು ತಾಯಿಯ ಹೆಸರಿನಲ್ಲಿ ದೇವಾಲಯಗಳಿಗೆ ಅನೇಕ ಗ್ರಾಮಗಳನ್ನು ದತ್ತಿಯಾಗಿ ಬಿಟ್ಟುಕೊಟ್ಟ ವಿಷಯ ಶಾಸನಗಳಲ್ಲಿ ಕಂಡುಬರುತ್ತದೆ. ಅನೇಕ ಗ್ರಾಮಗಳು ನಾಗಲಾದೇವಿ ಹೆಸರಿನಲ್ಲಿ ಸ್ಥಾಪಿತವಾದವು. ಬಳ್ಳಾರಿ ಜಿಲ್ಲೆ ಮತ್ತು ಹಂಪೆ ಪರಿಸರದಲ್ಲಿ ಅನೇಕ ಹಳ್ಳಿಗಳಿಗೆ ನಾಗಲಾಪುರಗಳೆಂಬ ಹೆಸರುಗಳಿವೆ. ನಾಗಲಾದೇವಿ ಚೆಂಚು ಅಥವಾ ಬೇಡ

ಬುಡಕಟ್ಟಿನ ಪಾಮುಡ್ಲಾರು ಗೋತ್ರಕ್ಕೆ ಸೇರಿರಬೇಕೆಂಬುದಕ್ಕೆ ಆಧಾರಗಳಿವೆ. ಈ ಪಾಮುಡ್ಲಾರು ಗೋತ್ರದವರು ಹಂಪಿ ಹಾಗೂ ಬಳ್ಳಾರಿ ಜಿಲ್ಲೆಯಲ್ಲಿ ವ್ಯಾಪಕವಾಗಿ ನೆಲಸಿರುತ್ತಾರೆ. ಕರ್ನಾಟಕದ ಕೆಲವು ಪಾಳೆಯಗಾರರು ಈ ವಂಶಕ್ಕೆ ಸೇರಿದ್ದಾರೆ.[೧೩೧]

ಕೃಷ್ಣದೇವರಾಯನು ರಾಜನಾದ ಮೇಲೆ ವಿಜಯನಗರಕ್ಕಾಗಿ ದುಡಿದ ಹಿಂದಿನವರನ್ನು ಕಡೆಗಣಿಸಲಿಲ್ಲ. ಅವರವರ ಸ್ಥಾನಮಾನಕ್ಕೆ ತಕ್ಕಂತೆ ಗೌರವ ಕಾಣಿಕೆ ನೀಡಿ ಅವರಿಗೆ ಸೂಕ್ಷ್ಮ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟನು. ಕುಮಾರರಾಮನ ಕೈಫಿಯತ್ತಿನ ಪ್ರಕಾರ ಕಂಪಲಿಯ ಕುಮಾರರಾಮನ ವಂಶಜನಾದ ಗಡಿಯಾಂಕ ಭೀಮನು ಕುಮಾರರಾಮನ ಆಪ್ತ ಸ್ನೇಹಿತನಾಗಿದ್ದು, ಈತನು ಗುಡೇಕೋಟೆಯ ಸ್ಥಾಪಕ ಇಲ್ಲವೇ ಆ ಪ್ರದೇಶಕ್ಕೆ ನಾಯಕನಾಗಿರಬೇಕು. ಈ ವಂಶದ ಬೊಮ್ಮಂತರಾಜರಿಗೆ ಕೃಷ್ಣದೇವರಾಯನು ಕುಡಿತಿನಿ, ಸಂಡೂರು, ಜರಿಮಲೆ, ವಡ್ಡು, ದರೋಜಿ, ಗುಡೇಕೋಟೆ, ಬಾಣರಾವಿ, ಉಜ್ಜಯಿನಿ ಮೊದಲಾದ ಏಳು ಸೀಮೆಗಳನ್ನು ಜಾಗೀರು ಕೊಟ್ಟು ನಾಡ ದಳವಾರಿಕೆ, ಕಾವಲಿ ಸ್ವಾಸ್ತಿ ಸುದ್ಧ ಮಾಡಿಕೊಟ್ಟು ಕಳುಹಿಸಿದನು.[೧೩೨]

ಬೇಡ ಜನಾಂಗದ ಗುಣಲಕ್ಷಣಗಳನ್ನು ಕೃಷ್ಣದೇವರಾಯನು ಚೆನ್ನಾಗಿ ಅರಿತಿದ್ದನು. ತನ್ನ ಆಮುಕ್ತಮಾಲ್ಯದ ಕೃತಿಯಲ್ಲಿ ಬೇಡರಿಂದ ಸುರಕ್ಷಿತವಾಗಿರುವ, ಹಾಗೂ ಸಹಾಯ ಪಡೆದುಕೊಳ್ಳುವ ಬಗ್ಗೆ ತಿಳಿಸಿರುವನು. ಕಾಡುಗಳಲ್ಲಿ ರಾಜ್ಯಕ್ಕೆ ಪೀಡೆಯನ್ನುಂಟು ಮಾಡುವ ಕಿರಾತರೊಂದಿಗೆ ಈ ವಿದೇಶಿ ಶೂರರು ಹೊಡೆದಾಡಿದರೂ ರಾಜನಿಗೆ ತೊಂದರೆಯಾಗದು. ಚಿಕ್ಕ ಕಾರಣದಿಂದಲೇ ಕಾಡಿನ ನಾಯಕರು ದುಷ್ಟರಾಗಿಬಿಡುತ್ತಾರೆ. ಆದುದರಿಂದ ರಾಜನಾದವನು ಅವರನ್ನು ಹೇಗಾದರೂ ವಶೀಕರಣ ಮಾಡಿಕೊಳ್ಳಬೇಕು. ಅವರಲ್ಲಿಯೇ ಸ್ನೇಹ ಅಥವಾ ದ್ವೇಷ ಹುಟ್ಟಬಹುದು. ಆದುದರಿಂದ ಅವನು ಅಂತವರೊಡನೆ ಜಾಗರೂಕತೆಯಿಂದ ವರ್ತಿಸಬೇಕು.[೧೩೩] ಕಾಡುಗಳ ದುರ್ಗಮ ಪ್ರದೇಶದಲ್ಲಿ ಕಾಡಿನ ಜನರಾದ ಬೇಡರು, ಚೆಂಚರು ಮುಂತಾದವರಲ್ಲಿ ಅನೇಕ ದುರ್ಗುಣಗಳಿರುತ್ತವೆ. ಮಣ್ಣಿನ ಗೋಡೆಯನ್ನು ಎಷ್ಟು ತೊಳೆದರೂ ಮಣ್ಣಿಲ್ಲದಂತೆ ಮಾಡುವುದು ಶಕ್ಯವಿಲ್ಲವೋ ಹಾಗೆ ಅವರನ್ನು ಎಷ್ಟು ಸಲ ಶಿಕ್ಷಿಸಿದರೂ ಅವರ ದುರ್ಗುಣ ಹೋಗುವುದಿಲ್ಲ. ಆದುದರಿಂದ ಅವರಿಗೆ ವಸ್ತು, ವಾಹನಾದಿಗಳನ್ನಿತ್ತು ಅವರೊಂದಿಗೆ ಗೆಳೆತನ ಬೆಳೆಸುವುದು ಉತ್ತಮ. ಹಾಗೆ ಮಾಡಿದಾಗ ವೈರಿಗಳೊಂದಿಗೆ ಹೋರಾಡಲು ಅವರೂ ಸಹಾಯಕರಾಗಿ ಧೈರ್ಯದಿಂದ ಸೆಣಸಾಡುವರು. ಜೊತೆಗೆ ಶತ್ರುಗಳಾದ ನೆರೆ ರಾಜ್ಯದವರನ್ನು ಬೇಡರಿಂದ ಕೊಳ್ಳೆ ಹೊಡಿಸಲೂಬಹುದು.[೧೩೪]

ಕೃಷ್ಣದೇವರಾಯನು ಕಮ್ಮಟದುರ್ಗದ ವೀರ ಕುಮಾರರಾಮನ ಸಾಹಸ ಮತ್ತು ವ್ಯಕ್ತಿತ್ವವನ್ನು ತಿಳಿದುಕೊಂಡಿದ್ದನು. ಕುಮಾರರಾಮನ ನೆನಪಿಗಾಗಿ ಬೈಚಪ್ಪ ನಾಯಕನು ಕಟ್ಟಿಸಿದ್ದ ಕುಮಾರರಾಮನ

ದೇವಸ್ಥಾನವನ್ನು ಶ್ರೀ ಕೃಷ್ಣದೇವರಾಯನು ದುರಸ್ತಿ ಮಾಡಿಸಿದನೆಂದು ತಿಳಿದುಬರುತ್ತದೆ.[೧೩೫] ಕೃಷ್ಣದೇವರಾಯನು ಶೂದ್ರವರ್ಗದ ಮೇಲೆ ತುಂಬಾ ಗೌರವ ಹೊಂದಿರುವುದನ್ನು ಆಮುಕ್ತಮಾಲ್ಯದ ಕೃತಿಯು ತಿಳಿಸುತ್ತದೆ. ಅಮರನಾಯಕ ಮನೆತನಗಳು ವಿಜಯನಗರ ಅರಸರ ಮನ್ನಣೆಯಿಂದ ಅಸ್ತಿತ್ವಕ್ಕೆ ಬಂದವು. ಎಲ್ಲೆಲ್ಲಿ ಕೋಟೆಗಳನ್ನು ಕಟ್ಟಲು ಅನುಕೂಲಗಳಿದ್ದವೋ ಅಲ್ಲಲ್ಲಿ ಇಂತಹ ಮನೆತನಗಳು ಕಾಣಿಸಿಕೊಂಡವು. ಸುಮಾರು ೧೫ನೇ ಶತಮಾನದ ಕೊನೆಯ ದಶಕದಿಂದ ಆರಂಭವಾಗುವ ಇಂತಹ ಮನೆತನಗಳು ಕೃಷ್ಣದೇವರಾಯ ಮತ್ತು ರಾಮರಾಯರ ಕಾಲಕ್ಕೆ ವ್ಯಾಪಕವಾಗಿ ಬೆಳೆದುಬಂದವು.[೧೩೬]

ಕೃಷ್ಣದೇವರಾಯನು ವಿಸ್ತರಿಸಲ್ಪಟ್ಟ ಪ್ರದೇಶಕ್ಕೆ ತನ್ನವರೇ ಆದ ನಾಯಕ ಜನಾಂಗವನ್ನು ಅಂದರೆ ದೊರೆಗಳು, ನಾಯಕರು, ಪಾಳೆಯಗಾರರು ಇವರನ್ನು ತನ್ನ ರಾಜ್ಯದ ಸಂರಕ್ಷಣೆಗಾಗಿ ನೇಮಿಸಿದನು. ರಾಜ್ಯದ ಅಂಚಿನಲ್ಲಿ, ಮಧ್ಯದಲ್ಲೂ ಸುಮಾರು ಎಪ್ಪತ್ತೇಳು ಜನ ಪಾಳೆಯಗಾರರು ಜವಾಬ್ದಾರಿ ಹೊತ್ತಿದ್ದರು. ಇವರು ಸಹ ಸ್ವತಂತ್ರರಾಗಿ ಬಾಳುವಂತೆ ಅವಕಾಶ ಕಲ್ಪಿಸಿಕೊಟ್ಟನು.

ಈ ಜನಾಂಗವು ವಿಜಯನಗರ ಸಾಮ್ರಾಜ್ಯದ ಅಧಾರ ಸ್ತಂಭದಂತೆ ನಿಂತು ಅದರ ರಕ್ಷಣೆಯೇ ತಮ್ಮ ಆದ್ಯ ಕರ್ತವ್ಯವೆಂದು ತಿಳಿದಿದ್ದರಿಂದ ವಿಜಯನಗರ ಕರ್ನಾಟಕ ಸಿಂಹಾಸನಾದಿಪತ್ಯದ ಸಾಮ್ರಾಜ್ಯವು ಬೆಳಗತೊಡಗಿತು.[೧೩೭] ಬೇಡ ಜನಾಂಗದ ರಾಮಪ್ಪನು ಕೃಷ್ಣದೇವರಾಯನ ಕಾಲದಲ್ಲಿ ಅಮರನಾಯಕನಾಗಿದ್ದನು. ಬೇಡರ ಪಡೆಗೆ ಕೃಷ್ಣದೇವರಾಯನ ಸೈನ್ಯದಲ್ಲಿ ವಿಶೇಷ ಸ್ಥಾನಮಾನಗಳನ್ನು ನೀಡಲಾಗುತ್ತಿತ್ತು. ಈ ಬೇಡರ ಪಡೆಯ ಬಗ್ಗೆ ಕೃಷ್ಣದೇವರಾಯನ ದಿನಚರಿಯಲ್ಲಿ ಉಲ್ಲೇಖವಿದೆ. ಅಲ್ಲದೇ ಶಾಸನಗಳು ಬೇಡಪಡೆ ಇದ್ದುದನ್ನು ಸಮರ್ಥಿಸುತ್ತವೆ.[೧೩೮] ದುರ್ಗಮ ಪ್ರದೇಶವನ್ನು ಮುತ್ತುವಾಗ ಇಲ್ಲವೇ ಮುಸ್ಲಿಮರನ್ನು ಎದುರಿಸಲು ಬೇಡರನ್ನು ಬಳಸಿಕೊಳ್ಳಲಾಗುತ್ತಿತ್ತು. ಕೃಷ್ಣದೇವರಾಯನ ದಿನಚರಿಯಲ್ಲಿ ಕಾರುಣ್ಯದ ಮೇಲೆ ದಂಡೆತ್ತುವುದಾಗಿ ಬೇಡ ನಾಯಕರನ್ನು ಕರೆಯಿಸಿ ೧೮ ಕಂಪಣದವರಿಗೂ ಅರಮನೆಯಲ್ಲಿ ಊಟಕ್ಕೆಯಿಕ್ಕಿ ಹರಿವಾಣದ ಕುಮಾರರು ಕೂಡಿ ಕಾರ್ಯಮುಖಕ್ಕೆ ಕದಲಿ ಬರುತ್ತಾಯಿದ್ದೇವೆ ಎಂದು ಹೇಳಲಾಗಿದೆ.[೧೩೯] ಕೃಷ್ಣದೇವರಾಯನ ಕಳಿಂಗ ದಂಡಯಾತ್ರೆಯ ಸಂದರ್ಭದಲ್ಲಿ ಅದರಲ್ಲೂ ಕೃಷ್ಣದೇವರಾಯನಿಗೆ ಪ್ರಬಲ ಸ್ಪರ್ಧೆ ನೀಡಿದ ಕೊಂಡವೀಡು, ಕೊಂಡಪಲ್ಲಿ, ಬೆಲ್ಲಮಕೊಂಡ ಮುತ್ತಿಗೆಗಳಲ್ಲಿ ೧೮ ಮಂದಿ ಬೇಡರು ಕಂಪಣದಿಂದ ಬಂದಿದ್ದರು. ಅಲ್ಲದೆ ಗಜಪತಿಯು ದಂಡೆತ್ತಿ ಬರಬಹುದೆಂದು ಶಂಕಿಸಿ ಕೃಷ್ಣದೇವರಾಯನು ನೇಮಿಸಿದ ೧೬ ಮಂದಿ ಷೋಡಶ ಪಾತ್ರದಲ್ಲಿ ಬೇಡರಿದ್ದರು.[೧೪೦]

ಕೃಷ್ಣದೇವರಾಯನು ದಿನದ ಮಧ್ಯದಲ್ಲಿ ಅಂಗಮರ್ಧನ ಮಾಡುವ ಮಲ್ಲರನ್ನೂ, ಬೇಟೆಗಾರರನ್ನೂ ಮಾತನಾಡಿಸುತ್ತಿದ್ದನು.[೧೪೧] ದೊರೆಗಳು ಬೇಟೆಗಾರರ ಬಗ್ಗೆ ಮತ್ತು ಮಲ್ಲರ ಬಗ್ಗೆ ಹೆಚ್ಚಿನ ಕಾಳಜಿಯನ್ನು

ತೋರುತ್ತಿದ್ದರು. ಕೃಷ್ಣದೇವರಾಯನು ಗೆದ್ದ ಕೋಟೆಗಳಲ್ಲಿ ರಾಯಚೂರು ಕೋಟೆಯೂ ಒಂದು. ಎರಡು ಸುತ್ತಿನ ಈ ಕೋಟೆಯ ಒಳಸುತ್ತನ್ನು ವಿಠಲಪ್ಪ ನಾಯಕನು ಕಟ್ಟಿಸಿದನು. ಈ ರಾಯಚೂರು ಜಿಲ್ಲೆಯ ದೇವದುರ್ಗವು ಬೇಡರಿಗಾಗಿ ಹೆಸರಾಗಿತ್ತು.[೧೪೨]

ಹಾಲವಾಡಿ ನಾಯಕ ವಂಶದ ಮೂಲ ಪುರುಷನಾದ ಯೆರಿಮಾದನಾಯಕ ಹಾಗಲವಾಡಿ ಸಂಸ್ಥಾನವನ್ನು ಸ್ಥಾಪನೆ ಮಾಡುವುದಕ್ಕೆ ಮೊದಲು ತುಂಮಳ ಸಂಸ್ಥಾನದಲ್ಲಿ ವಾಸಿಸುತ್ತಿದ್ದನು. ಅನಂತರ ಕರ್ನಾಟಕದ ತುಮಕೂರು ಜಿಲ್ಲೆಯಲ್ಲಿನ ಚಿಕ್ಕನಾಯಕನ ಹಳ್ಳಿ ಪ್ರದೇಶಕ್ಕೆ ಅವನು ಬಂದನು ಎಂಬ ಹೇಳಿಕೆ ನಮಗೆ ದಾಖಲೆಗಳಲ್ಲಿ ಸಿಕ್ಕುತ್ತದೆ.[೧೪೩] ವಿಜಯನಗರದ ಅರಸರ ಅಧೀನನಾಗಿ ಯೆರಿಮಾದಿನಾಯಕನು ಹಾಗಲವಾಡಿಯಲ್ಲಿ ಸಂಸ್ಥಾನವನ್ನು ಸ್ಥಾಪಿಸಿಕೊಂಡು ಕ್ರಿ.ಶ. ೧೪೯೯–೧೫೯೯ರವರೆಗೆ ಅಧಿಕಾರ ನಡೆಸಿದನು.

ನಾಯಕನಹಟ್ಟಿ ಪಾಳೆಯಗಾರರ ಮೂಲ ಪುರುಷ ಕಾಟೇಮಲ್ಲಪ್ಪನಾಯಕ ಶ್ರೀಶೈಲ ಪರ್ವತದಲ್ಲಿ ತೋರಿದ ಭೀಕರ ಬರಗಾಲದಿಂದ ತನ್ನ ಹನ್ನೆರೆಡು ಪೆಟ್ಟಿಗೆ ದೇವರು, ದನಕರು ಐದನೂರು ಜನ ಮ್ಯಾಸನಾಯಕರ ಸಮೇತ ೬ ಜನ ತಮ್ಮಂದಿರೊಂದಿಗೆ ದನಕರುಗಳಿಗೆ ಹುಲ್ಲು, ನೀರು ಹುಡುಕುತ್ತಾ ವಿಜಯನಗರದ ಕಡೆಗೆ ವಲಸೆ ಬರುತ್ತಾನೆ.[೧೪೪] ವಿಜಯನಗರದ ಅರಸರಿಂದ ಮಾನ ಸನ್ಮಾನ ಪಡೆದ ಕಾಟೇ ಮಲ್ಲಪ್ಪನಾಯಕ ಕುಂದುರ್ಪೆ ಗುಡ್ಡದ ಬಳಿ ಹಟ್ಟಿ ಹಾಕಿಕೊಂಡು ನೆಲಸಿದರೆ, ಜೊತೆಗಿದ್ದ ಇವನ ತಮ್ಮಂದಿರು ಕುಂದುರ್ಪೆ ಸೇರಿದಂತೆ, ಸುತ್ತಲ ಸೀಮೆಗಳಾದ ರತ್ನಗಿರಿ, ಮಿಡಿಗೇಶಿ, ಹೊಸಕೋಟೆ, ನಿಡಗಲ್ಲು ಮತ್ತು ಶಂಕರಗಲ್ಲುಗಳಲ್ಲಿ ಚದುರಿದಂತೆ ನೆಲಸುತ್ತಾರೆ.[೧೪೫] ಇದು ಕ್ರಿ.ಶ. ೧೫೩೦ರ ನಂತರವೆಂದು ಕಾಣುತ್ತದೆ.

ಹರಪನಹಳ್ಳಿಯ ಪಾಳೆಯಗಾರಿಕೆಯನ್ನು ಸ್ಥಾಪಿಸಿದ ದಾದಯ್ಯನಾಯಕ ಮತ್ತು ಚಿತ್ರದುರ್ಗದ ಪಾಳೆಯಗಾರ ನಾಯಕ ಮತ್ತಿತಿಮ್ಮಣ್ಣ ಇಬ್ಬರೂ ಒಂದೇ ಬಾರಿಗೆ ವಿಜಯನಗರದ ಅರಸರ ಸೆರೆಯಲ್ಲಿ ಬಂಧಿತರಾಗಿ ಬಿಡುಗಡೆ ಹೊಂದಿರುವುದು ತಿಳಿದುಬರುತ್ತದೆ.[೧೪೬] ದಾದಯ್ಯನಾಯಕನು ಕ್ರಿ.ಶ. ೧೫೫೮ರಲ್ಲಿ ಹರಪನಹಳ್ಳಿ ಪಾಳೆಯಗಾರಿಕೆಯನ್ನು ಸ್ಥಾಪಿಸಿದನು.[೧೪೭]

ವಿಜಯನಗರವು ಕೃಷ್ಣದೇವರಾಯನ ನಂತರ ಪತನದತ್ತ ಸಾಗಿತು. ವಿಜಯನಗರದ ಅರಸರನ್ನು ಸೆರೆಮನೆಯಲ್ಲಿಟ್ಟು ಅಳಿಯ ರಾಮರಾಯ ಸರ್ವಾಧಿಕಾರಿಯಾದನು. ವಿದೇಶಿ ಪ್ರವಾಸಿ ನ್ಯೂನಿಜ್ ಅಚ್ಯುತರಾಯನ ಕಾಲಕ್ಕೆ ಸಾಮ್ರಾಜ್ಯಕ್ಕೆ ಭೇಟಿ ನೀಡಿ ಹಲವಾರು ನಾಯಕರುಗಳ ಬಗ್ಗೆ ಮಾಹಿತಿಯನ್ನು ನೀಡುವನು. ಕಾರೋಮೆಂಡಲ್ ನಾಗಪಟ್ಟಣ, ತಾಂಜೂರು, ದೇವಿಪಟ್ಟಣ ಕಾಯುವ ಅಧಿಪತಿ ಮಂತ್ರಿ ಸಾಳುವ ನಾಯಕ. ಅಜಪರ್ಕ ತಿಮ್ಮಪ್ಪ, ರಾಯಚೂರು ಪ್ರದೇಶದ ಅಧಿಪತಿ ಗೋಪಿನಾಯಕ,

ಬಂಕಾಪುರದ ಅಧಿಪತಿ ಲೇಪನಾಯಕ, ಚಿನ್ನಪ್ಪ ನಾಯಕ, ರಾಜನ ಸೇನಾಧಿಕಾರಿ ಕೃಷ್ಣಪ್ಪನಾಯಕ, ಚಿತ್ರದುರ್ಗ ಜಿಲ್ಲೆಯ ಬೂದಿಹಾಳ್‌ಗೆ ಅಧಿಪತಿಯಾದ ಬಜಪ್ಪನಾಯಕ, ಅವತಿ ನಾಡಿಗೆ ಅಧಿಪತಿಯಾದ ಮಲ್ಲಪ್ಪನಾಯಕ ಗುತ್ತಿ ಪ್ರಾಂತ್ಯಕ್ಕೆ ಅಧಿಪತಿಯಾಗಿ ಭೋಜಪ್ಪನಾಯಕ ಹೀಗೆ ಇನ್ನೂರಕ್ಕಿಂತಲೂ ಹೆಚ್ಚು ನಾಯಕರುಗಳು, ಪಾಳೆಯಗಾರರೂ ವಿಜಯನಗರದಲ್ಲಿದ್ದರೆಂದು ಹೇಳಿರುವೆನು.[೧೪೮] ಪೆದ್ದನಾಯಕ ಮತ್ತು ಅಜನಾಯಕರ ಎಂಬುವರು ಅಡುಗೆ ಮನೆಯಲ್ಲಿ ಉಸ್ತುವಾರಿ ನೋಡಿಕೊಳ್ಳುವ ನಾಲ್ಕು ಜನರ ಮೇಲೆ ಉಸ್ತುವಾರಿಯನ್ನು ಹೊಂದಿದ್ದರು.[೧೪೯]

ಪಾಳೆಯಗಾರರು ವಿಜಯನಗರದ ಅರಸರು ದುರ್ಬಲವಾದಂತೆ ದಿನದಿಂದ ದಿನಕ್ಕೆ ಪ್ರಬಲಗೊಳ್ಳುತ್ತಲೇ ಬಂದರು. ಅಚ್ಯುತರಾಯನು ಯಾವುದೇ ಪಾಳೆಯಗಾರರನ್ನು ಎದುರು ಹಾಕಿಕೊಳ್ಳುವಷ್ಟು ಬಲಿಷ್ಠನೂ ಆಗಿರಲಿಲ್ಲ. ಯಾವ ಯುದ್ಧವನ್ನು ಪಾಳೆಯಗಾರರ ಸಹಾಯವಿಲ್ಲದೇ ಮಾಡುವಂತಿರಲಿಲ್ಲ. ಸಾಮ್ರಾಜ್ಯದ ವಿರುದ್ಧ ಬಂಡಾಯವೆದ್ದ ಪಾಳೆಯಗಾರರನ್ನು ಎದುರಿಸಲು ಪಾಳೆಯಗಾರರೇ ಬೇಕಾಗಿತ್ತು. ಅಚ್ಯುತರಾಯನ ವಿರುದ್ಧ ಬಂಡೆದ್ದವರನ್ನು ಅಡಗಿಸುವಲ್ಲಿ ಜರಿಮಲೆಯ ಪೆನ್ನಪ್ಪನಾಯಕನು ಯಶಸ್ವಿಯಾದನು. ಇದರಿಂದ ಸಂತೃಪ್ತನಾದ ರಾಯನು ಜರಿಮಲೆ ಪ್ರದೇಶವನ್ನು ಅವನಿಗೆ ಬಳುವಳಿಯಾಗಿ ನೀಡಿದನು.[೧೫೦]

ರಾಮರಾಯನ ನೀತಿಯನ್ನು ಅರಿತ ಷಾಹಿ ಸುಲ್ತಾನರು ರಕ್ತ ಸಂಬಂಧದ ಮೂಲಕ ಒಗ್ಗೂಡಿ ವಿಜಯನಗರದ ಮೇಲೆ ಜಿಹಾದ್ ಘೋಷಿಸಿದರು. ರಾಮರಾಯನು ಮುಸ್ಲಿಮರ ವಿರುದ್ಧ ಸಂಗ್ರಹಿಸಿದ ಸೈನ್ಯವು ಸ್ಥಳೀಯ ನಾಯಕರ ನಿಯಂತ್ರಣದಲ್ಲಿತ್ತು. ಪ್ರತಿಯೊಂದು ದಳವು ರಾಜನು ನೇಮಿಸಿದ್ದ ತಾತ್ಪೂರ್ತಿಕ ಪ್ರಾಂತೀಯ ಮಾಂಡಲೀಕರು ಕೂಡಿಸಿದ ದಂಡುಗಳ ಭಾಗವಾಗಿತ್ತು.[೧೫೧] ತುರುಕರನ್ನು ಎದುರಿಸಲು ರಾಮರಾಯನು ತನ್ನ ತಮ್ಮಂದಿರೊಂದಿಗೆ ಒಂದು ಲಕ್ಷ ಕುದುರೆ ಬಲ ಮತ್ತು ಪದಾತಿಗಳೊಂದಿಗೆ ಬಹಮನಿ ಸುಲ್ತಾನರನ್ನು ಎದುರಿಸಲು ಕೃಷ್ಣಾನದಿ ತೀರಕ್ಕೆ ಹೋದನು. ಕ್ರಿ.ಶ. ೧೫೬೫ರ ಜನವರಿ ೨೨ರಂದು ನಡೆದ ತಾಳಿಕೋಟೆ ಯುದ್ಧದಲ್ಲಿ ರಾಮರಾಯನು ಕೊಲ್ಲಲ್ಪಟ್ಟನು. ರಾಮರಾಯನ ತಮ್ಮನಾದ ತಿರುಮಲನು ರಣರಂಗದಿಂದ ಪಲಾಯನ ಮಾಡಿ ವಿಜಯನಗರಕ್ಕೆ ಬಂದು ಸದಾಶಿವರಾಯನನ್ನು ಕರೆದುಕೊಂಡು ಸಂಪತ್ತನ್ನೆಲ್ಲಾ ಆನೆಗಳ ಮೇಲೆ ಏರಿಕೊಂಡು ಪರಿವಾರಗಳ ಸಮೇತವಾಗಿ ಪೆನುಗೊಂಡ ದುರ್ಗಕ್ಕೆ ಓಡಿ ಹೋದನು. ವಿಜಯನಗರ ಸಾಮ್ರಾಜ್ಯವು ರಾಜನಿಲ್ಲದ ರಾಜಧಾನಿಯಾಯಿತು. ಗೆದ್ದ ಮುಸ್ಲಿಂ ಸೈನ್ಯವು, ವಿಜಯನಗರದ ಸೈನ್ಯವನ್ನು ಅಟ್ಟಿಸಿಕೊಂಡು ಬಂದಿತು. ಯುದ್ಧ ಸ್ಥಳವಾದ ಅಲಿಕಂದಿಯಿಂದ ವಿಜಯನಗರದವರೆಗೆ ಬಿದ್ದಿದ್ದ ಹೆಣಗಳನ್ನು ಎಣಿಸಲು ಹನ್ನೆರಡು ದಿನಗಳು ಬೇಕಾದವು.[೧೫೨] ಇಪ್ಪತ್ತು ಮೈಲು ಪ್ರದೇಶವನ್ನೆಲ್ಲಾ ಹೆಣಮಯ ಮಾಡಿ ನೆಲವೆಲ್ಲ ರಕ್ತಮಯ ಮಾಡಿದರು. ಮುಸ್ಲಿಮರ ಬರ್ಬತೆಗೆ ಹೆದರಿದ ವಿಜಯನಗರದ

ಜನತೆ ಗುಹೆಗಳಲ್ಲಿ, ಕಣಜಗಳಲ್ಲಿ ಅವಿತುಕೊಂಡರು. ಕೆಲವರು ಸಮೀಪದ ಗುಡ್ಡ, ಕಾಡುಗಳಲ್ಲಿ ಅವಿತುಕೊಂಡರು. ಸುಲ್ತಾನರ ಸೈನ್ಯ ಆರು ತಿಂಗಳ ಕಾಲ ವಿಜಯನಗರದಲ್ಲಿತ್ತು. ಅಪಾರವಾದ ಹಣ, ನಗ, ಮುತ್ತು, ರತ್ನಗಳು ಮತ್ತು ದಾಸ–ದಾಸಿಯರು ಮುಸ್ಲಿಮರಿಗೆ ಸೆರೆ ಸಿಕ್ಕರು. ವಿಜಯನಗರವನ್ನು ಕೊಳ್ಳೆ ಹೊಡೆದ ಪ್ರತಿಯೊಬ್ಬ ಮುಸ್ಲಿಂ ಸೇನಾನಿ ಶ್ರೀಮಂತರಾದರು. ಮುಸ್ಲಿಂ ಸೈನ್ಯದಿಂದ ತಪ್ಪಿಸಿಕೊಂಡು, ಅವಿತುಕೊಂಡ ಅನೇಕರು ಬದುಕುವುದು ಕಷ್ಟವಾಯಿತು. ಈ ಅಸಹಾಯಕ ಪರಿಸ್ಥಿತಿಯಲ್ಲಿ ತಮ್ಮ ಉಳಿವಿಗಾಗಿ ಇಂತಹವರು ಕಳ್ಳಕಾರರ, ಕೊಳ್ಳೆಗಾರರ ಜೊತೆಗೆ ಕೈ ಜೋಡಿಸಬೇಕಾಯಿತು. ದುಸ್ಥಿತಿಯಿಂದ ಅಸಹಾಯಕವಾಗಿದ್ದ ವಿಜಯನಗರದ ಮೇಲೆ ವನಚರರಾದ ಬೇಡರು ಆರು ಸಾರಿ ದಾಳಿಗೈದು ಅಲ್ಲಿನ ಜನರು ಬಿಟ್ಟು ಹೋದ ಎಲ್ಲಾ ಸಂಪತ್ತನ್ನು ದೋಚಿಕೊಂಡು ಹೋದ ಸಂಗತಿಯನ್ನು, ಕುಟೋ ಎಂಬ ವಿದೇಶಿ ಪ್ರವಾಸಿಗನು ದಾಖಲಿಸುತ್ತಾನೆ.[೧೫೩] ಆದರೆ ಚನ್ನಬಸವ ಪುರಾಣದಲ್ಲಿ ವಿರುಪಾಕ್ಷ ಪಂಡಿತನು ವಿಜಯನಗರದಲ್ಲಿ ಆರು ತಿಂಗಳ ಕಾಲ ಬೇಡರ ಆಳ್ವಿಕೆ ಇತ್ತೆಂದು ಹೇಳುತ್ತಾನೆ. ತಿರುಮಲರಾಯನ ವಿರುದ್ಧ ಅಲಿ ಆದಿಲ್ ಷಾಹಿಯು ಪೆನುಗೊಂಡದ ಮೇಲೆ ದಾಳಿ ಮಾಡಿದಾಗ ಅಲಿಗೆ ಈ ಬೇಡರು ಸಹಾಯ ಮಾಡಿದರು.[೧೫೪] ಕ್ರಿ.ಶ. ೧೫೬೫ರ ತಾಳಿಕೋಟೆ ಯುದ್ಧದಲ್ಲಿ ಬೇಡ ಸೈನಿಕರು ಸಾಕಷ್ಟು ಸಂಖ್ಯೆಯಲ್ಲಿ ಹತರಾದರು. ವಿದೇಶಿ ಪ್ರವಾಸಿ ಫಿರಾಸ್ತನು ಸುಮಾರು ೪೦ ಸಾವಿರ ಬೇಡರ ಪಡೆ ಹತವಾಯಿತೆಂದು ಹೇಳಿರುವೆನು.[೧೫೫] ಈ ಯುದ್ಧದಲ್ಲಿ ೭೭ ವಂಶದ ನಾಯಕರೂ ಮತ್ತು ಅವರ ಅನುಯಾಯಿಗಳು ಕಷ್ಟಕ್ಕೀಡಾದರೆಂದು ಹೇಳಲಾಗಿದೆ.[೧೫೬]

ಸಂತೆಬೆನ್ನೂರು ಹನುಮಪ್ಪನಾಯಕನು ವಿಜಯನಗರದ ಸೇನಾನಿಯಾಗಿ ಕ್ರಿಶ ೧೫೬೫ರ ಯುದ್ಧದಲ್ಲಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿದನು. ಇವನ ಕಾರ್ಯ ಸಾಹಸವನ್ನು ಮೆಚ್ಚಿ ಪುರಸ್ಕಾರ ರೂಪವಾಗಿ ಉಚ್ಚ ಸ್ಥಾನಮಾನವನ್ನು ನೀಡಿ ಸಂತೇಬೆನ್ನೂರನ್ನು ನೀಡಲಾಯಿತು.[೧೫೭] ಗುಮ್ಮನಾಯಕನಹಳ್ಳಿ ವೀರದಾಸಪ್ಪ ವಿಜಯನಗರದ ಪರವಾಗಿ ಹದಿನಾಲ್ಕು ಸೈನ್ಯವನ್ನು ತೆಗೆದುಕೊಂಡು ಹೋಗಿದ್ದನು ಎಂದು ಸ್ಥಳ ಪುರಾಣಗಳೂ ಹೇಳುತ್ತವೆ.[೧೫೮] ಕ್ರಿಶ ೧೫೬೫ರ ತಾಳಿಕೋಟೆ ಯುದ್ದದಲ್ಲಿ ನಾಯಕನಹಟ್ಟಿ ಮಲ್ಲಪ್ಪನಾಯಕನು ಆನೆಗೊಂದಿರಾಯರಿಗೆ ಸಹಾಯ ಮಾಡಿದ್ದರಿಂದ ಇವರಿಗೆ ರಾಯರು ಉಂಬಳೀ ಶಾಸನವನ್ನು ಹಾಕಿಸಿ ಕೊಡುತ್ತಾರೆ.[೧೫೯] ನಾಯಕನಹಟ್ಟಿ ಬಖೈರಿನಲ್ಲಿ ಕ್ರಿಶ ೧೫೬೫ರ ತಾಳಿಕೋಟೆ ಯುದ್ಧದ ಪ್ರಸ್ತಾಪವಿದ್ದು ಈ ಯುದ್ಧದಲ್ಲಿ ಬಂಗಾರ ಮಲ್ಲಪ್ಪ ನಾಯಕನೆಂಬ ಮಗನೂ ಮತ್ತು ಮೊಮ್ಮಗನೂ ಇರುವುದು ವಿವಾದಕ್ಕೆ ಎಡೆ ಮಾಡಿದಂತಾಗಿದೆ.[೧೬೦]

ಕ್ರಿಶ ೧೫೬೫ರ ತಾಳಿಕೋಟೆ ಯುದ್ಧದಲ್ಲಿ ರಾಮರಾಯನು ಕೊಲ್ಲಲ್ಪಟ್ಟನು. ರಾಮರಾಯನ ತಮ್ಮನಾದ ತಿರುಮಲನು ಬಂಧನದಲ್ಲಿದ್ದ ವಿಜಯನಗರದ ಅರಸ ಸದಾಶಿವರಾಯನನ್ನೂ ಅವನ ಕುಟುಂಬವನ್ನೂ ಪೆನುಗೊಂಡೆಗೆ ಕರೆದೊಯ್ದು ಮತ್ತೆ ಬಂಧನದಲ್ಲಿಟ್ಟನು. ಪೆನುಗೊಂಡದಿಂದಲೇ

ತಿರುಮಲನು ವಿಜಯನಗರವನ್ನು ನಿಯಂತ್ರಿಸಲಿಕ್ಕೆ ಪ್ರಯತ್ನಿಸಿದನು. ಆದರೆ ಅದು ಸಫಲವಾಗಲಿಲ್ಲ. ತಿಂಗಳುಗಟ್ಟಲೇ ವಿಜಯನಗರವನ್ನು ಶತ್ರು ಸೈನ್ಯವು ಲೂಟಿ ಮಾಡಿತು. ಅರಸನನ್ನು ರಾಜಧಾನಿಯ ಕಡೆಗೆ ಬರದಂತೆ ತಡೆಯಿತು. ಕ್ರಿ.ಶ.೧೫೬೬ರಲ್ಲಿ ತಿರುಮಲನು ತಾನೇ ರಾಜನೆಂದು ಘೋಷಿಸಿಕೊಂಡನು. ಸದಾಶಿವರಾಯನು ಕ್ರಿ.ಶ. ೧೫೭೦ರಲ್ಲಿ ಮರಣ ಹೊಂದಿದನು. ಇಂತಹ ಸಂದರ್ಭದಲ್ಲೂ ಸಾಮಂತರು ವಿಜಯನಗರದ ಚಕ್ರವರ್ತಿಗೆ ನಿಷ್ಠೆಯನ್ನು ವ್ಯಕ್ತಪಡಿಸಿದರು.

ಕ್ರಿಶ ೧೫೮೯ರ ಹೊತ್ತಿಗೆ ವಿಜಯನಗರದ ನಾಲ್ಕನೇ ವಂಶವು ಪತನಗೊಂಡ ಮೇಲೆ ಬಲಿಷ್ಠರಾಗಿದ್ದ ಕೆಲವು ಆಧೀನ ರಾಜರು ಕ್ರಮೇಣ ಅತಿಕ್ರಮಿಸಿ ಸಾಮ್ರಾಜ್ಯದ ಕಷ್ಟ ಕಾಲವನ್ನು ಉಪಯೋಗಿಸಿಕೊಂಡು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು.[೧೬] ಕ್ರಿಶ ೧೬೧೪ರಲ್ಲಿ ಎರಡನೇ ವೆಂಕಟಪತಿಯ ಅಣ್ಣನ ಮಗನಾದ ಎರಡನೇ ಶ್ರೀರಂಗನು ಅಧಿಕಾರಕ್ಕೆ ಬಂದನು. ಆದರೆ ಎರಡನೇ ವೆಂಕಟಪತಿಯ ಪತ್ನಿ ಬಾಯಮ್ಮಳ ಸಹೋದರನಾದ ಗೊಬೂರಿ ಜಗರಾಯನು ಈತನ ಅಧಿಕಾರವನ್ನು ವಿರೋಧಿಸಿ, ವೆಂಕಟಪತಿಯ ಮಗನೆಂದು ಹೇಳಲಾದ ಚಿಕ್ಕರಾಯನ ಪರವಹಿಸಿ ಶ್ರೀರಂಗನನ್ನು ಆತನ ಮಕ್ಕಳನ್ನು ಸೆರೆ ಹಿಡಿದನು. ಆದರೆ ವಿಜಯನಗರದ ಅರಸರ ಪರವಾಗಿ ಸ್ವಾಮಿ ನಿಷ್ಠ ಎಚ್ಚಮನಾಯಕನು ಅತ್ಯಂತ ಸಾಹಸ ಮತ್ತು ಜಾಣತನದಿಂದ ಹೋರಾಡಿ ಶ್ರೀರಂಗನ ಮಗನಾದ ರಾಮದೇವನನ್ನು ಸೆರೆಯಿಂದ ಪಾರುಮಾಡಿ, ಜಗರಾಯನ ವಿರುದ್ಧ ಹೋರಾಟಕ್ಕಿಳಿದನು. ತಂಜಾವೂರಿನ ರಘುನಾಥ ನಾಯಕ ಮತ್ತಿತರ ಪ್ರಾಂತಾಧಿಕಾರಿಗಳ ನೇರವಿನಿಂದ ಕ್ರಿ,ಶ ೧೬೧೬-೧೭ರಲ್ಲಿ ನಡೆದ ತೋಪೂರು ಕದನದಲ್ಲಿ ಜಗರಾಯನನ್ನು ಸೋಲಿಸಿ. ಕೊಂದನು. ರಾಮದೇವನನ್ನು ವಿಜಯನಗರದ ಅರಸನನ್ನಾಗಿಸಿದನು. ಈ ಬೆಳವಣಿಗೆಯನ್ನು ಸಹಿಸಿದ ಎಚ್ಚಮನಾಯಕನ ಶತ್ರುಗಳು ರಾಜನ ವಿರುದ್ಧ ದಂಗೆ ಎದ್ದರು. ಎಚ್ಚಮನಾಯಕನು ಚಾಣಾಕ್ಷತನದಿಂದ ಯತಿರಾಜನ ಮಗಳನ್ನು ರಾಮದೇವನೊಂದಿಗೆ ವಿವಾಹ ಮಾಡಿಸಿದನು. ಅಂತಃಕಲಹಗಳಿಂದ ತುಂಬಿದ ರಾಜ್ಯದಲ್ಲಿ ಇದರಿಂದ ಸ್ವಲ್ಪ ಶಾಂತಿಯುತ ವಾತಾವರಣ ಸೃಷ್ಟಿಯಾದಂತಾಯಿತು. ಎಚ್ಚಮನಾಯಕನ ಸಾಧನೆಯನ್ನು ವಿಜಯನಗರದ ಇತಿಹಾಸದಲ್ಲಿ ಕೊಂಡಾಡಲಾಗಿದೆ. ಎಚ್ಚಮನಾಯಕನಿಗೆ ವಿಜಯನಗರದ ಮೇಲಿದ್ದ ಪ್ರೀತಿ-ಅಭಿಮಾನ, ವಿಜಯನಗರವನ್ನು ರಕ್ಷಿಸಲು ಆತನು ಕೈಗೊಂಡ ನಿವಾರಣೋಪಾಯಗಳು ಕನ್ನಡಿಗರ ಮನಸ್ಸಿನಲ್ಲಿ ಅಜರಾಮರವಾಗಿವೆ.

ವಿಜಯನಗರ ಕಾಲದಲ್ಲಿ ಹಾಗೂ ವಿಜಯನಗರೋತ್ತರ ಕಾಲದಲ್ಲಿ ಸ್ಥಾಪನೆಗೊಂಡ ಮತ್ತು ಸ್ವತಂತ್ರ್ಯಗೊಂಡ ಪಾಳೆಯ ಪಟ್ಟುಗಳಲ್ಲಿ ಬೇಡ ಜನಾಂಗದ ಪಾಳೆಯ ಪಟ್ಟುಗಳೇ ಅಧಿಕವಾಗಿದ್ದವು. ಕರ್ನಾಟಕ ಮತ್ತು ಕರ್ನಾಟಕದ ಹೊರಗಿನ ಸ್ಥಳಗಳಲ್ಲಿ ಬೇಡ ಜನಾಂಗದ ನಾಯಕರು ಆಳ್ವಿಕೆ ನಡೆಸಿದ್ದಾರೆ. ಒಂದು ಕಾಲದಲ್ಲಿ ಚಿತ್ರದುರ್ಗ, ಹಾಗಲವಾಡಿ, ಹರಪನಹಳ್ಳಿ, ಕನಕಗಿರಿ, ಸಂತೇಬೆನ್ನೂರು,

ಜರಿಮಲೆ, ಗುಡೇಕೋಟೆ, ನಾಯಕನಹಟ್ಟಿ, ಗುಮ್ಮನಾಯಕನಹಳ್ಳಿ, ಆನೆಗೊಂದಿ, ರಾಯದುರ್ಗ, ಹರತಿಕೋಟೆ, ಸಂತೆಬೆನ್ನೂರು, ಮತ್ತೋಡು, ನಿಡಗಲ್ಲು, ಮೊಳಕಾಲ್ಮುರು, ತಳುಕು, ನನ್ನಿವಾಳ, ಗೋವನೂರು, ಮಲೆದುರ್ಗ, ಉಚ್ಚಂಗಿದುರ್ಗ, ಸಂಡೂರು, ಕುಂದುರ್ಪೆ, ಶಿರಾ, ಗುಡಗಂಟಿ, ಸುರಪುರ, ದೇವದುರ್ಗ, ಗುಂತಗೋಳ್, ಅರಕೇರಿ, ರೂಡ್ಲಬಂಡಿ, ಕೋಡೆಕಲ್ಲು, ಕೋಸಗಿ, ಕರೆಗುಡ್ಡ, ಕಪಟರಾಳ, ಸೂಂಡಿ, ಪಾಮನಕಲ್ಲು, ಪ್ಯಾಪಲಿ, ಕಪ್ಪಲುದುರ್ಗ, ದೂದಿಕೊಂಡಿ, ಗುತ್ತಿ, ಪೆನುಗೊಂಡ, ಪಾಮಡಿ, ಆದವಾನಿ, ಚಂದ್ರಗಿರಿ, ಜಡಕಲ್ಲುದುರ್ಗ, ಅನಂತಪುರ, ದುಮ್ಮಿ, ರತ್ನಗಿರಿ, ತರೀಕೆರೆ, ಕೋಮರಕೊಂಡಿ, ಅಗಳಿ, ಪರಶುರಾಮಪುರ, ದೊಡ್ಡೇರಿ, ಮುಂಡಿಕೊಟೆ, ದ್ಯಾವನಹಳ್ಳಿ, ಮುಟ್ಟಿ, ಬೆಳಗುತ್ತಿ, ತಲಚೇರಿ, ದೊರೆಮಳ, ಚಿಕ್ಕನಾಯಕನಹಳ್ಳಿ, ರಾಯಚೂರು, ಚಿಕ್ಕಲದಿನ್ನಿ, ಉಜ್ಜನಿ, ಬಾಣರಾವಿ, ವಡ್ಡು, ಕುಡುತಿನಿ, ಹಾವನೂರು, ಮುದಗಲ್ಲು, ಹೊಸಕೋಟೆ, ಹಿರಿಯೂರು, ಬೂದಿಹಾಳು, ಐಮಂಗಲ, ಕೋಟೆಕೆರೆ, ಬುಕ್ಕಪಟ್ಟಣ, ಕ್ಯಾದಿಗೇರಾ, ರಾಮದುರ್ಗ, ರಾಮಗಿರಿ, ರಾಣಿಬೆನ್ನೂರು, ಮಧುರೈ, ಇನ್ನಿತರ ಸ್ಥಳಗಳಲ್ಲಿ ಆಳ್ವಿಕೆ ಇತ್ತೆಂದು ಕಂಡುಬರುತ್ತದೆ.

ವಿಜಯನಗರದ ಮುಂಚೆ ಪ್ರಸಿದ್ಧ ಪಡೆದ ಬೇಡ ದೊರೆಗಳಲ್ಲಿ ಕುಮಾರರಾಮನೇ ಮೊದಲಿಗನು. ಕುಮಾರರಾಮನು ಸುಖ ಸಮೃದ್ಧಿಯಿಂದ ಕೂಡಿದ ರಾಜ್ಯದ ದೊರೆಯಾಗಿ ಪ್ರಸಿದ್ಧಿ ಪಡೆದಿದ್ದನು. ಇವರು ಕೃಷಿಯಲ್ಲಿ ಅನೇಕರನ್ನು ತೊಡಗಿಸುವ ಸಲುವಾಗಿ ಕೆರೆ–ಕಟ್ಟೆಗಳನ್ನು ಕಟ್ಟಿಸಿದರು. ಮಧ್ಯಕಾಲೀನ ಕರ್ನಾಟಕದ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತ್ಯಂತರಗಳ ಸಂಕೇತವೇ ಕುಮಾರ ರಾಮನೆಂದು ತೋರುತ್ತದೆಂಬುದು ಡಾ. ಪುರುಷೋತ್ತಮ ಬಿಳಿಮಲೆಯವರ ನಿಲುವಾಗಿದೆ.

ವಿಜಯನಗರದ ಅರಸರು ಕೃಷಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದರು. ಅವರು ಕಟ್ಟಿಸಿದ ಸಾವಿರಾರು ಕೆರೆಗಳಲ್ಲಿ ಇಂದಿಗೆ, ಹಲವು ನೀರಾವರಿ ಸೌಲಭ್ಯವನ್ನು ಕೃಷಿಗೆ ನೀಡುತ್ತಿವೆ. ಈ ಕೆರೆಗಳು ವಿಜಯನಗರದ ಆರ್ಥಿಕ ಸಮೃದ್ಧಿಗೆ ಅತ್ಯಂತ ಮಹತ್ವದ ಪಾತ್ರವನ್ನು ವಹಿಸಿದ್ದವು. ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರಗೊಂಡ ಪಾಳೆಯಗಾರರು ಅನೇಕ, ಕೆರೆ, ಬಾವಿ, ಕಟ್ಟೆಗಳನ್ನು ಕಟ್ಟಿಸಿ ಕೃಷಿಯನ್ನು ಅಭಿವೃದ್ಧಿಗೊಳಿಸಿದರು. ರಾಜರು ತಮ್ಮ ಮಗ, ಹೆಂಡತಿ, ಸೊಸೆಯ ಹೆಸರಿನಲ್ಲಿ, ರಾಣಿಯರು ತಮ್ಮ ಗಂಡ, ಮಗ, ತಮ್ಮ ಹೆಸರಿನಲ್ಲಿ ಕೆರೆ, ಬಾವಿಗಳನ್ನು ಕಟ್ಟಿಸಿದರು.

ಕುಮ್ಮಟದುರ್ಗದ ಅರಸರ ಕಾಲದಲ್ಲಿ ಕುಮ್ಮಟದುರ್ಗದಲ್ಲಿ ಬೊಲ್ಲನಕೆರೆ, ವಕ್ರಾಣಿ ಕೆರೆ, ಮಾದಿಗ ಹಂಪಯ್ಯನ ಕೆರೆ, ರಾಮನ ದೊಣೆ, ಹಾಲುಭಾವಿ ಮೊದಲಾದವುಗಳಿವೆ.[೨೨] ನಾಯಕನ ಹಟ್ಟಿ ವಂಶಾವಳಿಯ ಪ್ರಕಾರ ಭೀಮಾಜೆಟ್ಟಿಯನ್ನು ಸೋಲಿಸಿದ್ದಕ್ಕೆ ಆನೆಗೊಂದಿಯ ರಾಮರಾಯರು ಭೀಮ ಎನ್ನುವ ಬಿರುದನ್ನು ಜೋಡಿ ಮಲ್ಲಪ್ಪನಾಯಕನಿಗೆ ನೀಡಿದರು. ಈ ಬಿರುದನ್ನು ಉಳಿಸಬೇಕೆಂದು

ನಾಯಕನಹಟ್ಟಿಯಲ್ಲಿ ಭೀಮನಕೆರೆ, ಹಿರೇಕೆರೆ, ಚಿಕ್ಕಕೆರೆ, ಹೊಸಕೆರೆಗಳನ್ನು ಕಟ್ಟಿಸಿದನು. ಅಲ್ಲದೆ ರಾಮಸಾಗರದಕೆರೆ, ವರವಿನಕೆರೆ, ನಾಯ್ಕನ ಕರೆಗಳನ್ನು ಕಟ್ಟಿಸಿದನು.[೧೬೩] ಚಿತ್ರದುರ್ಗದ ಇಮ್ಮಡಿ ಮದಕರಿ ನಾಯಕನು ತನ್ನ ಪಟ್ಟದನಾಗತಿ ಚಿಕ್ಕಮ್ಮ ಎಂಬುವಳ ಹೆಸರಿನಲ್ಲಿ ನೆಲ್ಲಕಟ್ಟೆಯಲ್ಲಿ ಕೆರೆಯೊಂದನ್ನು ಕಟ್ಟಿಸಿದನು.[೧೬೪] ಬರಮಣ್ಣನಾಯಕನು ತನ್ನ ಆಡಳಿತಾವಧಿಯಲ್ಲಿ ಸುಮಾರು ೨೦ ಕೆರೆಗಳನ್ನು ಕಟ್ಟಿಸಿದನು. ಕೊನೆಯ ಮದಕರಿನಾಯಕನು ಕೂಡ ಕೆರೆ ಮತ್ತು ಛತ್ರಗಳನ್ನು ಕಟ್ಟಿಸಿದನು.[೧೬೫] ಹರತಿ ಪಾಳೆಯಗಾರ ಚಿಕ್ಕತಿಪ್ಪರಾಜನು ತನ್ನ ಪತ್ನಿ ಲಕ್ಷ್ಮೀದೇವಿಯ ನೆನಪಿನಲ್ಲಿ ನಿಡಗಲ್ಲು ಬೆಟ್ಟದ ಮೇಲೆ ಕೆರೆಯೊಂದನ್ನು ಕಟ್ಟಿಸಿದನು.

ಆರ್ಥಿಕ ವ್ಯವಸ್ಥೆ ಯಾವುದೇ ರಾಜ್ಯದ ಅಸ್ತಿತ್ವದ ತಳಹದಿಯೆಂದರೆ ತಪ್ಪಾಗಲಾರದು ಕೃಷಿ ಪ್ರಧಾನ ಆರ್ಥಿಕ ವ್ಯವಸ್ಥೆ ಇದ್ದುದರಿಂದ ನೀರಾವರಿ ಸೌಲಭ್ಯಗಳನ್ನು ಒದಗಿಸುವುದು ಸರಕಾರದ ಕರ್ತವ್ಯವಾಗಿದ್ದಿತು. ಕೆರೆ ನಿರ್ಮಾಣ, ದುರಸ್ತಿ ಮಾಡುವುದು ಸರ್ಕಾರ ಕೆಲವು ವೇಳೆ ತಾನೇ ಕೈಗೊಳ್ಳುವುದು, ಆ ಕಾರ್ಯಗಳನ್ನು ಕೈಗೊಂಡ ವ್ಯಕ್ತಿಗಳಿಗೆ ಕೆರೆ ಬಾವಿಗಳನ್ನು ನೀಡಿ ಪ್ರೋತ್ಸಾಹಿಸುವುದು ಕಂಡುಬರುತ್ತದೆ. ಹರತಿಯ ವೀರಣ್ಣನಾಯಕನು ಯಲ್ಲಪ್ಪನಾಯಕನಿಗೆ ದೊಡ್ಡೇರಿ ಸೀಮೆಯಲ್ಲಿ ಕೆರೆಮಾನ್ಯವನ್ನು ನೀಡಿದನು. ಮಹಾನಾಯಕಾಚಾರ್ಯ ಚಿಕ್ಕಪನಾಯಕನು ಹಗರಿ ನದಿ ಕಾಲುವೆ ತೋಡಿಸಿದ್ದಕ್ಕಾಗಿ ಯಲ್ಲಪ್ಪನಾಯಕನಿಗೆ ಭೂ ದಾನ ಮಾಡಿದನು. ಹರತಿ ಸಿದ್ಧಣ್ಣ ನಾಯಕನು ಹೊಸವೂರನ್ನು ಕೆರೆ ಕೊಡುಗೆಯಾಗಿ ನೀಡಿದನು.

ಮತ್ತೋಡು ನಾಯಕರು ಕೃಷಿಗಾಗಿ ಕೆರೆ ಕಾಲುವೆಗಳನ್ನು ಕಟ್ಟಿಸಿದ್ದಲ್ಲದೆ, ಹಳೆಯದಾದ ಮತ್ತು ಹೂಳು ತುಂಬಿದ ಕೆರೆಗಳನ್ನು ಜೀರ್ಣೋದ್ಧಾರ ಮಾಡಿಸಿದರು. ಮತ್ತೋಡಿನಲ್ಲಿ ಮುಖ್ಯವಾದ ಎರಡು ಕೆರೆಗಳಿದ್ದು ಅದರಲ್ಲಿ ಹಳಿಕೆರೆ (ಹಳೆಕೆರೆ) ಬಹುದೊಡ್ಡದಾಗಿದೆ. ಕಂದಕಗಳಿಗೂ ನೀರು ತುಂಬುವುದುವಕ್ಕೂ ಅದು ಉಪಯೋಗವಾಗುವಂತೆ ತಾಂತ್ರಿಕ ಕೌಶಲ್ಯದಿಂದ ಅದನ್ನು ನಿರ್ಮಿಸಲಾಗಿತ್ತು. ಕೆರೆಯ ತೂಬನ್ನು ಎತ್ತಿದರೆ ಕಂದಕ ನೀರಿನಿಂದ ಭರ್ತಿಯಾಗುತ್ತಿತ್ತು. ರಾಜಧಾನಿಯಾಗಿದ್ದ ಮತ್ತೋಡಿನಲ್ಲಿ ನೂರಾರು ಭಾವಿಗಳು ಇದ್ದದ್ದು ಕಂಡುಬರುತ್ತದೆ.[೧೬೬] ಗುಮ್ಮನಾಯಕನ ಹಳ್ಳಿಯ ಪಾಳೆಯಗಾರ ಎರಡನೇ ಮಸಲನಾಯಕನು ಪಾಪಾಗ್ನಿ ನದಿಗೆ ಅಡ್ಡವಾಗಿ ಸೇತುವೆಯನ್ನು ಕಟ್ಟಿ ಬ್ರಹ್ಮ ಸರೋವರವನ್ನು ನಿರ್ಮಿಸಿದನು. ಎರಡನೇ ಲೊಕ್ಕನಾಯಕನು ಗುಮ್ಮನಾಯಕನಹಳ್ಳಿ ಕೋಟೆಯ ಪಶ್ಚಿಮ ಭಾಗದಲ್ಲಿ ದೊಡ್ಡದಾದ ಒಂದು ಕೆರೆಯನ್ನು ನಿರ್ಮಿಸಿ ಅದನ್ನು ರಾಣಿಕೆರೆ ಅಥವಾ ಅಮ್ಮವಾರಿಕುಂಟ ಎಂದು ಕರೆದನು. ಕೋಟೆಯ ಮಧ್ಯಭಾಗದಲ್ಲಿ ಕೋಟೆಯ ಮೇಲ್ಗಡೆ ಆಳವಾದ ಕಲ್ಯಾಣಿಯನ್ನು ತೋಡಿಸಿ ಅದನ್ನು ರಾಜರಬಾವಿ ಅಥವಾ ದೊರಲಬಾವಿ ಎಂದು ಕರೆದನು.[೧೬೭] ಚಿತ್ರದುರ್ಗದವರ ವಂಶಾವಳಿ ಪ್ರಕಾರ ಚಿತ್ರದುರ್ಗದ ಮೊದಲ ಪಾಳೆಯಗಾರ

ತಿಮ್ಮಣ್ಣನಾಯಕ ತನ್ನ ಹೆಸರಿನಲ್ಲಿ ತಿಮ್ಮಣ್ಣನಾಯಕನ ಕೆರೆಯನ್ನು ಕಟ್ಟಿಸಿದನು. ತಿಮ್ಮಣ್ಣನಾಯಕನ ಆಪ್ತ ಬಂಧುಗಳಲ್ಲಿ, ಒಡನಾಡಿಗಳಲ್ಲಿ ಒಬ್ಬನೂ ಸ್ವಲ್ಪಕಾಲ ಉಚ್ಚಂಗಿ ದುರ್ಗದ ನಾಯಕನೂ ಆಗಿದ್ದ ದೊಡ್ಡಣ್ಣನಾಯಕನು ಇಲ್ಲಿ ಸಿತ್ತೆಕಲ್ಲು ಹಳ್ಳಕ್ಕೆ ಅಡ್ಡಗಟ್ಟೆ ಹಾಕಿಸಿ ದೊಡ್ಡಣ್ಣನ ಕೆರೆ ಕಟ್ಟಿಸಿದಂತೆ ಚಿತ್ರದುರ್ಗದ ಪಾಳೆಯಗಾರರ ವಂಶಾವಳಿಗಳು ತಿಳಿಸುತ್ತವೆ.[೧೬೮] ಹೊರಕೆರೆ ದೇವಪುರದ ಬಳಿಯ ಗಂಡಿಕೆರೆ ಮತ್ತು ಹುಲ್ಲೂರು ಗ್ರಾಮದಕೆರೆ ೧ನೆಯ ಮದಕರಿನಾಯಕನ ಕೊಡುಗೆಗಳೆಂದೂ, ೨ನೆಯ ಮದಕರಿನಾಯಕನು ತನ್ನ ತಾಯಿಯ ಹೆಸರಿನಲ್ಲಿ ಓದೋತಿಮ್ಮವ್ವನಕೆರೆ, ಮಗಳು ಕೆಂಚವ್ವನ ಹೆಸರಿನಲ್ಲಿ ಒಂದು ಕೆರೆ ಮತ್ತು ಜನತೆ ಹಳ್ಳಕ್ಕೆ ಹಾಕಿಸಿದ ಕೆರೆ ಎಂದು ಈ ಪಾಳೆಯಗಾರರ ಚಾರಿತ್ರಿಕ ದಾಖಲೆಗಳು ತಿಳಿಸುತ್ತವೆ.

ಬಿಚ್ಚುಗತ್ತಿ ಭರಮಣ್ಣನಾಯಕನು ಇಟ್ಟಿಗೆ ಹಳ್ಳಿಕೆರೆ, ಲಿಂಗವ್ವನಾಗತಿ ಹಳ್ಳಿಕೆರೆ, ಚಿತ್ರಹಳ್ಳಿ ಸೀಮೆಯ ಹಂಗನಾರದ ಕೆರೆ, ಕೆಸರಹಳ್ಳಿ ಬಳಿ ಕಣಿವೆಗೆ ಹಾಕಿಸಿದ ಮದಕರಿನಾಯಕನ ಕೆರೆ, ಕಸ್ತೂರಿ ರಂಗಪ್ಪ ನಾಯಕನಕೆರೆ, ಅಣಜಿಕೆರೆ, ಜಿಂಪಾಳ ನಾಯಕನ ಕೋಟೆ ಕೆರೆ, ಮದಕರಿನಾಯಕನ ಕೋಟೆ ಕೆರೆ, ಚಿಕ್ಕಸಿದ್ಧವ್ವನನಾಗತಿ ಹಳ್ಳಕೆರೆ, ಹಂಣೆನಾಳು ಗ್ರಾಮದ ಚಿಕ್ಕಸಿದ್ದವ್ವನ ನಾಗತಿ ಕೆರೆ, ಆಲಗವ್ವದ ಬಳಿ ಹುಚ್ಚವ್ವ ನಾಗತಿ ಕೆರೆ, ಹುಚ್ಚವ್ವನಹಳ್ಳಿ ಕೆರೆ, ಜಗಳೂರು ಸೀಮೆಯ ಭರಮಸಮುದ್ರಕೆರೆ, ಮಾಯಿಕೊಂಡದ ಸೀಮೆಯ ಭರಮಸಾಗರದಕೆರೆ, ಕುರುಬರ ಮರಡಿಕೆರೆ, ಕುರುಬರ ಹಳ್ಳಿ ಗ್ರಾಮದ ಬಳಿ ಚಿಕ್ಕಪಾಲವ್ವನ ಕೆರೆ, ದ್ಯಾಮವ್ವನ ಕೆರೆ, ಇವುಗಳ ಜೊತೆಗೆ ಅನೇಕ ಹೊಂಡಗಳ ನಿರ್ಮಾಣ ಕೂಡಾ ಈ ಪಟ್ಟಿಗೆ ಸೇರುತ್ತದೆ.[೧೬೯] ನಾಯಕನಹಟ್ಟಿ ಪಾಳೆಯಗಾರರ ಮನೆತನಕ್ಕೆ ಸೇರಿದ ಕಸ್ತೂರಿ ಮಲ್ಲಪ್ಪನಾಯಕನು ತನ್ನತಾಯಿ ಲಕ್ಷ್ಮಮ್ಮ ನಾಗತಿಯ ಹೆಸರಿನಲ್ಲಿ ಮೊಳಕಾಲ್ಮುರು ಬೆಟ್ಟದ ಮೇಲೆ ಒಂದು ಕೆರೆಯನ್ನು ಕಟ್ಟಿಸಿದ್ದಾಗಿ ತಿಳಿದುಬರುತ್ತದೆ.[೧೭೦] ಹಾಗಲವಾಡಿ ನಾಯಕ ರಾಮಪ್ಪನಾಯಕರ ಪತ್ನಿಯಾದ ಕಲ್ಲಮ್ಮವ್ವ ಎಂಬುವಳು ಗಳಿಗೆಕೆರೆ ಎಂಬ ಊರಿನಲ್ಲಿ ಕೆರೆಯೊಂದನ್ನು ನಿರ್ಮಿಸಿದಳು.[೧೭೧] ಹಾಗಲವಾಡಿ ದೊರೆಯಾದ ರಾಮಪ್ಪನಾಯಕರು ಹಾಗಲವಾಡಿಯಲ್ಲಿ ಕೆರೆಯನ್ನು ಕಟ್ಟಿಸಿದರು.[೧೭೨] ಹಾಗಲವಾಡಿ ನಾಯಕರಾದ ಸಾಲಿ ನಾಯಕರ ತಮ್ಮಂದಿರಾದ ಚಿಕ್ಕನಾಯಕ ಮತ್ತು ಅಣ್ಣೆನಾಯಕ ತುರುವೇಕೆರೆಯಲ್ಲಿ ಕೆರೆಯನ್ನು ವಿಸ್ತರಿಸಿ ಅಭಿವೃದ್ಧಿಪಡಿಸಿದರು.[೧೭೩] ಹಾಗಲವಾಡಿ ನಾಯಕರ ಅನುಮತಿಯ ಮೇರೆಗೆ ಕೇಶವಯ್ಯ ದೇವ ಅರಸುಗಳು ದಂಡಿನಶಿವರಿ ಹೋಬಳಿಯಲ್ಲಿ ಕಲ್ಲು ಕೆರೆಯನ್ನು ನಿರ್ಮಿಸಿದರು.[೧೭೪]

ಹರಪನಹಳ್ಳಿ ಪಾಳೆಯಗಾರ ಬಸಪ್ಪನಾಯಕನು ಮ್ಯಾರಿ ಹಳ್ಳಕ್ಕೆ ಒಡ್ಡು ಹಾಕಿಸಿ ನಾರಾಯಣ ದೇವರ ಕೆರೆಯ ಹೂಳನ್ನು ಎತ್ತಿಸಿ ಕೆರೆ ಏರಿ ಎತ್ತರಿಸಿ ಸದಾ ಕೆರೆಯಲ್ಲಿ ನೀರು ಇರುವಂತೆ ಮಾಡಿಸಿ ಮದಗ ಮತ್ತು ಎರಡು ಕೋಡಿಗಳನ್ನು ಕಟ್ಟಿಸಿದನು. ಈ ಕೆಲಸಕ್ಕಾಗಿ 'ಅಂಡ ಮುಗಿಲಿಗೆ

ಬಾಯಿ ತೆಗೆಯುವವರ ಗಂಡ' ಎಂಬ ಬಿರುದು ಹೊಂದಿದನು ಎರಡನೆಯ ಸೋಮಶೇಖರ ನಾಯಕ ತನ್ನ ತಂದೆ ಅಯ್ಯಪ್ಪನಾಯಕನ ಹೆಸರಿನಲ್ಲಿ ಹರಪನಹಳ್ಳಿಯಲ್ಲಿ ಒಂದು ಕೆರೆಯನ್ನು ಕಟ್ಟಿಸಿದನು. ಮೊದಲು ಸೋಮಶೇಖರ ನಾಯಕನು ಹರಪನಹಳ್ಳಿಯಲ್ಲಿ ನಾಯಕನ ಕೆರೆಯನ್ನು ಕಟ್ಟಿಸಿದನು. ಹರಪನಹಳ್ಳಿ ಪಾಳೆಗಾರರು ಕಟ್ಟಿಸಿದ ಮತ್ತೊಂದು ಕೆರೆ ಕುಂಚೂರಿನಲ್ಲಿ ಕಂಡು ಬರುವುದು. ಹರಪನಹಳ್ಳಿ ಪಾಳೆಗಾರರ ಸಾಮಂತನಾದ ಶಿವಪ್ಪನಾಯಕನಿಂದ ಬೆಟಗೇರಿಯಲ್ಲಿ ಕೆರೆಯು ನಿರ್ಮಾಣವಾಯಿತು.[೧೫]

ಜರಿಮಲೆ ಪಾಳೆಯಗಾರ ಕಾಲದಲ್ಲಿ ಕೋಟೆಯ ಒಳಾವರಣದಲ್ಲಿ ಸಣ್ಣದೊರೆಬಾವಿ, ಉಪ್ಪು ನೀರುಬಾವಿ, ಆನೆಹೊಂಡ, ಮೂಲೆಯ ಬಾವಿ, ಅಂತಪ್ಪನ ಬಾವಿ, ಹಾಲಬಾವಿ, ನಾಗಪ್ಪನ ಬಾವಿ, ಕಣಸದ ಬಾವಿ, ಚೆನ್ನಬಸಪ್ಪನ ಬಾವಿ, ಕೊಂತೆಮ್ಮನ ದೋಣಿ, ರಾಮೇಶ್ವರನ ದೋಣಿಗಳನ್ನು ನಿರ್ಮಿಸಲಾಗಿದೆ.[೧೬]

ವಾಸ್ತು ಮತ್ತು ಶಿಲ್ಪವು ನಾಗರೀಕತೆಯನ್ನು ರೂಪಿಸುವ ಮಾತೃಕೆ. ನಾಗರಿಕತೆ ಎಂಬ ಶಿಶುವನ್ನು ಇದು ತನ್ನ ಗರ್ಭದಲ್ಲಿಟ್ಟುಕೊಂಡು ಬೆಳೆಸುತ್ತದೆ. ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ವಾಸ್ತು ಮತ್ತು ಶಿಲ್ಪದ ಬೆಳವಣಿಗೆಯಲ್ಲಿ ಕಂಡುಕೊಳ್ಳಬಹುದು. ಯಾವುದೇ ಕಾಲದ ಅಥವಾ ಪ್ರದೇಶದ ಸಂಸ್ಕೃತಿಗೆ ಎರಡು ಮುಖಗಳಿರುತ್ತವೆ. ೧. ಅಮೂರ್ತ ೨. ಮೂರ್ತ. ಅಮೂರ್ತ ಸಂಸ್ಕೃತಿ ಭಾವನೆಗಳಲ್ಲಿ ವ್ಯಕ್ತವಾದರೆ ಮೂರ್ತ ಸಂಸ್ಕೃತಿ ವ್ಯಕ್ತವಾಗುವುದು ವಾಸ್ತು ಮತ್ತು ಶಿಲ್ಪಗಳಲ್ಲಿ.[೧೭] ರಾಜರಾದಿಯಾಗಿ ಪಾಳೆಯಗಾರರೂ ತಮ್ಮ ಅರಮನೆಗಳ ನಿರ್ಮಾಣಕ್ಕೆ ಹೆಚ್ಚಿನ ಗಮನವನ್ನು ಕೊಡಲಿಲ್ಲ. ದೇವಾಲಯಗಳ ರಚನೆಗೆ ಪ್ರಾಮುಖ್ಯತೆಯನ್ನು ಕೊಟ್ಟರು. ದೇವಾಲಯಗಳು ಅಂದಿನ ಜನರಲ್ಲಿ ಬೇರೂರಿದ್ದ ಜೀವನ ಮತ್ತು ನಿಷ್ಠೆಗಳನ್ನು ತೋರಿಸುತ್ತವೆ. ಅವುಗಳ ನಿರ್ಮಾಣ ಹಿಂದಿನ ಮಹೋದ್ದೇಶವೆಂದರೆ ಅವು ಜನರ ಜೀವನದ ಭಾಗವಾಗಿ ಅವರನ್ನು ತಿದ್ದುವ ಶಕ್ತಿಗಳಾಗಬೇಕೆಂಬುದು. ಊರಿನ ಸಾಂಸ್ಕೃತಿಕ ಬದುಕಿಗೆ ಚಾಲನೆ ಕೊಡುವ ಕೇಂದ್ರವಾಗಿ ದೇವಾಲಯ ರೂಪುಗೊಂಡಿತ್ತು. ಊರಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನವು ರೂಪುಗೊಳ್ಳುತ್ತಿದ್ದ ಬಗೆಯನ್ನು ಕುರಿತು ಹೀಗೆ ಹೇಳುತ್ತಾರೆ. ದೇವಸ್ಥಾನವು ಜನರ ದೈವಭಕ್ತಿಯ ಕೇಂದ್ರವಾಗಿದ್ದಂತೆ ವಿದ್ಯಾಕೇಂದ್ರವೂ ಆಗಿದ್ದಿತು. ಶಿಲ್ಪ, ಚಿತ್ರ, ಸಂಗೀತ, ನರ್ತನಾದಿ, ಕುಶಲಕಲೆಗಳು ದೇವಸ್ಥಾನದ ಆಶ್ರಯದಲ್ಲಿ ವರ್ಧಿಸಿದವು ದೇವಸ್ಥಾನವು ಜನರ ನ್ಯಾಯಾಲಯವೂ ಆಗಿದ್ದಿತು. ದುಃಖ ಬಂದಾಗ ಜನರು ದೇವಸ್ಥಾನಕ್ಕೆ ಹೋಗಿ ತಮ್ಮ ಕಷ್ಟ ಹೇಳಿಕೊಳ್ಳುತ್ತಿದ್ದರು. ಹಬ್ಬ ಹರಿದಿನಗಳಲ್ಲಿ ದೇವಾಲಯವನ್ನು ಅಲಂಕರಿಸಿ ಪೂಜೋತ್ಸವಗಳನ್ನು ನಡೆಯಿಸಿ ಸುಖಿಸುತ್ತಿದ್ದರು.

ದೇವಸ್ಥಾನ ಬಡವರಿಗೆ ಸತ್ರವಾಗಿದ್ದಿತು. ಶ್ರೀಮಂತರ ಐಶ್ವರ್ಯವು ಹರಿದು ಹೊರಗೆ ಬರಲು ಕಾರಣವಾಗಿದ್ದಿತು.[೧೭೮]

ಬೇಡನಾಯಕರು ಬೆಳೆದು ಉತ್ಕರ್ಷಣೆಯನ್ನು ಕಂಡದ್ದು ವಿಜಯನಗರ ಪೂರ್ವದಲ್ಲಿ. ಕುಮ್ಮಟದುರ್ಗದಲ್ಲಿ ಅನಂತರ ವಿಜಯನಗರ ಸಾಮ್ರಾಜ್ಯದ ಆಶ್ರಯದಲ್ಲಿ ವಿಜಯನಗರ ಪತನಾನಂತರ ಅವರ ನಿಷ್ಠಾವಂತ ಉತ್ತರಾಧಿಕಾರಿಗಳಾದ ಅಲ್ಲಿನ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸಿದರು. ಇವರ ಆರ್ಥಿಕ ಸಂಪನ್ಮೂಲದ ಕೊರತೆ, ತಮ್ಮ ಅಸ್ತಿತ್ವಕ್ಕಾಗಿ ಅನ್ಯರೊಂದಿಗೆ ರಕ್ತಸಿಕ್ತ ಹೋರಾಟಗಳಲ್ಲಿ ತೊಡಗುತ್ತಿದ್ದ ಕಾರಣ ಸಹಜವಾಗಿಯೇ ಇವರ ಸಾಂಸ್ಕೃತಿಕ ಸಾಧನೆಗಳಲ್ಲಿ ವಿಜಯನಗರದ ವೈಭವವನ್ನು ಕಾಣಲಾಗುವುದಿಲ್ಲ. ಆದರೆ ವಿಜಯನಗರದ ವೈಭವದ ನೆರಳಿನಂತೆ ಕಂಡುಬರುತ್ತದೆ. ವಿಜಯನಗರ ಪತನಾನಂತರ ಅಲ್ಲಿನ ಸ್ಥಪತಿಗಳು, ರೂವಾರಿಗಳು, ವಾಸ್ತುಕಾರರು, ವಿವಿಧ ಚಿಕ್ಕಪುಟ್ಟ ದೊರೆಗಳನ್ನು ಆಶ್ರಯಿಸಿಕೊಂಡಿರಬೇಕು. ಇದರಿಂದ ವಿಜಯನಗರ ವಾಸ್ತು ಮತ್ತು ಕಲಾ ಪರಂಪರೆ ಇವರ ಕಾಲದಲ್ಲಿ ಮುಂದುವರೆಯಿತು. ವಿಜಯನಗರದ ಅರಸರಂತೆ ಬೇಡ ನಾಯಕರುಗಳು ದೇವಸ್ಥಾನಗಳ ನಿರ್ಮಾಣ, ಮಠ ಮಂದಿರಗಳಿಗೆ ದತ್ತಿ ಅಗ್ರಹಾರಗಳ ನಿರ್ಮಾಣ ಮೊದಲಾದವುಗಳನ್ನು ಮಾಡಿರುವುದನ್ನು ಕಾಣಬಹುದಾಗಿದೆ. ಕಂಪಿಲರಾಯ ಮತ್ತು ಕುಮಾರರಾಮನ ಕಾಲದಲ್ಲಿ ಕುಮ್ಮಟ ದುರ್ಗದಲ್ಲಿ ಈಶ್ವರಗುಡಿ, ಬೊಲ್ಲನ ಕೆರೆಗುಡಿ, ಬೈಚಪ್ಪನಗುಡಿ, ಕಾಟಪ್ಪನಗುಡಿ ಹನುಮಂತನಗುಡಿ, ರಾಮಸ್ವಾಮಿ ಗುಡಿಗಳನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಕ್ರಿಶ ೧೫೨೭ ಅಂದರೆ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ ಮುಮ್ಮಡಿ ಸಿಂಗನ ಮೊಮ್ಮಗನೂ ಕಂಪಿಲರಾಯ ಹಾಗೂ ಹರಿಯಾಲ ದೇವಿಯರ ಮಗನೂ ಆದ ರಾಮನಾಥನ ಹೆಸರಿನಲ್ಲಿ ಗುಡಿಯನ್ನು ಗೋಪಾಯಿ ಮತ್ತು ಆಕೆಯ ತಮ್ಮ ರಾಮಣನು ಸೇರಿ ಕಟ್ಟಿಸಿದರು.[೧೭೯]

ತಿಪಟೂರು ತಾಲೂಕು ಹಟ್ಣ ಶಾಸನವೊಂದರ ಪ್ರಕಾರ ಹಾಗಲವಾಡಿಯ ಮೊದಲನೆಯ ದೊರೆ ಮುದಿಯಪ್ಪನಾಯಕನು ಕ್ರಿಶ ೧೬೨೫ರಲ್ಲಿ ಹಟ್ಣ ಎಂಬ ಗ್ರಾಮದಲ್ಲಿ ಬಸವರಾಜ ದೇವರು ಎಂಬ ಗುರುಗಳಿಗೆ ಹೊಸದಾಗಿ ಮಠವೊಂದನ್ನು ಕಟ್ಟಿಸಿಕೊಟ್ಟು, ಅದರ ನಿರ್ವಹಣೆಗೋಸ್ಕರ, ಆ ಊರಿನ ಕೆರೆಯ ಹಿಂದಿನ ಗದ್ದೆಯನ್ನು ದಾನ ಮಾಡಿದುದನ್ನು ತಿಳಿಸುತ್ತದೆ.[೧೮೦] ದಳವಾಯಿ ಶೀಲವಂತ ಪರಮಪ್ಪನು ಚಿಕ್ಕಜೋಗಿ ಹಳ್ಳಿಯಲ್ಲಿ ವಿರಕ್ತಮಠವೊಂದನ್ನು ಕಟ್ಟಿಸಿದನು. ಈ ಮಠಕ್ಕೆ ಹಾಗಲವಾಡಿ ಮುದಿಯಪ್ಪನಾಯಕನು ಕ್ರಿ.ಶ. ೧೬೨೫ರಲ್ಲಿ ಭೋಗ ಸಮುದ್ರ ಗ್ರಾಮವನ್ನು ದಾನ ಮಾಡಿದನು.[೧೮೧] ಇಮ್ಮಡಿ ಮುದಿಯಪ್ಪನಾಯಕನು ತಮ್ಮ ಗುರುಗಳಾಗಿದ್ದ ಮುದ್ವೀರ ಸ್ವಾಮಿಗಳಿಗೆ ಹಾಗಲವಾಡಿಯಲ್ಲಿ ಮಠವನ್ನು ಕಟ್ಟಿಸಿಕೊಟ್ಟು ಅದರ ನಿರ್ವಹಣೆಗೋಸ್ಕರ ಲಿಂಗಸಾಗರ ಗ್ರಾಮಕ್ಕೆ ಸಲ್ಲುವ ಗದ್ದೆ, ಬೆದ್ದಲು, ತೋಟ, ತುಡಿಕೆ, ಆಣೆ, ಅಚ್ಚುಕಟ್ಟು ಮುಂತಾದ ಸಕಲ ಸವರ್ಣಾದಾಯವನ್ನು

ನೀಡಿರುವುದನ್ನು ಕ್ರಿಶ ೧೭೩೬ರ ಶಾಸನವು ತಿಳಿಸುತ್ತದೆ.[೧೮೨] ವೀರಶೈವ ಗುರಗಳಾದ ಗುರುಪಾದಸ್ವಾಮಿ ಮತ್ತು ನಿರಂಜನಸ್ವಾಮಿ ಗದ್ದುಗೆಗಳನ್ನು ದೊರೆ ಮುದಿಯಪ್ಪನಾಯಕನು ಕಟ್ಟಿಸಿ, ತೋಪು ಹಾಕಿಸಿ ಹೂವಿನ ತೋಟವನ್ನು ಮಾಡಿಸಿ ಸುಮಾರು ಒಂದು ಲಕ್ಷ ರೂಪಾಯಿಗಳವರೆಗೂ ಧರ್ಮ ಕೆಲಸಕ್ಕಾಗಿ ವಿನಿಯೋಗಿಸಿದ್ದುದು ದಾಖಲೆಯಿಂದ ತಿಳಿದುಬರುತ್ತದೆ.[೧೮೩]

ಆಳುವ ವರ್ಗದವರು ತಾವು ಗಳಿಸಿದ ಸಂಪತ್ತಿನಲ್ಲಿ ಸ್ವಲ್ಪಭಾಗವನ್ನು ದೇವಾಲಯಗಳಿಗೆ ಮತ್ತು ಬ್ರಾಹ್ಮಣರಿಗೆ ನೀಡುವುದು ಪುಣ್ಯದ ಕೆಲಸವೆಂದು ಭಾವಿಸಿದ್ದರು. ಹಾಗಲವಾಡಿ ನಾಯಕರು ಬ್ರಾಹ್ಮಣರಿಗೆ ನೀಡಿದ ದಾನಗಳನ್ನು ಅವರ ಶಾಸನಗಳು ಪ್ರಸ್ತಾಪಿಸುತ್ತವೆ.

ಯಾರೇಕಟ್ಟೆ ಶಾಸನಾಂಕಿತರಾದ ಗೋವುಲ ಗೋತ್ರದ ಸಾಲಿನಾಯಕ ಸಂಗಪ್ಪನಾಯಕರ ಪೌತ್ರರಾದ ಚನಬಸಪ್ಪನಾಯಕರ ಪುತ್ರರಾದ ಮುದಿಯಪ್ಪ ನಾಯಕರೈಯ್ಯನವರು ಭಾರಾದ್ವಾಜ ಗೋತ್ರದ ಆಪ್ತಸ್ತಂಭ ಸೂತ್ರದ ಯಜುಶ್ಯಾಖ್ಯಾಧ್ಯಾಯಿಗಳಾದ ಯುದ್ಧದ ಪೂಡಿ ಪೆರಣಿಯ ತಿಂಮಯ್ಯನ ಪೌತ್ರನಾದ ಚೆಂನ್ನಯ್ಯನ ಪುತ್ರನಾದ ರಾಮಯ್ಯನಿಗೆ ಹಾಗಲವಾಡಿ ಸ್ಥಳಕ್ಕೆ ಸಲುವ ಆಣೆಹಳ್ಳಿ ಗ್ರಾಮವನ್ನು ಸಹಿರಣ್ಯೋದ್ಧಕ ಧಾರಾಪೂರ್ವಕವಾಗಿ ಕೊಟ್ಟೆವು.[೧೮೪] ಗೋವಲ ಗೋತ್ರದ ಸಾಲಿನಾಯಕರ ಬೈರಪ್ಪನಾಯಕರು ವಾರ್ಧಿಸ ಗೋತ್ರದ ಆಪ್ತಸ್ತಂಭ ಸೂತ್ರದ ಯಜುಶಾಖಾಧ್ಯಾಯಿಗಳಾದ ಅನಂತಭಟ್ಟರ ಪೌತ್ರರಾದ ವೆಂಗಭಟ್ಟನ ಪುತ್ರರಾದ ಲಕ್ಷ್ಮಣಾಚಾರ್ಯರಿಗೆ ಕೊಟ್ಟ ಭೂದಾನ ಧರ್ಮಶಾಸನ.[೧೮೫]

ಹಾಗಲವಾಡಿ ನಾಯಕರು ಹೆಚ್ಚಿನ ಸಂಖ್ಯೆಯಲ್ಲಿ ಧಾರ್ಮಿಕ ವಸ್ತುಗಳಾದ ದೇವಾಲಯಗಳು ಗದ್ದುಗೆಗಳು, ಮಠಗಳು, ಲೌಕಿಕ ವಾಸ್ತುವಾದ ಅರಮನೆಗಳು, ರಕ್ಷಣಾತ್ಮಕ ವಾಸ್ತುವಾದ ಕೋಟೆ ಕಂದಕಗಳು ಮೊದಲಾದವುಗಳನ್ನು ನಿರ್ಮಿಸಿದ್ದಾರೆ. ಹಾಗಲವಾಡಿ ನಾಯಕರು ಚಿಕ್ಕನಾಯಕನ ಹಳ್ಳಿಯಲ್ಲಿರುವ ಪ್ರಸನ್ನರಾಮೇಶ್ವರ, ಹಾಗಲವಾಡಿಯಲ್ಲಿನ ಚನ್ನಕೇಶವ ದೇವಾಲಯಗಳನ್ನು ನಿರ್ಮಿಸಿದ್ದಾರೆ.[೧೮೬] ಹಾಗಲವಾಡಿ ನಾಯಕರು ತಾವು ದೇವಾಲಯಗಳನ್ನು ಕಟ್ಟಿಸಿದ್ದಲ್ಲದೆ, ಪೂರ್ವ ಕಾಲದ ದೇವಾಲಯಗಳನ್ನು ಜೀರ್ಣಗೊಳಿಸಿರುವುದು ಕಂಡುಬರುತ್ತದೆ. ಶೆಟ್ಟಿಕೆರೆಯಲ್ಲಿರುವ ಯೋಗನಾಥ ದೇವಾಲಯವನ್ನು ಹೊಯ್ಸಳ ಬುಜಬಲ ಚಕ್ರವರ್ತಿ ಮೂರನೇ ವೀರನರಸಿಂಹನ ಪ್ರಧಾನಿಯೂ ದಂಡನಾಯಕನೂ ಅಗಿದ್ದ ಗೋಪಾಲ ದಂಡನಾಯಕ ಕ್ರಿಶ ೧೨೭೨ರಲ್ಲಿ ಕಟ್ಟಿಸಿದನು.[೧೮೭] ಹಾಗಲವಾಡಿ ನಾಯಕರ ಕಾಲದಲ್ಲಿ ಈ ದೇಗುಲಕ್ಕೆ ಮುಖ ಮಂಟಪವನ್ನೊಳಗೊಂಡು ನಿರ್ಮಿಸಿದ ರಂಗಮಂಟಪ ಪ್ರಕಾರ ಹಾಗೂ ಮಹಾದ್ವಾರ ಮಂಟಪ ಮತ್ತು ಹೊರವಲಯದಲ್ಲಿ ದ್ವಾರದ ಮುಂದಿನ ದೀಪಸ್ತಂಭ ನಿರ್ಮಾಣವಾದವು.[೧೮೮] ಮೊದಲನೇ ಮುದಿಯಪ್ಪ ನಾಯಕನು ಹಾಗಲದ ಹಳ್ಳಿಯನ್ನು ಗೆದ್ದು ಅದರ ಸುತ್ತ ಬಲವಾದ ಕೋಟೆಯನ್ನು ಕಟ್ಟಿಸಿದನು.[೧೮೯]

ನಿಡಗಲ್ಲಿನ ನಾಯಕನಾದ ಚಿಕತಿಪ್ಪರಾಜೇಂದ್ರನು ತನ್ನ ರಾಣಿಯಾದ ಲಕ್ಷ್ಮೀದೇವಿಯ ಹೆಸರಿನಲ್ಲಿ ನಿಡಗಲ್ಲು ಬೆಟ್ಟದ ಮೇಲೆ ಲಕ್ಷ್ಮಣೇಶ್ವರದೇವಾಲಯವನ್ನು ಮತ್ತು ಅಗ್ರಹಾರವನ್ನು ನಿರ್ಮಿಸಿದನು. ನಿಡಗಲ್ಲು ತಿಮ್ಮಣ್ಣ ನಾಯಕನು ಗುತ್ತಿ ಮಹಾಮಂಡಲೇಶ್ವರ ತಿರುಮಲ ರಾಜ್ಯೆಯ ದೇವ ಮಹಾ ಅರಸುಗಳಿಗೆ ಪುಣ್ಯವಾಗಬೇಕೆಂದು ತುಮುಕುಂಟೆ ಗ್ರಾಮವನ್ನು ದೇವರಿಗೆ ಸಮರ್ಪಿಸಿದನು.[೯೦] ವೀರ ಹೊಟೆಣ್ಣನಾಯಕನು ತನ್ನ ತಂದೆ, ತಾಯಿಗಳಿಗೆ ಅಕ್ಷಯ ಪುಣ್ಯಲೋಕ ಪ್ರಾಪ್ತಿಯಾಗಲೆಂದು ಕಾಳಾಂಜಗಿರಿಯಲ್ಲಿ ಕ್ರಿಶ ೧೯೫೪ರಲ್ಲಿ ಬಸವೇಶ್ವರ ದೇವರ ಗುಡಿಯನ್ನು ನಿರ್ಮಿಸಿ, ಆ ದೇವರ ನಿತ್ಯ ನೈವೇದ್ಯ ಅಮೃತ ಪಡಿಗೆ ರಂಗಸಮುದ್ರ ಕೆರೆಯ ಕೆಳಗಣ ಗದ್ದೆಯನ್ನು ದಾನ ಮಾಡಿದನು.[೯೧] ಕ್ರಿಶ. ೧೯೬೦ರಲ್ಲಿ ನಿಡಗಲ್ಲಿನಲ್ಲಿ ಸಾರ್ವಾಡೇಶ್ವರ ದೇವಾಲಯವನ್ನು ನಿರ್ಮಿಸಿದನು. ಕ್ರಿಶ ೧೯೯೧ರಲ್ಲಿ ಕಾಳಾಂಜನಗಿರಿಯಲ್ಲಿ ಲಿಂಗ ಪ್ರತಿಷ್ಠಾಪನೆ ಮಾಡಿಸಿ ಅದಕ್ಕೆ ಹೊಟ್ಟೇಶ್ವರವೆಂದು ನಾಮಕರಣ ಮಾಡಿ ಅದರ ನಿತ್ಯ ನೈವೇದ್ಯ ದೀಪಾರಾಧನೆಗೆ ರಂಗಸಮುದ್ರ ಕೆರೆಯ ಕೆಳಗಣ ಗದ್ದೆಯನ್ನು, ಆರಲಹಳ್ಳಿ ಬಳಿ ಹೊಲವನ್ನು ದಾನ ಮಾಡಿದನು.[೯೨] ಹರತಿ ತಿಮ್ಮಣ್ಣನಾಯಕನು ಕಾಳಹಸ್ತಿಶ್ವರ ದೇವಾಲಯವನ್ನು ಪುನರ್ ನಿರ್ಮಾಣ ಮಾಡಿ ದೇವಾಲಯದಲ್ಲಿ ಅಂತರಾಳ, ರಂಗಮಂಟಪ, ಚಂದ್ರಶಾಲೆ ಗೋಪುರ, ಪ್ರಾಕಾರಗಳನ್ನು ನಿರ್ಮಿಸಿ, ಆ ಸ್ವಾಮಿಯ ನಿತ್ಯನೈವೇದ್ಯಕ್ಕೆ ದೀಪಾರಾಧನೆಗೆ ನ್ಯಾಯದ ಗುಂಟೆ ಗ್ರಾಮದಬಳಿ ಲಿಂಗ ಮುದ್ರೆಹಾಕಿದ ಗದ್ದೆ ಮತ್ತು ಹೊಲವನ್ನು ದಾನ ಮಾಡಿದನು.[೯೩]

ನಾಯಕನಹಟ್ಟಿ ಪಾಳೆಯಗಾರನಾದ ಜೋಡಿ ಮಲ್ಲಪ್ಪ ನಾಯಕನು ಗೌರೀಪುರ ಗ್ರಾಮದಲ್ಲಿ ಗೌರೀಶಂಕರ ದೇವಾಲಯವನ್ನು ನಿರ್ಮಿಸಿದನು. ಅಲ್ಲದೇ ಕಾಶಿಯಿಂದ ರಾಮಲಿಂಗವನ್ನು ತಂದು ಗುಹಾಂತರ ದೇವಾಲಯವನ್ನು ಮಾಡಿಸಿ ಅಲ್ಲಿ ಪ್ರತಿಷ್ಠಾಪಿಸಿ ಅದನ್ನು ರಾಮನದುರ್ಗ ಎಂದು ಕರೆದನು.[೯೪]

ಚಿತ್ರದುರ್ಗದ ನಾಯಕರು ಬೇಡರಾಗಿದ್ದರೂ, ಬ್ರಾಹ್ಮಣರನ್ನು ತಮ್ಮ ಗುರುಗಳನ್ನಾಗಿ ಒಪ್ಪಿ ಅವರನ್ನು ಅನುಸರಿಸುತ್ತಿದ್ದರಂದು ಕಂಡುಬರುತ್ತದೆ. ಇವರ ಕಾಲದಲ್ಲಿ ಕಟ್ಟಲ್ಪಟ್ಟ ದೇವಾಲಯಗಳಲ್ಲಿ ಶೈವ ಮತವನ್ನು ಪ್ರತಿನಿಧಿಸುವ ಕೆಲವು ಶಿಲ್ಪಗಳೂ ಕಂಡುಬರುತ್ತವೆ. ಅಲ್ಲದೆ ಇವರಿಗೆ ಯಾವಾಗಲೂ ಬ್ರಾಹ್ಮಣರೇ ಪ್ರಧಾನಿಗಳಾಗಿದ್ದು. ಈ ಪ್ರಧಾನರಿಗೂ ಅಗ್ರಹಾರಗಳಿಗೂ, ದಾನ ದತ್ತಿಗಳನ್ನು ನಾಯಕರು ಬಿಟ್ಟುಕೊಡುತ್ತಿದ್ದರು.[೯೫] ಚಿತ್ರದುರ್ಗದ ನಾಯಕರು ದೇವಾಲಯಗಳಿಗೆ ಮತ್ತು ವ್ಯಕ್ತಿಗಳಿಗೆ ದಾನ ದತ್ತಿಯನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು ಎನ್ನುವುದಕ್ಕೆ ಅನೇಕ ಶಾಸನಾಧಾರಗಳು ಕಂಡುಬರುತ್ತವೆ. ಈ ಪಾಳೆಗಾರರ ಆರಂಭದ ದೊರೆ ಮತ್ತಿ ತಿಮ್ಮಣ್ಣನಾಯಕನು ವಿಜಯಗನರದ ಅರಸರಿಂದ ಹೊಳಲ್ಕೆರೆ ಸೀಮೆಯನ್ನು ಅಮರ ಮಾಗಾಣಿಯಾಗಿ ಪಡೆದ ನೆನಪಿಗೋಸ್ಕರ ಹೊಳಲ್ಕೆರೆಯಲ್ಲಿ

ಗೋಪಾಲಕೃಷ್ಣ ದೇವಾಲಯವನ್ನು ನಿರ್ಮಿಸಿ ಅದರ ಪೂಜೆ ಪುನಸ್ಕಾರಗಳಿಗಾಗಿ ಒಬ್ಬ ಅರ್ಚಕರನ್ನು ನೇಮಿಸಿ ಅವನಿಗೆ ಕೆಲವು ದಾನಗಳನ್ನು ನೀಡಿದನೆಂದು ಶಾಸನಗಳು ತಿಳಿಸುತ್ತವೆ.[೧೯೬] ಹಿರಿಯೂರು ಸೀಮೆಯನ್ನು ವಹಿಸಿಕೊಟ್ಟಾಗ ಅದರ ನೆನಪಿಗೊಸ್ಕರ ಹಿರಿಯೂರಿನಲ್ಲಿ ವೀರಭದ್ರ ದೇವಾಲಯವನ್ನು ಕಟ್ಟಿಸಿದನು.[೧೯೭] ಚಿತ್ರದುರ್ಗದ ಇತಿಹಾಸದಲ್ಲಿ ಗಮನಾರ್ಹ ಸ್ಥಾನ ಪಡೆದ ಸ್ಥಳೀಯ ದೇವತೆಗಳಲ್ಲಿ ಏಕನಾಥೇಶ್ವರಿಯಂತಲೇ ಪ್ರಸಿದ್ಧಳಾದ ಈ ದೇವಿಯ ದೇವಾಲಯದ ನಿರ್ಮಾತೃವು ಈತನೇ ಆಗಿದ್ದಾನೆ. ಚಿತ್ರದುರ್ಗದ ಪಾಳೆಯಗಾರರ ಆರಂಭಿಕ ನಾಯಕರು ನೀರ್ಥಡಿ ರಂಗನಾಥ ದೇವಾಲಯವನ್ನು ಕಟ್ಟಿಸಿರುವುದು ಕಂಡುಬರುತ್ತದೆ. ಕ್ರಿ.ಶ. ೧೬೩೪ರಲ್ಲಿ ಮೊಗಲ್ ಸೈನ್ಯವು ನೀರ್ಥಡಿಯ ಗುಡಿಯನ್ನು ಮತ್ತು ದೇವರ ಮೂರ್ತಿಯನ್ನು ಧ್ವಂಸಗೊಳಿಸಿದಾಗ, ಬರಮಣ್ಣನಾಯಕನು ಕ್ರಿ.ಶ. ೧೬೯೮ರಲ್ಲಿ ಈ ದೇವಾಲಯವನ್ನು ದುರಸ್ಥಿಗೊಳಿಸಿ ದತ್ತಿ ಕೊಡುವುದರ ಮೂಲಕ ಜೀರ್ಣೋದ್ಧಾರ ಮಾಡಿದನು.[೧೯೮] ಈ ನಾಯಕರ ಕಾಲದಲ್ಲಿ ಕಟ್ಟಲ್ಪಟ್ಟ ಉತ್ಸವಾಂಬೆಯ ದೇವಾಲಯವು ಕೂಡ ಪ್ರಮುಖವಾದುದು. ಬರಮಣ್ಣನಾಯಕ ಮತ್ತು ಹಿರಿಯ ಮದಕರಿ ನಾಯಕನು ಈ ದೇಗುಲವನ್ನು ನಿರ್ಮಿಸಿರುವರು.

ಚಿತ್ರದುರ್ಗದ ನಾಯಕರು ತಮ್ಮ ಕಾಲದಲ್ಲಿ ನಿರ್ಮಾಣಗೊಂಡ ಮಂದಿರಗಳಲ್ಲದೆ ಈ ಹಿಂದೆ ಹೊಯ್ಸಳರು, ವಿಜಯನಗರದ ಅರಸರು ನಿರ್ಮಿಸಿದ ದೇವಾಲಯಗಳಿಗೆ ದಾನದತ್ತಿ ನೀಡಿ ಪ್ರೋತ್ಸಾಹಿಸಿರುವರು. ಸಂಪಿಗೆ ಸಿದ್ಧೇಶ್ವರನ ಗುಡಿ, ಕಾಶಿವಿಶ್ವೇಶ್ವರನ ಗುಡಿ, ಬನಶಂಕರಿ ಗುಡಿ ಮುಂತಾದವು ಈ ಪಾಳೆಯಗಾರರು ದೇವಾಲಯಗಳನ್ನು ಕಟ್ಟಿಸಿ ಅವುಗಳನ್ನು ಪೋಷಿಸಿದಂತೆಯೇ ಮಠ ಮಾನ್ಯಗಳಿಗೂ ಆಶ್ರಯ ನೀಡಿದರು. ಶೃಂಗೇರಿಯ ಜಗದ್ಗುರುಗಳು ಈ ಪಾಳೆಯಗಾರರ ಮೂಲ ಗುರುಗಳಾಗಿದ್ದರಿಂದ ಮಠದ ಒಂದು ಶಾಖೆಯನ್ನು ಚಿತ್ರದುರ್ಗದಲ್ಲಿ ಸ್ಥಾಪಿಸಿದರು. ಸನ್ನದುಗಳನ್ನಿತ್ತು ಬೇಕಾದ ವ್ಯವಸ್ಥೆಗಳನ್ನು ಮಾಡಿದರು. ಶ್ರೀ ಮುರುಘರಾಜೇಂದ್ರರಿಂದ ಉಪಕೃತನಾಗಿ ಅವರಿಗೆ ಬರಮಣ್ಣನಾಯಕನು ಬೃಹನ್ಮಠವನ್ನು ಕಟ್ಟಿಸಿಕೊಟ್ಟನು ಹಾಗೂ ಈ ಮಠಕ್ಕೆ ದಾನದತ್ತಿಗಳನ್ನು ನೀಡಿದನು. ಚಿತ್ರದುರ್ಗದಲ್ಲಿ ಶೃಂಗೇರಿಮಠ ಸತ್ಯಬೋಧಾಚಾರ್ಯರ ಮಠ, ರಾಘವೇಂದ್ರ ಸ್ವಾಮಿಗಳ ಮಠ, ತಾತಾಚಾರ್ಯರ ಮಠ, ಮುರುಘರಾಜೇಂದ್ರ ಬೃಹನ್ಮಠ, ಮಂಡಿಮಠ, ಮದ್ವಾಚಾರ್ಯರ ಮಠ, ಉಜ್ಜಯಿನಿ ಮಠ, ಮೈಸೂರು ಮಠ, ಮೊದಲಾದ ಮಠಗಳನ್ನು ಕಟ್ಟಲು ಸಹಾಯ ಮಾಡಿದರು. ಅಲ್ಲದೆ ಚಿಕ್ಕಣ್ಣನಾಯಕ, ಬರಮಣ್ಣನಾಯಕ, ಹಿರಿಯ ಮದಕರಿನಾಯಕ, ರಾಜಾವೀರಮದಕರಿನಾಯಕ ಶಿವಮೊಗ್ಗ ಜಿಲ್ಲೆಯ ಕೂಡಲೀ ಶೃಂಗೇರಿ ಮಠಾಧೀಶರ ಅನನ್ಯ ಭಕ್ತರಾಗಿದ್ದು ಈ ಮಠಕ್ಕೆ ಅನೇಕ ದಾನದತ್ತಿಗಳನ್ನು ಕೊಟ್ಟಿದ್ದಾನೆ.

ಪಾಳೆಯಗಾರರು ನೃತ್ಯ, ಸಂಗೀತ ಕಲಾರಾಧಕರಾಗಿದ್ದರು. ವಿದ್ವಾಂಸರಿಗೆ ಪೋಷಕರಾಗಿದ್ದರು. ಇವರ ಕಾಲದಲ್ಲಿ ಹಲವಾರು ಅಗ್ರಹಾರಗಳು ಮತ್ತು ಬ್ರಹ್ಮಪುರಿಗಳು ಸ್ಥಾಪಿಸಲ್ಪಟ್ಟವು. ಎರಡನೆಯ ಮದಕರಿ ನಾಯಕನು ಕಡಲೆಗುದ್ದು ಗ್ರಾಮದಲ್ಲಿ ಅಗ್ರಹಾರವನ್ನು ಸ್ಥಾಪಿಸಿದನು. ಅದನ್ನು ಕ್ಷಾತ್ರ ಭಟ್ಟರ ಅಭಿವೃದ್ಧಿಗೆ ಸಮರ್ಪಿಸಿಸನು.[೧೯೯] ಚಿಕ್ಕಣ್ಣನಾಯಕನ ಮಗ ಮದಕರಿನಾಯಕನು ಜಗಳೂರು ಸೀಮೆಯ ಕಸವನಳ್ಳಿ ಗ್ರಾಮವನ್ನು ಅಗ್ರಹಾರವನ್ನಾಗಿ ಮಾಡಿ ಸೀನಯ್ಯನೆಂಬುವನಿಗೆ ವಹಿಸಿಕೊಟ್ಟನು.[೨೦೦] ಮತ್ತು ಕೃಷ್ಣದೇವರಾಯನ ಕಾಲದಲ್ಲಿ ಸ್ಥಾಪಿಸಲಾಗಿದ್ದ ಅನೆಸಿದ್ರಿ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ ಶಿಲಾಶಾಸನ ಹೊರಡಿಸಿದನು.[೨೦೧] ಬಿಚ್ಚುಗತ್ತಿ ಬರಮಣ್ಣ ನಾಯಕನು ಬಿಳೀಚೋಡು ಸೀಮೆಯ ಕಲ್ಲೇನಹಳ್ಳಿ.[೨೦೨] ಮತ್ತು ಚಿತ್ರದುರ್ಗ ಸೀಮೆಗೆ ಸೇರಿದ ಹುಳುವಾಧಾರ ಗ್ರಾಮಗಳನ್ನು[೨೦೩] ಅಹುದಾನಗಳನ್ನಾಗಿ ಮಾಡಿದನು. ಹಿರಿಯ ಮದಕರಿ ನಾಯಕನು ಆನೆಸಿದ್ದಿ ಅಗ್ರಹಾರವನ್ನು ಕವಿಕೋಣಪ್ಪನ ಅಗ್ರಹಾರವೆಂದು ಮರುನಾಮಕರಣ ಮಾಡಿ ಅದಕ್ಕೆ ಬೇಕಾದ ಭೂಮಿಯನ್ನು ದತ್ತಿ ನೀಡಿದನು.[೨೦೪] ಅಲ್ಲದೆ ಕೊಡಗನೂರು ಸೀಮೆಗೆ ಸೇರಿದ ಮಲ್ಲಣ್ಣನ ಹಳ್ಳಿಯನ್ನು ದುರಸ್ತಿಗೊಳಿಸಿ ಅದಕ್ಕೆ ಮದಕರಿಪುರವೆಂದು ನಾಮಕರಣಮಾಡಿ ಅಗ್ರಹಾರ ಸ್ಥಾಪಿಸಿ ಅದನ್ನು ಶಾಮಾಚಾರ್ಯಾರೆಂಬುವರಿಗೆ ವಹಿಸಿಕೊಡಲಾಯಿತು.[೨೦೫]

ಮತ್ತೋಡು ಪಾಳೆಯಗಾರನಾದ ಹಾಲಪ್ಪನಾಯಕನು ತನ್ನ ತಂದೆ-ತಾಯಿಯರಿಗೆ ಶಿವ ಸಾನಿಧ್ಯ ದೊರಕಲೆಂದು ಕ್ರಿ.ಶ. ೧೭೦೭ರಲ್ಲಿ ಮುರಿಗೆ ಸ್ವಾಮಿಗಳ ಮಠವೊಂದನ್ನು ಮತ್ತೋಡಿನಲ್ಲಿ ಕಟ್ಟಿಸಿ ಅದರ ನಿರ್ವಹಣೆಗಾಗಿ ಅರೆಹಳ್ಳಿ ಎಂಬ ಹಳ್ಳಿಯನ್ನು ದತ್ತಿ ಬಿಟ್ಟನು.[೨೦೬] ಅಲ್ಲದೆ ಕ್ರಿ.ಶ.೧೭೯೯ರಲ್ಲಿ ಚಿಗತಿಮ್ಮಣ್ಣ ಎಂಬುವವನಿಗೆ ಶಿವಾರ್ಪಿತವಾಗಿ ಒಂದು ಗದ್ದೆ ನೀಡಿ,[೨೦೭] ಕ್ರಿ.ಶ. ೧೭೫೬ರಲ್ಲಿ ಬೇವಿನಹಳ್ಳಿ ದೇವತೆಗೆ ಸಲ್ಲುವ ಕಪ್ಪ ಕಾಣಿಕೆ ಸರ್ವಮಾನ್ಯವೆಂದು ಅದಕ್ಕೆ ಯಾರೂ ತಪ್ಪಬಾರದೆಂದು ಕಟ್ಟಳೆ ಮಾಡಿದನು.[೨೦೮] ತನ್ನ ಪೂರ್ವಿಕರು ಸ್ಥಾಪಿಸಿದ್ದ ಗಂಜಿಗೆರೆ ಅಗ್ರಹಾರವು ಹಾಳುಬಿದ್ದಿರುವುದನ್ನು ನೋಡಿ ಕ್ರಿ.ಶ. ೧೭೩೬ರಲ್ಲಿ ಅದನ್ನು ಜೀರ್ಣೋದ್ಧಾರ ಮಾಡಿದನು.[೨೦೯] ಗುಮ್ಮನಾಯಕನಹಳ್ಳಿ ಪಾಳೆಯಗಾರನಾದ ವೀರದಾಸಪ್ಪನು ಶ್ರೀರಂಗರಾಯನ ಅಣತಿಯ ಮೇರೆಗೆ ದಾಸಪ್ಪ ಪಾಳ್ಯದಿಂದ ೨೦೦೦ ಗಾರೆ ಕೂಲಿಕಾರರನ್ನು ಕರೆದುಕೊಂಡು ಹೋಗಿ ಶ್ರೀರಂಗಪಟ್ಟಣ ದೇವಾಲಯದ ಪೂರ್ವದಿಕ್ಕಿನ ಮೂರು ಗೋಪುರಗಳನ್ನು ಸ್ವಂತ ಖರ್ಚಿನಿಂದ ನಿರ್ಮಿಸಿದನು ಎನ್ನಲಾಗಿದೆ.[೨೧೦]

ಹರಪನಹಳ್ಳಿ ಪಾಳೆಯಗಾರರ ಆರಂಭದ ದೊರೆಯಾದ ದಾದೆಯನಾಯಕನು ಕ್ರಿಶ ೧೫೭೨ರಲ್ಲಿ ಗುರುವಿಗೂ, ತಂದೆ-ತಾಯಿಯವರಿಗೂ ಪುಣ್ಯವಾಗಬೇಕೆಂದು ಕೊಟ್ಟೂರು ಸೀಮೆಯ ಶ್ರೀಬಾಗುಳಿಯ ಕಲ್ಲಿನಾಥ ದೇವರ ಸನ್ನಿಧಿಯಲ್ಲಿ ಮನ್ನಾ ಮಾಡಿದರು. ಕ್ರಿಶ ೧೭೩೧ರಲ್ಲಿ ವೀರಬಸಪ್ಪನಾಯಕನು ನಾರಾಯಣದೇವರ ಕೆರೆಯ ಶಿದ್ಧಾಂತಿ ರಮಣ ಭಟ್ಟರಿಗೆ ಡಣಾಯಕನಕರೆ ಗ್ರಾಮದ ಭೂಮಿಯನ್ನು

ದಾನವಾಗಿ ನೀಡಿರುವುದು ಕಂಡುಬರುತ್ತದೆ. ಕ್ರಿಶ ೧೭೧೧ರಲ್ಲಿ ಬಾಗುಳಿಯ ಹರಿಯಮಾಜಿಯು ರಾಜ ಪುರೋಹಿತ ನಾಗದೇವಭಟ್ಟನಿಗೆ ವಕ್ಕಳದ ಗದ್ದೆಯನ್ನು ದಾನಮಾಡಿರುವುದು ತಿಳಿದು ಬರುತ್ತದೆ. ಕ್ರಿ ೧೭೦೧ರಲ್ಲಿ ಮುಮ್ಮಡಿ ಬಸಪ್ಪ ನಾಯಕನು ಶೃಂಗೇರಿ ಶ್ರೀ ಶಂಕರ ಭಾರತೀ ಸ್ವಾಮಿಗಳ ಮಠಕ್ಕೆ ಬಸವಾಪುರ ಗ್ರಾಮವನ್ನು ಸರ್ವಮಾನ್ಯವಾಗಿ ಕೊಟ್ಟಿರುವುದು ಶಾಸನದ ಆಧಾರದಿಂದ ತಿಳಿದುಬರುತ್ತದೆ. ಕ್ರಿಶ ೧೭೨೧ರಲ್ಲಿ ಮುದಿಬಸಪ್ಪನಾಯಕನು ಕೊಟ್ಟೂರು ಬಸವೇಶ್ವರ ದೇವರಿಗೆ ಸೊಗಕೆಯಿವಡನಹಳ್ಳಿ ಗ್ರಾಮವನ್ನು ದಾನವಾಗಿ ಕೊಟ್ಟಿರುವುದು ಕಂಡುಬರುತ್ತದೆ.

ನಾಡತಳವಾರರಾಗಿದ್ದ ಗುಡೇಕೋಟೆ ಪಾಳೆಯಗಾರರು ಬೇಡ ಬುಡಕಟ್ಟಿಗೆ ಸೇರಿದವರು. ಈ ವಂಶದ ಮುಮ್ಮಡಿ ಬೊಪ್ಪಣ್ಣ ನಾಯಕನು ಕ್ರಿಶ ೧೭೫೫ರಲ್ಲಿ ಶ್ರೀ ಮರಿ ಕೊಟ್ಟೂರು ಸ್ವಾಮಿಗಳವರಿಗೆ ಕುಡಿತಿನಿ ಮಠದ ದಾಸೋಹಕ್ಕೆಂದು ದತ್ತಿ ಬಿಟ್ಟ ಉಲ್ಲೇಖವಿದೆ. ಕನಕಗಿರಿಯ ಪರಸಪ್ಪನಾಯಕನು ವಿಶಿಷ್ಟಾದ್ವೈತ ಸಂಪ್ರದಾಯದ ಶ್ರೀ ವೈಷ್ಣವ ಸ್ವಾಮಿಯಾದ ಕೊಂಡಮಾಚಾರ್ಯ ಎಂಬುವರಿಗೆ ತಿಪ್ಪನಾಳ ಮತ್ತು ಮಲ್ಲಾಪುರ ಗ್ರಾಮಗಳನ್ನು ಕೊಟ್ಟು ಕನಕಾಚಲಪತಿಯ ನಿತ್ಯ ಪೂಜೆ ಜರಗುವಂತೆ ನೇಮಿಸಿದ್ದನು.[೨೧೧] ಕೆಲವಡಿ ಉಡಿಚನಾಯಕನ ರಾಣಿ ಕೋನಾಟಮ್ಮಳು ಮೋನಪ್ಪಯ್ಯನ ಮಠವನ್ನು ಕಟ್ಟಿಸಿದಳೆಂದು ತಿಳಿಯುತ್ತದೆ.[೨೧೨] ಇಮ್ಮಡಿ ಉಡಿಚನಾಯಕನ ರಾಣಿ ಚೆನ್ನಮ್ಮಳು ಕನಕಗಿರಿಯಲ್ಲಿ ಪೇಟೆ ಬಸವಣ್ಣ ದೇವಾಲಯ ಕಟ್ಟಿಸಿದಳು. ಇಮ್ಮಡಿ ಕನಕಪ್ಪ ಉಡಿಚನಾಯಕರ ಕಾಲದಲ್ಲಿ ಚಿದಾನಂಧಾವಧೂತರು ಎಂಬ ಮಹಾಂತರು ಕನಕಗಿರಿಗೆ ಆಗಮಿಸಿದಾಗ, ಅವರಿಗೆ ಒಂದು ಆಶ್ರಮವನ್ನು ಈ ನಾಯಕನು ಕಟ್ಟಿಸಿ ಕೊಟ್ಟನು.[೨೧೩]

ಪ್ರಾಚೀನ ಕಾಲದಲ್ಲಿ ಬೇಟೆಯಾಡುತ್ತಾ ಕಾಡಿನಲ್ಲಿ ಜೀವಿಸಿಕೊಂಡಿದ್ದ ನಾಯಕರು ಗುಪ್ತರ ಕಾಲದಲ್ಲಿ ಕಾಡಿನಿಂದ ನಾಡಿನ ಸಂಪರ್ಕಕ್ಕೆ ಬಂದರು. ಅಲ್ಲಿಂದ ವಿಜಯನಗರದ ಪೂರ್ವದವರೆಗೆ ವಿವಿಧ ಸೈನಿಕ ವೃತ್ತಿಗಳಲ್ಲಿ ಕಂಡುಬಂದರು. ಕಾಲಕ್ರಮೇಣ ತಮ್ಮ ಧೈರ್ಯ ಸಾಹಸಗುಣಗಳಿಂದ ಪಾಳೆಯ ಪಟ್ಟುಗಳನ್ನು ಸ್ಥಾಪಿಸಿಕೊಂಡರು. ವಿಜಯನಗರ ಪೂರ್ವದಲ್ಲಿ ಕುಮ್ಮಟ ದುರ್ಗದ ಅರಸರಲ್ಲಿ ಬೇಡರು ತಮ್ಮ ನೆಲೆಯನ್ನು ಕಂಡುಕೊಂಡರು. ಕ್ರಿಶ ೧೩೮೦-೧೩೮೩ರ ಶಾಸನಗಳು ಮುಮ್ಮಡಿಸಿಂಗನು ಕುಮ್ಮಟದುರ್ಗ ಮೊದಲು ಪಾಳೆಯಗಾರ ಎಂಬುದನ್ನು ಸಮರ್ಥಿಸುತ್ತವೆ. ಮಹಮ್ಮದ್ ಬಿನ್-ತುಘಲಕ್‌ನಿಂದ ಕುಮ್ಮಟದುರ್ಗವು ಹಾಳಾದ ಮೇಲೆ ಚದುರಿ ಹೋಗಿದ್ದ ನಾಯಕ ಜನಾಂಗವು ತದನಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಆಶ್ರಯ ಪಡೆಯಿತು. ಈ ಜನಾಂಗವನ್ನು ವಿಜಯನಗರದ ಅರಸರು ಸೈನಿಕರನ್ನಾಗಿ ಸೇರಿಸಿಕೊಂಡರು. ಮುಂದೆ ಇವರು ಅಧಿಕಾರಿಗಳಾಗಿ, ಮುಖಂಡರಾಗಿ ನೇಮಕವಾದರು.

ವಿಜಯನಗರದ ಅರಸರು ವಿಸ್ತಾರವಾದ ತಮ್ಮ ಸಾಮ್ರಾಜ್ಯದ ನಾನಾ ಭಾಗಗಳ ಆಳ್ವಿಕೆಯನ್ನು ನಿರ್ವಹಿಸುವುದು ಕಷ್ಟವಾದಾಗ, ಆಯಾ ಪ್ರದೇಶಗಳ ಆಡಳಿತ ಉಸ್ತುವಾರಿ, ಕಂದಾಯ, ವಸೂಲಿ ಶಾಂತಿ ಸುವ್ಯವಸ್ಥೆ ಕಾಪಾಡಲು ಹಾಗೂ ಯುದ್ಧದ ಸಮಯದಲ್ಲಿ ಸಹಾಯ ಮಾಡಲು ಬಲಿಷ್ಠ ಹಾಗೂ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಅಧಿಕಾರಿಗಳೇ ಮುಂದೆ ಪಾಳೆಯಗಾರರೆನಿಸಿಕೊಂಡರು. ಈ ಪಾಳೆಯಗಾರರು ದಿನದಿಂದ ದಿನಕ್ಕೆ ಸ್ಥಳೀಯವಾಗಿ ಪ್ರಬಲಗೊಳ್ಳುತ್ತಲೇ ಬಂದರು. ಕ್ರಿ.ಶ. ೧೫೬೫ರಲ್ಲಿ ಪತನವಾದಾಗ ಪಾಳೆಯಗಾರರು ಸ್ವತಂತ್ರರಾದರು.

ವಿಜಯನಗರ ಸ್ಥಾಪನೆಗೆ ಪ್ರೇರಕರಾಗಿ, ಅನಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಸಂರಕ್ಷಕರಾಗಿ, ವಿಜಯನಗರ ಪತನಾನಂತರ ಅದರ ನೆರಳಾಗಿ ಪಾಳೆಯಗಾರರು ಕರ್ನಾಟಕದ ಇತಿಹಾಸಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ಬೇಡರ ಸಂಸ್ಕೃತಿ ವಿಶ್ವದ ಇತಿಹಾಸದಲ್ಲಿ 'ವೀರ ಸಂಸ್ಕೃತಿ' ಎಂದೇ ಹೆಸರಾಗಿದೆ. ಅನೇಕ ಸ್ಥಿತ್ಯಂತರಗಳನ್ನು ಕಂಡ ಜನಾಂಗವು ಕಾಲಗತಿಗೆ ಸಿಕ್ಕು ರಾಜಕೀಯವಾಗಿ, ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಗಮನಾರ್ಹ ಸಾಧನೆ ಮಾಡಿದುದು ಪ್ರಮುಖ ಅಂಶವಾಗಿದೆ.

**ಬಯಕಾರ ರಾಮಪ್ಪನ ಕುಟುಂಬದ ಹಿನ್ನೆಲೆ**

ಅಮರನಾಯಕರು ದಕ್ಷಿಣ ಭಾರತದಲ್ಲಿನ ವಿಜಯನಗರ ಸಾಮ್ರಾಜ್ಯದಲ್ಲಿ ರಾಜಕೀಯ, ಮಿಲಿಟರಿ ವ್ಯವಸ್ಥೆಯಲ್ಲಿ ಬಹಳ ಮುಖ್ಯವಾದ ಸ್ಥಾನವನ್ನು ಪಡೆದುಕೊಂಡಿದ್ದಾರೆ. ವಿಜಯನಗರದ ಬಗೆಗಿನ ಇದುವರೆಗೆ ರಚನೆಯಾಗಿರುವ ಬಹುಪಾಲು ಇತಿಹಾಸ ಲೇಖನಗಳು ಅಮರನಾಯಕರನ್ನು ದೊಡ್ಡ ಅಥವಾ ಸಣ್ಣ ಪ್ರಮಾಣದ ಸ್ಥಳೀಯ ಮತ್ತು ಸ್ವತಂತ್ರವಾದಿ ಪ್ರಭುಗಳೆಂದು ಒಮ್ಮತದಿಂದ ಹೇಳಿವೆ.

ವಿಜಯನಗರ ಸಾಮ್ರಾಜ್ಯ ಕೇಂದ್ರೀಕೃತ ವ್ಯವಸ್ಥೆಗಿಂತ ವಿಕೇಂದ್ರೀಕೃತ ವ್ಯವಸ್ಥೆಗೆ ಹತ್ತಿರವಾಗಿತ್ತು. ಆ ಸಾಮ್ರಾಜ್ಯವನ್ನು ಊಳಿಗಮಾನ್ಯ ವ್ಯವಸ್ಥೆಯ ಅಂಶಗಳುಳ್ಳ ವಿಕೇಂದ್ರೀಕರಣ ತತ್ವಬದ್ಧ ಸಂಯುಕ್ತ ವ್ಯವಸ್ಥೆ ಎಂದು ಹೇಳಬಹುದಾಗಿದೆ. ವಿಜಯನಗರ ಕಾಲದಲ್ಲಿ ಅಮರನಾಯಕ ಮನೆತನಗಳು ಅಸ್ತಿತ್ವಕ್ಕೆ ಬಂದವು ಮತ್ತು ವಿಜಯನಗರದ ಅರಸರ ಮನ್ನಣೆಯಿಂದ ಎಲ್ಲೆಲ್ಲಿ ಕೋಟೆಗಳನ್ನು ಕಟ್ಟಲು ಅನುಕೂಲವಿದ್ದವೋ ಅಲ್ಲಲ್ಲಿ ಇಂತಹ ಮನೆತನಗಳು ಕಾಣಿಸಿಕೊಂಡವು. ಸುಮಾರು ೧೪ನೇ ಶತಮಾನದ ಕೊನೆಯ ದಶಕದಿಂದ ಆರಂಭವಾಗುವ ಇಂತಹ ಮನೆತನಗಳು ಕೃಷ್ಣದೇವರಾಯ ಮತ್ತು ರಾಮರಾಯರ ಕಾಲಕ್ಕೆ ವ್ಯಾಪಕವಾಗಿ ಬೆಳೆದು ಬಂದವು.

ಯಾವುದೇ ಮನೆತನದ ಮೂಲವನ್ನು ಹುಡುಕುವುದು ಇತಿಹಾಸ ಸಂಶೋಧಕನಿಗೆ ಒಂದು ಕುತೂಹಲಕಾರಿ ವಿಷಯವಾಗಿರುತ್ತದೆ. ದಕ್ಷಿಣ ಭಾರತದ ಪ್ರಧಾನ ಮನೆತನಗಳಾದ ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಯಾದವ, ವಿಜಯನಗರ ಮತ್ತು ಒಡೆಯರ್ ಮನೆತನಗಳ ಮೂಲವನ್ನು ಅಧ್ಯಯನ ಮಾಡಿದಾಗ ಕೆಲವೊಂದು ಸಮಾನವಾದ ಅಂಶಗಳು ದೊರಕುತ್ತವೆ. ಈ ಪ್ರಸಿದ್ಧ ಆಳರಸ ಮೂಲ ಪುರುಷ ಶಿಷ್ಟವಾದ ಆರ್ಯ ಸಂಪ್ರದಾಯಕ್ಕೆ ಸೇರಿದವನಾಗಿರುತ್ತಾನೆ. ಎರಡನೆಯದಾಗಿ ಈ ವಂಶದ ಮೂಲ ಪುರುಷ ಅಥವಾ ಪುರುಷರು ಅಯೋಧ್ಯೆ, ಕುರುಕ್ಷೇತ್ರ ಮತ್ತು ದ್ವಾರಕೆಗಳಿಂದ ಬಂದವರಾಗಿರುತ್ತಾರೆ. ಮೂರನೆಯದಾಗಿ ಪ್ರಸಿದ್ಧ ಋಷಿಗಳು ಮೂಲ ಪುರುಷರನ್ನು ಸೃಷ್ಟಿಸಿರುತ್ತಾರೆ. ಋಷಿಯ ಚುಳುಕದಿಂದ ಚಲುಕ್ಯ ವಂಶದ ಮೂಲ ಪುರುಷ ಹುಟ್ಟಿದ ಎಂಬ ಐತಿಹ್ಯವನ್ನು ನೋಡಬಹುದು.[೨೧೪] ಒಡೆಯರ್ ವಂಶದ ಮೂಲ ಪುರುಷರಾದ ಯದುರಾಯ ಮತ್ತು ಕೃಷ್ಣರಾಯರು ದ್ವಾರಕೆಯಿಂದ ಬಂದವರೆಂದು ಸಂಪ್ರದಾಯವೊಂದು ತಿಳಿಸುತ್ತದೆ.[೨೧೫] ವಿಜಯನಗರ ಅರಸರು ಆಂಧ್ರಮೂಲದವರೆಂದು ವಾದಿಸುವ ಒಂದು ಸಿದ್ಧಾಂತ. ಅವರು ಕನ್ನಡಿಗರೆಂದು ಪ್ರತಿಪಾದಿಸುವ ಇನ್ನೊಂದು ಸಿದ್ಧಾಂತವೂ ಇದೆ. ಹೀಗೆ ಪ್ರಸಿದ್ಧ ಮನೆತನಗಳ ಮೂಲದ ಬಗೆಗೆ ಇಷ್ಟೊಂದು ಭಿನ್ನಾಬಿಪ್ರಾಯಗಳು ಇರುವಾಗ ಈ ಕಾಲದಲ್ಲಿ ತಲೆ ಎತ್ತಿದ ಚಿಕ್ಕ ಮನೆತನಗಳ ಮೂಲ ಪುರುಷರ ಬಗೆಗೆ ಏನನ್ನು ಸ್ಪಷ್ಟವಾಗಿ ಹೇಳುವುದು ಅಸಾಧ್ಯವಾಗಿದೆ. ಯಾವುದೇ ಚಿಕ್ಕ ಮನೆತನದ ಮೂಲವನ್ನು ಪ್ರಸ್ತಾಪ ಮಾಡುವಾಗ ಒಂದು ಅಂಶವನ್ನು ಗಮನದಲ್ಲಿಟ್ಟುಕೊಳ್ಳಬೇಕು. ಅದೇನೆಂದರೆ ವಿಜಯನಗರ ಸಾಮ್ರಾಜ್ಯದ ಸ್ವರೂಪದ ಚೌಕಟ್ಟಿನೊಳಗೆ ಆ ಮನೆತನಗಳ ಹುಟ್ಟು, ಬೆಳವಣಿಗೆಗಳು ಅಂತರ್ಗವಾಗಿದ್ದವು ಎನ್ನುವ ಅಂಶ.

ಬಯಕಾರ ರಾಮಪ್ಪನು ಪಾದರಿಕುಪ್ಪಂ ಗ್ರಾಮದ ಅಧಿಕಾರಸ್ಥ ಹಾಗೂ ವಿದ್ವಾಂಸರ ಸುಪ್ರಸಿದ್ಧ ಮನೆತನದಲ್ಲಿ ಜನಿಸಿದನು. ಇದು ಇಂದಿನ ಆಂಧ್ರಪ್ರದೇಶದ ಚಂಗಲ್‌ಪಟ್ಟು ಜಿಲ್ಲೆಯ ಪೊನ್ನೆರಿ ತಾಲ್ಲೂಕಿನಲ್ಲಿದೆ. ಪರಾಶರ ಗೋತ್ರದ ಆಪ್ತಸ್ತಂಭ ಸೂತ್ರದ ಯಜುಸ್ ಶಾಖೆಯ ಹಿರಿಯ ತಿಮ್ಮರಸಯ್ಯ ಮತ್ತು ಹಿರಿಯ ಲಕುಲೀಶಮ್ಮರು ಇವನ ತಂದೆ ತಾಯಿಯರು. ಶಾಸನಗಳಲ್ಲಿ ತಿಳಿಸಿರುವಂತೆ ಸಿಂಗಯ್ಯ ಎಂಬುವವನು ಇವನ ವಂಶದ ಮೂಲಪುರುಷ. ಇವನ ಮಗ ಭಾವಯ್ಯ, ಭಾವಯ್ಯನಿಗೆ ರಾಮಮಂತ್ರಿ ಎನ್ನುವ ಮಗನಿದ್ದನು. ರಾಮಮಂತ್ರಿಗೆ ತೆಲುಗಮ್ಮಳೆಂಬ ಧರ್ಮಪತ್ನಿಯಲ್ಲಿ ಪೆದತಿಮ್ಮಯ್ಯ, ತಿಮ್ಮಮಂತ್ರಿ, ಸುರೇಂದ್ರ, ಭಾಸ್ಕರ ಅಥವಾ ಬಾಚರಸಯ್ಯ ಮತ್ತು ಬಾವಯ್ಯ ಎಂಬ ಐವರು ಗಂಡುಮಕ್ಕಳು ಹಾಗೂ ಚಿನ್ನಮಾಂಬ ಎನ್ನುವ ಏಕಮಾತ್ರ ಮಗಳಿದ್ದಳು. ರಾಮಮಂತ್ರಿಯ ಮಕ್ಕಳಲ್ಲಿ ಹಿರಿಯವನಾದ ಪೆದತಿಮ್ಮಯ್ಯನೆ ಬಯಕಾರ ರಾಮಪ್ಪನ ತಂದೆ. ಪೆದತಿಮ್ಮಯ್ಯನನ್ನು ತಿಮ್ಮಾಮಾತ್ಯನೆಂದು ಕರೆಯಲಾಗಿದೆ. ಬಯಕಾರ ರಾಮಪ್ಪನ ಪತ್ನಿ

ವೀರಮ್ಮ. ಇವರಿಗೆ ಲಿಂಗಾಲಯ ಮತ್ತು ಆಕಪ್ಪ ಎಂಬ ಇಬ್ಬರು ಗಂಡು ಮಕ್ಕಳು, ಅಚ್ಯುತಮ್ಮ ಮತ್ತು ಕಾಮಾಂಬಿಕಾ ಎನ್ನುವ ಇಬ್ಬರು ಹೆಣ್ಣು ಮಕ್ಕಳಿದ್ದರು. ಬಯಕಾರ ರಾಮಪ್ಪನ ವಂಶಾವಳಿಯನ್ನು ಈ ಕೆಳಕಂಡಂತೆ ರಚಿಸಲಾಗಿದೆ.




ಬಯಕಾರ ರಾಮಪ್ಪನ ಪೂರ್ವಿಕರು ಆಂಧ್ರಪ್ರದೇಶದ ಕೊಂಡವೀಡು ಎನ್ನುವ ಪ್ರದೇಶಕ್ಕೆ ಸೇರಿದವರಾಗಿದ್ದು, ಕಾಲಕ್ರಮೇಣ ಕರ್ನಾಟಕಕ್ಕೆ ವಲಸೆ ಬಂದು ಜೀವಿಸಿರಬಹುದಾದ ಸಾಧ್ಯತೆಯಿದೆ. ಏಕೆಂದರೆ ೧೫-೧೬ನೇ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಸಾಹಸಿಗರಿಗೆ ರಾಜಕೀಯ ಘಟಕಗಳನ್ನು ಸ್ಥಳೀಯವಾಗಿ ಸ್ಥಾಪಿಸಿಕೊಳ್ಳುವ ಅವಕಾಶಗಳು ಕಾದು ಕುಳಿತಿದ್ದವು ಎಂಬುದನ್ನು ಬೇರೆ ಬೇರೆ ಮನೆತನದ ಮೂಲ ಪುರುಷರ ಚರಿತ್ರೆಗಳನ್ನು ಆ ಕುಟುಂಬಗಳ ವಲಸೆಯ ಹಿನ್ನೆಲೆಗಳನ್ನು ಅಧ್ಯಯನ ಮಾಡಿದಾಗ ಗೊತ್ತಾಗುತ್ತದೆ.[೨೧೬]

ಲೂಯಿರೈಸ್‌ರವರು "ಚಿತ್ರದುರ್ಗದ ಪಾಳೆಯಗಾರರ ಮೂಲ ಪುರುಷನಾದ ತಿಮ್ಮಣ್ಣನಾಯಕನು ತಿರುಪತಿ ಬಳಿ ಇರುವ ಮದಕರಿ ಎಂಬ ಊರಿನಿಂದ ಹೊರಟು ಕನ್ನಡನಾಡಿಗೆ ಆಗಮಿಸಿ ಚನ್ನಗಿರಿ ತಾಲೂಕಿನಲ್ಲಿನ ಬಸವಾಪಟ್ಟಣದ ಪಾಳೆಯಗಾರರ ಸೇವೆಯಲ್ಲಿ ನಿಂತು ಕಾಲಕ್ರಮೇಣ ಸ್ವಂತ ಪಾಳೆಯಪಟ್ಟನ್ನು ಕಟ್ಟಿದನೆಂಬುದಾಗಿ" ತಿಳಿಸುತ್ತಾರೆ. ಹಾಗಲವಾಡಿ ನಾಯಕರ ಮೂಲ ಪುರುಷನು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿನ ಆದೋನಿ ತಾಲ್ಲೂಕಿನಲ್ಲಿರುವ ಚಿನ್ನತುಮ್ಮಳು ಪ್ರದೇಶದಿಂದ ಹಿರಿಯೂರು, ಹೊಸದುರ್ಗ, ಹುಳಿಯಾರು ಮಾರ್ಗವಾಗಿ ಚಿಕ್ಕನಾಯ್ಕನ ಹಳ್ಳಿಗೆ ಬಂದನು.[೨೧೭] ನಾಯಕನಹಟ್ಟಿ ಪಾಳೆಯಗಾರರ ಮೂಲ ಪುರುಷ ಶ್ರೀಶೈಲ ಸಮೀಪದ ಕರೆಮಲೆ ಬಿಳಿಮಲೆಗಳ ಕಾಡಿನಲ್ಲಿ ಇದ್ದವನೆಂದು ಅನಂತರದಲ್ಲಿ ಕರ್ನಾಟಕಕ್ಕೆ ವಲಸೆ ಬಂದವನೆಂದೂ

ತಿಳಿದುಬರುತ್ತದೆ.[೨೧೮] ಗುಮ್ಮನಾಯ್ಕನ ಹಳ್ಳಿಯ ಪಾಳೆಯಗಾರರು ಆಂಧ್ರಪ್ರದೇಶದ ಈಗಿನ ಚಿತ್ತೂರು ಜಿಲ್ಲೆಯ ಮದನಪಲ್ಲಿಯ ತಾಲೂಕಿಗೆ ಸೇರಿದವರಾಗಿದ್ದು, ಪೆದ್ದಪಾಳ್ಯಂ ಇವರ ಮೂಲವಾಗಿದೆ.[೨೧೯]

ಬಯಕಾರ ರಾಮಪ್ಪನು ಯಾವ ಜನಾಂಗಕ್ಕೆ ಸೇರಿದವನೆಂದು ಹೇಳಲು ಸ್ಪಷ್ಟವಾದ ಆಧಾರಗಳು ಲಭ್ಯವಾಗುವುದಿಲ್ಲ. ಆದರೆ ವಿದ್ವಾಂಸರು ತಮಗೆ ತಿಳಿದ ಆಧಾರಗಳ ಮೇಲೆ ಇವನು ಬ್ರಾಹ್ಮಣ ಜನಾಂಗಕ್ಕೆ ಸೇರಿದವನೆಂದೂ, ಗಂಗಾಮತಸ್ಥನೆಂದೂ ಅಭಿಪ್ರಾಯಪಟ್ಟಿದ್ದಾರೆ. ಬಯಕಾರ ರಾಮಪ್ಪನು ಬ್ರಾಹ್ಮಣನೆಂದು ವಿದ್ವಾಂಸರು ಹೇಳಿರುವುದಕ್ಕೆ ಅವನು ಪರಾಶರ ಗೋತ್ರ, ಆಪ್ತಸ್ತಂಭ ಸೂತ್ರ ಯಜ್ಸುಶಾಖೆಗೆ ಸೇರಿದವನೆಂದು ಅವನ ಶಾಸನಗಳ ಉಲ್ಲೇಖವನ್ನು ತೋರಿಸುತ್ತಾರೆ. ಆದರೆ ಮಧ್ಯಕಾಲೀನ ಶ್ರೇಣೀಕೃತ ಸಮಾಜ ಮತ್ತು ಆ ನೆಲೆಯ ಅತ್ಯಂತ ಹೀನಾಯವಾದ ಜಾತಿ ವ್ಯವಸ್ಥೆಯ ಪ್ರಭಾವದಿಂದ ಶೂದ್ರ ವರ್ಗದವರು ಮೇಲ್ವರ್ಗಕ್ಕೇರಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಈ ಕಾಲದಲ್ಲಿ ಪಾಳೆಯಪಟ್ಟುಗಳ ಮೂಲತಃ ಕೆಳವರ್ಗದ ವ್ಯಕ್ತಿಗಳಿಂದ ಸ್ಥಾಪನೆಗೊಂಡು ಅವರ ಅಧಿಪತ್ಯದಲ್ಲೇ ಸಾಗಿದವು. ಕೆಲ ದಿನಗಳ ತರುವಾಯ ಮೇಲ್ವರ್ಗದ ಮಡಿಲನ್ನು ಬಯಸಿ ಹೋದವು. ಬಹುಶಃ ಪ್ರಭುಸತ್ತೆಯಿಂದ ಮಾತ್ರ ಪ್ರಬಲರಾಗಿ ಗೌರವ, ಸಂಪತ್ತುಗಳಿಗೆ ಒಡೆಯರಾಗಿದ್ದ ಇವರು ಕೆಳಜಾತಿಯ ವಿಷಯ ಬಂದಾಗ ತಲೆತಗ್ಗಿಸುವ ವಾತಾವರಣ ಅಂದು ಉಂಟಾಗಿರಬಹುದು. ಮಧ್ಯಕಾಲೀನ ಸಮಾಜ ವ್ಯವಸ್ಥೆಯಲ್ಲಿ ರಾಜಕೀಯವಾಗಿ ಮೇಲ್‌ಸ್ತರಕ್ಕೆ ಬಂದ ಬೇಡರನ್ನು ಬೇಡರಾಗಿ ನೋಡಿದರೆ ವಿನಃ ಅವರು ಬೇಡ ದೊರೆಗಳೆಂದು ಒಪ್ಪಿಕೊಳ್ಳುವ ಗುಣಗಳ ಕಡೆಗೆ ಮೇಲ್ವರ್ಗದ ಜನ ಹೋಗಲಿಲ್ಲವೆನಿಸುತ್ತದೆ. ಬ್ರಾಹ್ಮಣ ಮತ್ತು ವೀರಶೈವ ಧರ್ಮದವರು ಕೆಲವು ಬೇಡ ದೊರೆಗಳಿಗೆ ಕ್ರಮವಾಗಿ ಜನಿವಾರ ಮತ್ತು ಲಿಂಗಧಾರಣೆ ಮಾಡಿಸಿ ಅವರ ಹತ್ತಿರ ಉಳಿದುಕೊಂಡರೆ ವಿನಃ ಬೇಡ ದೊರೆ ಬೇಡನಾಗಿ ಆಳ್ವಿಕೆ ನಡೆಸಲು ಪ್ರೋತ್ಸಾಹಿಸಲಿಲ್ಲವೆಂದು ವಿಜಯನಗರ ಕಾಲದ ಘಟನೆಗಳಲ್ಲಿ ಕಾಣಬಹುದು.

ರಾಜಮಹಾರಾಜರ ಕಾಲದಲ್ಲಿ ರಾಜ ಆಶ್ರಯದಲ್ಲಿದ್ದ ಪುರೋಹಿತವರ್ಗವು ಪಾಳೆಯಗಾರರನ್ನು ಆಶ್ರಯಿಸಿತು. ಇವರು ಪಾಳೆಯಗಾರರ ಧೈರ್ಯ, ಸಾಹಸ, ಅವರ ಆಳ್ವಿಕೆ ಮುಂತಾದವುಗಳನ್ನು ಗುಣಗಾನ ಮಾಡಿ ಅವರ ಮೂಲವನ್ನು ಸಾಂದರ್ಭಿಕವಾಗಿ ಮೇಲಕ್ಕೇರಿಸಿ ಅರಸರಿಂದ ಸಾಕಷ್ಟು ಕಾಣಿಕೆಗಳನ್ನು ಸ್ವೀಕರಿಸಿದರು. ಬೇಲೂರ ಮತ್ತು ನರಸಿಂಹಪುರ ನಾಯಕರು ಇಬ್ಬರೂ ತಮ್ಮನ್ನು ಕಾಶ್ಯಪಗೋತ್ರ ಆಪ್ತಸ್ತಂಭ ಸೂತ್ರ ಯಜ್ಸುಶಾಖೆಗೆ ಸೇರಿದವರೆಂದು ಶಾಸನಗಳಲ್ಲಿ ಉಲ್ಲೇಖಿಸಿಕೊಂಡಿದ್ದಾರೆ.[೨೨೦] ಈ ನಾಯಕರ ಮೂಲಪುರುಷ ಸೂರ್ಯ ವಂಶದಲ್ಲಿ ಹುಟ್ಟಿದವನು. ತಾವು ಸೂರ್ಯ ವಂಶೀಯರೆಂಬ ಹೆಮ್ಮೆಗೆ ತಕ್ಕಂತೆ ಅವರು ತಮ್ಮನ್ನು ಕುರಿತು ಕಾಶ್ಯಪಗೋತ್ರ

ಎಂದು ಹೇಳಿಕೊಂಡಿರಬೇಕು. ಇಲ್ಲಿ ಕಾಶ್ಯಪಗೋತ್ರದ ಮೂಲ ಪುರುಷನೆಂದು ಪರಿಗಣಿಸಲಾಗಿರುವ ಕಾಶ್ಯಪ ಋಷಿಯು ಸೂರ್ಯನಿಗೆ ತಂದೆ ಎಂಬುದನ್ನು ತಿಳಿಯಬೇಕು.[೨೨೧] ಇವರಿಗೆ ಸಮಕಾಲೀನರಾದ ತಾವು ಚಂದ್ರವಂಶೀಯರೆಂಬ ಹೆಮ್ಮೆಯುಳ್ಳ ಅರವೀಡು ಮನೆತನದವರು ತಮ್ಮನ್ನು ಕುರಿತು ಆತ್ರೇಯಗೊತ್ರ ಎಂದು ಹೇಳಿಕೊಂಡಿರುವುದನ್ನು ಇದೇ ರೀತಿ ಅರ್ಥೈಸಬಹುದಾಗಿದೆ. ಇದೇ ರೀತಿ ಬಯಕಾರ ರಾಮಪ್ಪನು ಪರಾಶರಗೋತ್ರದವನೆಂದು ಹೇಳಿಕೊಂಡಿರಬಹುದೆಂದು ಊಹಿಸಬಹುದಾಗಿದೆ. ಆದರೆ ನಿಶ್ಚಿತವಾಗಿ ಬಯಕಾರ ರಾಮಪ್ಪನು ಇದೇ ಜನಾಂಗಕ್ಕೆ ಸೇರಿದವನೆಂದು ಹೇಳಲು ಆಧಾರಗಳ ಕೊರತೆಯು ಕಂಡು ಬರುತ್ತದೆ.

ಬಯಕಾರ ರಾಮಪ್ಪನ ತಂದೆ ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ರಾಯಸನೆಂಬ ಅಧಿಕಾರಿಯಾಗಿದ್ದನು. ಪೆದತಿಮ್ಮಯ್ಯನನ್ನು ತಿಮ್ಮಯಾಮಾತ್ಯನೆಂದು ಕರೆಯಲಾಗಿದೆ. ಇವನು ಕೊಂಡವೀಡು ಸೀಮೆಗೆ ಸೇರಿದ ಮೂರು ಗ್ರಾಮಗಳನ್ನು ತಿರುಪತಿಯ ಗೋವಿಂದರಾಜಸ್ವಾಮಿಯ ಅಭಿಷೇಕಕ್ಕಾಗಿ ದಾನ ಮಾಡಿದ್ದನ್ನು ನೋಡಿದರೆ ಇವನು ಎರಡನೆಯ ವರ್ಗಕ್ಕೆ ಸೇರಿದ್ದ ಅಧೀನ ಅಮರನಾಯಕನಾಗಿದ್ದಂತೆ ಕಂಡುಬರುತ್ತದೆ. ಶ್ರೀಕೃಷ್ಣದೇವರಾಯನು ಕೊಂಡವೀಡುವಿನ ದಂಡೆಯಾತ್ರೆಯ ಸಂದರ್ಭದಲ್ಲಿ ಬಯಕಾರ ರಾಮಪ್ಪನ ಚಿಕ್ಕಪ್ಪನಾದ ಭಾಸ್ಕರನು ಸಹಾಯ ಮಾಡಿದುದ್ದಕ್ಕಾಗಿ ವಿನುಕೊಂಡಕ್ಕೆ ಅಧಿಪತಿಯನ್ನಾಗಿ ನೇಮಿಸಿದ.[೨೨೨] ನಂತರದಲ್ಲಿ ತಿಮ್ಮರಸರು ಶ್ರೀಕೃಷ್ಣದೇವರಾಯನ ಮಗ ಯುವರಾಜ ತಿರುಮಲನಿಗೆ ವಿಷ ಪ್ರಯೋಗದಿಂದ ಕೊಲ್ಲಿಸಿದರೆಂದು ತಿಳಿದಾಗ ಅವರನ್ನು ಅವರ ಮಕ್ಕಳನ್ನು ಸೆರೆಗೆ ದೂಡಿದನು. ತಿಮ್ಮರಸನ ಮಗನಾದ ತಿಮ್ಮನು ಸೆರೆಯಿಂದ ತಪ್ಪಿಸಿಕೊಂಡು ಕೊಂಡವೀಡುಗೆ ತಮ್ಮ ಸಂಬಂಧಗಳ ಹತ್ತಿರ ಹೋಗಿ ಬಂಡಾಯವೆದ್ದನು. ರಾಯಸಂ ಅಯ್ಯಪ್ಪ ಅರಸನು ಇವರನ್ನು ಸೋಲಿಸಿದನು. ಈ ಸಮಯದಲ್ಲಿ ವಿನುಕೊಂಡದಲ್ಲಿ ಆಳುತ್ತಿದ್ದ ರಾಮಯ್ಯ ಭಾಸ್ಕರನನ್ನು ಶ್ರೀಕೃಷ್ಣದೇವರಾಯನು ಕೊಂಡವೀಡಿಗೆ ಅಧಿಪತಿಯನ್ನಾಗಿ ನೇಮಿಸಿರಬೇಕು.

ಬಯಕಾರ ರಾಮಪ್ಪನ ಚಿಕ್ಕಪ್ಪಂದಿರಾದ ರಾಮಯ್ಯ ಭಾಸ್ಕರ ಮತ್ತು ಭಾವಯ್ಯರು ವಿಜಯನಗರ ಸಾಮ್ರಾಜ್ಯದ ಆಡಳಿತದಲ್ಲಿ ಅತ್ಯಂತ ಪ್ರಮುಖವಾದ ಹಾಗೂ ಪ್ರಭಾವಿ ಹುದ್ದೆಗಳನ್ನು ಅಲಂಕರಿಸಿದ್ದರು. ರಾಮಯ್ಯ ಭಾಸ್ಕರನು ಬಾಚರಸನೆಂದು ಹೆಸರಾಗಿರುವನು. ಕೊಂಡವೀಡು ದುರ್ಗವು ಆಯಕಟ್ಟಿನ ಸ್ಥಳದಲ್ಲಿದ್ದುದರಿಂದ ಇದನ್ನು ಆಕ್ರಮಿಸಲು ಕಳಿಂಗದ ಗಜಪತಿಗಳು. ದಖನ್‌ಸುಲ್ತಾನರು ಮತ್ತು ವಿಜಯನಗರದ ಅರಸರಲ್ಲಿ ತೀವ್ರ ಸ್ಪರ್ಧೆಯಿತ್ತು. ಗೆದ್ದ ಈ ದುರ್ಗವನ್ನು ಉಳಿಸಿಕೊಳ್ಳಲು ಗೆದ್ದಷ್ಟೇ ಪ್ರಯಾಸಪಡಬೇಕಾಗಿತ್ತು. ಈ ದುರ್ಗದ ನಿರ್ವಹಣೆಗೆ ದಕ್ಷನೂ, ಸಚ್ಚಾರಿತ್ರನೂ ಆದ ವ್ಯಕ್ತಿಯ ಅವಶ್ಯಕತೆಯಿತ್ತು. ಆಯಕಟ್ಟಿನ ಹಾಗೂ ಸೂಕ್ಷ್ಮ ಪರಿಸ್ಥಿತಿಯ ದುರ್ಗಗಳ ಸಂರಕ್ಷಣೆಗೆ ಅಸೂಯೆ,

ದುರಾಸೆ ಮತ್ತು ವಂಚನೆಗಳಿಂದ ಮುಕ್ತರಾದ ಸನ್ನಡತೆಯ ನಾಯಕರನ್ನು ನೇಮಿಸಿದನೆಂದು ಕೃಷ್ಣದೇವರಾಯನ ರಾಯವಾಚಕಮು ತಿಳಿಸುತ್ತದೆ.

ಕೃಷ್ಣದೇವರಾಯನು ಭಾಸ್ಕರನ ನೇಮಕದ ಹಿಂದೆ ಕಂಡ ದೂರದರ್ಶಿತ್ವ ಮುಂದೊಂದು ದಿವಸ ಸಾಕಾರವಾದದ್ದುಂಟು. ರಾಯನ ಕಡು ವಿರೋಧಿಗಳಾಗಿದ್ದ ಸುಮಾರು ೭೨ ಮಂದಿ ರೆಡ್ಡಿನಾಯಕರನ್ನು ಭಾಸ್ಕರನು ಕೊಂಡವೀಡುವಿನಲ್ಲಿ ನೂತನವಾಗಿ ನಿರ್ಮಿಸಿದ ಗೋಪಿನಾಥ ದೇಗುಲಕ್ಕೆ ಆಹ್ವಾನಿಸಿ ಕೊಂದನಂತೆ, ಇದರಲ್ಲಿ ಉತ್ಪ್ರೇಕ್ಷೆ ಇರುವುದಾದರೂ ಮಧ್ಯಯುಗದಲ್ಲಿ ಇಂತಹ ಘಟನೆಗಳು ಸಾಮಾನ್ಯವೇ. ಇದರಿಂದಾಗಿ ರಾಯನ ಶತ್ರುಗಳು ನಾಶವಾಗಿ, ಅವನ ಅಧಿಕಾರ ಕೊಂಡವೀಡುವಿನಲ್ಲಿ ಪ್ರಬಲವಾಗಲು ಸಾಧ್ಯವಾಯಿತು. ಬಯಕಾರ ರಾಮಪ್ಪನ ಸಂಬಂಧದ ಎಳೆಗಳು ರಾಮಯ್ಯ ಭಾಸ್ಕರನೊಂದಿಗೆ ಪ್ರಬಲವಾಗಿದ್ದವು. ಈ ವಾತ್ಸಲ ಸಂಬಂಧದ ದ್ಯೋತಕವಾಗಿ ಒಂದು ಶಾಸನದಲ್ಲಿ ತನ್ನನ್ನು ಬಾಚರಸನ ಮಗನೆಂದು ಹೇಳಿಕೊಂಡಿದ್ದಾನೆ. ಇವನು ತನ್ನ ಚಿಕ್ಕಪ್ಪ ಬಾಚರಸ, ಚಿಕ್ಕಮ್ಮ ಅಮ್ಮಾಜಮ್ಮ ಅವರ ಮಗ ಕೃಷ್ಣಪ್ಪ ಇವರ ಹೆಸರಿನಲ್ಲಿ ಶಿವಾಲಯವನ್ನು ಕಟ್ಟಿಸಿದನು.

ಬಯಕಾರ ರಾಮಪ್ಪನು ತನ್ನ ಸಂಗೀತ ಕೃತಿಯಲ್ಲಿ ತೋದರುಮಲ್ಲ ಕುಟುಂಬಕ್ಕೆ ಸೇರಿದವನೆಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಶಾರ್ಙ್ಗದೇವನು ಬರೆದ ಸಂಗೀತ ರತ್ನಾಕರಕ್ಕೆ ಭಾಷ್ಯವನ್ನು ಬರೆದ ಕಲ್ಲಪ್ಪ ದೇಶಿಕ ಅಥವಾ ಕಲ್ಲಿನಾಥನು ಇವನ ತಾಯಿಯ ತಂದೆ. ಕಲ್ಲಿನಾಥನು ವಿಜಯನಗರದ ಇಮ್ಮಡಿ ದೇವರಾಯನ ಕಾಲದಲ್ಲಿ (೧೪೩೦)ದ್ದವನು. ಸಂಗೀತರತ್ನಾಕರಕ್ಕೆ ಅನೇಕರು ವ್ಯಾಖ್ಯಾನವನ್ನು ಬರೆದಿದ್ದಾರೆ. ಆದರೆ ಕಲ್ಲಪ್ಪನ ಮಟ್ಟಕ್ಕೇರುವ ವ್ಯಾಖ್ಯಾನಕಾರರು ಇಡೀ ಭಾರತದಲ್ಲಿ ಕೆಲವರು ಮಾತ್ರ ಸಿಕ್ಕಬಹುದು. ಭರತನ ನಾಟ್ಯಶಾಸ್ತ್ರಕ್ಕೂ ಆನಂದವರ್ಧನನ ಧ್ವನ್ಯಾಲೋಕಕ್ಕೂ ವ್ಯಾಖ್ಯಾನವನ್ನು ಬರೆದ ಅಭಿನವವಾಗುಪ್ತನ ಮಟ್ಟಕ್ಕೇರಬಲ್ಲ ವ್ಯಾಖ್ಯಾನಕಾರ ಈ ಕಲ್ಲಪ್ಪ. ಈತನ ವ್ಯಾಖ್ಯಾನ, ಸಂದಿಗ್ಧ ಸ್ಥಿತಿಯಲ್ಲಿದ್ದ ಅಂದಿನ ಸಂಗೀತದ ಬೆಳವಣಿಗೆಗೆ ಸರಿಯಾದ ಮಾರ್ಗದರ್ಶನ ಮಾಡುವ ಪ್ರಭೋದಕ ಶಕ್ತಿಯಾಗಿ ಪರಿಣಮಿಸಿತು. ಅನಂತರ ಬಂದ ಶಾಸ್ತ್ರಕಾರರ ಮೇಲೆಲ್ಲಾ ಕಲ್ಲಿನಾಥನ ಕಲಾನಿಧಿಯ ಪ್ರಭಾವ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತದೆ. ಸ್ವರಗಳ ಚೌಕಟ್ಟು, ರಾಗ ವಿಭಾಗಗಳು ಮತ್ತು ಸಂಗೀತದ ಇತರ ಸೂಕ್ಷ್ಮವಾದ ಹಾಗೂ ಪಾರಿಭಾಷಿಕವಾದ ಸಮಸ್ಯೆಗಳು ಈ ಮೊದಲಾದವುಗಳನ್ನೆತ್ತಿಕೊಂಡು ಪ್ರಗತಿಪರವಾದ ಮುನ್ನಡೆಯ ದೃಷ್ಟಿಯಿಂದ ವಿವೇಚಿಸಿದನು. ಪರಂಪರೆಯ ಹಂದರದ ಮೇಲೆ ಪ್ರತಿಭಾವಲ್ಲರಿಯನ್ನು ಹಬ್ಬಿಸಿದನು. ಭಾರತೀಯ ಸಂಗೀತದ ಕೇಂದ್ರವಾಗಿ ಕಲ್ಲಿನಾಥನು ಪರಿಣಮಿಸಿದನು.

ಬಯಕಾರ ರಾಮಪ್ಪನ ತಂದೆಯ ತಂಗಿಯಾದ ಚಿನ್ನಮಾಂಬಳನ್ನು ಕೊಂಡವೀಡು ಸೀಮೆಯ ಸಂತಲೂರು ಗ್ರಾಮದ ಪ್ರತಾಪಯಲ್ಲನಿಗೆ ಮದುವೆ ಮಾಡಿಕೊಡಲಾಗಿತ್ತು. ಬಯಕಾರ ರಾಮಪ್ಪನ ಸೋದರತ್ತೆ ಚಿನ್ನಮಾಂಬ ಮತ್ತು ಆಕೆಯ ಪತಿ ಪ್ರತಾಪಯಲ್ಲನು ಕೊಂಡವೀಡು ಪ್ರದೇಶದಲ್ಲಿ ಅಗ್ರಹಾರವನ್ನು ಸ್ಥಾಪಿಸಿ, ಶಿವನ ಹೆಸರಿನಲ್ಲಿ ಪರ್ವನಾಥ ಎಂಬ ದೇಗುಲವನ್ನು ಕಟ್ಟಿಸಿದರು ಮತ್ತು ಗೋಪಿನಾಥ ಸಮುದ್ರವೆಂಬ ದೊಡ್ಡ ತಟಾಕವನ್ನು ನಿರ್ಮಿಸಿದರು.[೨೩]

ಬಯಕಾರ ರಾಮಪ್ಪನ ಪೂರ್ವಿಕರು ವಿಜಯನಗರ ಸಾಮ್ರಾಜ್ಯದಲ್ಲಿ ಉನ್ನತವಾದ ಹುದ್ದೆಗಳನ್ನು ಅಲಂಕರಿಸಿದ್ದು, ಉತ್ತಮ ವಾಸ್ತು ಕೃತಿಗಳನ್ನು, ಜನಹಿತ ಕಾರ್ಯಗಳನ್ನು ಕೈಗೊಂಡಿರುವುದು ತಿಳಿದುಬರುತ್ತದೆ.

**ಅಡಿಟಿಪ್ಪಣಿಗಳು**

೦೧. ಕನ್ನಡದಲ್ಲಿ ಬೇಟೆ ಸಾಹಿತ್ಯ – ೧೯೯೫, ಪುಟ–೮.

೦೨. ಲಕ್ಷ್ಮಣ ತೆಲಗಾವಿ (ಸಂ) ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪುಟ–೨೮೪

೦೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೬, ಪುಟ–೨೯೬

೦೪. ಶ್ರೀಕಂಠಶಾಸ್ತ್ರೀ, ಭಾರತೀಯ ಸಂಸ್ಕೃತ, ೧೯೭೫, ೨೯೬.

೦೫. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪುಟ–೨೪೮–೨೪೯.

೦೬. ಅಯ್ಯರ್ ಎಲ್.ಕೆ.ಎ., ದಿ ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್ಸ್, ೧೯೮೮, ಪುಟ–೨೦೦.

೦೭. ಕಲಬುರ್ಗಿ ಎಂ.ಎಂ., (ಸಂ), ಕರ್ನಾಟಕದ ಕೈಫಿಯತ್ತುಗಳು, ೧೯೯೪, ಪುಟ–೫೫.

೦೮. ಕನ್ನಡ ಶಾಸನಗಳ ಸಂಸ್ಕೃತಂ ಅಧ್ಯಯನ, ಪುಟ–೨೯೬.

೦೯. ಕೃಷ್ಣರಾವ್ ಎಂ.ವಿ., ಕೇಶವಭಟ್ಟ, ಕರ್ನಾಟಕ ಇತಿಹಾಸ ದರ್ಶನ, ೧೯೭೦, ಪುಟ–೪೯೧.

೧೦. ವಿರುಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ಬೇಡ ನಾಯಕ ವೀರರ ಆರಾಧನೆಗಳು, (ಸಂ) ಘಟ್ಟಿ ಹೊಸಹಳ್ಳಿ ಗಟ್ಟಿಗ, ೨೦೦೨, ಪುಟ–೩೬.

೧೧. ಘಟ್ಟಿ ಹೊಸಹಳ್ಳಿ ಗಟ್ಟಿಗ, ಪುಟ–೩೬.

೧೨. ಕಪಟರಾಳ್ ಕೃಷ್ಣರಾವ್, ಸುರುಪುರ ಸಂಸ್ಥಾನ ಇತಿಹಾಸ, ೧೯೭೭, ಪುಟ–೨೨೪.

೧೩. ವಾಲ್ಮೀಕಿ ಸಂದೇಶ, ೧೫.೭.೧೯೮೨, ಪುಟ–೧೨.

೧೪. ರಾಷ್ಟ್ರಸೇವೆಯಲ್ಲಿ ನಾಯಕ ಜನಾಂಗ, ಪುಟ–೧.

೧೫. ವಿರುಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ೨೦೦೭.

೧೬. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪುಟ-೨೪೮.

೧೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೯೬.

೧೮. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪುಟ-೨೪೮-೨೪೯.

೧೯. ವಿರುಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು.

೨೦. ದಿ ಮೈಸೂರು ಟ್ರೈಬ್ಸ್ ಅಂಡ್ ಕಾಸ್ಟ್ಸ್, ಪುಟ-೨೦೦.

೨೧. ಚಾಂಡರಸನ ನಳ ಚಂಪೂ, ಪುಟ-೬೮.

೨೨. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೯೬.

೨೩. ಜವರೇಗೌಡ ಮತ್ತು ಇತರರು, ಜನಪ್ರಿಯ ಕನಕ ಸಂಪುಟ-೧೯೮೬, ಪುಟ-೧೪.

೨೪. ಕರ್ನಾಟಕದ ಕೈಫಿಯತ್ತುಗಳು, ಪುಟ-೫೫.

೨೫. ಘಟ್ಟಿ ಹೊಸಹಳ್ಳಿ ಗಟ್ಟಿಗ, ಪುಟ-೩೬.

೨೬. ಕರ್ನಾಟಕ ಇತಿಹಾಸಿ ದರ್ಶನ, ಪುಟ-೨೨೪.

೨೭. ಘಟ್ಟಿ ಹೊಸಹಳ್ಳಿ ಗಟ್ಟಿಗ, ಪುಟ-೩೬.

೨೮. ವೀಣಾ ಎಂ.ಪಿ., ಮನೆ, ಸಮಾಜ ಮತ್ತು ಸಂಸ್ಕೃತಿ, ೨೦೦೦, ಪುಟ-೧೩.

೨೯. ಘಟ್ಟಿ ಹೊಸಹಳ್ಳಿ ಗಟ್ಟಿಗ, ಪುಟ-೩೬.

೩೦. ವಿಕ್ರಮಾರ್ಜುನ ವಿಜಯಂ, ಅಷ್ಟಮಾಶ್ವಸ : ೧೬, ಪುಟ-೧೯೬.

೩೧. ಸೀತಾರಾಮಯ್ಯ ಎಂ.ವಿ., ಕುಮಾರವ್ಯಾಸ ಭಾರತ ಸಂಗ್ರಹ, ೧೯೯೦, ಪುಟ-೬೨೬.

೩೨. ಪರಮಶಿವಯ್ಯ ಜಿ.ಶಂ., ದಕ್ಷಿಣ ಕರ್ನಾಟಕದ ಜನಪದ ಕಾವ್ಯ ಪ್ರಕಾರಗಳು, ೧೯೭೯, ಪುಟ-೨೮೮.

೩೩. ರಾಜಶೇಖರ ಪಿ.ಕೆ. ಚಂಗಾಳ್ವರು, ಮಲೆ ಕರ್ನಾಟಕದ ಅರಸು ಮನೆತನಗಳು, ೨೦೦೧, ಪುಟ-೧೯೭.

೩೪. ಬೇಟೆ ಮತ್ತು ಬೇಡರು

೩೫. ಘಟ್ಟಿ ಹೊಸಹಳ್ಳಿ ಗಟ್ಟಿಗ, ಪುಟ-೩೬.

೩೬. ಕರ್ನಾಟಕ ಇತಿಹಾಸ ದರ್ಶನ, ಪುಟ-೯೧೯.

೩೭. ಮಲೆಕರ್ನಾಟಕದ ಅರಸು ಮನೆತನಗಳು, ಪುಟ-೧೭.

೩೮. ಅದೇ ಮುರಿಗೇಶ, ಆ ಸಂಧಿಯ ಅರಸರು, ಪುಟ-೧೫೨.

೩೯. ಚಿದಾನಂದಮೂರ್ತಿ ಎಂ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೬೮.

೪೦. ಶೇಷಾಶಾಸ್ತ್ರೀ, ಕರ್ನಾಟಕ ವೀರಗಲ್ಲುಗಳು, ೧೯೮೨, ಪುಟ-೨೪.

೪೧. ವಾಲ್ಮೀಕಿ ಬಂಧು, ಮೇ ತಿಂಗಳು, ೧೯೯೯, ಪುಟ-೧೧.

೪೨. ಲಕ್ಷಣ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ (ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ೧೧೯೫, ಪುಟ-೫೭೫.

೪೩. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಪಿಯತ್ತುಗಳು, ಪುಟ-೪೫೭-೪೫೮

೪೪. ಲಕ್ಷಣ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ (ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ೧೧೯೫, ಪುಟ-೪೬೨-೪೬೪.

೪೫. ಅದೇ, ಪುಟ-೪೩೬.

೪೬. ಅದೇ, ಪುಟ-೪೬೭.

೪೭ ನರಸಿಂಹಮೂರ್ತಿ ಎಂ.ವಿ (ಸಂ), ದೆಹಲಿ ಸುಲ್ತಾನರ ಅಧಿಪತ್ಯ, ೨೦೦೧, ಪುಟ-೯೩.

೪೮. ಲಕ್ಷಣ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ (ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ೧೧೯೫, ಪುಟ-೫೭೬.

೪೯. ಅದೇ, ಪುಟ-೪೭೯.

೫೦. ಅದೇ, ಪುಟ-೪೮೧.

೫೧. ಅದೇ, ಪುಟ-೧೦೮.

೫೨. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಪಿಯತ್ತುಗಳು, ಪುಟ-೪೬೬

೫೩. ನರಸಿಂಹಮೂರ್ತಿ ಎಂ.ವಿ (ಸಂ), ದೆಹಲಿ ಸುಲ್ತಾನರ ಅಧಿಪತ್ಯ, ೨೦೦೧, ಪುಟ-೯೪.

೫೪. ರಾಜಣ್ಣ ಆರ್, ನಾಯಕ ಜನಾಂಗದ ಇತಿಹಾಸ, ೧೯೮೨, ಪುಟ-೮.

೫೫. ಶೇಷಾಶಾಸ್ತ್ರೀ, ಕರ್ನಾಟಕ ವೀರಗಲ್ಲುಗಳು, ೧೯೮೨, ಪುಟ-೨೩.

೫೬ ನರಸಿಂಹಮೂರ್ತಿ ಎಂ.ವಿ (ಸಂ), ದೆಹಲಿ ಸುಲ್ತಾನರ ಅಧಿಪತ್ಯ, ೨೦೦೧, ಪುಟ-೧೧೫.

೫೭ ವಿರೂಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ಪುಟ-೧೨೧.

೫೮. ಎ.ಕ.೧೧, ಹೊಳಲ್ಕೆರೆ ೧೩೨.

೫೯. ಮಹಾಲಿಂಗಂ ಟಿ.ವಿ., ಸೌತ್ ಇಂಡಿಯನ್ ಪೊಲಿಟಿ, ಪುಟ-೩೨೦.

೬೦. ಷೇಕ ಅಲಿ ಬಿ (ಸಂ), ಕರ್ನಾಟಕ ಚರಿತ್ರೆ ಸಂ-೩, ಪುಟ-೬೩.

೬೧. ಎ.ಕ.೧೧, ದಾವಣಗೆರೆ ೧೦೬.

೬೨. ವಿಲ್ಸನ್ ಗಾಲ್ಸರಿ, ಪುಟ-೨೧.

೬೩. ರಾಬರ್ಟ್ ಸಿವೆಲ್, ಎ ಪಾರಗಾಟನ್ ಎಂಪೈರ್, ಪುಟ-೨೫೯.

೬೪. ಅದೇ, ಪುಟ–೩೭೦.

೬೫. ಅದೇ, ಪುಟ–೨೬೯.

೬೬ ಅದೇ, ಪುಟ–೨೭೦.

೬೭ ಅದೇ, ಪುಟ–೩೫೪.

೬೮. ಅದೇ, ಪುಟ–೩೫೫.

೬೯. ಷೇಕ ಅಲಿ ಬಿ (ಸಂ), ಕರ್ನಾಟಕ ಚರಿತ್ರೆ ಸಂ–೪, ಪುಟ–೬೪.

೭೦. ಅದೇ, ಪುಟ–೬೫.

೭೧. ಕೆ.ಎಸ್.ವಿ, ಪುಟ–೨೬.

೭೨. ರಾಬರ್ಟ್ ಸಿವೆಲ್, ಎ ಪಾರಗಾಟನ್ ಎಂಪೈರ್, ಪುಟ–೨೫೯.

೭೩. ಷೇಕ ಅಲಿ ಬಿ (ಸಂ), ಕರ್ನಾಟಕ ಚರಿತ್ರೆ ಸಂ–೪, ಪುಟ–೬೫–೬೬.

೭೪. ಅದೇ, ಪುಟ–೬೫–೬೭.

೭೫. ಅಯ್ಯಂಗಾರ್ ಎಸ್.ಕೆ., ಕೆಳದಿನೃಪವಿಜಯಂ, ಪುಟ–೧೮–೨೬.

೭೬ ಅಯ್ಯಂಗಾರ್ ಎಸ್.ಕೆ, ದಿ ಸೋರ್ಸ್ಸ್ ಆಫ್ ದಿ ವಿಜಯನಗರ ಹಿಸ್ಟರಿ, ಪುಟ–೧೯೫.

೭೭ ಲ್ಯೂಯಿ ರೈಸ್ ಬಿ, ದಿ ಮೈಸೂರು ಗ್ಯಾಸಟಿಯರ್, ಸಂ–೨, ಪುಟ ೨೧–೨೨.

೭೮. ಎ.ಕ.೯, ದೇವನಹಳ್ಳಿ ೫೦.

೭೯. ಎ.ಕ.೯, ಚೆನ್ನಪಟ್ಟಣ ೧೬೪.

೮೦. ಎ.ಕ.೧೧, ಹೊಳಲ್ಕೆರೆ ೧೩೧.

೮೧. ಎ.ಕ.೧೧, ಮಾಗಡಿ ೨೮.

೮೨. ಮೀರಸಾಬಿಹಳ್ಳಿ ಶಿವಣ್ಣ, ನಾಯಕ ಜನಾಂಗದ ಒಂದು ನೋಟ, ವಾಲ್ಮೀಕಿ ಜ್ಯೋತಿ (ಸಂ), ಹಂತಿಕೋಟಿ ವೀರೇಂದ್ರಸಿಂಹ, ೧೯೯೯, ಪುಟ–೬೧.

೮೩. ಅಯ್ಯರ್ ಎಲ್.ಕೆ.ಎ, ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್, ಪುಟ–೨೦೧.

೮೪. ಕರ್ನಾಟಕ ಇತಿಹಾಸ ದರ್ಶನ, ಪುಟ–೪೫೮.

೮೫. ಯೋಗಿಶ್ವರಪ್ಪ ಡಿ.ಎನ್, ಹಾಗಲವಾಡಿ ನಾಯಕರು, ೧೯೯೯, ಪೀಠಿಕೆ, ಪುಟ–೪

೮೬. ಅದೇ, ಪುಟ–೬.

೮೭ ವಿರುಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು. ೨೦೦೭. ಪು. ೫೬

೮೮. ಅದೇ, ಪುಟ–೫೮

೮೯. ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್, ಎಲ್.ಕೆ.ಎ ಅಯ್ಯರ್ ೧೯೮೮ ಪು ೩೦೦

೯೦. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಡಾ.ಎಂ.ಚಿದಾನಂದಮೂರ್ತಿ ಪು ೨೯೬

೯೧. ವೀಣಾ ಎಂ.ಪಿ, ಮನೆ, ಸಮಾಜ ಮತ್ತು ಸಂಸ್ಕೃತಿ. ೨೦೦೦. ಪು ೧೩

೯೨. ವೀರೇಂದ್ರಸಿಂಹ ಹರ್ತಿಕೋಟೆ ಘಟ್ಟ ಹೊಸಹಳ್ಳಿ ಗಟ್ಟಿಗ ಸಂ. ೨೦೦೨ ಪು ೩೬

೯೩. ಅದೇ, ಪುಟ-೩೮

೯೪. ಅಸುಂಡಿಯ ಅರಸರು: ಮಲೆಕರ್ನಾಟಕದ ಅರಸುಮನೆತನಗಳು ಪು ೧೫೨

೯೫. ಮುಂಬೈ ಗೆಜಟಿಯರ್ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ವೆಂಕಟರಂಗೋಕಟ್ಟಿ, ೧೮೯೩ ಪುಟ-೧೯೯

೯೬. ಮಹಾದೇವ ಸಿ. ತಿರುಮಲಾದೇವಿಯವರ ಪಟ್ಟಣ, ನಾಗಲಾಪುರ, ಹೊಸಪೇಟೆ, ಇತಿಹಾಸ ದರ್ಶನ ೨೦.೧೦ ೧೯೯೫ ಪು ೧೯೯

೯೭ ವೀರಾನಾಯಕರು ಹೆಚ್.ವಿ., ಕ್ಷಾತ್ರಾಂಶ ಪ್ರಭೋದ, ೧೯೮೭ ಪು ೮

೯೮. ಲಕ್ಷ್ಮಣ ತೆಲಗಾವಿ ಮತ್ತು ಎಂ.ವಿ ಶ್ರೀನಿವಾಸ, ಜೋಯಿಸರ ಸಂಶೋಧನಾ ಲೇಖನಗಳು, ೧೯೯೫ ಪುಟ-೫೨೫

೯೯. ಕಲಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು ಸಂ. ೪೫೨ -೫೮

೧೦೦. ಅದೇ, ಪುಟ-೪೯೨

೧೦೧. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು ಪುಟ ೪೬೩-೬೪

೧೦೨. ನರಸಿಂಹಮೂರ್ತಿ ಎ.ವಿ., ದೆಹಲಿ ಸುಲ್ತಾನರ ಅಧಿಪತ್ಯ (ಅನು) ೨೦೦೧ ಪು ೯೨

೧೦೩. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು ಪುಟ ೪೬೩-೬೪

೧೦೪. ನರಸಿಂಹಮೂರ್ತಿ ಎ.ವಿ., ದೆಹಲಿ ಸುಲ್ತಾನರ ಅಧಿಪತ್ಯ ಪುಟ-೯೩

೧೦೫. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು ಪುಟ ೪೭೯

೧೦೬. ಅದೇ, ಪುಟ ೪೮೧

೧೦೭. ಕಲುಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು ಪು ೪೯೩

೧೦೮. ಅದೇ, ಪುಟ – ೪೬೬

೧೦೯. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ಪುಟ-೧೦೮

೧೧೦. ನರಸಿಂಹಮೂರ್ತಿ ಎ.ವಿ., ದೆಹಲಿ ಸುಲ್ತಾನರ ಅಧಿಪತ್ಯ ಪುಟ ೯೪

೧೧೧. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ಪುಟ ೫೦೩

೧೧೨. ನರಸಿಂಹಮೂರ್ತಿ ಎ.ವಿ., ದೆಹಲಿ ಸುಲ್ತಾನರ ಅಧಿಪತ್ಯ ಪುಟ ೯೪

೧೧೩. ಕಲುಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು ಪುಟ-೪೮೯

೧೧೪. ಶೇಷಶಾಸ್ತ್ರೀ, ಕರ್ನಾಟಕದ ವೀರಗಲ್ಲುಗಳು, ೧೯೮೨ ಪುಟ-೨೩

೧೧೫. ರಾಜಣ್ಣ ಆರ್., ನಾಯಕ ಜನಾಂಗದ ಇತಿಹಾಸ, ೧೯೮೨ ಪುಟ-೮

೧೧೬. ನರಸಿಂಹಮೂರ್ತಿ ಎ.ವಿ., ದೆಹಲಿ ಸುಲ್ತಾನರ ಅಧಿಪತ್ಯ ಪುಟ-೧೧೫

೧೧೭. ಅದೇ ಪು ೧೧೬-೧೧೭

೧೧೮. ನಾಯಕ ಜನಾಂಗದ ಇತಿಹಾಸ ಪು. ೮೪

೧೧೯. ಕೃಷ್ಣರಾವ್ ಎಂ.ವಿ., ಹಾಲಪ್ಪ ಜಿ.ಎಸ್., ಹಿಸ್ಟರಿ ಆಫ್ ಪ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ ವ್ಯಾಲೂಂ ೧

೧೨೦. ವೀಣಾ ಎಂ.ಪಿ., ಮನೆ, ಸಮಾಜ ಮತ್ತು ಸಂಸ್ಕೃತಿ

೧೨೧. ಪದ್ಮಾ.ಎಂ.ಬಿ. ವಿಜಯನಗರೋತ್ತರ ಕಾಲದ ರಾಜ್ಯಾಡಳಿತ ಕರ್ನಾಟಕ ಚರಿತ್ರೆ-೨೧೯೯೭ ಪು. ೨೯೭

೧೨೨. ಮೆಕಂಜಿ., ಮೆಮೋರಿಸ್ ಆಫ್ ದಿ ನಾರ್ದನ್ ಪರಗಣಾಸ್ ಆಫ್ ಮೈಸೂರು ಸರ್ವೇಯಿಡ್ ಇನ್ ೧೮೦೦ ಮೆ.ನಾ.ಪಮ್ಯೆ

೧೨೩. ನರಸಿಂಹಾಚಾರ್ಯ ರಾ., ನಿಡಗಲ್ಲು ಅರಸರ ವಂಶಾವಳಿ

೧೨೪. ಚಿತ್ರಲಿಂಗಯ್ಯ ಎಂ.ವಿ., ಹರತಿ ಪಾಳೆಯಗಾರರ ಮೂಲ ವಂಶಾವಳಿ : ಒಂದು ವ್ಯಾಸಾಂಗ ಹರತಿಸಿರಿ ಪು. ೧೯೦-೯೧

೧೨೫. ಚಿತ್ರಲಿಂಗಯ್ಯ ಎಂ.ವಿ., ಗುಮ್ಮನಾಯಕನಹಳ್ಳಿ ಪಾಳೆಯಗಾರರು : ಒಂದು ವ್ಯಾಸಾಂಗ, ಹರಿತಿಸಿರಿ, ಪು. ೩೪೨

೧೨೬. ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ ಕಪಟರಾಳ. ಪು. ೨೧-೨೩

೧೨೭. ಪದ್ಮಾಪ್ರಸಾದ್ ಎಸ್.ಪಿ. ರತ್ನಗಿರಿ ನಾಯಕರು ದಕ್ಷಿಣ ಕರ್ನಾಟಕದ ಅರಸು ಮನೆತನಗಳೂ ಪು. ೨೬೪

೧೨೮. ಮಹೇಶ್ ತಿಪ್ಪಶೆಟ್ಟಿ, ಮೈಸೂರು ಚಾಮುಂಡೇಶ್ವರಿ ದೇವಸ್ಥಾನ ಒಂದು ಅಧ್ಯಯನ : ೨೦೦೧ ಪು. ೪೯

೧೨೯. ಮುಟ್ಟಣ್ಣ ಎಂ.ಎಸ್., ಚಿತ್ರದುರ್ಗದ ಪಾಳೆಯಗಾರರು, ಪು.೧

೧೩೦. ರೈಸ್ ಬಿ.ಎಲ್., ಪೂರ್ವೋಕ್ತ ಸಂ-೫, ಪು. ೫೦೦-೫೦೨

೧೩೧. ನಾಯಕ ಜನಾಂಗದ ಇತಿಹಾಸ ಪು. ೮೪.

೧೩೨. ನರಸಿಂಹಮೂರ್ತಿ ಎ.ವಿ., ದೆಹಲಿ ಸುಲ್ತಾನರ ಅಧಿಪತ್ಯ ಪು. ೪೫೩-೫೪

೧೩೩. ಮುರಿಗೆಪ್ಪ ಎ. ಕೃಷ್ಣದೇವರಾಯ ಆಯ್ದ ಲೇಖನ ಸಂಪುಟ ಪುಟ-೮೬-೮೭

೧೩೪. ಅದೇ, ಪುಟ-೮೮

೧೩೫. ಕಲುಬುರ್ಗಿ ಎಂ.ಎಂ., ಕರ್ನಾಟಕದ ಕೈಫಿಯತ್ತುಗಳು ಪುಟ-೪.೯

೧೩೬. ನಿರುಪಮಾ, ಆಮುಕ್ತಮಾಲ್ಯದ ೧೯೯೯ ಪು. ೨೨

೧೩೭ ಅದೇ ಪುಟ ೨೫

೧೩೮. ನಾಗಭೂಷಣ ಎನ್. ಎಮ್., ಸಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ, ಇತಿಹಾಸ ದರ್ಶನ ಸಂಪುಟ ೧೦ ಪು. ೧೭೮

೧೩೯. ಹಾಗಲವಾಡಿ ನಾಯಕರು ಪುಟ. ೨೮

೧೪೦. ನಾಯಕ ಜನಾಂಗದ ಇತಿಹಾಸ ಪುಟ. ೮೬-೮೭

೧೪೧. ಸೋಮಶೇಖರ ಎನ್. ವೈ.,ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧ ನೀತಿ, ಪು. ೮೦

೧೪೨. ಸೀತಾರಾಮಯ್ಯ ಎಂ.ವಿ., ಶ್ರೀಕೃಷ್ಣದೇವರಾಯನ ದಿನಚರಿ ಸಂ.ಪು. ೨೨

೧೪೩. ಅದೇ ಪು.೪೨

೧೪೪. ನಿರುಪಮಾ, ಆಮುಕ್ತಮಾಲ್ಯದ ಪುಟ. ೧೪

೧೪೫. ಮೈಸೂರು ಸರಕಾರ ಪ್ರಗತಿ ಚಿತ್ರ : ರಾಯಚೂರು ಜಿಲ್ಲೆ ೧೯೯೯ ಪು. ೭-೮

೧೪೬. ಹಾಗಲವಾಡಿ ನಾಯಕರು ಪು.೨೯

೧೪೭ ಮೀರ್‌ಸಾಬಿಹಳ್ಳಿ ಶಿವಣ್ಣ, ಮ್ಯಾಸ ಮಂಡಲ, ೨೦೦೩

೧೪೮. ಅದೇ ಪುಟ. ೫೩

೧೪೯. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರು, ೧೯೯೯, ಪುಟ-೩

೧೫೦. ಅದೇ ಪು.೧೩-೧೪

೧೫೧. ನಾಗೇಗೌಡ ಎಚ್.ಎಲ್.(ಸಂ) ಪ್ರವಾಸಿ ಕಂಡ ಇಂಡಿಯಾ ಸಂ.೨ ಪು.೪೨೧-೨೨

೧೫೨. ಅದೇ ಪುಟ-೪೧೬

೧೫೩. ಬಳ್ಳಾರಿ ಜಿಲ್ಲಾ ಗೆಝೆಟೆಯರ್ ಪುಟ-೮೨

೧೫೪. ರಾಬರ್ಟ್ ಸಿವಲ್, ಎ. ಫಾರಗಾಟನ್ ಎಂಪಾಯಿರ್, ೧೯೬೨ ಪುಟ-೨೧೮

೧೫೫. ಶ್ರೀಕಂಠಶಾಸ್ತ್ರೀ ಎನ್. ಸಂಶೋಧನಾ ಲೇಖನಗಳು, ೧೯೭೫ ಪುಟ-೧೪೪

೧೫೬. ಅದೇ ಪುಟ-೧೪೬

೧೫೭. ಸುರಪುರ ಸಂಸ್ಥಾನ ಇತಿಹಾಸ ಪುಟ-೨೧-೨೩

೧೫೮. ಅದೇ, ಪುಟ-೨೩೩

೧೫೯. ವಿರೂಪಾಕ್ಷಿ ಪೂಜಾರಹಳ್ಳಿ, ಕರ್ನಾಟಕದಲ್ಲಿ ಬೇಡ ನಾಯಕ ವೀರರ ಆರಧನಾ ಕ್ಷೇತ್ರಗಳು, ಘಟ್ಟಿ ಹೊಸಳ್ಳಿ ಗಟ್ಟಿಗ ಪುಟಸ.೩೩

೧೬೦. ವೀರನಾಯಕ ಎಚ್., ಕ್ಷಾತ್ರಾಂಶ ಪ್ರಭೋದ ಪು.೧೪

೧೬೧. ಕರ್ನಾಟಕ ಇತಿಹಾಸ ದರ್ಶನ ಪು. ೪೭೭

೧೬೨. ಷೇಕ್ ಮಸ್ತಾನ್, ಗುಮ್ಮ ನಾಯಕನಹಳ್ಳಿ ಪಾಳೆಯಗಾರು, ಪುಟ-೩೪೪

೧೬೩. ಕರಶೆಟ್ಟಿ ರುದ್ರಪ್ಪ, ಮ್ಯಾಸ ನಾಯಕರು : ಒಂದು ಜನಾಂಗಿಕ ಅಧ್ಯಯನ, ೧೯೯೫, ಪುಟ-೧೦೨

೧೬೪. ಪ್ರಭಾಕರ್ ಎಂ.ಎಂ. ನಾಯಕನ ಬಖೈರು, ಚಂದ್ರವಳ್ಳಿ ೧೯೭೬ ಪು.೨೪

೧೬೫. ಸತ್ಯನಾರಾಯಣ, ಮೈಸೂರಿನ ಕಿರಿಯ ರಾಜವಂಶಗಳು, ಕರ್ನಾಟಕ ಚರಿತ್ರೆ ಸಂ-೨, ಪುಟ-೪೨೮

೧೬೬. ಪುರುಷೋತ್ತಮ ಬಿಳಿಮಲೆ, ಕುಮಾರರಾಮ ಮತ್ತು ಕುಮ್ಮಟ ದುರ್ಗ, ಪುಟ ೩೨

೧೬೭. ಅದೇ, ಪುಟ ೧೭-೧೮

೧೬೮. ಮೀರ್‌ಸಾಬಿಹಳ್ಳಿ ಶಿವಣ್ಣ, ನಾಯಕನ ಹಟ್ಟಿ ಪಾಳೆಯಗಾರರು, ದಕ್ಷಿಣ ಕರ್ನಾಟಕದ ಅರಸುಮನೆತನಗಳ ಪುಟ ೧೨೩

೧೬೯. ಎ.ಕ, ಚಿತ್ರದುರ್ಗ ೭೩

೧೭೦. ಎ.ಕ, ಹಿರಿಯೂರು ೫೧

೧೭೧. ಯಶೋದಾ ರಾಜಶೇಖರಪ್ಪ, ಮತ್ತೋಡು ಪಾಳೆಯಗಾರರು, ದಕ್ಷಿಣ ಕರ್ನಾಟಕದ ಅರಸುಮನೆತನಗಳು, ಪುಟ. ೧೭೯

೧೭೨. ಮೈಸೂರು ಗೆಝೆಟಿಯರ್, ಪು.೩೨೧

೧೭೩. ಕೆರೆ ನಿರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ ಪುಟ. ೧೨೪

೧೭೪. ಅದೇ ಪುಟ. ೧೧೭

೧೭೫. ಎ.ಕ.೧೧, ಮೊಳಕಾಲ್ಮುರು ೩೭

೧೭೬. ಹಳಕಟ್ಟಿ ಫ.ಗು. ಹಾಗಲವಾಡಿ ಅರಸು ಮನೆತನ, ಶಿವಾನುಭವ ೧೯೪೩ ಪು. ೨೫೬

೧೭೭. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು ಪುಟ. ೮೨

೧೭೮. ಮೈಸೂರು ಗಜಟಿಯರ್ ಸಂ.೨.ಪು. ೨೦೫

೧೭೯. ಎ.ಕ.೧೨.ಗುಬ್ಬಿ ೪೩

೧೮೦. ಸದಾಶಿವಪ್ಪ ಕುಂ.ಬಾ., ಹರಪನಹಳ್ಳಿ ಪಾಳೆಯಗಾರರು ಪು. ೭೦-೭೧

೧೮೧. ಜರಿಮಲೆ ಪಾಳೆಯಗಾರರು. ಲಕ್ಷ್ಮಣ ಬೆಳಗಾವಿ ವಿಜಯನಗರ ಅಧ್ಯಯನ ಸಂ.೧೩ ಪು.೨೩೬

೧೮೨. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು ಪು. ೧೮೯

೧೮೩. ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು. ೨೦೩

೧೮೪. ಪುರುಷೋತ್ತಮ ಬಿಳಿಮಲೆ, ಕುಮಾರರಾಮ ಮತ್ತು ಕಮ್ಮಟದುರ್ಗ ಪು. ೨೭

೧೮೫. ಎ.ಕ.೧೬ ತಿಪಟೂರು ೧೦೨

೧೮೬. ಎಂ.ಎ.ಆರ್ ೧೯೧೮ ಪು. ೫೩

೧೮೭. ಅದೇ ೧೯೩೦ ಪು. ೨೦೬

೧೮೮. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು ಪು. ೧೫೧

೧೮೯. ಎ.ಕ.೧೨. ಚಿಕ್ಕನಾಯಕನಹಳ್ಳಿ ೩೮

೧೯೦. ಎ.ಕ.೧೬. ಚಿಕ್ಕನಾಯಕನಹಳ್ಳಿ ೫೩

೧೯೧. ಮೈಸೂರು ಗೆಝೆಟಿಯರ್ ಸಂ.೫ ತುಮಕೂರು ಜಿಲ್ಲೆ ಪು. ೪೬೮

೧೯೨. ಎ.ಕ.೧೨ ಚಿಕ್ಕನಾಯಕನಹಳ್ಳಿ ಪೂರ್ವೋಕ್ತ

೧೯೩. ರಘುನಾಥಭಟ್ ಎಚ್.ಆರ್., ಯೋಗನಾಥ ದೇವಾಲಯ : ಸರ್ವೋದಯ ಪಥಃ, ಪುಟ. ೨೮೯

೧೯೪. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು. ಪು. ೨೦೨

೧೯೫. ಎ.ಕ.೧೨ ಪಾವಗಡ ೪೦

೧೯೬. ಅದೇ, ಶಾ.ಸಂ. ೪೨

೧೯೭. ಅದೇ, ಶಾ.ಸಂ. ೫೯

೧೯೮. ಅದೇ, ಶಾ.ಸಂ. ೪೬

೧೯೯. ನಾಗರತ್ನಮ್ಮ ಎಸ್., ನಾಯಕನಹಟ್ಟಿ ಪಾಳೆಯಗಾರರು ಪುಟ-೮೧

೨೦೦. ಲಕ್ಷ್ಮಣ ತೆಲಗಾವಿ, ಚಿತ್ರಕಲ್ಲು ಪುಟ-೬

೨೦೧. ಎ.ಕ. ಹೊಳಲ್ಕೆರೆ-೭

೨೦೨. ಎ.ಕ. ಹಿರಿಯೂರು ೪೦

೨೦೩. ಎ.ಕ. ದಾವಣಗೆರೆ ೧೬೪

೨೦೪. ಎ.ಕ. ಚಿತ್ರದುರ್ಗ ೫೧

೨೦೫. ಎ.ಕ. ಜಗಳೂರು ೪೬

೨೦೬. ಎ.ಕ. ಹಿರಿಯೂರು ೫೭

೨೦೭. ಎ.ಕ. ಜಗಳೂರು ೧೭

೨೦೮. ಎ.ಕ. ಚಿತ್ರದುರ್ಗ ೫೬

೨೦೯. ಎ.ಕ. ಹಿರಿಯೂರು ೫೭

೨೧೦. ಎ.ಕ.೧೧. ದಾವಣಗೆರೆ

೨೧೧. ಎ.ಕ. ಪೂರ್ವೋಕ್ತ ಹೊಳಲ್ಕೆರೆ – ೧೦೧

೨೧೨. ಎ.ಕ. ಹಿರಿಯೂರು ೮೦

೨೧೩. ನಾಗರಾಜಪ್ಪ ಬಾಗೂರು. ಆರ್. ಪೂರ್ವೋಕ್ತ ಪುಟ-೬೦

೨೧೪. ಎ.ಕ. ಪೂರ್ವೋಕ್ತ, ಹೊಳಲ್ಕೆರೆ ೯೬

೨೧೫. ಫ್ರಾನ್ಸಿಸ್ ಬುಖನನ್ ಪ್ರವಾಸಿಯ ಬರಹಗಳು, ೧೮೦೭ ಪು. ೩೪೦

೨೧೬. ವೀರೇಂದ್ರಸಿಂಹ ಹರ್ತಿಕೋಟೆ, ಗುಡಗಂಟಿ ಸಂಸ್ಥಾನ, ಘಟ್ಟಿ ಹೊಸಳ್ಳಿ ಗಟ್ಟಿಗ ಪುಟ-೨೫

೨೧೭. ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಿಗಳು ಪುಟ-೫೯

೨೧೮. ಅದೇ ಪುಟ-೯೪

೨೧೯. ವಸು ಎಂ.ವಿ., ದಕ್ಷಿಣ ಕರ್ನಾಟಕ ಅರಸುಮನೆತನಗಳು, ಪುಟ-೭೫.

೨೨೦. ವಸು ಎಂ.ವಿ., ದಕ್ಷಿಣ ಕರ್ನಾಟಕ ಅರಸುಮನೆತನಗಳು, ಪುಟ-೧೩೫.

೨೨೧. ಯೋಗೀಶ್ವರಪ್ಪ ಡಿ.ಎನ್. ಹಾಗಲವಾಡಿ ನಾಯಕರು, ಪುಟ-೩೦.

೨೨೨. ಯೋಗೀಶ್ವರಪ್ಪ ಡಿ.ಎನ್. ಹಾಗಲವಾಡಿ ನಾಯಕರು, ಪುಟ-೩೪.

೨೨೩. ವಸು ಎಂ.ವಿ., ದಕ್ಷಿಣ ಕರ್ನಾಟಕ ಅರಸುಮನೆತನಗಳು, ಪುಟ-೭೫.

೨೨೪. ವಸು ಎಂ.ವಿ., ದಕ್ಷಿಣ ಕರ್ನಾಟಕ ಅರಸುಮನೆತನಗಳು, ಪುಟ-೨೩೮.

೨೨೫. ಎ.ಕ.೯, ಬೇಲೂರು, ಪುಟ-೧೫೧, ೨೧೯.

೨೨೬. ಎ.ಕ.೮, ಹೊಳೆನರಸೀಪುರ, ಪುಟ-೫೧, ೧೬, ೭೫.

೨೨೭. ಗುರುಮೂರ್ತಿ ಪೆಂಡಕೂರು (ಅನು) ಶ್ರೀ ಕೃಷ್ಣದೇವರಾಯ, ಪುಟ-೧೩೫.

೨೨೮. ಐಬಿಪಿಡಿ. XVI ೧೨೧, ಪುಟ-೧೩೩.

ಅಧ್ಯಾಯ ೪

# ಬಯಕಾರ ರಾಮಪ್ಪನ ಸಾಧನೆಗಳು

ಅ. ರಾಜಕೀಯ

ಆ. ದೇವಾಲಯಗಳು

ಇ. ಕೆರೆಗಳು, ಬಾವಿಗಳು, ಅಗ್ರಹಾರಗಳು

ಅಧ್ಯಾಯ ೪

# ಬಯಕಾರ ರಾಮಪ್ಪನ ಸಾಧನೆಗಳು

## ರಾಜಕೀಯ

ಪ್ರತಿಯೊಬ್ಬರು ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂಬ ಮನೋಭಾವವನ್ನು ಹೊಂದಿರುತ್ತಾರೆ. ಆದರೆ ತಮ್ಮ ಸಾಧನೆಯ ಸಿದ್ಧಿಯನ್ನು ಪಡೆದವರು ಕೆಲವರು ಮಾತ್ರ. ಈ ಸಿದ್ಧಿಯನ್ನು ಪಡೆಯಲು ನಿರಂತರ ಪರಿಶ್ರಮ, ಕಠಿಣವಾದ ಶ್ರಮ ಅವಶ್ಯಕವಾಗಿದೆ. ತನ್ನ ಸಾಧನೆಗಳಿಂದ ಸಿದ್ಧಿಯನ್ನು ಪಡೆದವರಲ್ಲಿ ಬಯಕಾರ ರಾಮಪ್ಪನೂ ಒಬ್ಬನು. ಬಯಕಾರ ಎಂಬುದು ಉಭಯಕಾರದ ಸಂಕ್ಷಿಪ್ತ ರೂಪವಾಗಿದೆ. ಉಭಯಕಾರ ಎಂಬುದು ವಾಗ್ಗೇಯಕಾರ ಮತ್ತು ಸಂಗೀತಕಾರ ಎಂಬ ಎರಡು ಪ್ರಕಾರಗಳನ್ನು ಸೂಚಿಸುತ್ತದೆ.

ವಿಜಯನಗರದ ಅರಸರುಗಳ ಆಳ್ವಿಕೆ ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇಡೀ ದಕ್ಷಿಣ ಭಾರತವನ್ನೇ ವ್ಯಾಪಿಸಿದ್ದು, ಅವರ ರಾಜ್ಯದಲ್ಲಿ ಆಡಳಿತವನ್ನು ಸುಲಭಗೊಳಿಸುವ ದೃಷ್ಟಿಯಿಂದ ತಮ್ಮ ಅನುಕೂಲಕ್ಕಾಗಿ ಅನೇಕ ಹಂತಗಳ ಆಡಳಿತ ವಿಭಾಗಗಳನ್ನು ರೂಪಿಸಿಕೊಂಡಿದ್ದರು. ವಿಜಯನಗರ ಕಾಲದಲ್ಲಿ ತಮ್ಮ ಹಿಂದಿನ ಅರಸರ ಕಾಲದ ಆಯಾ ಪ್ರದೇಶಗಳ ಪ್ರಚಲಿತವಿದ್ದ ಬೇರೆ ತೆರನಾಗಿದ್ದ ಆಡಳಿತ ವಿಭಾಗ ಕ್ರಮಗಳನ್ನು ಕ್ರೋಢಿಕರಿಸಿ, ಒಂದು ಸಾಮಾನ್ಯೀಕರಣಗೊಂಡ ಇಡೀ ಸಾಮ್ರಾಜ್ಯಕ್ಕೆ ಸೂಕ್ತವೆನಿಸಬಹುದಾದ ಪದ್ಧತಿಯೊಂದನ್ನು ಜಾರಿಗೆ ತರಲಾಯಿತು. ಅದರ ಫಲವಾಗಿ ರಾಜ್ಯ, ದೇಶ, ವೇಂಠೆ, ವಳಿತ, ಚಾವಡಿ, ನಾಡು, ಸೀಮೆ, ಸ್ಥಳ, ಗ್ರಾಮ ಎಂಬ ವಿಭಾಗಗಳು ಮೂಡಿಬಂದವು.

ವಿಜಯನಗರ ಕಾಲದ ಆಡಳಿತ ವಿಭಾಗಗಳನ್ನು ಅನೇಕ ಶಾಸನಗಳಲ್ಲಿ ರಾಜ್ಯದ ಬದಲು ಸೀಮೆ, ಸ್ಥಳ, ವೇಂಠೆ ಎಂಬ ಪದಗಳನ್ನು ಉಪಯೋಗಿಸಲಾಗಿದೆ. ಹಲವು ಸ್ಥಳಗಳಲ್ಲಿ ಅವುಗಳನ್ನು ರಾಜ್ಯದೊಳಗಿನ ಸಣ್ಣ ವಿಭಾಗಗಳನ್ನು ಸೂಚಿಸಲು ಉಪಯೋಗಿಸಲಾಗಿದೆ. ಈಗಿನ ರಾಜ್ಯ, ಜಿಲ್ಲೆ, ತಾಲ್ಲೂಕು, ಹೋಬಳಿಗಳಂತೆ ಪ್ರಾಚೀನ ಕಾಲದಲ್ಲಿಯೂ ರಾಜರುಗಳು ತಮ್ಮ ಸಾಮ್ರಾಜ್ಯವನ್ನು ಆಡಳಿತದ ಅನುಕೂಲಕ್ಕಾಗಿ ವಿಭಾಗಿಸಿರುವುದು ಕಂಡುಬರುತ್ತದೆ. ಈ ಕಲ್ಪನೆ ಮನುವಿನಷ್ಟೇ ಹಳೆಯದು.[೧] ಒಂದು ಪ್ರದೇಶದ ಶಾಸನಗಳು ಪೂರೈಸುವ ಭೌಗೋಳಿಕ ಮಾಹಿತಿಯನ್ನು ಅತ್ಯಂತ ಎಚ್ಚರಿಕೆಯಿಂದ ಅಧ್ಯಯನ ಮಾಡಿದರೆ ಅದರಲ್ಲಿ ಸೂಕ್ಷ್ಮತರದ ಪ್ರಾಂತೀಯ ಭಾಗಗಳು ಬಹಳ ವರ್ಷಗಳ ಕಾಲ ಹಾಗೆಯೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ಸೂಕ್ಷ್ಮ ಸ್ತರದ ವಿಭಾಗಗಳು ಪ್ರಾಥಮಿಕವಾಗಿ ಸಾಮಾಜಿಕ ಪ್ರದೇಶಗಳಾಗಿದ್ದು ನಂತರ ಅವು ಆಡಳಿತ ಪ್ರದೇಶಗಳಾಗಿವೆ. ಆದರೆ ಸ್ಥೂಲಸ್ತರದ ವಿಭಾಗಗಳು ಪ್ರಾಥಮಿಕವಾಗಿ ಆಡಳಿತ ವಿಭಾಗಗಳು, ನಂತರ ಅವು ಸಾಮಾಜಿಕ ಪ್ರದೇಶಗಳಾಗಿರುತ್ತವೆ.

ಸೀಮೆ ವಿಜಯನಗರ ಸಾಮ್ರಾಜ್ಯದ ಆಡಳಿತದ ಮತ್ತೊಂದು ಘಟಕವಾಗಿದೆ. ಹಲವಾರು ಸ್ಥಳಗಳನ್ನು ಒಟ್ಟುಗೂಡಿಸಿ ಸೀಮೆ ಎಂದು ಕರೆಯಲಾಗುತ್ತಿತ್ತು. ಇದು ನಾಡು ಎಂಬ ಪದಕ್ಕೆ ಪರ್ಯಾಯ ಪದ ಎಂತಲೂ, ನಾಡು ಎಂಬುದು ಕರ್ನಾಟಕದ ಪ್ರದೇಶಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದ ಪದವೆಂತಲೂ ಸೀಮೆ ಎಂಬುದು ತೆಲುಗು ಪ್ರದೇಶದಲ್ಲಿ ಹೆಚ್ಚು ಪ್ರಚಲಿತವಿದ್ದ ಸಮಾನಸ್ತರದ ಪ್ರಾದೇಶಿಕ ವಿಭಾಗವೆಂತಲೂ ಎ.ವಿ.ವೆಂಕಟರತ್ನಂರವರು ಅಭಿಪ್ರಾಯಪಡುತ್ತಾರೆ.[೨]

ಬೂದಿಹಾಳು ಸೀಮೆಯು ವಿಶಾಲವಾದ ಸೀಮೆಯಾಗಿತ್ತು. ಮೊದಲು ಇದು ತುಮಕೂರು ಜಿಲ್ಲೆಗೆ ಸೇರಿದ್ದು, ಅನಂತರದಲ್ಲಿ ಇಂದಿನ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿಗೆ ಸೇರಿದೆ. ವಿಜಯನಗರ ಕಾಲದಲ್ಲಿ ವಿಜಯನಗರದ ಅರಸು ಇಮ್ಮಡಿ ದೇವರಾಯನು ತನ್ನ ಬಳಿ ಇದ್ದ ದಕ್ಷನೂ, ಶೂರನೂ, ನಿಷ್ಠಾವಂತನೂ ಆದ ಗೊಲ್ಲ ಜನಾಂಗದ ಕಾಚನಾಯಕ ಎಂಬುವನಿಗೆ, ತಮ್ಮ ಸಾಮ್ರಾಜ್ಯಕ್ಕೆ ಸೇರಿದ್ದ ಸೂಜಿಗಲ್ಲೆಂಬ ದುರ್ಗಕ್ಕೆ ಸಲ್ಲುವಂಥ ರಾಜ್ಯವನ್ನೆಲ್ಲಾ ಬಳುವಳಿ ನೀಡಿ ಆ ಪ್ರದೇಶದ ಆಡಳಿತವನ್ನು ನೋಡಿಕೊಳ್ಳಲೆಂದು ಕಳುಹಿಸಿಕೊಟ್ಟನು. ಬಹುಶಃ ಕ್ರಿ.ಶ. ೧೪೩೦–೩೫ರಲ್ಲಿ ಅವನಿಂದ ಪಾಳೆಯಪಟ್ಟು ಅಸ್ತಿತ್ವಕ್ಕೆ ಬಂದಿತು. ಕಾಚನಾಯಕನಿಂದ ಆರಂಭವಾಗಿ ಮೂರು ತಲೆಮಾರುಗಳವರೆಗೆ ಸಾಗಿಬಂತು. ಕಾಚನಾಯಕನ ನಂತರ ಅವನ ಮಗ ಸಿರುಮ ಅಧಿಕಾರಕ್ಕೆ ಬಂದನು. ಇವನ ಕಾಲದಲ್ಲಿ ಸಾಳುವ ನರಸಿಂಹನೊಂದಿಗೆ ನಡೆದ ಬೂದಿಹಾಳು ಕದನದಲ್ಲಿ (ಕ್ರಿ.ಶ. ೧೪೭೦–೭೭) ಬೂದಿಹಾಳು ಪತನಗೊಂಡಿತು. ಮಲ್ಲಕವಿಯು ನರಸಿಂಹರಾಯನು

ಬೂದಿಹಾಳು ಠಾಣ್ಯಕ್ಕೆ ರುದ್ರರಾಜನನ್ನು ಅಧಿಕಾರಿಯನ್ನಾಗಿ ನೇಮಿಸಿ ಪೆನುಗೊಂಡೆಗೆ ಹಿಂತಿರುಗಿದ ಎಂದು ಹೇಳುತ್ತಾನೆ.

ಬೂದಿಹಾಳಿನಲ್ಲಿ ಸಿಕ್ಕಿರುವ ಶಾಸನಗಳು ತಿಳಿಸುವಂತೆ, ಬೂದಿಹಾಳು ಪತನಗೊಂಡ ಅನಂತರ ಇಲ್ಲಿ ವಿಜಯನಗರದ ಅರಸರು ನೇಮಿಸಿದ ಅಧಿಕಾರಿಗಳು ಆಡಳಿತ ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.

ವಿದ್ವಾಂಸರು ನಾಡು ಎಂದರೆ ದೊಡ್ಡ ವಿಭಾಗ, ಕಂಪಣವೆಂದರೆ ಸಣ್ಣ ವಿಭಾಗವೆಂದು ಅರ್ಥೈಸಿದ್ದಾರೆ. ಆದರೆ ನಾಡು ಎಂಬ ಪದವನ್ನು ಶಾಸನಗಳಲ್ಲಿ ದೊಡ್ಡ ಹಾಗೂ ಸಣ್ಣ ಈ ಎರಡು ವಿಭಾಗಗಳಿಗೂ ಬಳಸಲಾಗಿದೆ. ನಾಡು ಎಂಬ ಪದ ದೊಡ್ಡ ಮತ್ತು ಚಿಕ್ಕ ವಿಭಾಗಗಳಿಗೆ ಬಳಸಿರುವುದರಿಂದ ಅದು ಸ್ಥೂಲವಾಗಿ ಪ್ರದೇಶ ಎಂಬ ಅರ್ಥವನ್ನು ನಿರ್ದೇಶಿಸಲು ಬಳಸಿರಬಹುದು ಎಂದೂ ಹೇಳಲಾಗಿದೆ. ಈ ಪದವನ್ನು ಹೇರಳವಾಗಿ ಹೊಯ್ಸಳರ ಕಾಲದಲ್ಲಿ ಬಳಸಲಾಗಿದೆ. ಈ ಶಬ್ದವನ್ನು ನಂತರ ಬಂದ ವಿಜಯನಗರದ ಚಕ್ರವರ್ತಿಗಳು ಮುಂದುವರೆಸಿದರೂ ಅದನ್ನು ಕಡಿಮೆ ಪ್ರಮಾಣದಲ್ಲಿ ಬಳಸಿರುವುದನ್ನು ಕಾಣುತ್ತೇವೆ.

ವಿಜಯನಗರ ಸಾಮ್ರಾಜ್ಯದಲ್ಲಿ ಹದಿನಾಡು ಒಂದು ಸಂಪದ್ಭರಿತವಾದ ಸಂಸ್ಥಾನವಾಗಿತ್ತು. ಇದು ಪ್ರಾಚೀನ ಕಾಲದಲ್ಲಿ ಪುನ್ನಾಟ ಹತ್ತುಸಾವಿರ ಎನಿಸಿಕೊಂಡ ಪ್ರದೇಶ. ಯಳಂದೂರು ಹದಿನಾಡಿನ ಮುಖ್ಯ ಕೇಂದ್ರವಾಗಿತ್ತು. ಹದಿನಾಡು ಪ್ರದೇಶದ ಶಾಸನಗಳಲ್ಲಿ ಕೆಲವು ಆಡಳಿತ ಹಾಗೂ ಕಂದಾಯ ಸಂಬಂಧಿಯಾದ ಪದಗಳು ಕಂಡುಬರುತ್ತವೆ. ಅವರ ರಾಜ್ಯಾಡಳಿತ ಹಾಗೂ ಸರಕಾರದ ಒಟ್ಟು ನೀತಿಗಳ ವಿಷಯವಾಗಿ ಕೆಲವು ವಿಷಯ ತಿಳಿದುಬರುತ್ತವೆ. ಚಾಮರಾಜನಗರದ ಶಾಸನವು[೩] ಪಾರುಪತ್ತೆಗಾರ, ಗೌಡ ಮತ್ತು ಸೇನಬೋಗರನ್ನು ಉಲ್ಲೇಖಿಸುತ್ತದೆ. ಪಾರುಪತ್ಯಗಾರನು ಆ ಪ್ರದೇಶದ ವ್ಯವಹಾರಗಳನ್ನು ರಾಜ್ಯ ಪರವಾಗಿ ನೋಡಿಕೊಳ್ಳುತ್ತಿದ್ದ ಪ್ರತಿನಿಧಿಯಾದರೆ ಗೌಡ ಮತ್ತು ಸೇನಬೋಗರು ಹಳ್ಳಿಯ ಕಾರ್ಯಕರ್ತರಾಗಿದ್ದರು.

ಬಯಕಾರ ರಾಮಪ್ಪನು ಅಸಾಮಾನ್ಯ ಹಾಗೂ ದಕ್ಷ ಆಡಳಿತಗಾರನಾಗಿದ್ದನು ಎಂದು ತಿಳಿದುಬರುತ್ತದೆ. ಇವನು ಉನ್ನತ ಹುದ್ದೆಯನ್ನು ವಂಶದ ಘನತೆಯಿಂದಲೂ ಮನೆತನದ ಹಿರಿಯರ ಸ್ಥಾನಮಾನದಿಂದಲೂ ಗಳಿಸಲಿಲ್ಲ. ವೈಯಕ್ತಿಕ ಸಾಧನೆಗಳ ಮೂಲಕವೇ ಮೇಲೆ ಬಂದ ಸ್ವಯಂ ನಿರ್ಮಿತ ಇವನದು. ಸಾಮ್ರಾಜ್ಯದ ಆಡಳಿತದಲ್ಲಿ ಮೊದಲಿಗೆ ಕಿರಿಯ ಹುದ್ದೆಗಳಾದ ಪಾರುಪತ್ಯಗಾರ, ಮಾಗಾಣಿಕಾರ ಮೊದಲಾದ ಹುದ್ದೆಗಳಲ್ಲಿ ದುಡಿದು ಅಪಾರವಾದ ಅನುಭವವನ್ನು ಗಳಿಸಿದನು. ಮೊದಲಿಗೆ ಇಂದಿನ ಮೈಸೂರು ಸುತ್ತಲಿನ ಹದಿನಾಡು ಪ್ರದೇಶದ ನಾಯಕನಾಗಿ ಸೇವೆ ಸಲ್ಲಿಸಿದನು. ಕಿರಿಯ ಹುದ್ದೆಯ ಹಂತಗಳಲ್ಲಿ ಬಯಕಾರ ರಾಮಪ್ಪನು ಅಪ್ರತಿಮ ದಕ್ಷತೆಯನ್ನು ಪ್ರದರ್ಶಿಸಿ

ವಿಜಯನಗರದ ಚಕ್ರವರ್ತಿಗಳ ಮೆಚ್ಚುಗೆಯನ್ನು ಸಂಪಾದಿಸಿದನು. ಹದಿನಾಡು ಒಂದು ಸಂಪದ್ಭರಿತ ಪ್ರದೇಶವಾಗಿತ್ತು. ಅನಂತರ ತುಮಕೂರು ಜಿಲ್ಲೆಯ ಬೂದಿಹಾಳು ಮತ್ತು ಹೊನ್ನವಳ್ಳಿ ಸೀಮೆಯ ಮಾಗಾಣಿಕಾರನಾಗಿ ಸಾಮ್ರಾಜ್ಯದ ಆಡಳಿತದಲ್ಲಿ ಪಾಲ್ಗೊಂಡನು.

ಬಯಕಾರ ರಾಮಪ್ಪನು ತನ್ನ ಅಧೀನ ಅಧಿಕಾರಿಗಳಿಗೆ ಮತ್ತು ಅನುಚರರು ಸಹ ತನ್ನಂತೆ ಸತ್ಕಾರ್ಯಗಳನ್ನು ಕೈಗೆತ್ತಿಕೊಳ್ಳಲು ಪ್ರೇರಣೆ ಮತ್ತು ಪ್ರಚೋದನೆಯನ್ನು ನೀಡಿದನು. ವಿಜಯನಗರದ ಅರಸರೂ ಇವನು ನಿರ್ಮಿಸಿದ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡಲು ಮುಂದಾಗಿರುವುದು ಕಂಡುಬರುತ್ತದೆ. ಇವನು ದಾನ-ಧರ್ಮಗಳನ್ನು ಮಾಡುವ ವ್ಯಕ್ತಿಗಳಿಗೆ ಮಾರ್ಗದರ್ಶಿಯಾದಂತವನು. ಬಯಕಾರ ರಾಮಪ್ಪನು ಬೂದಿಹಾಳು ಸೀಮೆಯ ಮಾಗಾಣಿಕಾರನಾಗಿದ್ದಾಗ ಇವನ ಅಣತಿಯ ಮೇರೆಗೆ ಇವನ ಅಧಿಕಾರಿಯೊಬ್ಬ ಕ್ರಿ.ಶ. ೧೫೩೫ರಲ್ಲಿ ಕಲ್ಲುಕೆರೆ ಗ್ರಾಮವನ್ನು ದೇವಾಲಯವೊಂದಕ್ಕೆ ದಾನವಾಗಿ ನೀಡಿದನು. ಇವನ ಇನ್ನೊಬ್ಬ ಅಧಿಕಾರಿ ಮಾದಯ್ಯಪ್ಪ ಎಂಬುವನು ಹದಿನಾಡು ಸೀಮೆಯ ಜನರಿಂದ ಅರಮನೆಗೆ ಸಂದಾಯವಾಗಬೇಕಿದ್ದ ಸುಂಕಗಳನ್ನು ಅದೇ ಸೀಮೆಯ ಹಳೆಯ ಮೋಡಿಹಳ್ಳಿ ಗ್ರಾಮದ ಮಲ್ಲಿಕಾರ್ಜುನ ದೇವರಿಗೆ ದಾನವಾಗಿ ನೀಡಿರುವುದು ಕಂಡುಬರುತ್ತದೆ.

ಬಯಕಾರ ರಾಮಪ್ಪನು ಬೂದಿಹಾಳು ಸೀಮೆ ಮತ್ತು ಹೊನ್ನವಳ್ಳಿ ಸೀಮೆಗಳ ಸಮರ್ಥ ಅಧಿಕಾರಿಯಾಗಿ ಸೇವೆ ಸಲ್ಲಿಸಿದ ಸಮಯದಲ್ಲಿ ಯಾವುದೋ ಒಂದು ಸಂದರ್ಭದಲ್ಲಿ ವಿಜಯನಗರದ ಚಕ್ರವರ್ತಿಗಳ ಗಮನವನ್ನು ಸೆಳೆದಿರಬೇಕು. ಇವನ ನಿಷ್ಠೆ, ಪ್ರಾಮಾಣಿಕತೆ, ಸಾಹಸಗಳನ್ನು ಮೆಚ್ಚಿದ ವಿಜಯನಗರದ ಅರಸರು ಪ್ರಾಂತಾಧಿಕಾರಿ ಹುದ್ದೆಗೆ ನೇಮಿಸಿದರು. ತನ್ನ ಸ್ವಂತ ಸಾಮರ್ಥ್ಯ ಮತ್ತು ಪ್ರತಿಭೆಯಿಂದ ರಾಮಾಮಾತ್ಯನು ಪ್ರಾಂತಾಧಿಕಾರಿಯ ಹುದ್ದೆಯನ್ನು ಗಳಿಸಿದನು. ವಿಜಯನಗರದ ಅರಸು ಅಚ್ಯುತರಾಯನು ಬಯಕಾರ-ರಾಮಪ್ಪನನ್ನು, ಇವನ ಚಿಕ್ಕಪ್ಪ ರಾಮಯ್ಯ, ಭಾಸ್ಕರನ ನಿವೃತ್ತಿ ಅಥವಾ ಸಾವಿನ ನಂತರ ಅವನ ಸ್ಥಾನದಲ್ಲಿ ಕೊಂಡವೀಡು ದುರ್ಗದ ಅಧಿಪತಿಯನ್ನಾಗಿ ಕ್ರಿ.ಶ. ೧೫೪೪ರಲ್ಲಿ ನೇಮಿಸಿದನು.

ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪನನ್ನು ತಂದೆಯೆಂದು ಕರೆದುಕೊಂಡಿರುವುದು ಹಾಗೂ ಅವನ ಹೆಂಡತಿ ಮತ್ತು ಮಗನ ಹೆಸರಿನಲ್ಲಿ ಗುಡಿಗಳನ್ನು ಕಟ್ಟಿಸಿರುವುದರಿಂದ ಬಯಕಾರ ರಾಮಪ್ಪನಿಗೆ ಕೊಂಡವೀಡು ದುರ್ಗದ ಅಧಿಪತಿಯಾಗಿ ನೇಮಕವಾಗಲು ಅವನ ಚಿಕ್ಕಪ್ಪನ ನೆರವು ದೊರಕಿರಬಹುದು ಎಂದು ಊಹಿಸಲಾಗಿದೆ.

ಕೊಂಡವೀಡು ಗಜಪತಿ ಸಾಮ್ರಾಜ್ಯದ ಆಂಧ್ರ ಪ್ರಾಂತ್ಯದಲ್ಲಿ ಉದಯಗಿರಿಗೆ ಸಮಾನವಾದ ಆಯಕಟ್ಟಿನ ಕೋಟೆ, ಕೊಂಡವೀಡು ಆ ಪ್ರದೇಶದ ಆಡಳಿತಾತ್ಮಕ ರಾಜಧಾನಿ. ಅದ್ದಂಕಿ, ಅಮ್ಮನಬೋಲು

ಮೊದಲಾದ ಸುತ್ತಮುತ್ತಲಿನ ವಲಯಾಧಿಕಾರಿಗಳು ಕೊಂಡವೀಡು ದುರ್ಗದ ಅಧಿಪತಿಯ ಕೈಕೆಳಗೆ ಇರುತ್ತಿದ್ದರು. ದಕ್ಷಿಣದಿಂದ ಗಜಪತಿಯ ಸಾಮ್ರಾಜ್ಯದ ಮೇಲೆ ದಂಡೆತ್ತಿ ಬರುವವರು ಮೊದಲು ಅದ್ದಂಕಿ, ವಿನಿಕೊಂಡ, ಬೆಲ್ಲಂಕೊಂಡ, ನಾಗಾರ್ಜುನಕೊಂಡ, ತಂಗೆಡು, ಕೇತವರಂ ಮೊದಲಾದ ಗಿರಿದುರ್ಗಗಳನ್ನು ಗೆದ್ದು ಮುಂದೆ ಸಾಗಬೇಕಾಗಿತ್ತು. ಇವುಗಳನ್ನು ಬಿಟ್ಟು ಕೊಂಡವೀಡನ್ನು ಗೆದ್ದರೂ ಅಲ್ಲಿ ಸ್ಥಿರವಾಗಿ ನೆಲೆಯೂರುವುದು ಅಸಾಧ್ಯವಾಗಿತ್ತು.

ಕೃಷ್ಣದೇವರಾಯನು ಸಾಳುವ ನರಸಿಂಹನ ಮರಣ ಶಾಸನದ ಕಾರಣವಾಗಿ ಕ್ರಿ.ಶ.೧೫೧೫ರಲ್ಲಿ ಕೊಂಡವೀಡುವಿನ ಕಡೆಗೆ ತನ್ನ ಸೈನ್ಯವನ್ನು ಮುನ್ನೆಡೆಸಿದನು. ಈ ಯುದ್ಧಕ್ಕೆ ಬೇಕಾದ ಅನೇಕ ರೀತಿಯ ಸಿದ್ಧತೆಗಳನ್ನು ಮಾಡಿಕೊಂಡು ಉದಯಗಿರಿಯಿಂದ ಕೊಂಡವೀಡಿನ ಕಡೆಗೆ ಸೈನ್ಯವನ್ನು ನಡೆಸಿದನು. ಈ ಯುದ್ಧವು ತಿಮ್ಮರಸನ ನೇತೃತ್ವದಲ್ಲಿ ನಡೆಯಿತು. ಈ ಯುದ್ಧದ ಕೊನೆಯ ಘಟ್ಟದಲ್ಲಿ ರಾಯನು ಇನ್ನೂ ಹೆಚ್ಚಿನ ಸೇನೆಯೊಂದಿಗೆ ತಿಮ್ಮರಸನ ಸೈನ್ಯವನ್ನು ಸೇರಿಕೊಂಡನು. ಕೊಂಡವೀಡು ಜಯಿಸಿಕೊಳ್ಳುವ ಮುನ್ನ ಅದ್ದಂಕಿ, ವಿನುಕೊಂಡ, ಬೆಲ್ಲಂಕೊಂಡ, ನಾಗಾರ್ಜುನಕೊಂಡ, ತೆಂಗಡ ಮತ್ತು ಕೇತವರಗಳನ್ನು ಗೆದ್ದುಕೊಂಡನೆಂದು ತಿಳಿಯುತ್ತದೆ.[೪] ಶ್ರೀ ಕೃಷ್ಣದೇವರಾಯನು ತಾನು ಗೆದ್ದ ಎಲ್ಲಾ ದುರ್ಗಗಳಲ್ಲಿ ಆಡಳಿತಗಾರರನ್ನು ನೇಮಿಸಿದನು ಎಂದು ತಿಳಿದುಬರುತ್ತದೆ.

ಕಂದೂರನ್ನು ಗೆದ್ದ ನಂತರ ಶ್ರೀ ಕೃಷ್ಣದೇವರಾಯನು ವಿನುಕೊಂಡಕ್ಕೆ ನಡೆದನು. ಅಲ್ಲಿಯವರು ಇದನ್ನಾರು ಎದುರಿಸುವರು ಎಂದು ಪಲಾಯನ ಮಾಡಿದರು. ಅಲ್ಲಿ ಭಾಸ್ಕರಯ್ಯನನ್ನು ನೇಮಿಸಿ, ಬೆಲ್ಲಂಕೊಂಡಕ್ಕೆ ಮುನ್ನಡೆದು ಅವರನ್ನು ಸೋಲಿಸಿ ಅಲ್ಲಿ ವೀರಭದ್ರಯ್ಯನನ್ನು ನೇಮಿಸಿದನು.[೫] ಕೊಂಡವೀಡು ವಿಜಯದ ವಿವರಗಳು ನ್ಯೂನಿಜ್‌ನ ವರದಿಯಿಂದ ತಿಳಿದುಬರುತ್ತವೆ. ರಾಯನು ಕೊಂಡವೀಡು ಕೋಟೆಯ ಮೇಲೆ ಕಾರ್ಯಾಚರಣೆಯನ್ನು ನಡೆಸಿ ಎರಡು ತಿಂಗಳ ಕಾಲ ಮುತ್ತಿಗೆ ಹಾಕಿ ಅದನ್ನು ಕೊನೆಗೆ ವಶಪಡಿಸಿಕೊಂಡನು.[೬] ಅಲ್ಲದೆ ಗಜಪತಿಯ ಕುಮಾರನು, ರಾಜ್ಯದ ಏಳು ಜನ ಮುಖ್ಯ ದಳವಾಯಿಗಳು ರಾಯರ ಬಂಧಿಗಳಾದರೆಂದೂ, ಅವರೆಲ್ಲರನ್ನು ಖೈದಿಗಳನ್ನಾಗಿ ವಿಜಯನಗರಕ್ಕೆ ಕಳುಹಿಸಲಾಯಿತೆಂದು ನ್ಯೂನಿಜ್ ಬರೆದಿರುವನು.[೭] ಶ್ರೀ ಕೃಷ್ಣದೇವರಾಯನು ಗೆದ್ದ ಸೀಮೆಗಳನ್ನು ಸಾಮ್ರಾಜ್ಯದಲ್ಲಿ ಸೇರಿಸಿ, ಕೊಂಡವೀಡು ಸೀಮೆಯನ್ನು ಮತ್ತಿತರ ಕೋಟೆಗಳನ್ನು ಸಾಳುವ ತಿಮ್ಮರಸರು ಪರಾಕ್ರಮದಿಂದ ಗೆದ್ದುದನ್ನು ಪರಿಗಣಿಸಿ ಆತನನ್ನೇ ಕೊಂಡವೀಡುಗೆ ಅಧಿಪತಿಯನ್ನಾಗಿ ಮಾಡಿದನು. ತಿಮ್ಮರಸನು ಕಳಿಂಗ ಚೈತ್ರ ಯಾತ್ರೆಯನ್ನು ವಿಜಯವಂತವಾಗಿ ಮಾಡಬೇಕಾಗಿದೆಯೆಂದು ತಾನು ದಂಡಿನೊಂದಿಗೆ ನಡೆದು ತನ್ನ ಅಳಿಯ ನಾದಿಂಡ್ಲ ಗೋಪ ಮಂತ್ರಿಯನ್ನು ತನ್ನ ಪ್ರತಿನಿಧಿಯಾಗಿ ಅಲ್ಲಿ ನೇಮಿಸಿ ತಾನು ದಂಡಿನೊಂದಿಗೆ ಹೊರಟನು.[೮]

ಕೃಷ್ಣದೇವರಾಯನು ತನ್ನ ಜೀವಿತದ ಕೊನೆಯ ಕಾಲದಲ್ಲಿ ತನ್ನ ಮಗನಾದ ತಿರುಮಲನನ್ನು ಯುವರಾಜನನ್ನಾಗಿ ಮಾಡಿ ತಾನು ಮಹಾಪ್ರಧಾನನಾದನು. ಆದರೆ ಕೇವಲ ಎಂಟೇ ತಿಂಗಳಲ್ಲಿ ರಾಜಕುಮಾರನು ವಿಷ ಪ್ರಯೋಗದಿಂದ ಮರಣ ಹೊಂದಿದನು. ಈ ಕೃತ್ಯಕ್ಕೆ ಸಾಳುವ ತಿಮ್ಮರಸನು ಕಾರಣನೆಂದು ತಿಳಿಯಿತು. ರಾಜನು ಸಾಳುವ ತಿಮ್ಮರಸನನ್ನೂ, ಅವನ ಮಗ ತಿಮ್ಮ ದಂಡನಾಯಕನನ್ನು ಸೆರೆಗೆ ದೂಡಿದನು. ಅನಂತರದಲ್ಲಿ ತಿಮ್ಮ ದಂಡನಾಯಕನು ಸೆರೆಯಿಂದ ತಪ್ಪಿಸಿಕೊಂಡು ಕೊಂಡವೀಡುಗೆ ಓಡಿಹೋದನು. ಅಲ್ಲಿ ಅವನ ದಾಯಾದಿಗಳಾದ ನಾದಿಂಡ್ಲ ಅಪ್ಪ ಮತ್ತು ಗೋಪರು ರಾಜ್ಯಪಾಲರಾಗಿದ್ದರು. ಕೊಂಡವೀಡುವಿನಲ್ಲಿ ಬಂಡಾಯವೆದ್ದಿತ್ತು, ರಾಯಸಂ ಅಯ್ಯಪ್ಪ ಅರಸನು ಭಾರೀ ಸೈನ್ಯದೊಂದಿಗೆ ಹೋಗಿ ತಿಮ್ಮನನ್ನು ಸೆರೆಹಿಡಿದು ರಾಜಧಾನಿಗೆ ತಂದನು. ಈ ಸಮಯದಲ್ಲಿ ಬಯಕಾರ ರಾಮಪ್ಪನ ಚಿಕ್ಕಪ್ಪನಾದ ಭಾಸ್ಕರನು ವಿನುಕೊಂಡದ ಅಧಿಪತಿಯಾಗಿದ್ದನು. ಈ ಘಟನೆಯ ನಂತರ ಕೃಷ್ಣದೇವರಾಯನು ಭಾಸ್ಕರನನ್ನು ಕೊಂಡವೀಡುವಿನ ಅಧಿಪತಿಯಾಗಿ ನಿಯಮಿಸಿರಬೇಕು.

ಭಾಸ್ಕರನ ನಿವೃತ್ತಿ ಅಥವಾ ಸಾವಿನ ನಂತರ ಅಚ್ಯುತರಾಯನು ಬಯಕಾರ ರಾಮಪ್ಪನನ್ನು ಕ್ರಿ.ಶ. ೧೫೩೪ರಲ್ಲಿ ಈ ದುರ್ಗದ ಅಧಿಪತಿಯಾಗಿ ನೇಮಿಸಿಸಿದನು. ಕೊಂಡವೀಡು ದುರ್ಗವು ರಾಜಕೀಯವಾಗಿ ಜಟಿಲ ಕಾರ್ಯ ಸ್ಥಾನವಾಗಿದ್ದರಿಂದ ದಖನ್ ಸುಲ್ತಾನರೂ ಒಳಗೊಂಡಂತೆ ಅನೇಕ ಅರಸರನ್ನು ಆಕರ್ಷಿಸಿತ್ತು. ಹಾಗೂ ಅದು ಸಮಸ್ಯೆಗಳ ತಾಣವಾಗಿದ್ದಿತು. ಕೊಂಡವೀಡು ದುರ್ಗವು ಸಂಗಮ ಅರಸರ ಕಾಲದಿಂದ ಸಾಮ್ರಾಜ್ಯದ ಕಾಲದ ಉದ್ದಕ್ಕೂ ರಾಜಕೀಯ ಮತ್ತು ಲಷ್ಕರಿ ಪ್ರಾಮುಖ್ಯತೆಯನ್ನು ಗಳಿಸಿರುವುದು ಕಂಡುಬರುತ್ತದೆ. ಇಂತಹ ದುರ್ಗದ ಆಡಳಿತವನ್ನು ನಿರ್ವಹಿಸಲು ದಕ್ಷನೂ, ದೃಢಚಿತ್ತನೂ, ವಿಶ್ವಾಸಪಾತ್ರನೂ, ಚತುರನೂ ಆದ ವ್ಯಕ್ತಿಯ ಅಗತ್ಯವಿತ್ತು. ಈ ಅಗತ್ಯತೆಯನ್ನು ಬಯಕಾರ ರಾಮಪ್ಪನು ಪೂರೈಸಿದನು.

ಕ್ರಿ.ಶ. ೧೫೪೨ರಲ್ಲಿ ಅಚ್ಯುತರಾಯನು ಮರಣಹೊಂದಿದನು. ತಿರುಮಲನು ಅಚ್ಯುತನ ಮಗ ೧ನೇ ವೆಂಕಟನನ್ನು ಸಿಂಹಾಸನದ ಮೇಲಿರಿಸಿ ರಾಜಪ್ರತಿನಿಧಿಯಾಗಿ ಆಳಿದನು. ನಂತರದಲ್ಲಿ ತಿರುಮಲನು ವೆಂಕಟ ಮತ್ತು ಅವನ ಕುಟುಂಬ ಸದಸ್ಯರನ್ನು ಕೊಲೆ ಮಾಡಿಸಿದನು. ರಾಮರಾಯನು ತಿರುಮಲನನ್ನು ಕೊಂದು ಸದಾಶಿವರಾಯನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದನು.

ಸದಾಶಿವರಾಯನು ಶಾಸನಬದ್ಧ ದೊರೆಯಾಗಿದ್ದನು. ಆದರೆ ಸಮಸ್ತ ಅಧಿಕಾರವೂ ರಾಮರಾಯನ ಕೈಯಲ್ಲಿ ಕೇಂದ್ರೀಕೃತವಾಗಿತ್ತು. ರಾಜ್ಯದ ಪರಿಪೂರ್ಣ ವ್ಯವಹಾರಗಳನ್ನು ನಿಯಂತ್ರಿಸುತ್ತಿದ್ದುದ್ದು ಅವನೇ ಆಗಿದ್ದನು. ಕ್ರಿ.ಶ. ೧೫೫೨ ರಿಂದ ರಾಮರಾಯನನ್ನು ಸಹ ರಾಜಪ್ರತಿನಿಧಿ ಎಂದು ಪರಿಗಣಿಸಲಾಯಿತು. ರಾಮರಾಯನಿಗೆ ಅವನ ಸೋದರರಾದ ತಿರುಮಲ ಮತ್ತು ವೆಂಕಟಾದ್ರಿ

ಆಡಳಿತ ವಿಚಾರಗಳಲ್ಲಿ ನೆರವಾಗುತ್ತಿದ್ದರು. ವಿಶ್ವಾಸಾರ್ಹರಾಗಿದ್ದ ಹಿಂದಿನ ನೌಕರರನ್ನೆಲ್ಲಾ ತೆಗೆದುಹಾಕಿ ಯಾರು ಈ ಮೂವರು ನಾಯಕರಿಗೆ ಸಹಕರಿಸುತ್ತಿದ್ದರೋ ಅವರನ್ನು ಮಾತ್ರ ಆಡಳಿತದಲ್ಲಿ ಮುಂದುವರೆಸಲಾಯಿತು.

ಬಯಕಾರ ರಾಮಪ್ಪನು ಅಚ್ಯುತರಾಯನ ಸಾವಿನ ನಂತರವೂ ವಿಜಯನಗರದ ಸರ್ವಾಧಿಕಾರಿ ಅಳಿಯ ರಾಮರಾಯನ ಕಾಲದಲ್ಲಿ ಅಧಿಕಾರದಲ್ಲಿ ಮುಂದುವರೆಸಿದನು. ಬಯಕಾರ ರಾಮಪ್ಪನ ಸಂಗೀತ ಗ್ರಂಥದಿಂದ ಇವನು ಅಳಿಯ ರಾಮರಾಯನ ಸಹೋದರ ವೆಂಕಟಾದ್ರಿಯ ಮಿತ್ರನಾಗಿರುವುದು ತಿಳಿದುಬರುತ್ತದೆ. ಇವನು ತನ್ನ ಮಿತ್ರ ವೆಂಕಟಾದ್ರಿಯ ನೆರವಿನಿಂದ ರಾಮರಾಯನ ವಿಶ್ವಾಸವನ್ನು ಗಳಿಸಿದನು ಮತ್ತು ತಾನು ರಚಿಸಿದ ಸಂಗೀತ ಗ್ರಂಥವನ್ನು ಅವನಿಗೆ ಅರ್ಪಿಸುವುದರ ಮೂಲಕ ತನ್ನ ಸ್ಥಾನವನ್ನು ಬಲಪಡಿಸಿಕೊಂಡನು. ಬಯಕಾರ ರಾಮಪ್ಪನು ತನ್ನನ್ನು ಕೊಂಡವೀಡುವಿನ ಅಧಿಪತಿಯನ್ನಾಗಿ ಮಾಡಿದ್ದ ಅಚ್ಯುತರಾಯನಿಗೆ ಹೆಚ್ಚು ನಿಷ್ಠೆಯುಳ್ಳವನಾಗಿದ್ದನೆಂದು ಕಂಡುಬರುತ್ತದೆ. ಯಾವುದೋ ಒಂದು ಸಂದರ್ಭದಲ್ಲಿ ರಾಮರಾಯನಿಗೆ ಈ ವಿಷಯ ತಿಳಿದು ಬಯಕಾರ ರಾಮಪ್ಪನನ್ನು ಕೊಂಡವೀಡುವಿನ ಅಧಿಪತಿ ಸ್ಥಾನದಿಂದ ಕೆಳಗಿಳಿಸಿರಬೇಕು. ಅಥವಾ ವಯಸ್ಸಿನ ಕಾರಣವಾಗಿ ಇನ್ನಾವುದರ ಕಾರಣವಾಗಿ ಬಯಕಾರ ರಾಮಪ್ಪನು ಅಧಿಕಾರವನ್ನು ತ್ಯಜಿಸಿ, ಇಂದಿನ ತಿಮ್ಮಲಾಪುರದ ಬಳಿ ವಿಶ್ರಾಂತ ಜೀವನವನ್ನು ಸಾಗಿಸುತ್ತಿದ್ದು, ವಿಜಯನಗರ ಸಾಮ್ರಾಜ್ಯವು ಅಮಾನುಷವಾಗಿ ಕಾಲವಾಗುವ ಮುನ್ನವೇ ಮರಣ ಹೊಂದಿರಬೇಕು.

**ದೇವಾಲಯಗಳು**

ದೇವಾಲಯ ಎಂಬುದು ಒಂದು ಧಾರ್ಮಿಕ ಕಟ್ಟಡವಾಗಿದೆ. ದೇವಾಲಯವು ಸಾಮೂಹಿಕ ಪೂಜೆ, ಪ್ರಾರ್ಥನೆ ಸಲ್ಲಿಸಲು ಅನುಕೂಲವಿರುವ ಒಂದು ಜಾಗ ಅಥವಾ ಸ್ಥಳವಾಗಿದೆ. ಇದನ್ನು ದೇವಸ್ಥಾನ, ದೇವಾಲಯ, ಗುಡಿ, ಮಂದಿರ, ದೇಗುಲ, ದೇವಾಗಾರ, ದೇವಳ ಮುಂತಾಗಿ ಕರೆಯಲಾಗಿದೆ. ಇಂಗ್ಲೀಷ ಬಾಷೆಯಲ್ಲಿ 'ಟೆಂಪಲ್' ಎಂಬ ಶಬ್ದಕ್ಕೆ ದೇವರು ನೆಲೆಸಿರುವ ಸ್ಥಳ, ದೇವಾಲಯ, ದೇವಸ್ಥಾನ, ಗುಡಿ ಎಂಬ ಅರ್ಥವೂ ಇದೆ.[r] ದೇವರು ಇರತಕ್ಕ ಸ್ಥಾನ, ಎಡೆ, ಜಾಗಕ್ಕೆ ದೇವಾಲಯ ಎಂದು ಅರ್ಥೈಸಲಾಗಿದೆ. ನಮ್ಮ ಮನಸ್ಸಿನ ಕಲ್ಪನೆಗೂ ಮೀರಿದ ಮನಸ್ಸಿಗೆ ಯಾವುದು ಆಧಾರವಾಗಿರುತ್ತದೆಯೇ ಅದು ದೇವರು. ಸರ್ವವ್ಯಾಪ್ತಿಯಾದ ದೇವರು ಅಣುರೇಣು ತೃಣಕಾಷ್ಠಗಳಲ್ಲಿಯೂ ಇದ್ದಾನೆ. ಆದುದರಿಂದ ಪ್ರಾಚೀನ ಕಾಲದ ಜನರ ಭಾವನೆಗೆ ದೇವಮಂದಿರಗಳು ಕಲ್ಪನೆ ಒಡಮೂಡಿದ್ದು ವಿಶೇಷವೇ ಆಗಿದೆ.

ಪ್ರಾಚೀನ ಭಾರತದ ವಾಸ್ತುಶಿಲ್ಪ ಚರಿತ್ರೆಯಲ್ಲಿ ಶಿಲಾಯುಗದ ಜನರ ಪ್ರಕೃತಿ ಪೂಜೆ, ಸಮಾದಿ ಪೂಜೆಗಳಿಂದ ದೇವಾಲಯಗಳ ಸ್ಪಷ್ಟ ಚಿತ್ರಣ ನಮಗೆ ದೊರೆಯುತ್ತದೆ. ಕ್ರಮೇಣ ಇವು

ಪ್ರತಿಮಾರುತ ಕೆಳ ಹಂತಗಳಿಂದ ವಿಕಸಿತಗೊಂಡಾಗ ಧರ್ಮವು ಅವನ ನೆರವಿಗೆ ಬಂದಿತು. ಭಯವೂ ಧರ್ಮದ ಹುಟ್ಟಿಗೆ ಒಂದು ಮೂಲಕಾರಣವಾಯಿತು. ನಿಸರ್ಗದ ಮಡಿಲಲ್ಲಿ ಅಡಗಿರುವ ವೈಚಿತ್ರ್ಯ, ಅದ್ಭುತಗಳನ್ನು ಕಂಡು ಭಯವಿಸ್ಮಿತನಾಗಿ, ದಿಗ್ಭ್ರಾಂತಗೊಂಡು ಆದಿಮಾನವನಲ್ಲಿ ಭಯವು ಮೂಡಿತು. ಯಾವುದೋ ಶಕ್ತಿ ಪ್ರಕೃತಿಯಲ್ಲಿ ಅಡಿಗಿದೆಯೆಂಬುದರ ಅರಿವಾಗಿ ಅದರ ವಿಚಾರದಲ್ಲಿ ಪೂಜ್ಯ ಭಾವನೆ ಮೂಡಿತು. ಮರ, ಗಿಡ, ನದಿ, ಸೂರ್ಯ, ಗಾಳಿ, ಇತ್ಯಾದಿಗಳೂ ಈ ಕಾರಣದಿಂದಲೇ ಪೂಜ್ಯನೀಯವಾದುವಲ್ಲದೆ ಪೂಜ್ಯಸ್ಥಾನಗಳೂ ಆದವು.

ಕಾಲ ಕ್ರಮೇಣ ವಿಕಾಸಗೊಂಡ ಮನುಷ್ಯನಿಗೆ ಅದ್ಭುತ ಅಪೂರ್ವ ದಿವ್ಯವಾದುದು ಎಂಬುದನ್ನು ಅನುಭವಿಸುವ ಸಾಮರ್ಥ್ಯದ ಜೊತೆಗೆ ಅದರ ಪ್ರತಿಕೃತಿಗಳನ್ನು ಕಲ್ಪಿಸಿಕೊಳ್ಳುವ, ರೂಪಿಸುವ ಸೃಜನಶೀಲ ಶಕ್ತಿಯೂ ಬೆಳೆದುಬಂದಿತು. ಪ್ರತಿಕೃತಿಗಳ ಬಳಕೆಗೆ ಮುನ್ನ ಪ್ರಕೃತಿಸಿದ್ಧವಾದ ಪ್ರತಿಮೆಗಳನ್ನು ಬಳಸುವ ಪದ್ಧತಿ ಧರ್ಮದ ನೆಲೆಯಲ್ಲಿ ಇದ್ದಿತು. ನಿಸರ್ಗದತ್ತವಾದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಕಲಾತ್ಮಕವಾಗಿ ಮಾಡಿಕೊಳ್ಳುವ ಹವ್ಯಾಸವೂ ನಿಸರ್ಗ ಸಿದ್ಧವಾದುದಾಗಿದೆ.

"ಆದಿ ಮಾನವನು ಬೇಟೆಗೆ ಹೊರಡುವ ಮುನ್ನ ಗುಹೆ ಎದುರು ಚಿತ್ರಮಂಡಲವೊಂದನ್ನು ಬರೆದು ಅದರ ನಡುವೆ ತನಗೆ ಬೇಕಾದ ಪ್ರಾಣಿಯ ಆಕಾರವನ್ನು ಸ್ಥೂಲವಾಗಿ ಬರೆದು ಅದರ ಮೈಮೇಲೆ ಬಾಣವೊಂದು ನಾಟಿದಂತೆ ಗುರುತಿಸಿ ಬೇಟೆಗೆ ಹೊರಡುತ್ತಿದ್ದ. ಪ್ರಾಣಿಯೊಂದರ ಚರ್ಮವೊಂದನ್ನು ಮೈಮೇಲೆ ಧರಿಸಿ ಹೊರಟರೆ ಹಿಡಿದ ಕೆಲಸದಲ್ಲಿ ಜಯ ಎಂಬ ನಂಬಿಕೆ ಕಾಕತಾಳೀಯವಾಗಿ ಆ ದಿನ ಜಯ ಒದಗಿದರೆ ಅದಕ್ಕೆ ಕಾರಣ ಚರ್ಮ ಪದಾರ್ಥ ಎಂಬ ನಂಬಿಕೆ ಬೇರೂರಿತು. ಮುಂದೆ ಯಾವ ಕೆಲಸಕ್ಕೆ ಹೋದರೂ ಈ ಪದಾರ್ಥ ಸಿದ್ಧ. ಅದನ್ನು ಮೈಮೇಲೆ ಧರಿಸಿಕೊಳ್ಳದಿದ್ದಾಗ ಅದಕ್ಕಾಗಿ ಸಿದ್ಧಪಡಿಸಿದ ಸ್ಥಳದಲ್ಲಿ ಅದನ್ನು ಇರಿಸಿ, ಯಾರೂ ಅದನ್ನು ಮುಟ್ಟದಂತೆ ನೋಡಿಕೊಂಡು ತಾನು ಮುಟ್ಟುವಾಗಲೂ ಎಚ್ಚರ ವಹಿಸಿದನು. ಆ ವಸ್ತುವು ಅವನ ಆರಾಧ್ಯದೈವ, ಜೀವನರಕ್ಷೆ. ಅದನ್ನು ಇರಿಸಿದ ಸ್ಥಳವೇ ದೇಗುಲವಾಯಿತು. ಮುಂದೆ ಇದರ ರಕ್ಷಣೆಗೆ ಕಟ್ಟಿದ ಕಟಕಟೆಯೇ ದೇಗುಲವಾಗಿ ಬೆಳವಣಿಗೆ ಹೊಂದಿತು."[೧೦] ಹೀಗೆ ಆದಿಮಾನವನು ತನಗೆ ನೆರವಾಗುವ ಪ್ರತಿಮೆಯನ್ನು ಇಟ್ಟ ಸ್ಥಳ ಅದರ ಸುತ್ತಲೂ ಕಟ್ಟಿದ ಕಟ್ಟಡ ಹಾಗೂ ಅದರ ಸುತ್ತ ಇರುವ ಪ್ರದೇಶವು ಪವಿತ್ರವಾಯಿತು. ಈ ಕ್ರಿಯೆಗಳು ಮುಂದೆ ದೇವಾಲಯದ ರಚನೆಗೆ ನಾಂದಿಯಾದವು.

ದೇವಾಲಯಗಳ ನಿರ್ಮಾಣ ಎಂದಿನಿಂದ ಆರಂಭವಾದವು ಎಂಬುದಕ್ಕೆ ಸ್ಪಷ್ಟವಾದ ಆಧಾರಗಳು ದೊರಕುವುದಿಲ್ಲ. ಕ್ರಿಸ್ತಶಕದ ಆರಂಭಕ್ಕೆ ಮುನ್ನ ದೇವಾಲಯಗಳು ರಚನೆಗೊಂಡವು ಎಂದು

ಹೇಳಲಾದರೂ ಅವುಗಳ ಸ್ವರೂಪ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಹರಪ್ಪ ಮತ್ತು ಮೆಹೆಂಜೋದಾರೋ ಉತ್ಖನನಗಳಲ್ಲಿ ಸಾರ್ವಜನಿಕ ಕಟ್ಟಡಗಳನ್ನು ಗುರುತಿಸಬಹುದೇ ವಿನಃ ದೇವಾಲಯಗಳ ರಚನೆಗಳು ಕಂಡು ಬರುವುದಿಲ್ಲ ಎಂಬುದು ವಿದ್ವಾಂಸರ ಅಭಿಮತವಾಗಿದೆ.[೧೧] ಆದರೆ ದೇವತಾ ಪೂಜೆ ಇದ್ದುದನ್ನು ಸಿಂಧೂ ಬಯಲಿನಲ್ಲಿ ದೊರೆತ ಆಧಾರಗಳು ಸ್ಪಷ್ಟಪಡಿಸಿವೆಯಾದರೂ ದೇವಾಲಯಗಳ ಬಗ್ಗೆ ಖಚಿತವಾದ ಆಧಾರಗಳು ಕಂಡುಬರುವುದಿಲ್ಲ. ವೇದಗಳ ಕಾಲದಲ್ಲಿ ಮರ ಇಟ್ಟಿಗೆಯಂತಹ ನಾಶವಾಗುವ ವಸ್ತುಗಳಿಂದ ನಿರ್ಮಿತವಾದ ದೇವಸ್ಥಾನಗಳು ಕಾಲಾನಂತರದಲ್ಲಿ ನಶಿಸಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಕೆಲವು ಇಟ್ಟಿಗೆಯ ದೇವಾಲಯಗಳನ್ನು ಕಲ್ಲಿನಿಂದ ಪುನರ್ ನಿರ್ಮಾಣ ಮಾಡಿರುವ ದಾಖಲೆಗಳಿವೆ.[೧೨]

ಇತ್ತೀಚೆಗೆ ದ್ವಾರಕೆಯ ದ್ವಾರಕಾದೀಶ ದೇವಾಲಯದ ಎದುರು ನಡೆದಿರುವ ಸಮುದ್ರ ಶೋಧನೆ ಕ್ರಿಪೂ. ಒಂದನೆಯ ಶತಮಾನಕ್ಕಾಗಲೇ ದೇವಾಲಯ ನಿರ್ಮಾಣವಾಗಿರುವುದನ್ನು ಬೆಳಕಿಗೆ ತಂದಿದೆ.[೧೩] ಕ್ರಿಪೂ. ಎರಡನೆಯ ಶತಮಾನದಲ್ಲಿ ಹೆಲಿಯೋಡೋರಸ್ ಸ್ಥಾಪಿಸಿದ ಗರುಡ ಸ್ತಂಬದ ಉಲ್ಲೇಖ ವಾಸುದೇವನ ದೇವಾಲಯಕ್ಕೆ ಸಂಬಂಧಿಸಿದ್ದು.[೧೪] ದೇವಾಲಯಗಳಿಗೆ ಸಂಬಂಧಿಸಿದಂತೆ ಇದು ಪ್ರಾಚೀನ ಉಲ್ಲೇಖವೆನಿಸಿದೆ. ಹರಪೋತ್ತರ ಕಾಲಕ್ಕೆ ಸೇರಿರುವ ಬರವಣಿಗೆಯಿರುವ ಹೂಜಿಯೊಂದು ದ್ವಾರಕೆಯಲ್ಲಿ ದೊರಕಿದ್ದು ಮಹಾಗಚ್ಛಶಪಾ ಅಂದರೆ ಸಮುದ್ರ ರಾಜನೇ ರಕ್ಷಿಸು ಎಂದಿರುವ ಶಾಸನದ ಕಾಲವನ್ನು ಕ್ರಿಪೂ. ೩ನೆಯ ಶತಮಾನವೆಂದು ಹೇಳಲಾಗಿದೆ.[೧೫]

ಗುಪ್ತರ ಕಾಲದಲ್ಲಿ ಹಿಂದೂ ಧರ್ಮಕ್ಕೆ ದೊರೆತ ಹೆಚ್ಚಿನ ಪ್ರೋತ್ಸಾಹದಿಂದ ಅಧಿಕ ಸಂಖ್ಯೆಯಲ್ಲಿ ದೇವಾಲಯಗಳು ನಿರ್ಮಾಣವಾದವು. ಈ ಕಾಲದ ದೇವಘರ್‌ನ ವಿಷ್ಣುದೇವಾಲಯ, ಭೂಮಾರದಲ್ಲಿನ ದೇವಾಲಯ, ನಾಚ್ನಕುಟಾರದ ಪಾರ್ವತಿ ದೇವಾಲಯ ಇವುಗಳಲ್ಲಿ ಗರ್ಭಗೃಹವು ಮಧ್ಯ ಪ್ರದೇಶವನ್ನಾವರಿಸಿದೆ. ಇವು ೫ನೆಯ ಶತಮಾನದವೆಂದು ಗುರುತಿಸಲಾಗಿದೆ.[೧೬]

ಸ್ತೂಪ, ದೇವಾಲಯದ ಕಲ್ಪನೆಯ ರಚನೆಗೆ ನೇರವಾದ ಹಿನ್ನೆಲೆಯನ್ನೊದಗಿಸಿತು. ಅಗ್ನಿದ್ರಾಯಲ್ಲಿ ಸ್ತೂಪದ ಹಿನ್ನೆಲೆ ದೊರೆಯುತ್ತದೆ. ಈ ಸಂಪ್ರದಾಯದುದ್ದಕ್ಕೂ ಸಾವು, ಸಮಾಧಿ, ಸ್ಮಾರಕ, ಆಲಯ, ಆರಾಧನೆಗಳು ಕೂಡಿಕೊಂಡು ಬಂದಿರುವುದನ್ನು ಕಾಣಬಹುದು.[೧೭] ಬೌದ್ಧ ಭಿಕ್ಷುಗಳು ಧರ್ಮ ಪ್ರಸಾರದ ಸಂದರ್ಭದಲ್ಲಿ ಆಶ್ರಯ ಪಡೆದ ಪ್ರಶಾಂತತೆಯ ಗುಹೆಗಳು ಕ್ರಮೇಣ ಕೆತ್ತಲ್ಪಟ್ಟ ಗುಹೆಗಳಾಗಿ, ಬೌದ್ಧ ವಿಹಾರಗಳಾಗಿ, ಚೈತ್ಯಗಳಾಗಿ, ವೈದಿಕ ಸ್ತೂಪಗಳು ಇವುಗಳ ಪ್ರತಿಕೃತಿಗಳಾಗಿ ಬೆಳೆದುಬಂದವು. ಬೆಟ್ಟ, ಗುಡ್ಡಗಳನ್ನು ಕೊರೆದು ಗುಹಾಂತರ ದೇವಾಲಯಗಳನ್ನು ನಿರ್ಮಿಸುವುದು ಕ್ರಿಪೂ. ೧ನೆಯ ಮತ್ತು ೨ನೆಯ ಶತಮಾನದ ಹೊತ್ತಿಗೆ ಬೆಳೆದುಬಂದಿತು. ಗುಹಾಂತರ ದೇವಾಲಯಗಳು ಮೊದಮೊದಲು ಬೌದ್ಧ ಧರ್ಮದ ಸ್ತೂಪ, ಚೈತ್ಯಾಲಯಗಳಿಗೆ ಸಂಬಂಧಿಸಿದ್ದವು.[೧೮]

ಕರ್ನಾಟಕದ ದೇವಾಲಯ ರಚನೆಯ ಪ್ರಾಚೀನತೆಯನ್ನು ಗುರುತಿಸುವಾಗ ನಮಗೆ ಕ್ರಿಸ್ತಶಕದ ಆರಂಭದ ದೇವಾಲಯಗಳು ದೊರೆಯುವುದಿಲ್ಲ. ಆದರೂ ಕ್ರಿ.ಶ. ೨ನೆಯ ಶತಮಾನದ ವೇಳೆಗಾಗಲೇ ಶಾತವಾಹನರ ಕಾಲದ ಬೌದ್ಧರ ಮುಖ್ಯ ನೆಲೆಯಾಗಿ ಗುಲ್ಬರ್ಗಾ ಜಿಲ್ಲೆಯ ಸನ್ನತಿ ಕಂಡುಬರುತ್ತದೆ. ಅಲ್ಲಿನ ಬೌದ್ಧ ಸ್ತೂಪದ ಅವಶೇಷಗಳು ಹಾಗೂ ಬ್ರಾಹ್ಮ ಲಿಪಿಯ ಶಾಸನಗಳು ಈ ಅಂಶವನ್ನು ದೃಢೀಕರಿಸುತ್ತವೆ. ಬೌದ್ಧ ಧರ್ಮದ ಗುಹೆಗಳಲ್ಲಿ ಧರ್ಮಕ್ಕಿಂತ ಕಲೆಯ ಪಾತ್ರ ಹಿರಿಯದು. ಪ್ರತಿಮೆಯನ್ನು ಹಿಂದಕ್ಕೆ ತಳ್ಳಿ ಇಲ್ಲಿ ಕಲ್ಪನೆ ಮುಂದೆ ಬಂದಿರುವುದನ್ನು ಕಾಣಬಹುದು.[೧೯] ಅಶೋಕನ ಕಾಲದಲ್ಲಿ ದೇಶದ ವಿವಿದೆಡೆಗಳಲ್ಲಿ ಅನೇಕ ಸ್ತೂಪಗಳು ನಿರ್ಮಿಸಲ್ಪಟ್ಟವು–ಅವುಗಳಲ್ಲಿ ಮುಖ್ಯವಾದವುಗಳೆಂದರೆ ಲುಂಬಿಣಿ, ಬುದ್ಧಗಯಾ, ಸಾರನಾಥ, ತಕ್ಷಶಿಲೆ, ಸಾಂಚಿ, ಕುಶಿನಗರ ಮುಂತಾದವುಗಳು.

ಟಾಲಮಿಯ ಕಾಲದ ಗ್ರೀಕ್ ಪ್ರವಾಸವೊಂದರಲ್ಲಿ ಉಕ್ತವಾಗಿರುವಂತೆ ದಕ್ಷಿಣ ಕನ್ನಡ ಜಿಲ್ಲೆಯ 'ಉದ್ಯಾವರ'ದಲ್ಲಿ ಸೋಮೇಶ್ವರ ದೇವಾಲಯವು ಮೊದಲನೆಯ ನಿರ್ಮಾಣವೆನ್ನುವುದು ಶಿವರಾಮಕಾರಂತರ ಅಭಿಪ್ರಾಯವಾಗಿದೆ.[೨೦] ಹಿಂದೂ ದೇವಾಲಯವು ಬೌದ್ಧ ಸ್ತೂಪದಿಂದ ಬೆಳೆದು ಬಂದಿದ್ದು. ಪ್ರಾಚೀನ ಗುಹಾಲಯಗಳ ಹಿನ್ನೆಲೆಯಿಂದ ವೈದಿಕ ಸ್ತೂಪಗಳು ಬಂದವೆಂಬುದನ್ನು ಮರೆಯಬಾರದು[೨೧] ಎಂಬುದರ ಎಸ್.ಕೆ.ರಾಮಚಂದ್ರರಾವ್ ಅವರ ಅಭಿಪ್ರಾಯವಾಗಿದೆ.

ಶಾತಕರ್ಣಿಗಳ ಕಾಲಕ್ಕಾಗಲೇ ಕರ್ನಾಟಕದ ಪ್ರಾಚೀನ ದೇವಾಲಯವೆನಿಸಿದ ತಾಳಗುಂದದ ಪ್ರಣವೇಶ್ವರ ದೇವಾಲಯವು ಅಸ್ತಿತ್ವದಲ್ಲಿ ಇದ್ದಿತು.[೨೨]

ಕ್ರಿಶ ೬ನೆಯ ಶತಮಾನದಿಂದ ಬಾದಾಮಿಯ ಚಾಲುಕ್ಯರು ಗುಹಾಲಯಗಳನ್ನೇ ಅಲ್ಲದೆ ಪ್ರತ್ಯೇಕ ದೇವಾಲಯ ನಿರ್ಮಾಣವನ್ನು ಆರಂಭಿಸಿ ಚಾಲುಕ್ಯ ರಚನೆಗೆ ಪೀಠಿಕೆ ಹಾಕಿದರು.[೨೩] ಬಾದಾಮಿ ಚಾಲುಕ್ಯರ ಪೂರ್ವಕ್ಕೆ ಅಲ್ಲಿ ಕಟ್ಟಡಗಳು ಇದ್ದವೆಂದು ಸಂಶೋಧಕರು ಗುರುತಿಸಿರುವರು. ಡಾ.ಅ.ಸುಂದರರವರು ಸಂಗಮೇಶ್ವರ ದೇವಾಲಯದ ಎದುರಿಗೆ ಇಟ್ಟಿಗೆಯ ಕಟ್ಟಡ ಗುರುತು ಪತ್ತೆಮಾಡಿ ಅದು ಚಾಲುಕ್ಯ ಪೂರ್ವಯುಗದ್ದೆಂದು ಅಭಿಪ್ರಾಯಪಟ್ಟಿದ್ದಾರೆ.[೨೪] ಕರ್ನಾಟಕದಲ್ಲಿ ದೇವಾಲಯಗಳ ನಿರ್ಮಾಣ ಕಾರ್ಯವು ಚಾಲುಕ್ಯರ ಕಾಲದಲ್ಲಿ ಹೆಚ್ಚು ಭರದಿಂದ ಸಾಗಿತೆನ್ನ ಬಹುದಾಗಿದೆ. ಈ ಕಾಲದ ಪ್ರಾಚೀನ ಕಟ್ಟಡಗಳ ಅವಶೇಷಗಳನ್ನು ಇಂದಿಗೂ ಬಾದಾಮಿ–ಮಹಾಕೂಟ, ಐಹೊಳೆ, ಪಟ್ಟದಕಲ್ಲಿನಲ್ಲಿ ಕಾಣಬಹುದಾಗಿದೆ. ಬಾದಾಮಿ, ಐಹೊಳೆ, ಪಟ್ಟದಕಲ್ಲುಗಳ ದೇವಲಯಗಳ ರಚನೆ, ವಿನ್ಯಾಸಗಳನ್ನು ಹಾಗೂ ಶಾಸನಗಳನ್ನು ಆಧರಿಸಿ ವಿದ್ವಾಂಸರು ಅವುಗಳ ಪ್ರಾಚೀನತೆಯನ್ನು ಗುರುತಿಸಿದ್ದಾರೆ. ವಾಸ್ತು ಮೂಲವನ್ನು ಆಧರಿಸಿ ಲಾಡ್‌ಖಾನ್ ದೇವಾಲಯವನ್ನು

ಅತಿ ಪ್ರಾಚೀನ ದೇವಾಲಯವೆಂದು ಪರ್ಸಿಬ್ರೌನ್ ಗುರುತಿಸಿರುವರು.[೨೫] ಕೆ.ವಿ.ಸೌಂದರ್ಯ ರಾಜನ್‌ರವರು ಐಹೊಳೆಯ ಜ್ಯೋತಿರ್ಲಿಂಗ ಗುಡಿಗಳ ಗುಂಪಿನಲ್ಲಿರುವ ನಾಲ್ಕು ಸ್ತಂಭಗಳ ರಚನೆಯನ್ನು ಆರಂಭಿಕ ಹಂತವೆಂದು ಗುರುತಿಸಿದ್ದಾರೆ.[೨೬] ಎಸ್.ಆರ್. ರಾವ್‌ರವರು ಗೌಡರ ಗುಡಿಯನ್ನು ಅತಿ ಪ್ರಾಚೀನವೆಂದು ಗುರುತಿಸಿರುವರು.[೨೭]

ಬಾದಾಮಿ ಚಾಲುಕ್ಯರಿಂದ ಕರ್ನಾಟಕ ವಾಸ್ತುಶಿಲ್ಪ ರಚನೆಗೆ ಒಂದು ನಿರ್ದಿಷ್ಟವಾದ ನೆಲೆ ದೊರಕಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಕಾಲದಲ್ಲಿ ನಡೆದ ದೇವಾಲಯಗಳ ಪ್ರಯೋಗ ಮತ್ತೆಲ್ಲಿಯೂ ನಡೆದಿಲ್ಲವೆನ್ನಬಹುದು. ಕರ್ನಾಟಕದ ದೇವಾಲಯಗಳ ಇತಿಹಾಸದಲ್ಲಿ ಚಾಲುಕ್ಯರ ದೇವಾಲಯಗಳು ಪ್ರಮುಖವಾದ ಹಂತವನ್ನು ಸೂಚಿಸುತ್ತವೆ. ಮೊಟ್ಟಮೊದಲ ಬಾರಿಗೆ ಇಲ್ಲಿ ಗುಹಾಲಯಗಳಿಗೂ ಹಾಗೂ ನಿರ್ಮಿತ ಆಲಯಗಳಿಗೂ ಬೇರೆ ಬೇರೆ ಹಂತಗಳನ್ನು ಗುರುತಿಸಿ ಪ್ರಯೋಗ ಮಾಡಿರುವುದನ್ನು ಗುರುತಿಸಬಹುದಾಗಿದೆ. ಈ ದೇವಾಲಯ ನಿರ್ಮಾಣ ಕಾರ್ಯವನ್ನು ಮುಂದೆ ರಾಷ್ಟ್ರಕೂಟರು, ಕಲ್ಯಾಣಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಅನಂತರದಲ್ಲಿ ಪಾಳೆಯಗಾರರು ಅನುಸರಿಸಿ ಪ್ರೋತ್ಸಾಹ ನೀಡಿದರು. ಇದರಿಂದಾಗಿ ಕರ್ನಾಟಕವು ದೇವಾಲಯಗಳ ನಾಡೆಂಬ ಕೀರ್ತಿಗೆ ಪಾತ್ರವಾಯಿತು.

ಪ್ರಾಚೀನ ಕಾಲದಲ್ಲಿ ಮಾನವನು ತನ್ನ ಜೀವನದ ರಕ್ಷಣೆಗೋಸ್ಕರ ಒಂದು ಮನೆಯನ್ನು ಕಟ್ಟಿಕೊಂಡಂದಿನಿಂದಲೇ ವಾಸ್ತುಶಿಲ್ಪದ ಉಗಮವಾಯಿತೆನ್ನಬಹುದಾಗಿದೆ. ಮಾನವನು ಕ್ರಮೇಣ ತನಗೆ ತಿಳುವಳಿಕೆಗೆ ಬಂದಂತೆ, ಕಟ್ಟಡಗಳು ಹೆಚ್ಚಿದಂತೆಲ್ಲ ಅವುಗಳಲ್ಲಿ ಮೂಲಭೂತ ತತ್ವಗಳನ್ನು ರೂಪಿಸಬೇಕೆಂಬ ಭಾವನೆ ಸ್ಥಪತಿಗಳ ಆಲೋಚನೆಯಲ್ಲಿ ಬಂದುದರಿಂದ ವಾಸ್ತುಶಿಲ್ಪ ಗ್ರಂಥಗಳು ಹುಟ್ಟಿಕೊಂಡವು. ರೂಢಿಸಿದ ಶೈಲಿ–ವಿನ್ಯಾಸಗಳನ್ನು ತತ್ವಗಳನ್ನಾಗಿ ಮಾರ್ಪಡಿಸಿದಾಗಿ ಹೊಸ ಹೊಸ ಶಾಸ್ತ್ರಗ್ರಂಥಗಳು ಹುಟ್ಟಿಕೊಂಡವು. ಹೀಗೆ ಒಂದು ಇನ್ನೊಂದಕ್ಕೆ ಪ್ರೇರಕವಾಗಿ, ದೇಶ, ಕಾಲ, ಪರಿಸರಗಳನ್ನವಲಂಬಿಸಿ ಬೇರೆ ಬೇರೆ ಕಡೆಗಳಲ್ಲಿ ಭಿನ್ನವಾದ ಶೈಲಿಗಳೂ ತಲೆ ಎತ್ತಿದವು.[೨೮]

ಪ್ರಾಚೀನ ಶಾಸ್ತ್ರಗಳಲ್ಲಿ ವಾಸ್ತು ಶಾಸ್ತ್ರವು ಒಂದೆಂದು ಪರಿಗಣಿಸಲ್ಪಟ್ಟಿದೆ. ವಾಸ್ತು ಶಿಲ್ಪಾಚಾರ್ಯರೆನಿಸಿದ ಮಯ, ವಿಶ್ವಕರ್ಮ, ಮನು, ಗರ್ಗರು ರೂಪಿಸಿದ ಅವರುಗಳ ಗ್ರಂಥಗಳ ಸಾರಂಶವನ್ನು ೬ನೆಯ ಶತಮಾನದ ವರಾಹಮಿಹಿರನ ಬೃಹತ್ ಸಂಹಿತೆಯು ಒಳಗೊಂಡಿದೆ. ವಾಸ್ತುಶಿಲ್ಪ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳನ್ನು ಔತ್ತರೇಯ ಮತ್ತು ದಾಕ್ಷಿಣಾತ್ಯವೆಂದು ವಿಂಗಡಿಸಲಾಗಿದೆ. ಔತ್ತರೇಯದಲ್ಲಿ ಸಮರಾಂಗಣ ಸೂತ್ರಧಾರ, ಅಪರಾಜಿತಪೃಚ್ಛಾ, ಪ್ರಸಾದಮಂಡನ ಹಾಗೂ ರೂಪಮಂಡನಗಳು ಪ್ರಮುಖ ವಾಸ್ತುಶಾಸ್ತ್ರ ಗ್ರಂಥಗಳಾಗಿವೆ. ಮಯಮತ, ಮಾನಸಾರ, ಕಾಶ್ಯಪಶಿಲ್ಪ, ಅಗಸ್ತ್ಯಸಕಲಾಧಿಕಾರಗಳು ದಾಕ್ಷಿಣಾತ್ಯ ಶಾಸ್ತ್ರಗ್ರಂಥಗಳಾಗಿವೆ.

ಕರ್ನಾಟಕದ ದೇವಾಲಯಗಳ ವಾಸ್ತು ವಿವರಣೆಯನ್ನು ತಿಳಿಸುವ ವಾಸ್ತು ಗ್ರಂಥಗಳಲ್ಲಿ ಪ್ರಮುಖವಾಗಿ ಮೂರು ಶೈಲಿಗಳು ಪ್ರಸಿದ್ಧವಾಗಿವೆ.

ಅವುಗಳೆಂದರೆ ನಾಗರ, ವೇಸರ ಮತ್ತು ದ್ರಾವಿಡ. ನಾಗರಶೈಲಿಯ ದೇವಾಲಯಗಳ ಗುಣಗಳು ಅದರ ಸಮತಲ ಯೋಜನೆ ಮತ್ತು ಮೇಲೆರಿರುವ ಶೈಲಿಗಳಲ್ಲಿಯೇ ಅಡಗಿದೆ. ಗರ್ಭಗೃಹದ ಒಳಭಾಗವು ಸದಾ ಚೌಕಾಕಾರವಾಗಿಯೇ ಇರುತ್ತದೆ. ಹೊರಗಡೆ ಚಾಚುಗಳು ನಾಲ್ಕು ಕಡೆಗಳಿಗೂ ಇರುತ್ತದೆ. ನಾಲ್ಕು ದಿಕ್ಕುಗಳಿಗೂ ಒಂದೊಂದು ಚಾಚು ಇದ್ದರೆ ಅದನ್ನು ತ್ರಿರಥ ಎನ್ನುತ್ತಾರೆ. ಎರಡು ಚಾಚುಗಳು ಇದ್ದಾಗ ಅದನ್ನು ಪಂಚರಥ ಎನ್ನುತ್ತಾರೆ. ನಾಲ್ಕು ಚಾಚುಗಳಿದ್ದರೆ ನವರಥ ಎನ್ನುತ್ತಾರೆ. ಚಾಚುಗಳು ಹೆಚ್ಚಿದಂತೆಲ್ಲಾ ಗರ್ಭಗುಡಿಯು ಮೂಸೆಯಾಕಾರದಂತೆ ಪರಿವರ್ತಿತಗೊಳ್ಳುತ್ತ ಬರುತ್ತದೆ. ಅದು ಕೊನೆಗೆ ಇನ್ನೊಂದು ಚೌಕದಲ್ಲಿ ಸೇರಿಕೊಳ್ಳಬಹುದು. ಗರ್ಭಗೃಹದ ಹೊರಮೈಯನ್ನು ಹೊರಗಿನ ಚಾಚುಗಳು ಸಂಪೂರ್ಣವಾಗಿ ಬದಲಿಸುವುದರಲ್ಲಿ ಯಶಸ್ವಿಯಾದರೂ, ಗರ್ಭಗೃಹದ ಬಾಗಿಲು ಹೊಸ ಆಕಾರದ ಮೂಲೆಯಲ್ಲಿ ಬಂದರೂ ಅದನ್ನು ಬದಲಾಗಿಸುವುದಿಲ್ಲ. ಗರ್ಭಗೃಹದ ದ್ವಾರವು ಅಂತರಾಳದಲ್ಲಿ ತೆರೆಯುವುದರಿಂದ ಇದು ಪ್ರಧಾನವಾಗಿ ಕಾಣಿಸುವುದಿಲ್ಲ.

ಚಾಚುಗಳು ಗರ್ಭಗೃಹದ ಹೊರಗೆ ಮಾತ್ರವೇ ಇರದೆ, ಮೇಲಿನ ಎತ್ತರಕ್ಕೂ ವ್ಯಾಪಿಸಿರುತ್ತವೆ. ಮೂಲೆಗಳು ಮಾತ್ರವೇ ವಕ್ರವಾಗಿ ತಿರುಗಿರುತ್ತವೆ. ಶಿಖರದ ಮೇಲೆ ಅಲಂಕಾರ ಸದಾ ಇರುತ್ತದೆ. ಆಮಲಕವು ಅವುಗಳಲ್ಲಿ ಒಂದು. ಕಿರುನಲ್ಲಿ ಕಾಯಿಯಂತೆ ಇರುವ ಕಲ್ಲಿನ ಚಪ್ಪಟೆಯ ಗೋಳವೇ ಆಮಲಕವು. ಇದು ಕಿರುನಲ್ಲಿ ಕಾಯಿಯಂತೆ ಇರುವುದರಿಂದಲೇ ಇದನ್ನು ಆಮಲಕ ಎಂದು ಕರೆಯಲಾಗುತ್ತದೆ. ಇದು ಉತ್ತರದ ದೇವಾಲಯಗಳ ಪ್ರಧಾನ ವಿನ್ಯಾಸ.

ನಾಗರ ಶೈಲಿಯ ದೇವಾಲಯದ ಲಕ್ಷಣಗಳು ಅಪರಾಜಿತ ಪೃಚ್ಛ ಮತ್ತು ಕಾಮಿಕಾಗಮದ ವರ್ಣನೆಗಳಲ್ಲಿ ಕಟ್ಟಡಗಳು ಲಂಬ ವಿನ್ಯಾಸದಲ್ಲಿ ವಿಭಿನ್ನ ರೀತಿಯ ಅಂಡಕಗಳು ಉರಃಶೃಂಗ ಮತ್ತು ಪ್ರತ್ಯಂಗ ಜೋಡಣೆಯಿಂದುಂಟಾದ ಶಿಖರಗಳನ್ನು ಹೊಂದಿರುತ್ತವೆ.

ಅತಿ ಪ್ರಾಚೀನ ನಾಗರಶೈಲಿಯ ಶಿಖರಕ್ಕೆ ಬಾದಾಮಿಯ ಮೇಲಣ ಶಿವಾಲಯದ ಶಿಖರವು ಉದಾಹರಣೆಯಾಗಿದೆ.[೨೯]

'ಅಪರಾಜಿತಪೃಚ್ಛಾ' ಗ್ರಂಥದಲ್ಲಿ ದ್ರಾವಿಡ ಶೈಲಿಯ ಪ್ರಮುಖ ಲಕ್ಷಣಗಳನ್ನು ಈ ರೀತಿಯಾಗಿ ಗುರುತಿಸಿದ್ದಾರೆ.

"ವಿಭಕ್ತಿದಲನಾ ಪೂರ್ಣ ಲತಾ ಶೃಂಗ ಕ್ರ
ಮೋದ್ಭವಾಃ ಮೇಷ ಮಕರ, ಕುಟಪಃ ಕಂಟ ಕೈರಾವೃತಾಃ

ಶುಭಾಃ ವೇದಿಘಂಟಾ ನಾಸಿಕಾದ್ಯಃ ದ್ರಾವಿಡಃ
ಶುಭಲಕ್ಷಣಾಃ

ಕೆಲವು ಪ್ರಮುಖ ಲಕ್ಷಣಗಳನ್ನು ಈ ಶ್ಲೋಕದ ಆಧಾರದ ಮೇಲೆ ಗುರುತಿಸಬಹುದಾಗಿದೆ. ದೇವಾಲಯದ ವಿಮಾನವು ಅಡಿಯಿಂದ ಶಿಖರಾಗ್ರದವರೆಗೂ ಆರು ಅಥವಾ ಎಂಟು ಮುಖಗಳು ಮತ್ತು ಕೋನಗಳನ್ನು ಹೊಂದಿದ್ದರೆ ಅದನ್ನು ದ್ರಾವಿಡ ಶೈಲಿಯ ಲಕ್ಷಣಗಳೆಂದು ಮಾನಸಾರ ಶಿಲ್ಪ ಗ್ರಂಥದ ಆಧಾರದಿಂದ ಗುರುತಿಸಬಹುದಾಗಿದೆ. ದ್ರಾವಿಡ ಶೈಲಿಯ ದೇವಾಲಯಗಳ ಶಿಖರಗಳು ಮೇಲಕ್ಕೆ ಹೋದಂತೆ ಕ್ರಮೇಣ ಸಣ್ಣದಾಗುವ ಅಂತಸ್ತುಗಳನ್ನು ಹೊಂದಿರುತ್ತವೆ. ಗರ್ಭಗೃಹದ ಪ್ರತಿರೂಪದಂತೆ ಪ್ರತಿಯೊಂದು ಅಂತಸ್ತು ಕಂಡುಬರುತ್ತದೆ. ಈ ಶೈಲಿಯ ಪ್ರಮುಖ ಲಕ್ಷಣಗಳೆಂದರೆ ಒಂದೊಂದು ಅಂತಸ್ತನ್ನು ಪ್ರತ್ಯೇಕಿಸುವ ದುಂಡುಕಪೋತ ಮತ್ತು ಮೇಲಂತಸ್ತುಗಳ ಸುತ್ತಲೂ ಇರುವ ಪುಟ್ಟ ತರೆದ ಅಂಕಣಗಳು.

ತಳವಿನ್ಯಾಸದಲ್ಲಿ ಚಚ್ಚೌಕವಾದ ಸಣ್ಣ ಗರ್ಭಗುಡಿ, ಅದರ ಸುತ್ತಲೂ ವಿಶಾಲವಾದ ಹಜಾರ ಉಳಿದ ಭಾಗ ಪ್ರದಕ್ಷಿಣಾಪಥ, ಇದೇ ಹಜಾರದ ಮೇಲೆ ಛಾವಣಿಯಿರುತ್ತದೆ. ದೇವಾಲಯದ ಗೋಡೆಗಳ ಹೊರಭಾಗವನ್ನು ಮುಂಚಾಚಿದ ಅರೆಗಂಭಗಳಿಂದಲೂ ಅವುಗಳ ನಡುವೆ ಹಿಂದೆ ಸರಿದಂತಿರುವ ಗೂಡುಗಳಿಂದಲೂ ಅಲಂಕರಿಸಲಾಗಿರುತ್ತದೆ. ಕಂಬಗಳಿಂದ ಕೂಡಿದ ಹಜಾರಗಳು, ಮೊಗಸಾಲೆಗಳು ಮತ್ತು ಮಹಾದ್ವಾರ ಮೇಲಿನ ಬೃಹತ್ ಪ್ರಮಾಣದ ಗೋಪುರಗಳು ಮಧ್ಯಕಾಲೀನ ದ್ರಾವಿಡ ಶೈಲಿಯ ವಿಶಿಷ್ಟ ಲಕ್ಷಣಗಳಾಗಿವೆ.

ದ್ರಾವಿಡ ಶೈಲಿಯಲ್ಲಿ ವಿಮಾನವು ಚೌಕಾಕಾರದ ತಳವನ್ನು ಪಡೆದುಕೊಂಡು ಮೇಲೇರಿದಂತೆಲ್ಲಾ ಚಿಕ್ಕದಾಗುವ ಅಂತಸ್ತುಗಳುಳ್ಳ ಪಿರಾಮಿಡ್ ಆಕಾರಗಳಲ್ಲಿರುತ್ತದೆ. ಕಿರಿಯ ಪೂಜಾ ಗೃಹಗಳಂತೆ ಕಾಣಿಸುವ ಗುಡಿಗಳ ಸಾಲುಗಳನ್ನು ಹಾರ ಎನ್ನುತ್ತಾರೆ. ಈ ರೀತಿಯ ಹಾರಗಳು, ಕೂಟಗಳು ಮತ್ತು ಶಾಲೆಗಳನ್ನು ಪಡೆದಿರುತ್ತವೆ. ಈ ರೀತಿಯ ವಿನ್ಯಾಸ ಪ್ರತಿ ಅಂತಸ್ತಿನಲ್ಲಿಯೂ ಇರುತ್ತದೆ.

ದ್ರಾವಿಡ ದೇವಾಲಯ ರಚನೆಯಲ್ಲಿ ಇನ್ನೊಂದು ವಿಶೇಷ ಕಟ್ಟಡವೆಂದರೆ ಗೋಪುರ. ಗೋಪುರವೇ ದೇವಾಲಯಕ್ಕೆ ಇರುವ ಮಹಾದ್ವಾರ. ಗರ್ಭಗುಡಿಯ ಮೇಲೆ ನಿರ್ಮಿತವಾಗಿರುವ ಗೋಪುರದಂತಹ ಕಟ್ಟಡವನ್ನು ವಿಮಾನ ಎನ್ನುತ್ತಾರೆ. ಮಹಾದ್ವಾರದ ಮೇಲೆ ನಿರ್ಮಾಣವಾಗುವ ಕಟ್ಟಡವನ್ನು ಗೋಪುರ ಎನ್ನುತ್ತಾರೆ. ಗೋಪುರದ ತಳಭಾಗವು ದೀರ್ಘ ಚತುರಸ್ರಾಕಾರದಲ್ಲಿರುತ್ತದೆ. ನೆಲದ ಮೇಲಿರುವ ತಳ ಅಂತಸ್ತಿನಲ್ಲಿ ನೇರವಾದ ಗೋಡೆಗಳಿರುತ್ತವೆ. ಮಧ್ಯ ಭಾಗದಿಂದ ಪ್ರವೇಶ ದ್ವಾರವಿರುತ್ತದೆ. ವಿಮಾನದಂತೆಯೇ ಇದು ಕೂಡ ಮೇಲೆ ಏರಿರುತ್ತದೆ. ಮತ್ತು ಹಲವು ಅಂತಸ್ತುಗಳನ್ನು

ಪಡೆದುಕೊಂಡಿರುತ್ತದೆ. ಮೇಲೆರಿದಂತೆಲ್ಲಾ ಅಂತಸ್ತುಗಳು ಉದ್ದ-ಅಗಲ-ಎತ್ತರಗಳನ್ನು ಕಡಿಮೆ ಮಾಡಿಕೊಳ್ಳುತ್ತಾ ಸಾಗುತ್ತವೆ. ಅಂತಸ್ತುಗಳಲ್ಲಿಯೂ ಹಾರಗಳಿರುತ್ತವೆ. ತುದಿಯಲ್ಲಿ ಮುಚ್ಚಿದ ಎತ್ತಿನ ಗಾಡಿಯ ರೂಪದ ಶಿಖರವಿದ್ದು, ಅದರ ಮೇಲೆ ಸ್ತೂಪಗಳ ಸಾಲೊಂದು ಅಂತಿಮವಾಗಿರುತ್ತದೆ.

ಅಂತಸ್ತುಗಳಿಂದ ಕೂಡಿದ ಗುಡಿಗಳ ಮಾದರಿ ದ್ರಾವಿಡ ಶೈಲಿಯ ವಿಮಾನಕ್ಕೆ ಮೂಲವಾಗಿದೆ. ಪ್ರಾದೇಶಿಕ ವಿಂಗಡನೆಗೆ ಅನುಗುಣವಾಗಿ ದ್ರಾವಿಡ ಶೈಲಿಯು ಉತ್ತರದಲ್ಲಿ ಕೃಷ್ಣಾ ನದಿಯಿಂದ ದಕ್ಷಿಣದ ಹಿಂದೂಮಹಾಸಾಗರದ ನಡುವಿನ ಪ್ರದೇಶದಲ್ಲಿ ಹಬ್ಬಿದೆ. ವಿದ್ವಾಂಸರು ದಕ್ಷಿಣದಲ್ಲಿ ಕಂಡುಬರುವ ಈ ಶೈಲಿಯನ್ನು ದ್ರಾವಿಡಿಯನ್ ಎಂದು ಕರೆಯುತ್ತಾರೆ. ಕ್ರಿ.ಶ. ೪೫೦ರಲ್ಲಿ ನಿರ್ಮಾಣವಾದ ಐಹೊಳೆಯ ಲಾಡಖಾನ್ ದೇವಾಲಯ ಪ್ರಥಮ ದ್ರಾವಿಡ ಶೈಲಿಯ ದೇವಾಲಯವಾಗಿದೆ.[೩೦]

ಮಯಮತ, ಮಾನಸಾರ, ಕಾಶ್ಯಪಶಿಲ್ಪ, ಅಗಸ್ತ್ಯಸಕಲಾಧಿಕಾರಗಳು ಮೊದಲಾದ ಗ್ರಂಥಗಳಲ್ಲಿ ದ್ರಾವಿಡ ಶೈಲಿಯ ಬಗೆಗೆ ಹೆಚ್ಚಿನ ವಿವರಗಳು ದೊರಕುತ್ತವೆ. ಅವುಗಳ ಆಧಾರದ ಮೇಲೆ ದ್ರಾವಿಡ ಶೈಲಿಯ ಲಕ್ಷಣಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

* ಗ್ರೀವ ಮತ್ತು ಸ್ತೂಪಿಯ ನಡುವಣ ಭಾಗವನ್ನು ಶಿಖರವೆಂದು ಕರೆಯಲಾಗುತ್ತದೆ.
* ಗರ್ಭಗುಡಿಯನ್ನು ಬಿಟ್ಟು ದೇವಾಲಯದ ಇತರ ಭಾಗಗಳ ಛಾವಣಿ ಸಮತಟ್ಟಾಗಿಯೂ ಅಲಂಕಾರ ರಹಿತವಾಗಿಯೂ ಇರುತ್ತದೆ.
* ಗರ್ಭಗೃಹದ ಉತ್ತರ ಗೋಡೆಯಲ್ಲಿ ಜಗತಿ ಅಥವಾ ಅಧಿಷ್ಠಾನದಿಂದ ಸ್ವಲ್ಪ ಉತ್ತರದಲ್ಲಿ ಅಭಿಷೇಕ ಜಲವನ್ನು ಹೊರ ಒಯ್ಯಲು ಪ್ರಣಾಳ ಅಥವಾ ಜಲಮಾರ್ಗವನ್ನು ನಿರ್ಮಿಸಲಾಗಿರುತ್ತದೆ.
* ಗೋಪುರದ ದ್ವಾರ ದೇವಾಲಯದ ಮುಖ್ಯದ್ವಾರದ ಅಕ್ಷದಲ್ಲಿದ್ದು ಅಷ್ಟದಿಕ್ಕುಗಳೊಂದಿಗೆ ಹೊಂದಾಣಿಕೆ ಪಡೆದಿರುತ್ತದೆ.
* ಪ್ರಾಂಗಣದಲ್ಲಿ ಮುಖ ಮಂಟಪದ ಮುಂದೆ ಬಲಿಪೀಠದ ಬಳಿ ಧ್ವಜ ಸ್ತಂಭವಿರುತ್ತದೆ.
* ಗರ್ಭಗುಡಿಯ ಮೇಲೆ ಅಂತಸ್ಥುಗಳುಳ್ಳ ಪಿರಮಿಡ್ಡಿನಾಕಾರದ ಶಿಖರವಿರುತ್ತದೆ.
* ದೇವಾಲಯದ ಸುತ್ತಲೂ ಪ್ರಕಾರ ಆವಶ್ಯ ಅಂಗವಾಗಿರುತ್ತದೆ.
* ಗರ್ಭಗುಡಿಯ ಬಾಗಿಲವಾಡ ಅಲಂಕಾರ ರಹಿತವಾಗಿ ಸರಳವಾಗಿರುತ್ತದೆ.
* ದೇವಾಲಯಗಳಲ್ಲಿ ಧರ್ಮಕ್ಕೆ ತಕ್ಕಂತೆ ವಾಹನ ಮೂರ್ತಿಗಳ ಆವಶ್ಯವಾಗಿರುತ್ತವೆ.

* ಪ್ರಧಾನ ದೇವಾಲಯದ ಸುತ್ತಲೂ ಪರಿವಾರ ದೇವತೆಗಳ ಗುಡಿಗಳಿರುತ್ತವೆ.

* ಸಾಮಾನ್ಯವಾಗಿ ದೇವಾಲಯದಲ್ಲಿ ಉತ್ಸವಮೂರ್ತಿಗಳಿರುತ್ತವೆ.

* ಮಹಾದ್ವಾರದ ಮುಂಭಾಗದಲ್ಲಿ ದೊಡ್ಡಗಾತ್ರದ ದ್ವಾರಪಾಲಕ ವಿಗ್ರಹಗಳು ಆವಶ್ಯವಾಗಿ ಇರುತ್ತವೆ.

* ದೇವಾಲಯದ ಈಶಾನ್ಯ ಮೂಲೆಯಲ್ಲಿ ಪುಷ್ಕರಣಿ ಇರುತ್ತದೆ.[೬೧]

ಕರ್ನಾಟಕದಲ್ಲಿ ೬-೭ನೆಯ ಶತಮಾನಗಳಿಂದ ೧೪ನೆಯ ಶತಮಾನದವರೆಗೆ ವೇಸರ ಶೈಲಿಯ ಕಟ್ಟಡಗಳು ಹೆಚ್ಚು ಬಳಕೆಯಲ್ಲಿದ್ದದ್ದು ಕಂಡುಬರುತ್ತದೆ. ವೃತ್ತಾಕಾರ ಈ ಶೈಲಿಯ ವಿಶಿಷ್ಟ ಲಕ್ಷಣವಾಗಿದೆ. ಅರ್ಧವೃತ್ತಾಕಾರದ ಅಥವಾ ಗಜಪೃಷ್ಠಾಕಾರದ ಒಂದಸ್ತಿನ ಮತ್ತು ಪೂರ್ಣ ವೃತ್ತಾಕಾರದ ಕಟ್ಟಡಗಳನ್ನು ವೇಸರ ಶೈಲಿಯೆಂದು ವರ್ಣಿಸಲಾಗಿದೆ. ತಳವಿನ್ಯಾಸದಲ್ಲಿ ದ್ರಾವಿಡ ಮತ್ತು ಮೇಲ್ಕಟ್ಟಡದ ವಿವರಗಳಲ್ಲಿ ನಾಗರಶೈಲಿಯ ಲಕ್ಷಣಗಳನ್ನೊಳಗೊಂಡ ಮಿಶ್ರ ಶೈಲಿ ವೇಸರ ಶೈಲಿಯೆಂದು ಕಾಮಿಕಾಗಮ ಗ್ರಂಥದಲ್ಲಿ ಹೇಳಲಾಗಿದೆ. ಈ ಶೈಲಿಯನ್ನು ಚಾಲುಕ್ಯರು ಆರಂಭಿಸಿದರೆ ಉತ್ತುಂಗ ಶಿಖರಕ್ಕೆ ಹೊಯ್ಸಳರು ಕೊಂಡೊಯ್ದರು. ಈ ಶೈಲಿಯನ್ನು ಔತ್ತರೇಯ ದ್ರಾವಿಡ ಶೈಲಿ ಎಂದೂ ಗುರುತಿಸುತ್ತಾರೆ. ವೇಸರ ಶೈಲಿಯಲ್ಲಿ ಕಟ್ಟಡದ ತಳಭಾಗದ ಆಕಾರಕ್ಕಿಂತಲೂ, ಅವುಗಳ ಗ್ರೀವ ಶಿಖರಗಳ ಆಕಾರದ ಮೇಲೆ ಅದರ ಶೈಲಿಯನ್ನು ನಿರ್ಧರಿಸಬಹುದಾಗಿದೆ. ತಮಿಳುನಾಡಿನ ನಾರ್ತಾಮಲೈಯಲ್ಲಿರುವ ವಿಜಯಾಲ ಚೋಳೇಶ್ವರ ದೇವಾಲಯವು ವೇಸರ ಶೈಲಿಯ ಅತ್ಯುತ್ತಮ ದೇವಾಲಯವಾಗಿದೆ. ಬುಡದಿಂದ ತುದಿಯವರೆಗೂ ವೃತ್ತಾಕಾರವಾಗಿದ್ದು, ಇದು ವೇಸರ ಶೈಲಿಯ ಎಲ್ಲಾ ಲಕ್ಷಣಗಳನ್ನು ಹೊಂದಿದೆ.[೬೨] ಈ ಮಿಶ್ರ ಶೈಲಿಯ ದೇವಾಲಯಗಳು ಚಾಲುಕ್ಯ-ಹೊಯ್ಸಳ ಕಾಲದಲ್ಲಿ ಕಾವೇರಿ ಬಯಲಿನವರೆಗೂ ಹರಡಿವೆ. ಆದರೆ ಸಾಮಾನ್ಯವಾಗಿ ವೇಸರ ಶೈಲಿಯ ಮಂದಿರಗಳು ವಿಂಧ್ಯಪರ್ವತ ಮತ್ತು ಕೃಷ್ಣಾ ನದಿಗಳ ಮಧ್ಯಪ್ರದೇಶಗಳಲ್ಲಿ ಹೆಚ್ಚು ಬಳಕೆಯಲ್ಲಿದ್ದವು ಎನ್ನುವುದು ಸ್ಟೆಲ್ಲಾ ಕ್ರಾಮರಿಷ್ ಅಭಿಪ್ರಾಯವಾಗಿದೆ.

ಕರ್ನಾಟಕದ ವಾಸ್ತುಶಿಲ್ಪ ಶೈಲಿಯನ್ನು ನಾಲ್ಕು ಪ್ರಧಾನ ಘಟ್ಟಗಳಾಗಿ ವಿಂಗಡಿಸಲಾಗಿದೆ. ಚಾಲುಕ್ಯ ಪೂರ್ವಯುಗ ಕ್ರಿ.ಶ. ೧ರಿಂದ ಕ್ರಿಶ ೫ನೆಯ ಶತಮಾನದವರೆಗಿನ ಕಾಲವನ್ನು ಇದರಲ್ಲಿ ಸೇರಿಸಲಾಗಿದೆ. ಮೌರ್ಯರ ಕಾಲದಿಂದ ಹಿಡಿದು ಶಾತವಾಹನ, ಗಂಗ, ಕದಂಬರ ಕಾಲದವರೆಗೆ ನಿರ್ಮಿಸಲಾದ ವಾಸ್ತುಶೈಲಿಯ ಪ್ರಭೇದಗಳನ್ನು ಇದು ಒಳಗೊಂಡಿದೆ. ಶಾತವಾಹನ ಕಾಲದ ವಾಸ್ತು ಅವಶೇಷಗಳೂ ಕಡಿಮೆ ಸಂಖ್ಯೆಯಲ್ಲಿ ದೊರೆತರೂ ಮೂಲಶೈಲಿಯ ಕುರುಹುಗಳು ದೊರೆಯುವುದಿಲ್ಲ. ಶಾಸನಗಳ ಉಲ್ಲೇಖಗಳಿಂದ ಕದಂಬರು ಅನೇಕ ದೇವಾಲಯಗಳನ್ನು ಕಟ್ಟಿಸಿದ ಉಲ್ಲೇಖಗಳು ದೊರೆಯುತ್ತವೆ. ಬನವಾಸಿಯ ಮಧುಕೇಶ್ವರ ದೇವಾಲಯ ಪ್ರಮುಖವಾದುದು.

ಗಂಗರು ತಮ್ಮ ಆಳ್ವಿಕೆಯಲ್ಲಿ ಮಂಡಲಿ, ಮಣ್ಣೆ ಮುಂತಾದ ಕಡೆಗಳಲ್ಲಿ ದೇವಾಲಯಗಳನ್ನು ನಿರ್ಮಿಸಿದರು. ಇಟ್ಟಿಗೆ ಗಾರೆಗಳಿಂದ ನಿರ್ಮಿಸಿದ ದೇವಾಲಯದ ಅವಶೇಷಗಳು ಕಂಡುಬರುತ್ತವೆ.

ಚಾಲುಕ್ಯಯುಗ ಕ್ರಿ.ಶ ೯ನೆಯ ಶತಮಾನದಿಂದ ಕ್ರಿ.ಶ ೧೦ನೆಯ ಶತಮಾನದವರೆಗಿನ ಕಾಲವನ್ನು ಚಾಲುಕ್ಯಯುಗ ಒಳಗೊಂಡಿದೆ. ಚಾಲುಕ್ಯ ಶೈಲಿಯ ದೇವಾಲಯಗಳ ಮೂಲಭೂತ ಲಕ್ಷಣಗಳು ದ್ರಾವಿಡ ಶೈಲಿಯವಾಗಿವೆ. ರಾಜಧಾನಿಯ ಪರಿಸರ ಪ್ರಾಂತ್ಯದಲ್ಲಿ ಚಾಲುಕ್ಯ ವಾಸ್ತು ಕೃತಿಗಳು ಕಂಡುಬರುತ್ತವೆ. ಈ ಶೈಲಿಯ ದೇವಾಲಯಗಳು ಬಾದಾಮಿ, ಐಹೊಳೆ, ಪಟ್ಟದಕಲ್ಲು, ಆಂಧ್ರದ ಆಲಂಪುರ, ಮಹಾನಂದಿ, ಸತ್ಯವೋಲುಗಳಲ್ಲಿ ಕಂಡುಬರುತ್ತವೆ. ಚಾಲುಕ್ಯರು ದಕ್ಷಿಣದ ದ್ರಾವಿಡ ಶೈಲಿ ಮತ್ತು ಉತ್ತರದ ನಾಗರಶೈಲಿಯ ಕಟ್ಟಡಗಳ ಸಮ್ಮಿಶ್ರಣವಾದ ವೇಸರ ಶೈಲಿಯನ್ನು ಬೆಳಕಿಗೆ ತಂದರು. ಕರ್ನಾಟಕದಲ್ಲಿ ಮುಂದೆ ಇದು ಒಂದು ಹೊಸ ಶೈಲಿಗೆ ನಾಂದಿಯಾಯಿತು.

ರಾಷ್ಟ್ರಕೂಟರ ವಾಸ್ತುಶಿಲ್ಪವು ಪ್ರಾಚೀನ ಚಾಲುಕ್ಯ ವಾಸ್ತುಶಿಲ್ಪದಿಂದ ಗಣನೀಯವಾಗಿ ಪ್ರಭಾವಿತವಾಗಿತ್ತು. ಬದಲಾದ ಧಾರ್ಮಿಕ ಪರಿಗಣನೆಗೆ ತಕ್ಕಂತೆ ಕೂಟ ದೇವಾಲಯಗಳನ್ನು ನಿರ್ಮಿಸಲಾಯಿತು. ರಾಷ್ಟ್ರಕೂಟರ ಕಾಲದಲ್ಲಿ ದೇವಾಲಯಗಳು ವಿಶೇಷವಾಗಿ ಮಹಾರಾಷ್ಟ್ರದ ಎಲ್ಲೋರ ಮತ್ತು ಕರ್ನಾಟಕದ ಪ್ರದೇಶಗಳಾದ ಕುಕನೂರು, ರೋಣ, ಮುಳಗುಂದ, ಸಿರಿವಾಳ, ಹಳ್ಳೂರು, ಸವದತ್ತಿ, ಕುಡುತಿನಿ, ಹಂಪಿ, ಆಡ್ನೂರು, ಆತಕೂರು, ಲಕ್ಷ್ಮೇಶ್ವರ, ನರೇಗಲ್‌ಗಳಲ್ಲಿ ಕಂಡುಬರುತ್ತವೆ.[೩] ರಾಷ್ಟ್ರಕೂಟರ ಕಾಲದ ಪ್ರಮುಖ ಲಕ್ಷಣಗಳೆಂದರೆ ಕೂಟ ದೇವಾಲಯಗಳ ಉಗಮ, ಸಾಂಧಾರ ದೇವಾಲಯಗಳು, ಕಂಬಗಳ ಕೆತ್ತನೆ ಹಾಗೂ ದ್ವಾರಪಾಲಕ ವಿಗ್ರಹಗಳ ರಚನೆಗಳಾಗಿವೆ.

**ಹೊಯ್ಸಳಯುಗ:** ಕಲ್ಯಾಣಿ ಚಾಲುಕ್ಯರ ನಂತರ ಹೊಯ್ಸಳರು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದರು. ೧೧ನೆಯ ಶತಮಾನದಿಂದ ೧೩ನೇ ಶತಮಾನದ ಕೊನೆಯವರೆಗಿನ ಯುಗ ಹೊಯ್ಸಳ ಯುಗ. ಈ ಕಾಲದ ಅರಸರ ಧಾರ್ಮಿಕ ಪ್ರಜ್ಞೆಯ ಗಟ್ಟಿತನದಿಂದಾಗಿ ಭಕ್ತಿ–ಶ್ರದ್ಧಾಪೂರ್ವಕ ನಿಷ್ಠೆಯಿಂದ ಈ ಕಾಲದಲ್ಲಿ ರಚನೆಗೊಂಡ ದೇವಾಲಯಗಳು ಶಿಲ್ಪಕಲೆಯ ದೃಷ್ಟಿಯಿಂದ ಶ್ರೀಮಂತವಾಗಿವೆ. ಮೃದು ಬಳಪದ ಕಲ್ಲಿನಿಂದ ಈ ದೇವಾಲಯಗಳು ನಿರ್ಮಾಣವಾಗಿರುವುದರಿಂದ ತಳದಿಂದ ಹಿಡಿದು ಮುಡಿಯವರೆಗೆ ಅತಿಸೂಕ್ಷ್ಮ ಕೆತ್ತನೆಗಳನ್ನು ಒಳಗೊಂಡಿರುವವು. ಸಳನು ಹುಲಿಯನ್ನು ಇರಿಯುತ್ತಿರುವ ಹೊಯ್ಸಳ ವಂಶದ ಚಿಹ್ನೆ ಗರ್ಭಗುಡಿಯ ಮುಂಭಾಗದ ಸುಕನಾಸಿಯ ಮೇಲೆ ಕಂಡುಬರುವುದರಿಂದ ಸುಲಭವಾಗಿ ಹೊಯ್ಸಳ ಶೈಲಿ ಎಂದು ಗುರುತಿಸಬಹುದಾಗಿದೆ. ಹೊಯ್ಸಳರ ಕಾಲದ ದೇವಾಲಯಗಳಿಗೆ ಬೇಲೂರು, ಹಳೆಬೀಡು, ಸೋಮನಾಥಪುರಗಳು

ಪ್ರಸಿದ್ಧವಾಗಿದ್ದರೆ ಹಾಸನ ಜಿಲ್ಲೆ, ತುಮಕೂರು ಜಿಲ್ಲೆಗಳಲ್ಲಿಯೂ ಅವರ ಕಾಲದ ಅನೇಕ ದೇವಾಲಯಗಳು ಕಂಡುಬರುತ್ತವೆ.

ವಿಜಯನಗರದ ಕಾಲ ೧೪ನೆಯ ಶತಮಾನದ ನಂತರದ ಕಾಲ ವಿಜಯನಗರದ ಯುಗವೆಂದು ಪರಿಗಣಿಸಲ್ಪಟ್ಟಿದೆ. ಹಿಂದೂ ಧರ್ಮದ ಅವನತಿಯ ಕಾಲದಲ್ಲಿ ಉದ್ಭವಿಸಿದ ವಿಜಯನಗರ ಸಾಮ್ರಾಜ್ಯದಲ್ಲಿ ಮೊಟ್ಟ ಮೊದಲು ಕೈಗೊಂಡಿರುವ ಕಾರ್ಯವೆಂದರೆ ದೇವಾಲಯಗಳ ಜೀರ್ಣೋದ್ಧಾರ. ವಿಜಯನಗರದ ಅರಸರು ಹಿಂದಿನ ಅರಸು ಮನೆತನಗಳಂತೆ ಕಂಕಣ ಬದ್ಧರಾಗಿ ಧರ್ಮ ರಕ್ಷಣೆಗೆ ದುಡಿದರು. ಇವರು ಹಿಂದಿನ ಧಾಳಿಗಳಿಗೆ ತುತ್ತಾಗಿದ್ದ ಅನೇಕ ದೇವಾಲಯಗಳನ್ನು ದುರಸ್ಥಿಗೊಳಿಸಿದರು. ಈ ಸಾಮ್ರಾಜ್ಯವು ದಕ್ಷಿಣ ಭಾರತಕ್ಕೆ ಧಾರ್ಮಿಕ ರಕ್ಷಣೆಯನ್ನು ನೀಡಿ ವಾಸ್ತುಶಿಲ್ಪ, ಶಿಲ್ಪಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿತು. ದಕ್ಷಿಣ ಭಾರತದಲ್ಲೆಲ್ಲಾ ಅನೇಕ ದೇವಾಲಯಗಳ ಹುಟ್ಟಿಗೆ ವಿಜಯನಗರದ ಅರಸರು ಕಾರಣರಾದರು. ವಿಜಯನಗರದ ಅರಸರ ಕಾಲದಲ್ಲಿ ವಿಶೇಷವಾಗಿ ದ್ರಾವಿಡ ಶೈಲಿಯ ಕಟ್ಟಡಗಳು ನಿರ್ಮಾಣವಾದವು. ಇದು ದ್ರಾವಿಡ ಶೈಲಿಯ ಮುಂದುವರೆದ ಭಾಗವಾಗಿ ಪರಿವರ್ತನೆಗೊಂಡ ಸಾಮಾನ್ಯ ರೀತಿಯ ಅನೇಕ ಕಟ್ಟಡಗಳು ಈ ಕಾಲದ ದ್ರಾವಿಡ ಶೈಲಿಯ ವೈಶಿಷ್ಟ್ಯಗಳಾಗಿವೆ. ಪೂಜಾವಿಧಾನದಲ್ಲಾದ ಬದಲಾವಣೆಗಳು ಮತ್ತು ಅತಿ ಹೆಚ್ಚು ವಿಸ್ತಾರವಾಗಿ ನಡೆಯುತ್ತಿದ್ದ ಉತ್ಸವಾದಿಗಳು ಕಟ್ಟಡದಲ್ಲಾದ ಬದಲಾವಣೆಗೆ ಕಾರಣವೆಂದು ಹೇಳಬಹುದು.[೩೪]

ವಿಜಯನಗರದ ಅರಸರು ದೇವಾಲಯಗಳ ವಿಸ್ತರಣೆಗೆ ಹೆಚ್ಚು ಒಲವು ತೋರಿದ್ದರಿಂದ ತಿರುಪತಿ, ತಾಡಪತ್ರಿ, ಹಂಪಿ, ಶ್ರೀರಂಗಂ, ಮಧುರೆ, ಕಾಂಚಿ, ಚಿದಂಬರಂ ಮೊದಲಾದ ಕಡೆಗಳಲ್ಲಿ ವಾಸ್ತುಶಿಲ್ಪದ ಬೆಳವಣಿಗೆಗೆ ಕಾರಣರಾದರು. ವಿಜಯನಗರದ ದೇವಾಲಯಗಳ ನಿರ್ಮಾಣಕ್ಕೆ ಈ ಪರಿಸರದಲ್ಲಿ ವಿಫುಲವಾಗಿ ದೊರೆಯುವ ಶಿಲಾ ಸಮೂಹವು ಸಹಾಯಕವಾಯಿತು. ವಿಜಯನಗರ ಶಿಲ್ಪಿಗಳ ಕಲಾತ್ಮಕ ಕೈಗಳಲ್ಲಿ ಈ ಶಿಲೆ ಸುಂದರ ಮೂರ್ತಿಗಳಾಗಿ, ಭವ್ಯ ದೇವಾಲಯಗಳಾಗಿಯೂ ಪರಿವರ್ತನೆಗೊಂಡವು.[೩೫]

ಚೋಳ ರೀತಿಯ ದೇವಾಲಯಗಳ ಶೈಲಿಯನ್ನು ವಿಜಯನಗರ ವಾಸ್ತುಶಿಲ್ಪ ಬೆಳವಣಿಗೆಯು ಅನುಸರಿಸಿದ್ದು ಕಂಡುಬರುತ್ತದೆ. ದ್ರಾವಿಡ ಶೈಲಿಯ ಮುಂದುವರೆದ ಭಾಗವಾಗಿ ಇದು ಪರಿಣಮಿಸಿತು. ಬೃಹದಾಕಾರದ ಕಟ್ಟಡಗಳ ಬದಲಾಗಿ ದೇವಾಲಯ ಪ್ರಾಕಾರದಲ್ಲಿ ಅನೇಕ ಕಟ್ಟಡಗಳ ನಿರ್ಮಾಣವನ್ನು ಕೈಗೊಂಡರು. ವಿಜಯನಗರದ ಶಿಲ್ಪಿಗಳು ದ್ರಾವಿಡ ಮತ್ತು ಹೊಯ್ಸಳ ಶೈಲಿಗಳ ಸಂಗಮವನ್ನು ರೂಢಿಸಿಕೊಂಡು ತಮ್ಮ ಕಲಾತ್ಮಕತೆಯಲ್ಲಿ ಭಿನ್ನವಾದ ಶೈಲಿಯನ್ನು ಹುಟ್ಟುಹಾಕಿದರು. ಅದು ಮುಂದೆ ವಿಜಯನಗರದ ಶೈಲಿ ಎಂದೂ ಕರೆಯಲಾದ ಹೊಸ ಹಾಗೂ ಖಚಿತವಾದ ಶೈಲಿಯ

ಹುಟ್ಟಿಗೆ ಕಾರಣವಾಯಿತು. ಪರ್ಶಿಬ್ರೌನ್ ವಿಜಯನಗರ ಶೈಲಿಯ ವಿಕಾಸವನ್ನು ಕುರಿತು "ಈ ರೀತಿಯ ವಿಕಾಸಕ್ಕೆ ಸಮನಾದ ಉದಾಹರಣೆಯನ್ನು ಹುಡುಕುವುದು ಕಷ್ಟ ಇದಕ್ಕೆ ಸಮೀಪವೆನಿಸುವ ನಿದರ್ಶನವೆಂದರೆ ಪುನರುಜ್ಜೀವನ ಕಾಲದ ಕೊನೆಯ ಹಂತದಲ್ಲಿ ವಿಕಾಸಗೊಂಡ ಬರೋಕ ಶೈಲಿ! ದ್ರಾವಿಡ ಶೈಲಿಯ ಅಥವಾ ಕರ್ನಾಟಕ ಶೈಲಿಯ ಪರಮಾಧಿಯನ್ನು ನಾವು ಇಲ್ಲಿ ಕಾಣುತ್ತೇವೆ" ಎಂದು ಹೇಳಿರುವರು.[೨೬]

ವಿಜಯನಗರದ ರಾಜಧಾನಿಯ ಸುತ್ತಲೂ ಸಿಗುವ ಶಿಲೆಯು ತುಂಬಾ ಕಠಿಣವಾದ ಗುಣವನ್ನು ಹೊಂದಿದೆ. ಈ ಶಿಲೆಯು ಗಾಳಿ, ಮಳೆ, ಬಿಸಿಲಿನ ವಾತಾವರಣಕ್ಕೆ ತಡೆದುಕೊಂಡು ಹೆಚ್ಚು ಬಾಳಿಕೆಗೆ ಬರುವುದರಿಂದ ದೇವಾಲಯಗಳು ದೀರ್ಘಕಾಲ ಉಳಿಯುವುದಕ್ಕೆ ಹಾಗೂ ಸ್ಥಳೀಯವಾಗಿ ಹೇರಳವಾಗಿ ದೊರೆಯುತ್ತಿರುವುದರಿಂದ ಈ ಕಲ್ಲನ್ನು ಬಳಸಲಾಗಿದೆ. ಕಠಿಣವಾದ ಕಲ್ಲನ್ನು ಬಳಸಿರುವುದರಿಂದ ಎತ್ತರವಾದ ಮಂಟಪ, ಗೋಪುರ, ಪ್ರಾಕಾರಗೋಡೆ, ಪುಷ್ಕರಣಿಗಳನ್ನು ನಿರ್ಮಿಸಲು ಸಾಧ್ಯವಾಯಿತು. ಶಿಲ್ಪಿಗಳು ಈ ಶಿಲೆಯಿಂದ ಸೂಕ್ಷ್ಮ ಹಾಗೂ ಸುಂದರವಾದ ಕೆತ್ತನೆಗೆ ಆಸ್ಪದವನ್ನು ನೀಡಿಲ್ಲದಿರುವುದು ಕಂಡುಬರುತ್ತದೆ. ಕಗ್ಗಲ್ಲನ್ನು ಕೊರೆದು ಹಲವಾರು ರೂಪಗಳಲ್ಲಿ ಹಲವು ರೀತಿಯ ಶಿಲ್ಪಗಳನ್ನು ಕಡೆದಿರುವುದು ವಿಸ್ಮಯವೇ ಆಗಿದೆ. ಈ ಶೈಲಿಯ ಮುಖ್ಯ ಲಕ್ಷಣವೆಂದರೆ ಕಂಬಗಳ ಹೊಸ ವಿನ್ಯಾಸ ಕಂಬಗಳು ಚತುರಸ್ರಾಕಾರವಾಗಿವೆ. ಇಲ್ಲಿನ ಕಂಬಗಳಲ್ಲಿ ಶಿಲೆಯ ಕಾಂಡವು ಇಡೀ ಕಂಬಕ್ಕೆ ಆಸರೆಯಾಗಿ ಪರಿಣಮಿಸಿ, ಅದರ ಮಧ್ಯಭಾಗದಲ್ಲಿ ಸುತ್ತಲೂ ಸಣ್ಣ ಸಣ್ಣ ಕಂಬಗಳು ಅಷ್ಟಮುಖಗಳನ್ನು ಹೊಂದಿದ್ದು ಇವು ೮-೧೦-೧೬ ಕಂಬಗಳನ್ನು ಹೊಂದಿರುತ್ತವೆ. ಕಂಬಗಳಲ್ಲಿ ಶಾರ್ದೂಲ, ಕುದುರೆ, ಸಿಂಹಗಳ ವಿಗ್ರಹಗಳೂ ಆನೆ ಮತ್ತು ಅಶ್ವರೋಹಿಗಳ ವಿಗ್ರಹಗಳನ್ನು ಕೆತ್ತಿರುವರು. ದೇವಾಲಯಗಳ ಶಿಖರಗಳು ಹಾಗೂ ದ್ವಾರಗೋಪುರಗಳೂ ವಿಜಯನಗರ ಸಾಮ್ರಾಜ್ಯದ ಸ್ಮಾರಕಗಳಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದಿವೆ. ಈ ಗೋಪುರಗಳು ವಿಜಯನಗರದ ಮಹತ್ವಾಕಾಂಕ್ಷೆಯ ಹೆಗ್ಗುರುತುಗಳು. ಈ ಗೋಪುರಗಳು ೫.೬.೯.೧೦ ತಲಗಳಲ್ಲಿ ಮುಂದುವರೆದ ಬೃಹತ್ ಗೋಪುರಗಳಾಗಿವೆ. ಇವುಗಳನ್ನು ರಾಯ ಗೋಪುರಗಳೆಂದೇ ಕರೆಯಲಾಗಿದೆ.

ವಿಜಯನಗರ ಶೈಲಿಯ ದೇವಾಲಯಗಳಲ್ಲಿ ಗರ್ಭಗುಡಿಯ ಜೊತೆಗೆ ಪ್ರಾಕಾರದೊಳಗೆ ಹಲವು ಮಂಟಪಗಳಿವೆ. ಈ ಮಂಟಪಗಳ ಹುಟ್ಟಿಗೆ ದೇವಾಲಯಗಳಲ್ಲಿ ನಡೆಯುವ ಪೂಜಾ ಪದ್ಧತಿಗಳಲ್ಲಾದ ಬದಲಾವಣೆಯು ಕಾರಣವಾಗಿದೆ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಕಲ್ಯಾಣ ಮಂಟಪ, ಉತ್ಸವ ಮಂಟಪ, ಉಯ್ಯಾಲೆ ಮಂಟಪ, ಭಜನಾ ಮಂಟಪ, ಸಭಾ ಮಂಟಪ ಮುಂತಾದವುಗಳಾಗಿವೆ. ವಿವಿಧ ಪ್ರಣಾಳಗಳನ್ನು ಗರ್ಭಗುಡಿಯ ಅಭಿಷೇಕ ನೀರು

ಹೊರಹೋಗಲು ಅಳವಡಿಸಲಾಗಿದೆ. ಅವುಗಳಲ್ಲಿ ಗೋಮುಖ ವಕ್ರ ಪ್ರಣಾಳ, ಗಜವಕ್ರ ಪ್ರಣಾಳ, ಸಿಂಹವಕ್ರ ಪ್ರಣಾಳ ಹಾಗೂ ಸಾಧಾ ರೀತಿಯ ಪ್ರಣಾಳಗಳು ಕಂಡುಬರುತ್ತವೆ. ಈ ಶೈಲಿಯಲ್ಲಿ ಎತ್ತರವಾದ ಗರುಡಸ್ತಂಭ, ದೀಪಸ್ತಂಭಗಳನ್ನು ನೆಟ್ಟಿರುವುದು ವಿಶೇಷವಾಗಿದೆ. ಬಲಿಪೀಠವು ಈ ಕಾಲದಲ್ಲಿ ಒಂದು ಆವಶ್ಯಕ ಭಾಗವಾಗಿ ರೂಪುಗೊಂಡಿತು.

ವಿಜಯನಗರ ಕಾಲದ ದೇವಾಲಯಗಳಲ್ಲಿ ಗರ್ಭಗುಡಿಯ ಸುತ್ತಲೂ ಮುಚ್ಚಿದ ಪ್ರದಕ್ಷಿಣ ಪಥವಿದ್ದು ಇದನ್ನು ಸಾಂಧಾರ ಪ್ರದಕ್ಷಿಣಪಥವೆಂತಲೂ ಕರೆಯುವರು. ಸುಕನಾಸಿ ಅಥವಾ ಮುಖಮಂಟಪದಿಂದ ಎಡಬಲ ಪಾರ್ಶ್ವಗಳಲ್ಲಿ ಐದಾರು ಮೆಟ್ಟಲು ಕೆಳಗೆ ಇಳಿದು ಹೋಗಬೇಕಾಗುತ್ತದೆ. ಈ ಪ್ರದಕ್ಷಿಣೆ ಪಥವು ಕಂಬಗಳಿಂದ ಕೂಡಿರುತ್ತದೆ. ಮಳೆ ಬಂದರೆ ಒಳಗೆ ನೀರು ಬಾರದಿರುವ ಹಾಗೆ ತೆರೆದ ಮಂಟಪಗಳಾದ ಕಲ್ಯಾಣಮಂಟಪ, ಮಹಾರಂಗಮಂಟಪ, ನವರಂಗ ಇತ್ಯಾದಿ ಮಂಟಪಗಳಿಗೆ 'ಎಸ್'ಆಕಾರದ ಕಪೋತ ಪ್ರಸ್ತಾರದಿಂದ ಇಳಿಬಿದ್ದಿರುತ್ತದೆ. ಸಂಗೀತ–ನೃತ್ಯ ಕಾರ್ಯಕ್ರಮಗಳ ಸಂದರ್ಭದಲ್ಲಿ ಪರದೆಯನ್ನು ಕಟ್ಟಲು ಕಪೋತದ ಕೊನೆಯಲ್ಲಿ ಹಿಡಿಕೆಗಳನ್ನು, ಕೊಂಡಿಗಳನ್ನು ಕೆತ್ತಿ ಕೊನೆಯ ಭಾಗದಲ್ಲಿ ಕಲ್ಲಿನ ಸರಪಳಿಯನ್ನು ಕೆತ್ತಲಾಗಿರುವುದು. ಕೋಷ್ಠಕಗಳನ್ನು, ಕುಂಭಲತಾಗಳನ್ನು, ಹಾಗೂ ಉಬ್ಬುಶಿಲ್ಪಗಳ ಚಿತ್ರ ತಟಿಕೆಗಳನ್ನು ಭಿತ್ತಿಯ ಭಾಗಗಳಲ್ಲಿ ಕೆತ್ತಿರುವುದು ಗಮನಾರ್ಹ. ಮಂಟಪವನ್ನು ಏರಲು ಎತ್ತರವಾದ ಸೋಪಾನಗಳಿವೆ. ಇವುಗಳಲ್ಲಿ ಸಿಂಹಯಾಳಿ, ಗಜಯಾಳಿ, ಸಾಮಾನ್ಯ ರೀತಿಯ ಸರಳ ಸೋಪಾನಗಳನ್ನು ಕೆತ್ತಲಾಗಿದೆ.

ಮಂಟಪಗಳ ಭಿತ್ತಿಗಳಲ್ಲಿ ಹಾಗೂ ಪ್ರಾಕಾರದ ಹೊರ ಮತ್ತು ಒಳ ಗೋಡೆಗಳಲ್ಲಿ ರಾಮಾಯಣ ಮತ್ತು ಮಹಾಭಾರತದಿಂದ ಆಯ್ದ ಕೆಲವು ಸನ್ನಿವೇಶಗಳನ್ನು ಉಬ್ಬು ಚಿತ್ರಪಟಿಕೆಗಳಲ್ಲಿ ಖಂಡರಿಸಲಾಗಿದೆ. ಅಲ್ಲದೆ ಹಾಡು, ನೃತ್ಯ, ವಾದ್ಯ, ಯುದ್ಧದ ಸನ್ನಿವೇಶಗಳನ್ನು, ಪ್ರಾಣಿ ಪಕ್ಷಿಗಳ ಸನ್ನಿವೇಶಗಳನ್ನು ಕೆತ್ತಿರುವುದು ಈ ಶೈಲಿಯ ಇನ್ನೊಂದು ವಿಶೇಷವಾಗಿದೆ.

### ಈಶ್ವರ ದೇವಾಲಯ

ಶಾಲಿವಾಹನ ಶಕ ೧೪೬೧ನೆಯ ವಿಕಾರಿ, ಭಾದ್ರಪದ, ಶು ೧೨ಕ್ಕೆ ಸರಿಯಾದ ಕ್ರಿಶ ೨೯–೮–೧೫೩೯ರಲ್ಲಿ ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪ ಬಾಚರಸಯ್ಯ, ಚಿಕ್ಕಮ್ಮ ಅಂಮಾಜಮ್ಮ, ತನ್ನ ತಮ್ಮ ಕೃಷ್ಣಪ್ಪನಿಗೆ ಪುಣ್ಯವಾಗಬೇಕೆಂದು ಬಾಚೇಶ್ವರ, ಅಂಮೇಶ್ವರ, ಕೃಷ್ಣೇಶ್ವರ ದೇವಾಲಯವನ್ನು ಕಟ್ಟಿಸಿದನು. ಸ್ಥಳೀಯವಾಗಿ ಈ ದೇವಾಲಯವನ್ನು ಶಿವದೇವಾಲಯವೆಂದು ಕರೆಯಲಾಗಿದೆ. ದೇವಾಲಯ ಸಂಕೀರ್ಣಗಳ ನಿರ್ಮಾಣ ಈ ಕಾಲದಲ್ಲಿ ಜನಪ್ರಿಯವಾದವು. ಪ್ರಧಾನ ದೇಗುಲದ ಸುತ್ತಲೂ ಅಮ್ಮನವರ ಗುಡಿ, ಕಲ್ಯಾಣ ಮಂಟಪ, ಪರಿವಾರ ದೇವತೆಗಳ ಮಂದಿರಗಳು

ನಿರ್ಮಾಣವಾದವು. ಇವುಗಳನ್ನು ಸುತ್ತುವರೆದ ಉನ್ನತವಾದ ಪ್ರಕಾರವು ಸುಂದರವಾದ ಗೋಪುರಗಳೊಂದಿಗೆ ರಚನೆಯಾದವು. ವಿವಿಧ ದೇವರುಗಳಿಗೆ ಸ್ಥಳವಾಕಾಶ ಮಾಡುವ ಉದ್ದೇಶದಿಂದ ಒಂದೇ ದೇಗುಲದಲ್ಲಿ ಒಂದಕ್ಕಿಂತ ಹೆಚ್ಚು ಗರ್ಭಾಂಕಣಗಳನ್ನು ನಿರ್ಮಿಸುವ ಪರಿಪಾಠವನ್ನು ಈ ಕಾಲದಲ್ಲಿ ಕೈಬಿಡಲಾಯಿತು.

ಬಾಚೇಶ್ವರ–ಅಮ್ಮೇಶ್ವರ–ಕೃಷ್ಣೇಶ್ವರ ದೇವಾಲಯವು ಮೂರು ಗರ್ಭುಗುಡಿಗಳನ್ನು ಹೊಂದಿರುವ ತ್ರಿಕೂಟಾಚಲ ದೇವಾಲಯವಾಗಿದೆ. ಈ ದೇವಾಲಯವು ವಿಜಯನಗರ ಶೈಲಿಯಲ್ಲಿ ನಿರ್ಮಾಣವಾದ ಸಾವಿರಾರು ದೇವಾಲಯಗಳಲ್ಲಿನ ಏಕೈಕ ತ್ರಿಕೂಟಾಚಲವಾಗಿದೆ. ಹಂಪಿಯ ಮಹಾನವಮಿ ದಿಬ್ಬಕ್ಕೆ ದಕ್ಷಿಣದಲ್ಲಿ ಇರುವ ಚಂದ್ರಶೇಖರ ದೇವಾಲಯವು ದ್ವಿಕೂಟಾಚಲವಾಗಿದೆ. ಈ ಎರಡು ದೇವಾಲಯಗಳನ್ನು ಬಿಟ್ಟರೆ, ಹೆಚ್ಚಿನ ಗರ್ಭಗುಡಿಗಳನ್ನು ಹೊಂದಿರುವ ದೇವಾಲಯಗಳು ವಿಜಯನಗರ ಸಾಮ್ರಾಜ್ಯದಲ್ಲಿ ಕಂಡುಬರುವುದಿಲ್ಲ. ಹೊಯ್ಸಳದ ಕಾಲದ ದ್ವಿಕೂಟಾಚಲ ಮತ್ತು ತ್ರಿಕೂಟಾಚಲ ದೇವಾಲಯಗಳನ್ನು ಈ ಎರಡು ದೇಗುಲಗಳು ನೆನಪಿಸುತ್ತವೆ. ಬಯಕಾರ ರಾಮಪ್ಪನು ಬೇಲೂರಿನ ಚನ್ನಕೇಶವ ದೇವಾಲಯಕ್ಕೆ ದತ್ತಿಗಳನ್ನು ನೀಡಿರುವುದರಿಂದ ಹೊಯ್ಸಳ ದೇವಾಲಯಗಳ ಪರಿಚಯವಿರುವುದು ತಿಳಿದುಬರುತ್ತದೆ. ಆ ಹೊಯ್ಸಳ ದೇವಾಲಯಗಳ ವಾಸ್ತು ವಿನ್ಯಾಸಗಳ ಬಗ್ಗೆ ಇವನಿಗಿರುವ ಆಕರ್ಷಣೆಯೇ ತಿಮ್ಮಾಪುರದ ತ್ರಿಕೂಟಾಚಲ ಶಿವಾಲಯದ ನಿರ್ಮಾಣಕ್ಕೆ ಪ್ರೇರಣೆ, ಪ್ರಚೋದನೆ ನೀಡಿರಬೇಕು.

ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪ ಬಾಚರಸಯ್ಯ, ಚಿಕ್ಕಮ್ಮ ಅಮ್ಮಾಜಮ್ಮ, ಮತ್ತು ಅವರ ಮಗ ಕೃಷ್ಣಪ್ಪ ಈ ಮೂವರ ಹೆಸರಿನಲ್ಲಿ, ಮೂರುಶಿವಲಿಂಗಗಳನ್ನು ಈ ದೇವಾಲಯದಲ್ಲಿ ಪ್ರತಿಷ್ಠಾಪಿಸಿದನು. ಈಗ ಎರಡು ಗರ್ಭಗುಡಿಯಲ್ಲಿ ಮಾತ್ರ ಶಿವಲಿಂಗಗಳೂ ಇರುವುದು ಕಂಡುಬರುತ್ತದೆ. ಮೂರು ಗರ್ಭಗುಡಿಗಳನ್ನು ಅವುಗಳದ್ದೇ ಆದ ಅಂತರಾಲದ ಮೂಲಕ ಒಂದೇ ರಂಗಮಂಟಪಕ್ಕೆ ಜೋಡಿಸಿದಂತೆ ಕಟ್ಟಲಾಗಿದೆ. ನಾಲ್ಕು ಸುಂದರವಾದ ಕಂಭಗಳು ರಂಗಮಂಟಪದಲ್ಲಿವೆ. ರಂಗಮಂಟಪವು ಉತ್ತರಾಭಿಮುಖವಾಗಿದ್ದು ಮಹಾರಂಗ ಮಂಟಪಕ್ಕೆ ಪ್ರವೇಶವನ್ನು ಒದಗಿಸುತ್ತದೆ. ಇದು ತರೆದ ಸ್ತಂಭರಾಜಿಯ (೨೦) ಮಂಟಪ. ದೇವಾಲಯವನ್ನು ಇದರ ಮುಂಭಾಗದಲ್ಲಿನ ಮೆಟ್ಟಿಲುಗಳಿಂದ ಪ್ರವೇಶಿಸಬಹುದು. ಎತ್ತರವಾದ ಅಧಿಷ್ಠಾನ ಮತ್ತು ಉಪಪೀಠದ ಮೇಲೆ ಸಮಗ್ರ ದೇಗುಲವನ್ನು ಕಟ್ಟಲಾಗಿದೆ. ಇವೆರಡೂ ಸರಳವಾಗಿದ್ದರೂ ಸುಂದರವಾಗಿವೆ.

ಭಿತ್ತಿಕೋಷ್ಠ, ಕುಂಭಪಂಜರ ಮತ್ತು ಅರೆಗಂಭಗಳಿಂದ ದೇಗುಲದ ಹೊರಮೈ ಗೋಡೆಯನ್ನು ಅಲಂಕಾರಗೊಳಿಸಲಾಗಿದೆ. ದೇವಾಲಯದ ಮೂರು ಗರ್ಭಗುಡಿಗಳ ಮೇಲೆ ಗಾರೆ ಮತ್ತು ಇಟ್ಟಿಗೆಗಳಿಂದ

ಮಾಡಿದ ಮೂರು ಶಿಖರಗಳಿವೆ. ವಿಶಿಷ್ಟ ಬಗೆಯಲ್ಲಿ ಈ ಮೂರು ಶಿಖರಗಳು ರಚನೆಯಾಗಿವೆ. ದೇಗುಲದ ಮುಂದೆ ಬಲಿಪೀಠವಿದೆ. ಎತ್ತರವಾದ ಕೋಟೆಯಂತಹ ಪ್ರಕಾರವು ಸಮಗ್ರ ದೇವಾಲಯದ ಆವರಣವನ್ನು ಸುತ್ತುವರೆದಿದೆ. ದ್ವಾರಮಂಟಪವು ಪ್ರಕಾರದ ಪಶ್ಚಿಮ ಭಾಗದಲ್ಲಿದ್ದು ಅದರ ಮೇಲೆ ಸುಂದರವಾದ ಗಾರೆಯಿಂದ ಮಾಡಿದ ಗೋಪುರವಿದೆ. ಈ ಗೋಪುರದಲ್ಲಿ ಸುಂದರವಾದ ಶಿಲ್ಪಗಳನ್ನು ನಿರ್ಮಿಸಲಾಗಿದೆ. ಪ್ರಾಕಾರದ ಗೋಡೆಗೆ ಹೊಂದಿಕೊಂಡಂತೆ ಸ್ತಂಭಪಂಕ್ತಿಯ ಮಂಟಪ ಒಳಭಾಗದಲ್ಲಿ ಸುತ್ತುವರೆದಿದೆ.

ದೇವಾಲಯದ ರಂಗಮಂಟಪ ಮತ್ತು ಮಹಾರಂಗ ಮಂಟಪದಲ್ಲಿ ಆಕರ್ಷಕವಾದ ಕಂಬಗಳಿವೆ. ಚೌಕಾಕಾರದ ಪೀಠಗಳ ಮೇಲೆ ಇವುಗಳನ್ನು ಇಡಲಾಗಿದೆ. ಮೂರು ಘನಾಕೃತಿಗಳನ್ನು ಇವು ಹೊಂದಿದ್ದು, ಕುಡಿಯಲ್ಲಿ ಕದಳಿ ಹೂವಿನ ಬೋದಿಗೆಗಳನ್ನು ನಾಲ್ಕು ಮುಖಗಳಲ್ಲಿಟ್ಟಿದೆ. ದೇವಾಲಯದ ಮಾಡನ್ನು ಇವು ಹೊತ್ತಿರುವುದಲ್ಲದೆ, ಕಂಬಗಳು ಸುಂದರ ಅಂಗಗಳೂ ಆಗಿವೆ. ವಿವಿಧ ಬಗೆಯ ಸುಂದರ ಶಿಲ್ಪಗಳನ್ನು ಮೂರು ಘನಾಕೃತಿಯ ಕಂಬಗಳ ಹೊರಮೈ ಮೇಲೆ ಕೆತ್ತಲಾಗಿದೆ. ಅಪರೂಪದ ಶಿಲ್ಪಗಳನ್ನು ರಂಗಮಂಟಪದ ಕಂಬಗಳ ಮೇಲೆ ಕೆತ್ತಲಾಗಿದೆ. ಅಲ್ಲಿ ವೀರಭದ್ರ, ಭೈರವ, ಭದ್ರಕಾಳಿ, ಗಜಾಸುರಮೂರ್ತಿ, ಬೇಡರ ಕಣ್ಣಪ್ಪ, ನಟರಾಜ, ಭಿಕ್ಷಾಟನಮೂರ್ತಿ ಮುಂತಾದ ಶಿಲ್ಪಗಳನ್ನು ಕೆತ್ತಲಾಗಿದೆ.

ಹಂಪಿಯ ದೇವಾಲಯಗಳೆಲ್ಲೂ ಕಾಣಲಾರದ ಸ್ವಾಭಿಕ್ಷೇಕಮೂರ್ತಿ, ನಾಯನಾರರಾದ ಮಾಣಿಕ್ಯವಾಚಗರ್, ಸುಂದರಮೂರ್ತಿ ಮತ್ತು ಅಪ್ಪಾರರನ್ನು ರೂಪಿಸಲಾಗಿದೆ. ರಂಗಮಂಟಪದ ಶಿಲ್ಪ ಕೆತ್ತನೆಗಳು ನೈಜತೆಯಿಂದ ಮೈದುಂಬಿಕೊಂಡ, ಅಪೂರ್ವವಾದ ಸೌಂದರ್ಯದಿಂದ ಕಂಗೊಳಿಸುತ್ತಿವೆ. ಶೈವ ಪುರಾಣಕ್ಕೆ ಸಂಬಂಧಿಸಿದ ಅಪರೂಪದ ಶಿಲ್ಪಗಳನ್ನು ಮಹಾರಂಗಮಂಟಪದ ಕಂಬಗಳಲ್ಲಿ ಸೊಗಸಾಗಿ ಕೆತ್ತಲಾಗಿದೆ. ವಿಜಯನಗರ ಸಾಮ್ರಾಜ್ಯದ ಅಪೂರ್ವವಾದ ದೇವಾಲಯಗಳಲ್ಲೊಂದಾಗಿ ಈ ದೇವಾಲಯವು ಕಂಗೊಳಿಸುತ್ತದೆ.

ವಿಜಯನಗರ ಸಾಮ್ರಾಜ್ಯದ ಅಪೂರ್ವ ಕಲಾ ಸಂಪತ್ತನ್ನು ಹೊಂದಿರುವ ಈ ದೇವಾಲಯದ ಮೂರು ಗರ್ಭಗುಡಿಗಳನ್ನು ನಿಧಿಗಳ್ಳರು ಅಗೆದು ಹಾಕಿದ್ದಾರೆ. ಪುಣ್ಯಾವಶಾತ್ ಎರಡು ಶಿವಲಿಂಗಗಳು ಧಕ್ಕೆಯಾಗದೆ ಉಳಿದುಕೊಂಡಿವೆ. ಒಂದು ಶಿವಲಿಂಗವು ಕಂಡುಬರುತ್ತಿಲ್ಲ. ಬಹುಶಃ ನಿಧಿಗಳ್ಳರ ದುರಾಸೆಗೋ, ವಿಗ್ರಹ ಚೋರರ ಕೃತ್ಯಕ್ಕೆ ಇದು ಬಲಿಯಾದಂತೆ ಕಂಡುಬರುತ್ತದೆ.

**ಗೋಪಿನಾಥ ದೇವಾಲಯ**

ಬಯಕಾರ ರಾಮಪ್ಪನು ತನ್ನ ತಂದೆ ಹಿರಿಯ ತಿಮ್ಮರಸಯ್ಯ ಮತ್ತು ತಾಯಿ ಹಿರಿಯ

ಲಕ್ಕಲೀಶಮ್ಮನಿಗೆ ಪುಣ್ಯವಾಗಬೇಕೆಂದು ಕ್ರಿಶ ೨೬-೮-೧೫೫೫ರಲ್ಲಿ ಗೋಪಿನಾಥ ದೇವರ ದೇವಾಲಯವನ್ನು ಕಟ್ಟಿಸಿದನು. ಶಿವ ಮತ್ತು ಗೋಪಿನಾಥ ದೇವಾಲಯವನ್ನು ಏಕ ಕಾಲದಲ್ಲಿ ಕಟ್ಟಲಾಗಿದೆ. ಗೋಪಿನಾಥ ದೇವಾಲಯವು ಶಿವ ದೇಗುಲಕ್ಕೆ ಅಭಿಮುಖವಾಗಿ ಪಶ್ಚಿಮಕ್ಕೆ ತುಸು ದೂರದಲ್ಲಿದೆ. ಗೋಪಿನಾಥ ದೇವಾಲಯವು ಶಿವ ದೇವಾಲಯಕ್ಕೆ ಸುಂದರವಾಗಿದೆ. ಗರ್ಭಗುಡಿ, ಅಂತರಾಳ, ಮುಖ ಮಂಟಪ, ರಂಗಮಂಟಪ ಮತ್ತು ಮಹಾರಂಗಮಂಟಪಗಳನ್ನು ಓರಣವಾಗಿ ಜೋಡಿಸಿದಂತೆ ನಿರ್ಮಿಸಲಾಗಿದೆ.

ಗರ್ಭಗುಡಿಯ ಪೂಜಾಮೂರ್ತಿ ಈ ದೇವಾಲಯದ ಅತ್ಯಪೂರ್ವವಾದ ಕಲಾಕೃತಿಯಾಗಿದೆ. ಇಲ್ಲಿನ ಗೋಪಿನಾಥ ವಿಗ್ರಹವಂತೂ, ಆ ಕಾಲದ ಕಲಾಕಾರರ, ರೂವಾರಿಗಳ ಅಮೋಘ ತಪಸ್ಸಿನ ಫಲ. ಡಾ. ಎಸ್.ಎನ್.ಶಿವರುದ್ರಸ್ವಾಮಿಯವರು ಹೇಳುವಂತೆ "ಗೋಪಿನಾಥ ವಿಗ್ರಹದಷ್ಟು ಅಪಾರ ಜೀವಂತಿಕೆ ಮತ್ತು ಚೆಲುವನ್ನು ಮೈತಳೆದ ಮತ್ತೊಂದು ವಿಗ್ರಹವನ್ನು ಇಂದು ಆ ಕಾಲದ ಯಾವುದೇ ದೇವಾಲಯದಲ್ಲಿ ಕಾಣಲು ಸಾಧ್ಯವಿಲ್ಲ. ಇದರ ಮೇಲೆ ಹೊಯ್ಸಳ ಶಿಲ್ಪಗಳ ಪ್ರಭಾವವಿರುವುದಾದರೂ, ಅವುಗಳಿಗಿಂತ ಭಿನ್ನವಾದುದು. ಹೊಯ್ಸಳ ಶಿಲ್ಪಗಳಲ್ಲಿ ಜೀವಂತಿಕೆಯ ಕೊರತೆ ಕಂಡರೆ, ಇದರಲ್ಲಿ ಜೈವಿಕತೆಯನ್ನು ಅಪಾರವಾಗಿ ಕಾಣುತ್ತೇವೆ. ಇದರಲ್ಲಿ ಅಲಂಕರಣೆ ಸಾಕಷ್ಟಿದೆ. ಇದು ಹೊಯ್ಸಳ ಶಿಲ್ಪಗಳಲ್ಲಿ ಹೊರೆಯಾದರೆ, ಇದರಲ್ಲಿ ಶಿಲ್ಪ ಸೌಂದರ್ಯಕ್ಕೆ ಪೂರಕವಾಗಿದೆ."[೨೬] ೧.೪೮ ಮೀಟರ್ ಎತ್ತರವಿರುವ ಗೋಪಿನಾಥನು ಕೊಳಲನೂದುತ್ತಿದ್ದಾನೆ. ಸುತ್ತಲಿರುವ ಹಸುಗಳು, ಆನೆ, ಹಂಸ, ಮತ್ತು ಇತರ ಕಾಡಿನ ಪ್ರಾಣಿಗಳು ಗೋಪಿನಾಥನ ದಿವ್ಯಗಾನವನ್ನು ತನ್ಮಯತೆಯಿಂದ ಆಲಿಸುತ್ತಿವೆ. ಗೋಪಿನಾಥನು ಮುಂದಿನ ಹಸ್ತಗಳಲ್ಲಿ ಕೊಳಲನ್ನು, ಹಿಂದಿನ ಕೈಗಳಲ್ಲಿ ಚಕ್ರ ಮತ್ತು ಶಂಖವನ್ನು ಹಿಡಿದು ಸರ್ವಾಭರಣಭೂಷಿತನಾಗಿ ಕಂಗೊಳಿಸುತ್ತಿದ್ದಾನೆ. ಏಳು ಹೆಡೆಯ ನಾಗನು ಆಲದ ಮರದ ಕಾಂಡವನ್ನು ಸುತ್ತಿ ತಬ್ಬಿ ಗೋಪಿನಾಥನ ತಲೆಯ ಮೇಲೆ ಹೆಡೆಯನ್ನು ಬಿಚ್ಚಿದ್ದಾನೆ. ಮರದ ಎಲೆಗಳನ್ನು ವಿಗ್ರಹದ ಮೇಲೆ ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಮರದ ಮೇಲೆ ಕಿನ್ನರ-ಕಿನ್ನರಿಯರನ್ನು ಚಿತ್ರಿಸಲಾಗಿದೆ. ಇದೊಂದು ಭವ್ಯ, ಅಪೂರ್ವವಾದ ಶಿಲ್ಪವಾಗಿದೆ. ಗೋಪಿನಾಥನನ್ನು ಕಂಡರಿಸಿದ ಶಿಲ್ಪಿಯ ಹೆಸರು ತಿಳಿಯದಿದ್ದರೂ, ಅವನ ಮಹತ್ತರವಾದ ಕನಸು ಮತ್ತು ಅಶಯಗಳೂ ಈ ಶಿಲ್ಪದಲ್ಲಿ ಸಾಕಾರಗೊಂಡಿವೆ ಎನ್ನುವ ವಿದ್ವಾಂಸರ ಅಭಿಪ್ರಾಯ ಸಮಂಜಸವಾಗಿದೆ.

ಅಂದಿನ ಕಾಲದ ಮರದ ತೊಲೆಗಳಿಂದ ಗರ್ಭಗೃಹದ ಮಾಡನ್ನು ಮುಚ್ಚಲಾಗಿದೆ. ರಂಗಮಂಟಪದ ಉತ್ತರ-ದಕ್ಷಿಣದಲ್ಲಿ ಎರಡು ದ್ವಾರಗಳಿವೆ. ಅದರ ಮುಂದೆ ಮೆಟ್ಟಿಲುಗಳಿವೆ. ಈ

ಮಂಟಪದ ಪೂರ್ವದಲ್ಲಿ ಪ್ರಮುಖ ದ್ವಾರವಿದ್ದು, ಇಲ್ಲಿಂದ ಮಹಾರಂಗ ಮಂಟಪಕ್ಕೆ ಪ್ರವೇಶಿಸಬಹುದಾಗಿದೆ. ಶಿವದೇಗುಲದ ಮಹಾರಂಗ ಮಂಟಪದಂತೆ ಇದೂ ಸಹ ೨೦ ಸ್ತಂಭಗಳ ತೆರೆದ ಮಂಟಪವಾಗಿದೆ. ಶಿವದೇಗುಲದ ಸ್ತಂಭಗಳಂತೆ ಈ ದೇವಾಲಯದ ಸ್ತಂಭಗಳನ್ನು ರೂಪಿಸಲಾಗಿದೆ. ರಾಮಾಯಣ, ಭಾಗವತಕ್ಕೆ ಸಂಬಂಧಿಸಿದ ಶಿಲ್ಪಗಳನ್ನು ಇಲ್ಲಿನ ರಂಗಮಂಟಪದ ಸ್ತಂಭಗಳ ಘನಾಕೃತಿಯ ಮೇಲೆ ಕೆತ್ತಲಾಗಿದೆ. ಒಂದು ಕಂಬದ ಮೇಲೆ ದೇವಾಲಯದ ಪೂಜಾಮೂರ್ತಿಯ ಪ್ರತಿಕೃತಿ ಕಂಡುಬರುತ್ತದೆ. ಆಳ್ವಾರರು, ಕಿನ್ನರ–ಕಿನ್ನರಿಯರು, ಗಂಧರ್ವರು ಮುಂತಾದ ಶಿಲ್ಪಗಳನ್ನು ಇಲ್ಲಿನ ಕಂಬದ ಮೇಲೆ ಕಾಣಬಹುದಾಗಿದೆ. ರಾಮಾಯಣ ಮಹಾಭಾರತ, ದಶಾವತಾರ, ಸಾಮಾಜಿಕ ಚಿತ್ರಗಳನ್ನು ಮಹಾರಂಗಮಂಟಪದ ಸ್ತಂಭಗಳ ಮೇಲೆ ಚಿತ್ರಿಸಲಾಗಿದೆ. ಅಲ್ಲದೆ ವಿವಿಧ ಬಗೆಯ ಪ್ರಾಣಿಗಳ ಚಿತ್ರಗಳೂ ಕಂಡುಬರುತ್ತವೆ. ದೇವಾಲಯ ದ್ವಾರಬಂಧಗಳನ್ನು ಸೊಗಸಾಗಿ ಚಿತ್ರಿಸಲಾಗಿದೆ. ಹಂಪೆಯ ದೇವಾಲಯಗಳಲ್ಲಿ ಕಂಡುಬರುವಂತೆ ಹೊರಭಾಗದ ಗೋಡೆಗಳನ್ನು ಕುಂಭಪಂಜರ, ಕೋಷ್ಠ ಮತ್ತು ಅರೆಗಂಭಗಳಿಂದ ಅಲಂಕರಿಸಲಾಗಿದೆ. ದೇವಾಲಯದ ಶಿಖರ ಜೀರ್ಣಾವಸ್ಥೆಯಲ್ಲಿದ್ದು ಅಲ್ಲಿನ ಗಾರೆಶಿಲ್ಪಗಳನ್ನು ಗುರುತಿಸುವುದು ಕಷ್ಟವಾಗಿದೆ.

ದ್ವಾರಗೋಪುರ ಮತ್ತು ಬಲಿಪೀಠ ದೇವಾಲಯದ ಮುಂದೆ ಅಕ್ಷರೇಖೆಯಲ್ಲಿವೆ. ಎತ್ತರವಾದ ಕೋಟೆಯಂತಹ ಪ್ರಾಕಾರವು ದೇವಾಲಯದ ಆವರಣವನ್ನು ಸುತ್ತುವರೆದಿದ್ದು, ದೇಗುಲದ ಮುಂದಿರುವ ಗೋಪುರವನ್ನು ಸೇರಿಕೊಳ್ಳುತ್ತದೆ. ಗೋಪುರದ ಕಿರು ಆಕೃತಿಗಳನ್ನು ಪ್ರಾಕಾರದ ಎತ್ತರ, ದಕ್ಷಿಣ ಮತ್ತು ಪಶ್ಚಿಮ ಗೋಡೆಗಳ ಮಧ್ಯದಲ್ಲಿ ರಚಿಸಲಾಗಿದೆ. ಪ್ರಾಕಾರದ ಒಳಭಾಗದಲ್ಲಿ ಅದಕ್ಕೆ ತಾಗಿದಂತೆ ಕಂಬಸಾಲಿನ ಮಂಟಪವಿದೆ. ಪಶ್ಚಿಮ ಮತ್ತು ದಕ್ಷಿಣ ಭಾಗದಲ್ಲಿನ ಮಂಟಪವು ಕಾಲನ ಹೊಡೆತಕ್ಕೆ ಸಿಲುಕಿ ನಾಶವಾಗಿದೆ.

ಶಿವದೇಗುಲದ ಗೋಪುರಕ್ಕಿಂತ ಗೋಪಿನಾಥ ದೇವಾಲಯದ ಗೋಪುರವು ಉತ್ತಮವಾಗಿರುವುದು ಕಂಡುಬರುತ್ತದೆ. ಅಧಿಷ್ಠಾನ ಮತ್ತು ಉಪಪೀಠದ ಮೇಲೆ ದೇವಾಲಯದ ದ್ವಾರಮಂಟಪವು ರಚನೆಯಾಗಿದೆ. ಕುಂಭಪಂಜರ, ಕೋಷ್ಠ ಮತ್ತು ಅರೆಗಂಬಗಳಿಂದ ಕೂಡಿದ ಇದು ಭವ್ಯವಾಗಿ ಕಾಣುತ್ತದೆ. ಐದು ಅಂತಸ್ತುಳ್ಳ ಗೋಪುರವು ಗಾರೆ ಮತ್ತು ಇಟ್ಟಿಗೆಗಳಿಂದ ರಚನೆಯಾಗಿದೆ. ಕೊನೆಯ ಅಂತಸ್ತು ಅರೆ ಪಿಪಾಯಿ ಆಕಾರದಲ್ಲಿರುವುದು ಕಂಡುಬರುತ್ತದೆ. ಇದು ಅಗ್ನಿ ಮುದ್ರೆಗಳಿಂದ ಕೂಡಿದ್ದು, ಕೀರ್ತಿಮುಖಗಳಿಂದ ಅಲಂಕೃತವಾಗಿದೆ. ವೈಷ್ಣವ, ಗಂಧರ್ವರ ಗಾರೆ ಶಿಲ್ಪಗಳನ್ನು ಇದರ ಮೇಲೆ ರಚಿಸಲಾಗಿದೆ. ದೇವಾಲಯದ ಪ್ರಶಾಂತತೆ ಮತ್ತು ವಾಸ್ತು ಸೌಂದರ್ಯ, ದೇವಾಲಯದ ಆವರಣಕ್ಕೆ ಪ್ರವೇಶಿಸಿದಾಗ ಅಲೌಕಿಕ ಅನುಭವವನ್ನು ತಂದುಕೊಡುತ್ತದೆ.

## ಮಲ್ಲಿಕಾರ್ಜುನ ದೇವಾಲಯ

ಮಲ್ಲಿಕಾರ್ಜನ ದೇವಾಲಯವನ್ನು ಬಯಕಾರ ರಾಮಪ್ಪನ ಅಧಿಕಾರ ನಮಶ್ಶಿವಾಯನು ಶಾಲಿವಾಹನ ಶಕ ೧೪೬೧ನೇ ವಿಕಾರಿ, ಭಾದ್ರಪದ. ಶು೧೨ ಅಂದರೆ ಕ್ರಿ.ಶ.೨೬-೮-೧೫೩೯ರಲ್ಲಿ ಕಟ್ಟಿಸಿದನು. ಬಯಕಾರ ರಾಮಪ್ಪನ ಅಧಿಕಾರಿಯಾದ ನಮಶ್ಶಿವಾಯನು ತನಗೆ ಪುಣ್ಯವಾಗಬೇಕೆಂದು ಈ ದೇವಾಲಯವನ್ನು ಕಟ್ಟಿಸಿರುವನು. ಬಯಕಾರ ರಾಮಪ್ಪನು ಈ ದೇವಾಲಯವನ್ನು ಕಟ್ಟಿಸಲು ತನ್ನ ಅಧಿಕಾರಿಗೆ ಪ್ರೇರಣೆ ನೀಡಿದ್ದರಿಂದ ಈ ನಿರ್ಮಾಣದ ಯಶಸ್ಸು ತನ್ನದೆಂದು ಶ್ರುತಪಡಿಸುತ್ತಾನೆ. ಮಲ್ಲಿಕಾರ್ಜುನ ದೇವಾಲಯವು ಗೋಪಿನಾಥ ದೇವಾಲಯದಿಂದ ಎತ್ತರಕ್ಕೆ ಸ್ವಲ್ಪ ದೂರದಲ್ಲಿದೆ. ಇದು ಸರಳ ದೇಗುಲವಾದರೂ ತನ್ನದೇ ಆದ ವಿಶಿಷ್ಟ ಅಂಶಗಳಿಂದ ಕೂಡಿದೆ.

ಈ ದೇವಾಲಯವು ದ್ವಾರಗೋಪುರ, ರಂಗಮಂಟಪ, ಅಂತರಾಳ, ಗರ್ಭಗೃಹವನ್ನು ಹೊಂದಿದೆ. ಎರಡು ಗರ್ಭಗೃಹಗಳನ್ನು ಅಂತರಾಳದ ಎರಡು ಕಡೆಗಳಲ್ಲಿ ನಂತರದ ಕಾಲದಲ್ಲಿ ನಿರ್ಮಿಸಲಾಗಿದೆ. ರಂಗಮಂಟಪದಿಂದ ಇವರೆಡಕ್ಕೂ ಪ್ರವೇಶವನ್ನು ಒದಗಿಸಲಾಗಿದೆ. ಮೂರು ಗರ್ಭಗೃಹಗಳಲ್ಲಿಯೂ ಯಾವುದೇ ರೀತಿಯ ಪೂಜಾಮೂರ್ತಿಗಳು ಕಂಡುಬರುವುದಿಲ್ಲ. ಅಂತರಾಳದ ದಕ್ಷಿಣಕ್ಕಿರುವ ಗರ್ಭಗೃಹದಲ್ಲಿ ಗಣೇಶ ಮೂರ್ತಿಯನ್ನಿಡಲಾಗಿತ್ತು. ಆದರೆ ಈಗ ಅದನ್ನು ಗೋಪಿನಾಥ ದೇವಾಲಯದ ಅಂತರಾಳದಲ್ಲಿಡಲಾಗಿದೆ. ಕಹಳೆ ಮತ್ತು ಕೊಂಬುಗಳನ್ನು ಊದುತ್ತಿರುವ ಗಣಗಳನ್ನು ಗರ್ಭಗೃಹದ ದ್ವಾರಬಂಧದ ಮೇಲೆ ಚಿತ್ರಿಸಲಾಗಿದೆ. ಈ ರೀತಿಯ ದ್ವಾರಪಾಲಕರ ಚಿತ್ರಣ ಕಂಡುಬರುವುದು ಅಪರೂಪವೇ ಆಗಿದೆ. ಉತ್ತರ ದಿಕ್ಕಿನಲ್ಲಿರುವ ಗರ್ಭಗೃಹದ ಮೇಲೆ ದ್ವಾರಪಾಲಿಕೆಯರನ್ನು ಚಿತ್ರಿಸಲಾಗಿದೆ. ಇದರ ಆಧಾರದ ಮೇಲೆ ಅಲ್ಲಿ ಪಾರ್ವತಿಯನ್ನು ಪ್ರತಿಷ್ಠಾಪಿಸಿರಬೇಕು ಎಂದು ಊಹಿಸಬಹುದಾಗಿದೆ. ಇಲ್ಲಿನ ದ್ವಾರಪಾಲಿಕೆಯರು ಚಾಮರಗಳನ್ನು ಹೆಗಲ ಮೇಲೆ ಇರುವಂತೆ ಹಿಡಿದಿದ್ದಾರೆ. ಈ ದೇವಾಲಯದ ನಾಲ್ಕು ಸ್ತಂಭಗಳು ಸುಂದರವಾಗಿದ್ದು ರಂಗಮಂಟಪದಲ್ಲಿ ಕಂಡುಬರುತ್ತವೆ. ಇವು ಕಲ್ಯಾಣದ ಚಾಲುಕ್ಯರ ಸ್ತಂಭಗಳನ್ನು ಹೋಲುವಂತೆ ಕಂಡುಬರುತ್ತವೆ.

ದೇವಕೋಷ್ಠವೊಂದು ಮಲ್ಲಿಕಾರ್ಜುನ ದೇವಾಲಯದ ರಂಗಮಂಟಪದ ಉತ್ತರ ಗೋಡೆಯ ಪಕ್ಕದಲ್ಲಿ ಕಂಡುಬರುತ್ತದೆ. ಕರ್ನಾಟಕ ಮತ್ತು ಆಂಧ್ರದ ವಿಜಯನಗರ ಶೈಲಿಯ ಯಾವುದೇ ದೇವಾಲಯದಲ್ಲಿ ಈ ರೀತಿಯ ದೇವಕೋಷ್ಠ ಕಂಡುಬರುವುದಿಲ್ಲ. ಈ ದೇವಕೋಷ್ಠವು ಇತರ ದೇವಾಲಯಗಳ ದೇವಕೋಷ್ಠದಂತಿರದೆ, ಸ್ವತಂತ್ರವಾದ ಕಿರಿಯ ಗಾತ್ರದ ದೇವಾಲಯದಂತಿದೆ. ಇದು ದೇವಾಲಯದ ಅತ್ಯಂತ ಆಕರ್ಷಕ ಭಾಗವಾಗಿದೆ. ಇದರ ಗೋಡೆಗಳು, ಅಧಿಷ್ಠಾನ,

ಅರೆಗಂಬ, ಕೋಷ್ಠಗಳಿಂದ ಅಲಂಕೃತವಾಗಿದೆ. ದ್ವಾರಪಾಲಕರ ರೇಖಾ ಚಿತ್ರವನ್ನು ಇದರ ದ್ವಾರ ಬಂಧದಲ್ಲಿ ಬಿಡಿಸಲಾಗಿದೆ. ಡಾ. ಎಸ್.ಎನ್. ಶಿವರುದ್ರಸ್ವಾಮಿಯವರು. ಈ ದೇವಕೋಷ್ಠಕ ಮೇಲೆ ಅದರ ಆಕಾರಕ್ಕೆ ತಕ್ಕುದಾದ ಕಿರಿಯ ಗಾರೆ ಮತ್ತು ಇಟ್ಟಿಗೆಗಳಿಂದ ಮಾಡಿದ ಶಿಖರವೊಂದಿತ್ತೆಂದು, ಸುಂದರವಾದ ರಚನೆಯಾಗಿದ್ದ ಇದನ್ನು ೧೯೯೯ರಲ್ಲಿ ದುಷ್ಕರ್ಮಿಗಳು ನಾಶಪಡಿಸಿದರೆಂದು, ಅದರಿಂದಾಗಿ ಈ ಸುಂದರ ಕಲಾಕೃತಿ ಶಾಶ್ವತವಾಗಿ ನಾಶವಾಗಿ ಹೋಯಿತೆಂದು ಅಭಿಪ್ರಾಯ ಪಟ್ಟಿರುವರು.[೩೮] ದೇವಾಲಯದ ಮೂರು ಗರ್ಭಗುಡಿಗಳ ಮೇಲೆ ಮೂರು ರೀತಿಯ ಶಿಖರಗಳಿವೆ. ಈ ಮೂರು ಬೇರೆ ಬೇರೆ ತೆರನಾಗಿರುವುದು ಕಂಡುಬರುತ್ತದೆ. ಶೈವದೇವತೆಗಳನ್ನು ಈ ಮೂರು ಗರ್ಭಗೃಹಗಳ ದೇವಕೋಷ್ಠದಲ್ಲಿ ಚಿತ್ರಸಲಾಗಿದೆ. ದೇವಾಲಯದ ಪ್ರಾಕಾರವು ನಾಶವಾಗಿದ್ದು, ದೇವಾಲಯದ ಮುಂದೆ ದ್ವಾರಗೋಪುರವಿದೆ. ಜೀರ್ಣಾವಸ್ಥೆಯಲ್ಲಿರುವ ಈ ಗೋಪುರದ ಚೆಲುವು ಇನ್ನೂ ಹಾಗೆಯೇ ಉಳಿದುಬಂದಿದೆ. ದೇವಾಲಯದ ಆವರಣದಲ್ಲಿ ಒಂದು ಕಲ್ಯಾಣಿಯು ಕಂಡು ಬರುತ್ತದೆ. ಅಲ್ಲಿರುವ ಕಂಬಗಳ ಆಧಾರದ ಮೇಲೆ ಕಲ್ಯಾಣಿಗೆ ಸುಂದರ, ಆಕರ್ಷಕವಾದ ದ್ವಾರಬಂಧವಿರುವುದು ತಿಳಿದುಬರುತ್ತದೆ.

ಜೀರ್ಣಾವಸ್ಥೆಯಲ್ಲಿರುವ ಶಿವದೇವಾಲಯವು ಮಲ್ಲಿಕಾರ್ಜುನ ದೇವಾಲಯದ ದಕ್ಷಿಣಕ್ಕೆ ಕಂಡುಬರುತ್ತದೆ. ಇದೇ ದೇವೇಶ ದೇವಾಲಯವಾಗಿರಬೇಕೆಂದು ವಿದ್ವಾಂಸರು ಊಹಿಸಿದ್ದಾರೆ. ಈ ದೇವಾಲಯವು ಸರಳ ಸುಂದರವಾಗಿರುವುದು ಕಂಡುಬರುತ್ತದೆ. ಈ ದೇವಾಲಯದಲ್ಲೂ ಯಾವುದೇ ರೀತಿಯ ಪೂಜಾಮೂರ್ತಿಗಳು ಕಂಡುಬರುವುದಿಲ್ಲ. ಈ ದೇವಾಲಯದ ಶಿಖರಗಳು ಸಂಪೂರ್ಣವಾಗಿ ನಾಶವಾಗಿರುವುದು ಕಂಡುಬರುತ್ತದೆ. ಗೋಪಿನಾಥ ದೇವಾಲಯ ಮತ್ತು ಶಿವದೇವಾಲಯಗಳ ನಡುವಿನ ರಥಬೀದಿಯ ದಕ್ಷಿಣಕ್ಕೆ ವೀರಭದ್ರಾಲಯವು ಕಂಡುಬರುತ್ತದೆ. ಈ ಆಲಯವು ಸಂಪೂರ್ಣವಾಗಿ ನಾಶವಾಗಿದ್ದು ಕೇವಲ ಗರ್ಭಗುಡಿ ಮತ್ತು ಭಿನ್ನವಾಗಿರುವ ವೀರಭದ್ರನ ವಿಗ್ರಹ ಕಂಡುಬರುತ್ತದೆ. ಈ ವಿಗ್ರಹ ಉತ್ತಮ ಶಿಲ್ಪ ಕಲಾಕೃತಿಯಾಗಿದೆ. ಈ ವೀರಭದ್ರ ಆಲಯದ ಹಿಂದಿನ ಅವಶೇಷಗಳನ್ನು ಗಮನಿಸಿದರೆ ಅಲ್ಲಿಯೇ ತಿಮ್ಮಾಪುರ ಅಗ್ರಹಾರವಿರುವಂತೆ ಕಂಡುಬರುತ್ತದೆ.

ಗೋಪಾಲಕೃಷ್ಣ ದೇವಾಲಯದ ಪ್ರಕಾರದಲ್ಲಿ ನಿಲ್ಲಿಸಿರುವ ಶಾಸನವು ಊಂಟಲಕ್ಷಣ ಭಟ್ಟರ ಹೆಂಡತಿ ಗೋಪಮ್ಮನು ಶಾಲಿವಾಹನ ಶಕವರ್ಷ ೧೪೭೫ನೆಯ ಆನಂದ, ಕಾರ್ತಿಕ ಶು.೧೩ ಅಂದರೆ ಕ್ರಿಶ ೧೫೫೩ರಲ್ಲಿ ಕಾಶಿವಿಶ್ವನಾಥೇಶ್ವರ ದೇವಾಲಯವನ್ನು ಕಟ್ಟಿಸಿದ ವಿವರವನ್ನು ತಿಳಿಸುತ್ತದೆ. ಬಯಕಾರ ರಾಮಪ್ಪನ ಶಿಷ್ಯೆಯಾದ ಗೋಪಮ್ಮಳು ತನಗೆ ಸಂಗೀತ ಮತ್ತು ಆಗಮ ಶಾಸ್ತ್ರಗಳನ್ನು ಭೋದಿಸಿದ್ದಕ್ಕೆ ಪ್ರತಿಯಾಗಿ ಗುರುಕಾಣಿಕೆಯಾಗಿ ಈ ದೇವಾಲಯವನ್ನು ಕಟ್ಟಿಸಿರಬೇಕೆಂದು

ಊಹಿಸಲಾಗಿದೆ. ಶಿವದೇಗುಲದ ಪೂರ್ವಕ್ಕೆ ಕಂಡುಬರುವ ಅವಶೇಷಗಳಿಂದ ಅದೇ ಕಾಶಿ ವಿಶ್ವನಾಥದೇವರ ದೇವಾಲಯವೆಂದು ಗುರುತಿಸಲಾಗಿದೆ. ಆದರೆ ಇತ್ತೀಚಿಗೆ ಅದರ ಅವಶೇಷಗಳನ್ನು ನಾಶಪಡಿಸಲಾಗಿದೆ.

ಬಯಕಾರ ರಾಮಪ್ಪನು ತನ್ನ ಮಗಳಿಗೆ ಪುಣ್ಯವಾಗಬೇಕೆಂದು ಶಾಲಿವಾಹನ ಶಕ ೧೪೭೮ನೇ ನಳ ಸಂವತ್ಸರದ ವೈಶಾಖ. ಶು.೩ಕ್ಕೆ ಸರಿಯಾದ ಕ್ರಿ.ಶ.೧೨.೪.೧೫೫೬ನೇ ಭಾನುವಾರದಂದು ತನ್ನ ಮಗಳು ಅಚ್ಯುತಮ್ಮನ ಹೆಸರಿನಲ್ಲಿ ಕಟ್ಟಿಸಿದ ಬಾಲಕೃಷ್ಣ ದೇವರಗುಡಿ ಮತ್ತು ಅಚ್ಯುತಂಮಾಪುರ ಗ್ರಾಮದ ಉಲ್ಲೇಖನ ಶಾಸನದಲ್ಲಿ ಕಂಡುಬರುತ್ತದೆ. ಬಾಲಕೃಷ್ಣ ದೇವಾಲಯವು ಶಿಥಿಲಾವಸ್ಥೆಯಲ್ಲಿದ್ದು ದೇವಾಲಯದ ಶಿಖರವು ಸಂಪೂರ್ಣವಾಗಿ ನಾಶವಾಗಿದೆ. ಈ ದೇವಾಲಯವು ಗರ್ಭಗುಡಿ ಮತ್ತು ರಂಗಮಂಟಪವನ್ನು ಹೊಂದಿರುವುದು ಕಂಡುಬರುತ್ತದೆ. ದೇವಾಲಯವು ಸರಳ ಸುಂದರವಾಗಿದ್ದು, ಈ ದೇವಾಲಯವನ್ನು ಸಂರಕ್ಷಿಸುವ ಕಾರ್ಯ ನಡೆಯಬೇಕಾಗಿದೆ. ಇಲ್ಲವಾದಲ್ಲಿ ಈ ದೇವಾಲಯವು ಸಂಪೂರ್ಣವಾಗಿ ನಾಶವಾಗುವ ಸಮಯವು ದೂರವಿಲ್ಲದಂತೆ ಕಂಡುಬರುತ್ತದೆ. ಸ್ಥಳೀಯ ಜನರಿಗೆ ಸ್ಮಾರಕಗಳ ಮಹತ್ವವನ್ನು ಕುರಿತು ತಿಳಿಹೇಳಬೇಕಾಗಿದೆ.

ಬಯಕಾರ ರಾಮಪ್ಪನ ದೊಡ್ಡ ಸಂಸ್ಕೃತ ವಿದ್ವಾಂಸ ವಾಸ್ತುಕಾರ ಮತ್ತು ವಾಗ್ಗೇಯಕಾರನಾಗಿದ್ದನು. ರಾಮಪ್ಪನು ಸಂಸ್ಕೃತದಲ್ಲಿ 'ಸ್ವರಮೇಳ ಕಲಾನಿಧಿ' ಎಂಬ ಸಂಗೀತ ಗ್ರಂಥವನ್ನು ರಚಿಸಿದ್ದಾನೆ. ಕರ್ನಾಟಕ ಸಂಗೀತಕ್ಕೆ ಇದು ವಿಶಿಷ್ಟವಾದ ಕೊಡುಗೆಯಾಗಿದೆ. ರಾಜಕೀಯವಾಗಿಯೂ ಈ ಗ್ರಂಥವು ಕೆಲ ವಿಷಯಗಳನ್ನು ಒಳಗೊಂಡಿದೆ. ಬಯಕಾರ ರಾಮಪ್ಪನು ತನ್ನ ಅರಸ ಅಳಿಯ ರಾಮರಾಯನ ಆದೇಶದಂತೆ ಅವನಿಗಾಗಿ ರತ್ನಕೂಟ ಎಂಬ ಭವ್ಯವಾದ ಅರಮನೆಗಳ ಸಂಕೀರ್ಣವನ್ನು ಕಟ್ಟಿಸಿದನೆಂದು ತನ್ನ ಗ್ರಂಥದಲ್ಲಿ ತಿಳಿಸುತ್ತಾನೆ.[೫೯] ಬಯಕಾರ ರಾಮಪ್ಪನು "ರತ್ನಕೂಟ ಎಣೆಯಿಲ್ಲದ ಚೆಲುವಿನಿಂದ ಕೂಡಿತ್ತು ಹಾಗೂ ಇಂದ್ರನ ಅರಮನೆಯನ್ನು ಮೀರಿಸುವಂತಿತ್ತು. ರಾಮರಾಯ ಇದನ್ನು ನೋಡಿ ಆನಂದದಲ್ಲಿ ತನ್ನನ್ನು ತಾನೆ ಮರೆತ" ಎಂದು ವರ್ಣಿಸುತ್ತಾನೆ. ಈ ಅರಮನೆ ಸಂಕೀರ್ಣ ಇಂದ್ರಭವನ, ಕ್ರೀಡಾಭವನ, ಹಂಸಗಳಿಂದ ಸುತ್ತುವರೆದ ಜಲಭವನ ಮುಂತಾದ ಅರಮನೆಗಳಿಂದ ಕೂಡಿತ್ತು. ರತ್ನಕೂಟ ಎಂದರೆ ರತ್ನಗಳ ಸಮೂಹ ಎಂದರ್ಥ. ಈ ಸಂಕೀರ್ಣವೂ ಸಹ ರತ್ನದಂತಹ ಕಟ್ಟಡಗಳಿಂದ ಕೂಡಿತ್ತು. ವಿಜಯನಗರ ಸಾಮ್ರಾಜ್ಯದ ಅರಮನೆಯ ಪ್ರದೇಶದ ಜನಾನ ಆವರಣಕ್ಕೆ ಈ ವಿವರಣೆಯು ಸ್ಪಷ್ಟವಾಗಿ ಅನ್ವಯವಾಗುತ್ತದೆ. ಕಮಲಮಹಲನ್ನೇ ರತ್ನಕೂಟವೆಂದು ವಿದ್ವಾಂಸರೊಬ್ಬರು ಗುರುತಿಸಿದ್ದಾರೆ.[೬೦] ರತ್ನಕೂಟ ಕೇವಲ ಕಮಲಮಹಲ್ ಆಗಿರದೆ, ಜನಾನ ಆವರಣದ ಎಲ್ಲಾ ಕಟ್ಟಡಗಳನ್ನು ಒಳಗೊಂಡಿತ್ತು.

ರಾಮಚಂದ್ರ ದೇವಾಲಯದಿಂದ ಶೃಂಗಾರ ಹೆಬ್ಬಾಗಿಲವರೆಗೆ ಸಿಗುವ ವಿವಿಧ ಶಾಸನಗಳು ವಿವಿಧ ಕಟ್ಟಡಗಳ ನಿರ್ಮಾಣದ ಬಗ್ಗೆ ಮತ್ತು ಅಲ್ಲಿರುವ ಅರಮನೆಗಳ ಬಗ್ಗೆ ಸ್ಥೂಲವಾಗಿ ತಿಳಿಸುತ್ತವೆ. ಇದರಿಂದ ಜನಾನ ಆವರಣ ೧೫೪೨ರ ಪೂರ್ವದಲ್ಲಿ ನಿರ್ಮಾಣವಾಗಿಲ್ಲದಿರುವುದು ತಿಳಿಯುತ್ತದೆ. ಅಲ್ಲದೆ 'ಸ್ವರಮೇಳಕಲಾನಿಧಿ' ಸಂಗೀತ ಕಾವ್ಯದ ಸಮಾಪ್ತ ಪದ್ಯದಲ್ಲಿ ರಾಮಾಮಾತ್ಯನು ತನ್ನ ಗ್ರಂಥವನ್ನು ೧೫೫೦ರ ಆಗಸ್ಟ ೨೧ರಂದು ಪೂರ್ಣಗೊಳಿಸಿದನೆಂದು ತಿಳಿಸುತ್ತಾನೆ.

ಜನಾನ ಆವರಣ ಆಯತಾಕಾರದ ಎತ್ತರದ ಪ್ರಾಕಾರದ ಸಂಕೀರ್ಣವಾಗಿದೆ. ಇದರಲ್ಲಿ ಮುಖ್ಯ ಅರಮನೆಯ ಎತ್ತರದ ಅಧಿಷ್ಠಾನ ಸುಭದ್ರ ಕೋಣೆ, ಜಲಭವನದ ಅಧಿಷ್ಠಾನ, ಕಮಲಮಹಲ್, ಕಾವಲುಗೋಪುರಗಳು ಇವೆ.[೪] ಅಲ್ಲದೆ ಬಂಡೆಯ ಮೇಲೆ ನಿರ್ಮಿಸಿದ ಅರಮನೆಯ ಅವಶೇಷಗಳು ಉಳಿದಿವೆ. ಅರಮನೆ ದೊಡ್ಡದಾದ ಹಾಗೂ ವಿಸ್ತೃತವಾದ ರಚನೆಯಾಗಿದೆ. ಇದು ಒಂದರ ಮೇಲೊಂದರಂತೆ ಮೂರು ಅಧಿಷ್ಠಾನಗಳನ್ನು ಹೊಂದಿದೆ. ಈ ಅರಮನೆಯ ಮುಂಭಾಗದಲ್ಲಿ ಸೋಪಾನಗಳಿದ್ದು, ಎರಡನೇ ಅಧಿಷ್ಠಾನಕ್ಕೆ ಪ್ರವೇಶವನ್ನು ಕಲ್ಪಿಸುತ್ತವೆ. ಎರಡನೆಯ ಅಧಿಷ್ಠಾನದಿಂದ ಮೂರನೆ ಅಧಿಷ್ಠಾನಕ್ಕೆ ಹೋಗಲು ಸೋಪಾನಗಳಿವೆ. ಮಧ್ಯಮ ಗಾತ್ರದ ನಾಲ್ಕು ಕೊಠಡಿಗಳು ಮೂರನೇ ಅಧಿಷ್ಠಾನದಲ್ಲಿದ್ದು, ಅಧಿಷ್ಠಾನದ ಪಟ್ಟಿಕೆಗಳು ಸುಂದರವಾದ ಕೆತ್ತನೆಗಳಿಂದ ಕೂಡಿವೆ. ಹಂಸ ಮತ್ತು ಗಜ, ಕಮಲದಳ, ಸುರಳಿಯಲಂಕಾರ ಕೆತ್ತನೆಗಳು ಇವುಗಳ ಮೇಲಿವೆ.

ಉತ್ತಮ ಸ್ಥಿತಿಯಲ್ಲಿರುವ ಆಯತಾಕಾರದ ಕಟ್ಟಡ ಜನಾನ ಸಂಕೀರ್ಣದ ವಾಯುವ್ಯದಲ್ಲಿದೆ. ಇದರ ಹೊರಗೋಡೆಯು ಸರಳವಾಗಿದ್ದು ಇದಕ್ಕೆ ಒಂದೇ ಬಾಗಿಲಿರುವುದು. ಗೋಡೆಗಳ ಎತ್ತರದ ಭಾಗದಲ್ಲಿ ವಾತಾಯನ ಕಿಂಡಿಗಳಿದ್ದು ಜಂತಿಗಳಲ್ಲಿ ನಾಗರ ಹೆಡೆಗಳ ಅಲಂಕರಣೆ ಇರುವುದು ಇದು ರಾಜದ ಖಜಾನೆ ಆಗಿತ್ತು ಎಂಬುದನ್ನು ಸೂಚಿಸುತ್ತವೆ. ವಿದೇಶಿ ಪ್ರವಾಸಿಗರು ವಿಜಯನಗರದ ಅರಸರು ಖಜಾನೆಯನ್ನು ತಮ್ಮ ಅರಮನೆಯಲ್ಲೇ ನಿರ್ಮಿಸಿಕೊಂಡಿದ್ದರೆಂರು ತಿಳಿಸಿರುತ್ತಾರೆ.[೨] ಸರ್ಪಗಳು ರಕ್ಷಿತ ಸಂಪತ್ತನ್ನು ರಕ್ಷಣೆ ಮಾಡುತ್ತವೆ ಎನ್ನುವ ಪರಿಕಲ್ಪನೆ ನಮ್ಮ ನಾಡಿನಲ್ಲಿದೆ.

ಜಲಭವನ ರತ್ನಕೂಟ ಸಂಕೀರ್ಣದ ಆಗ್ನೇಯದಲ್ಲಿ ಆಯತಾಕಾರದ ಕೃತಕ ಕೊಳದ ನಡುವೆ ಪೂರ್ವಾಭಿಮುಖವಾಗಿದೆ. ಕೊಳದ ನೀರನ್ನು ಹಿಡಿದಿಡಲು ಭವನದ ಅಧಿಷ್ಠಾನ ಮತ್ತು ಕೊಳದ ನೆಲ ಅದರ ಪಾರ್ಶ್ವಗಳನ್ನು ಗಾರೆಯಿಂದ ಮುಚ್ಚಲಾಗಿದೆ. ಮೀನು, ಮೊಸಳೆ, ದೋಣಿಗಳಿಂದ ಅಧಿಷ್ಠಾನದ ಪಟ್ಟಿಕೆಗಳನ್ನು ಚಿತ್ರಿಸಲಾಗಿದೆ. ಬಯಕಾರ ರಾಮಪ್ಪನು ಹಂಸಗಳಿಂದ ಸುತ್ತುವರೆದ ಭವನವನ್ನು ರತ್ನಕೂಟದಲ್ಲಿ ರಚಿಸಿದೆನೆಂದು ತಿಳಿಸುತ್ತಾನೆ. ಇದು ಸೊಬಗಿನ ಜಲಾವೃತ ಅರಮನೆ. ಬಯಕಾರ ರಾಮಪ್ಪ ಸೂಚಿಸುತ್ತಿರುವುದು ಕಮಲಮಹಲ್‌ನ ಅಥವಾ ಇಂದ್ರ ಸಭಾಂಗಣದ ಪಶ್ಚಿಮಕ್ಕೆ ಇರುವ ಜಲಭವನವನ್ನೇ ಆಗಿದೆ.

ಕಮಲ್‌ಮಹಲ್ ಪ್ರತಿ ಪಾರ್ಶ್ವದಲ್ಲಿ ಎರಡೆರಡು ಮುಂಚಾಚುಗಳ ವಿನ್ಯಾಸ ಅಥವಾ ಸರ್ವತೋಭದ್ರ ಅಧಿಷ್ಠಾನದ ಮೇಲೆ ನಿರ್ಮಾಣವಾಗಿದೆ. ಇದರ ಹಿಂಚಾಚು ಮತ್ತು ಮುಂಚಾಚುಗಳು ಅಷ್ಟದಳಗಳ ಪದ್ಮದಂತೆ ಕಾಣುತ್ತದೆ.[೪೩] ಇದರ ಅಧಿಷ್ಠಾನವು ಉಪಾನ, ಕಂಠ, ಕುಮುದ, ಕಪೋತಗಳಿಂದ ಅಲಂಕೃತವಾಗಿದೆ. ಅಧಿಷ್ಠಾನದ ಮೇಲಿನ ಕಂಬಗಳು ತಳದಲ್ಲಿ ಚೌಕಾಕಾರವಾಗಿದ್ದು, ಮೇಲೆ ಚೂಪಾದ ಕಮಾನುಗಳಾಗಿದೆ. ಈ ಕಮಾನುಗಳು ಕಮಲದಳ, ಹಂಸಪಟ್ಟಿಕೆ, ಸುರಳಿಯಾಲಂಕಾರಗಳಿಂದ ಅಲಂಕೃತವಾಗಿವೆ. ಕಮಾನುಗಳ ನಡುವೆ ವೃತ್ತಾಕಾರದ ಜ್ಯಾಮಿತಿ ವಿನ್ಯಾಸಗಳಿವೆ. ಕಮಲಮಹಲ್‌ನ ಕಂಬಗಳು ಎರಡು ಮುಂಚಾಚುಗಳನ್ನು ಹೊಂದಿವೆ. ಅವುಗಳಿಂದ ಉಂಟಾದ ಕೋನಗಳಲ್ಲಿ ತಾಮ್ರದ ಕೊಳವೆಗಳು ಕಟ್ಟಡದ ಮೇಲ್ತುದಿಯಿಂದ ಕೆಳ ಅಂತಸ್ತಿನವರೆಗೂ ಹಾಯ್ದುಬಂದಿವೆ. ಕಟ್ಟಡವನ್ನು ಇವುಗಳಲ್ಲಿ ನೀರು ತುಂಬಿ ತಂಪಾಗಿಡಲಾಗುತ್ತಿತ್ತು.

ಕಮಲ್‌ಮಹಲ್ ಎಂದು ಕರೆಯುವ ಕಟ್ಟಡವು ಅತಿ ಚೆಲುವಿನ ಭವ್ಯವಾದ ರಚನೆಯಾಗಿದೆ. ಇದು ತೆರೆದ ಸಭಾಂಗಣವಾಗಿದೆ. ಇದು ತೆರೆದ ಸಭಾಂಗಣವಾದ್ದರಿಂದ ಸಂಗೀತದ ಆಸ್ವಾದನೆಗೆ ಅನುಕೂಲಕರವಾದ ಕಟ್ಟಡವಾಗಿದೆ. ಬಯಕಾರ ರಾಮಪ್ಪನು ತನ್ನ ಗ್ರಂಥದಲ್ಲಿ ರತ್ನಕೂಟದಲ್ಲಿ ಭವ್ಯವಾದ ಇಂದ್ರ ಸಭಾಂಗಣ ನಿರ್ಮಿಸಿದನೆಂದು ತಿಳಿಸುತ್ತಾನೆ.[೪೪] ಅಂದಿನ ಇಂದ್ರ ಸಭಾಂಗಣವೇ ಇಂದಿನ ಕಮಲ್‌ಮಹಲ್ ಆಗಿದೆ. ಬಯಕಾರ ರಾಮಪ್ಪನು, ಅಳಿಯ ರಾಮರಾಯನು, ಇಂದ್ರ ಸಭಾಂಗಣದಲ್ಲಿ ತನ್ನ ಸಹೋದರರು ಗಣ್ಯರು ಮತ್ತು ತನ್ನನ್ನು ಸೇರಿದಂತೆ ಎಲ್ಲರೊಂದಿಗೆ ಸಂಗೀತ ಸುಧೆಯನ್ನು ಆಸ್ವಾದಿಸುತ್ತಿದ್ದನು ಎಂದು ತಿಳಿಸಿದ್ದಾನೆ.

ಜನಾನ ಸಂಕೀರ್ಣ ಪ್ರಾಕಾರದ ಗೋಡೆಗಳಿಗೆ ಹೊಂದಿಕೊಂಡಂತೆ ಮೂರು ಕಾವಲು ಗೋಪುರಗಳನ್ನು ನಿರ್ಮಿಸಲಾಗಿದೆ. ರತ್ನಕೂಟ ಕಟ್ಟಡಗಳ ಪಹರೆ ಮತ್ತು ಕಾವಲಿಗಾಗಿ ಇವುಗಳನ್ನು ಮೀಸಲಿಡಲಾಗಿದೆ. ಇವುಗಳಲ್ಲಿ ಒಂದು ಆಗ್ನೇಯ ದಿಕ್ಕಿನಲ್ಲಿ ಮತ್ತೆರಡು ಉತ್ತರದಲ್ಲಿವೆ. ಮುಖ್ಯ ಅರಮನೆಯ ಅಧಿಷ್ಠಾನದಲ್ಲಿ ಎದುರುಗಿರುವ ಗೋಪುರವು ಚೌಚಾಕಾರದ ವಿನ್ಯಾಸದಲ್ಲಿದ್ದು, ಉತ್ತಮ ಸ್ಥಿತಿಯಲ್ಲಿದೆ.

ಆರಂಭಿಕ ಪುರಾತತ್ವ ವಿದ್ವಾಂಸರು ತಮ್ಮ ಅಧಿಕೃತ ಪ್ರವಾಸದ ಮೇರೆಗೆ ಹಂಪೆಗೆ ಭೇಟಿ ನೀಡಿದಾಗ ಅಲ್ಲಿನ ಕಟ್ಟಡಗಳು ಅವಶೇಷಗಳನ್ನು ಪರಿಶೀಲಿಸಿ ತಮ್ಮದೇ ಆದ ಕಲ್ಪನೆಯನ್ನು ರೂಪಿಸಿಕೊಂಡು ಆ ಕಟ್ಟಡಗಳಿಗೆ ಅಪಪ್ರಯೋಗ ಹೆಸರುಗಳನ್ನು ಕೊಟ್ಟಿರುವರು. ಬಯಕಾರ ರಾಮಪ್ಪನು ಈ ಕಟ್ಟಡಗಳ ನಿರ್ಮಾಣ ಕಾರ್ಯದಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದವನು ತನ್ನ ಗ್ರಂಥದ ಜನಾನ ಆವರಣದ ಬಗ್ಗೆ ವಿಸ್ತೃತವಾದ ವಿವರಣೆಯನ್ನು ನೀಡಿರುವನು. ರತ್ನಕೂಟವೇ ವಾಸ್ತವವಾಗಿ ಜನಾನ ಆವರಣವಾಗಿದೆ. ಕಮಲ್‌ಮಹಲ್ ಇಂದ್ರ ಸಭಾಂಗಣವಾಗಿದೆ.

ಬಯಕಾರ ರಾಮಪ್ಪನು ದೇವಾಲಯಗಳನ್ನು ಕಟ್ಟಿಸಿದ್ದಲ್ಲದೆ, ಹಲವು ದೇವಾಲಯಗಳಿಗೆ ದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಇವನು ಅಚ್ಯುತರಾಯನ ಪಾರುಪತ್ಯಗಾರನಾಗಿದ್ದಾಗ ಹಾಗೂ ಬೂದಿಹಾಳು ಸೀಮೆಯ ಮಾಗಾಣಿಕಾರನಾಗಿದ್ದಾಗ ಜನತೆಯಿಂದ ಬರಬೇಕಾಗಿದ್ದ ಮದುವೆ ಸುಂಕ ಮತ್ತು ಇತರೆ ಸುಂಕಗಳನ್ನು ಶಿವರಾತ್ರಿಯ ಶುಭಮಹೋತ್ಸವದಂದು ಕ್ರಿ.ಶ. ೧೫೩೫ರಲ್ಲಿ ಮನ್ನಾ ಮಾಡಿದನು. ತನ್ನ ಚಿಕ್ಕಪ್ಪ ಬಾಚರಸಯ್ಯನ ಜೊತೆಗೂಡಿ ಚಕ್ರವರ್ತಿ ಅಚ್ಯುತರಾಯನ ಮಗ ಚಿಕ್ಕವೆಂಕಟಾದ್ರಿಗೆ ಶುಭವಾಗಲೆಂದು ತಿರುಮಲ ದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಿದ್ದನು. ಬಯಕಾರ ರಾಮಪ್ಪನು ತನ್ನ ಕುಟುಂಬದ ಇತರ ಸದಸ್ಯರಂತೆ ತಿರುಮಲ–ತಿರುಪತಿ ದೇವಾಲಯಗಳ ಅನನ್ಯ ಭಕ್ತನಾಗಿದ್ದನು. ಇವನ ತಂದೆ ತಿಮ್ಮರಸಯ್ಯನು ಕೊಂಡವೀಡು ಸೀಮೆಗೆ ಸೇರಿದ ಮೂರು ಗ್ರಾಮಗಳನ್ನು ತಿರುಪತಿಯ ಗೋವಿಂದರಾಜಸ್ವಾಮಿಯ ಅಭಿಷೇಕಕ್ಕಾಗಿ ದಾನವನ್ನು ನೀಡಿದ್ದನು. ರಾಮಪ್ಪನು ತನ್ನ ತಂದೆಯ ದಾನವನ್ನು ನವೀಕರಿಸಿದ್ದಲ್ಲದೇ, ಇನ್ನೂ ಹಲವಾರು ಗ್ರಾಮಗಳನ್ನು ಗೋವಿಂದರಾಜಸ್ವಾಮಿಗೂ, ಆ ದೇಗುಲದ ಆವರಣದಲ್ಲಿರುವ ಪರಿವಾರ ದೇವತೆಗಳ ಪೂಜೆಗಾಗಿ ಕ್ರಿ.ಶ. ೧೫೪೪ರಲ್ಲಿ ಬಾಚರಸಯ್ಯನ ಮಗ ಕೃಷ್ಣನಿಗೆ ಪುಣ್ಯವಾಗಬೇಕೆಂದು ನೀಡಿದನು. ಇದರ ಪೂಜೆಯಿಂದ ಬರುವ ಪ್ರಸಾದದ ಒಂದು ಭಾಗವನ್ನು ಅದೇ ದೇಗುಲದ ಸ್ಥಾನಿಕರಾದ ಕಾಳಿದಾಸನ ಶಾಕುಂತಲ ನಾಟಕಕ್ಕೆ ಭಾಷ್ಯವನ್ನು ಬರೆದು ಖ್ಯಾತರಾದ ವಿದ್ವಾಂಸ ಉದಯಗಿರಿ ಶ್ರೀನಿವಾಸ ಭಟ್ಟರ ಮಗ ಶ್ರೀನಿವಾಸ ಭಟ್ಟರಿಗೆ ನೀಡಿದನು. ಬಯಕಾರ ರಾಮಪ್ಪನು ಬೂದಿಹಾಳು ಸೀಮೆಯ ಮಾಗಾಣಿಕಾರನಾಗಿದ್ದಾಗ ಕ್ರಿ.ಶ. ೧೫೩೫ರಲ್ಲಿ ಇವನ ಅಧಿಕಾರಿಯೊಬ್ಬ ಕಲ್ಲುಕೆರೆ ಗ್ರಾಮವನ್ನು ದೇವಾಲಯವೊಂದಕ್ಕೆ ದಾನವಾಗಿ ಇವನ ಅಣತಿಯ ಮೇರೆಗೆ ನೀಡಿದನು. ಇವನ ಇನ್ನೊಬ್ಬ ಅಧಿಕಾರಿ ಮಾದಯ್ಯಪ್ಪ ಎಂಬುವವನು ಜನರಿಂದ ಅರಮನೆಗೆ ಸಂದಾಯವಾಗಬೇಕಿದ್ದ ಸುಂಕಗಳನ್ನು ಹದಿನಾಡು ಸೀಮೆಯ ಹಳೆಯ ಮೋಡಹಳ್ಳಿ ಗ್ರಾಮದ ಮಲ್ಲಿಕಾರ್ಜುನ ದೇವರಿಗೆ ದಾನವಾಗಿ ನೀಡಿದನು.

**ಕೆರೆಗಳು, ಬಾವಿಗಳು, ಅಗ್ರಹಾರಗಳು**

ಪಂಚಭೂತಗಳಲ್ಲಿ ನೀರು ಒಂದು. ಭೂಮಿಯ ಮೇಲಿನ ಪ್ರತಿಯೊಂದು ಜೀವರಾಶಿಗೂ ಇದು ಅತ್ಯಂತ ಅವಶ್ಯ. ಪ್ರಾಣಿಶಾಸ್ತ್ರಜ್ಞರ ಅಭಿಪ್ರಾಯದಂತೆ ನಮಗೆ ಇಂದು ಕಂಡುಬರುವ ಅನೇಕ ಜೀವರಾಶಿಗಳು ಪ್ರಮುಖವಾಗಿ ಪ್ರಾಣಿಗಳು ನೀರಿನಿಂದಲೇ ಉಗಮಹೊಂದಿವೆ. ವಿಶ್ವದ ಬಹುತೇಕ ಪಾಲು ನೀರಿನಿಂದ ಆವರಿಸಲ್ಪಟ್ಟಿದೆ. ೧/೩ರಷ್ಟು ಮಾತ್ರ ಭೂಭಾಗವಿದೆ. ಮಾನವನ ದೇಹದಲ್ಲಿ ಸುಮಾರು ೭೦ರಷ್ಟು ನೀರಿನಿಂದ ಕೂಡಿದೆ. ಇಂತಹ ವಸ್ತುವಾದ ನೀರು ಮಾನವನ ದೈನಂದಿನ ಚಟುವಟಿಕೆಗಳಲ್ಲಿ ಹಾಸುಹೊಕ್ಕಿದೆ.

ಆದಿಮಾನವನ ಎಲ್ಲಾ ಬಗೆಯ ಚಟುವಟಿಕೆಗಳ ಕಾರ್ಯಕ್ಷೇತ್ರವು ಸರೋವರ, ನದಿ, ಕೆರೆ, ತೊರೆಗಳ ಸಮೀಪದಲ್ಲಿಯೇ ಕೇಂದ್ರೀಕೃತವಾಗಿತ್ತು. ಇದಕ್ಕೆ ಪೂರಕವಾಗಿ ನಡೆಸಿದಂತೆ ಅನೇಕ ಸಂಶೋಧನೆಗಳು ವಿಶ್ವಾದ್ಯಾಂತ ನಡೆದಿದ್ದು ಅನೇಕ ಸಾಕ್ಷ್ಯಾಧಾರಗಳು ದೊರೆಕಿವೆ. ಇದರಿಂದ ನೀರು ಮಾನವನಿಗೆ ಎಷ್ಟು ಉಪಯೋಗವೆಂಬುದು ತಿಳಿದುಬರುತ್ತದೆ. ಮೊದಲಿಗೆ ಮಾನವನು ವ್ಯವಸಾಯವನ್ನು ಪ್ರಾರಂಭಿಸಿದಾಗ ಮಳೆಯನ್ನೇ ನಂಬಿದ್ದನು. ಅದಕ್ಕಾಗಿ ವಿಫುಲವಾಗಿ ನೀರು ಸಿಗುವ ಜಾಗವಾಗಿದ್ದ ನದಿಯನ್ನು ಆಶ್ರಯಿಸಿದ್ದನು. ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಗಳು ಮತ್ತು ಸಕಾಲದ ಮಳೆಯ ವೈಫಲ್ಯತೆ ಅವನನ್ನು ಆಗಿಂದ್ದಾಗ್ಗೆ ಕಷ್ಟಕ್ಕೆ ಒಳಪಡಿಸುತ್ತಿತ್ತು. ಇದರಿಂದಾಗಿ ಅವನು ನೀರನ್ನು ಸಂಗ್ರಹಿಸಿ, ತನ್ನ ಹತೋಟಿಯಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲಿ ತೊಡಗಿದನು. ವರ್ಷದಲ್ಲಿ ಕೆಲವು ತಿಂಗಳುಗಳ ಕಾಲ ಮಾತ್ರ ಮಳೆಗಾಲ ಇರುತ್ತಿತ್ತು. ಸಾವಿರ ಎಕರೆಗಳಷ್ಟು ಭೂಪ್ರದೇಶವು ನದಿಯಿಂದ ವ್ಯವಸಾಯಕ್ಕೆ ಒಳಪಟ್ಟಿದ್ದು, ಆದುದರಿಂದ ಅವನು ಎಲ್ಲಾ ಮೂಲಗಳಿಂದ ನೀರನ್ನು ಸಂಗ್ರಹಿಸಿಟ್ಟುಕೊಂಡು, ಅಗತ್ಯವಿದ್ದಾಗ ಅತ್ಯಂತ ಸಮರ್ಪಕವಾಗಿ ಬಳಸಿಕೊಳ್ಳತೊಡಗಿದನು. ಇಂತಹ ಕೃತಕ ಸಂಗ್ರಾಹಕಗಳೇ ಕೆರೆಗಳು ಮತ್ತು ಕುಂಟೆಗಳು, ಕೆರೆಗಳ ನಿರ್ಮಾಣದಿಂದ ಮಾನವ ತನಗೆ ಬೇಕೆಂದಾಗ ನೀರನ್ನು ಉಪಯೋಗಿಸಿಕೊಂಡು ವ್ಯವಸಾಯ ಮಾಡತೊಡಗಿದನು.

ಈಜಿಪ್ಟ್ ದೇಶದಲ್ಲಿ ದೊರಕಿರುವ ರೇಖಾಚಿತ್ರಗಳಲ್ಲಿ ಮಾನವನು ನೀರನ್ನು ಸಂಗ್ರಹಿಸಿ ಬಳಸಿಕೊಂಡಿರುವುದನ್ನು ಚಿತ್ರಿಸಲಾಗಿದೆ. ಇದರಿಂದಾಗಿ ಆ ದೇಶದಲ್ಲಿಯೇ ಮೊಟ್ಟ ಮೊದಲಿಗೆ ಕೆರೆ ನೀರಾವರಿ ಪದ್ಧತಿಯನ್ನು ಬಳಕೆಗೆ ತಂದಿರಬೇಕೆಂದು ಪುರಾತತ್ವಜ್ಞರು ಅಭಿಪ್ರಾಯಪಡುತ್ತಾರೆ. ಭಾರತವು ಈಜಿಪ್ಟ್‌ನಷ್ಟೇ ಪ್ರಾಚೀನತೆಯನ್ನು ಹೊಂದಿರುವ ದೇಶವಾಗಿದೆ. ಈಜಿಪ್ಟ್‌ಗೆ ಸಮಕಾಲೀನವಾಗಿ ಕೃಷಿಕ ಜೀವನದ ಕುರುಹುಗಳನ್ನು ನೋಡಬಹುದಾಗಿದೆ. ಸಿಂಧೂ ನದಿಕೊಳ್ಳದ ಸಂಸ್ಕೃತಿಯ ಜನರು ಮಾಡಿಕೊಂಡಿರುವ ನೀರಿನ ವ್ಯವಸ್ಥೆಯ ಶ್ಲಾಘನೀಯವಾಗಿದೆ. ಈ ಸಂಸ್ಕೃತಿಯ ಅನೇಕ ನೆಲೆಗಳಲ್ಲಿ ಇಂತಹ ನೀರಾವರಿ ಕುರುಹುಗಳು ದೊರಕಿವೆ. ಸಿಂಧೂ ಕೊಳ್ಳದಲ್ಲಿ ಅತ್ಯಂತ ಸಮರ್ಪಕವಾದ ನೀರು ಸರಬರಾಜು ಪದ್ಧತಿಯು ಇತ್ತೆಂಬುದು ಗುಜರಾತಿನಲ್ಲಿರುವ ದೋಲವೀರಾ ಎಂಬ ಗ್ರಾಮದಲ್ಲಿ ಕೈಗೊಂಡ ಉತ್ಖನನದಿಂದ ತಿಳಿದುಬಂದಿದೆ. ಇದು ಸಹ ಸಿಂಧೂ ನದಿಕೊಳ್ಳದ ಸಂಸ್ಕೃತಿಯ ಒಂದು ನೆಲೆಯಾಗಿದೆ.[೪೬]

ಭಾರತದ ಪ್ರಾಚೀನ ಇತಿಹಾಸದಲ್ಲಿ ಅನೇಕ ಸಾಹಿತ್ಯ ಕೃತಿಗಳು ರಚಿತವಾದವು. ಅವುಗಳು ಧಾರ್ಮಿಕ ಪುರಾಣ, ಸಾಮಾಜಿಕ, ಔಪಯೋಗಿಕ ಮುಂತಾದ ಶಾಸ್ತ್ರಗ್ರಂಥಗಳು. ಈ ಕೃತಿಗಳಲ್ಲದೆ ವಿದೇಶಿಯರಿಂದ ರಚಿತವಾದ ವಿದೇಶಿ ಪ್ರವಾಸಿ ಬರಹಗಳು ಪ್ರಾಚೀನ ಭಾರತದಲ್ಲಿ ಬಳಕೆಯಲ್ಲಿದ್ದ ವ್ಯವಸಾಯ ಪದ್ಧತಿ, ನೀರಾವರಿ ವ್ಯವಸ್ಥೆ ಮುಂತಾದವುಗಳ ಬಗ್ಗೆ ತಿಳಿಸುತ್ತವೆ. ಇವುಗಳು ಕೆರೆಗಳ

ನಿರ್ಮಾಣ, ಅವುಗಳ ರಕ್ಷಣೆ, ಪೋಷಣೆ ಮುಂತಾದ ವಿಷಯಗಳನ್ನು ಕುರಿತು ಚರ್ಚಿಸಿವೆ. ವೇದಗಳು ಭಾರತದ ಅತ್ಯಂತ ಪ್ರಾಚೀನ ಸಾಹಿತ್ಯಗಳೆನಿಸಿಕೊಂಡಿವೆ. ಇವು ಕೆರೆ ಬೇಸಾಯ ಪದ್ಧತಿಯ ಬಗ್ಗೆ ಉಲ್ಲೇಖವನ್ನು ಹೊಂದಿವೆ. ವೇದಗಳು, ಕೂಪ, ಸರಸ್, ಕೃತ್ರಿಮ ನದಿಯಾ ಎಂದು ಉಲ್ಲೇಖಿಸುತ್ತವೆ.[೪೭] ಕೌಶಿಕ ಸೂತ್ರವು, ಬೋಧಾಯನ ಧರ್ಮ ಸೂತ್ರ, ಧರ್ಮಪದ ಮುಂತಾದ ಧಾರ್ಮಿಕ ಕೃತಿಗಳು ನಾಲೆಗಳ ಬಳಕೆಗಳನ್ನು ಕುರಿತ ಮಾಹಿತಿಯನ್ನು ನೀಡುತ್ತವೆ.[೪೮] ಮನುವಿನಿಂದ ರಚಿತವಾದ ಮನುಧರ್ಮಶಾಸ್ತ್ರವು ಭಾರತದ ಅತ್ಯಂತ ಪ್ರಾಚೀನ ಕೃತಿಗಳಲ್ಲಿ ಒಂದಾಗಿದೆ. ಈ ಕೃತಿಯಲ್ಲಿ ನಾಲೆಗಳನ್ನು ಕುರಿತು ಹೇಳುವಾಗ ಇವಕ್ಕೆ ಯಾರಾದರೂ ಯಾವುದೇ ವಿಧವಾದ ಧಕ್ಕೆಯನ್ನು ಉಂಟು ಮಾಡಿದಲ್ಲಿ ಅಂತವರಿಗೆ ಮರಣ ದಂಡನೆಯೇ ಶಿಕ್ಷೆ ಎಂದು ಬರೆದಿದ್ದಾನೆ. ಇದರಿಂದ ಪ್ರಾಚೀನ ಭಾರತದಲ್ಲಿ ಕೃಷಿಗೆ ಮತ್ತು ನೀರಾವರಿ ವ್ಯವಸ್ಥೆಗೆ ಎಷ್ಟರ ಮಟ್ಟಿನ ಮಹತ್ವವನ್ನು ನೀಡಲಾಗಿತ್ತು ಎಂಬುದು ತಿಳಿಯುತ್ತದೆ.

ರಾಮಾಯಣ ಮತ್ತು ಮಹಾಭಾರತ ಭಾರತದ ಎರಡು ಮಹಾಕಾವ್ಯಗಳಾಗಿವೆ. ಮಹಾಭಾರತದ ಅನುಶಾಸನಿಕ ಪರ್ವವು ಮಹಾರಾಜನಾದಂತವನು ಕೈಗೊಳ್ಳಬೇಕಾದ ಪ್ರಜಾಹಿತಾತ್ಮಕ ಕಾರ್ಯಗಳಲ್ಲಿ ಕೆರೆಗಳ ನಿರ್ಮಾಣವೂ ಒಂದು ಎಂದು ತಿಳಿಸುತ್ತದೆ. ಹಾಗೂ ನಾರದನು ಧರ್ಮರಾಜನಿಗೆ ಎಚ್ಚರಿಸಿ 'ಮಳೆಯನ್ನೇ ನೆಚ್ಚಿಕೊಂಡು ಬೇಸಾಯಕ್ಕೆ ತೊಡಗಬಾರದೆಂತಲೂ, ಕೆರೆ ಮತ್ತು ಸರೋವರಗಳನ್ನು ನಿರ್ಮಿಸಿಕೊಂಡು ಬೇಸಾಯಕ್ಕೆ ತೊಡಗಬೇಕು ಎನ್ನುತ್ತಾನೆ.[೪೯] ಕೌಟಿಲ್ಯನ ಅರ್ಥಶಾಸ್ತ್ರವು ಅಂದು ಪ್ರಚಲಿತದಲ್ಲಿದ್ದ ವಿವಿಧ ಬೇಸಾಯ ಪದ್ಧತಿ, ಮಾನವನ ಆಹಾರ ಪದ್ಧತಿ, ವಿವಿಧ ಪ್ರಕಾರಗಳ ಸಸ್ಯ ಆಹಾರಕ್ಕೆ ಯೋಗ್ಯವಾದ ಸಸ್ಯ, ಕೃತಕ ನೀರಾವರಿ ಪದ್ಧತಿ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ.[೫೦] ಅಲ್ಲದೆ ಈ ಕೃತಿಯು ರಾಜ್ಯದಲ್ಲಿ ರಾಜನು ಹೊಸ ಗ್ರಾಮವನ್ನು ಸ್ಥಾಪಿಸಿದಾಗ ಆ ಗ್ರಾಮದಲ್ಲಿ ಕೆರೆ ಇರಬೇಕೆಂದೂ ಆ ಕೆರೆಯ ನೀರು ಕುಡಿಯುವುದಕ್ಕೆ ಮತ್ತು ಬೇಸಾಯಕ್ಕೆ ಉಪಯೋಗಿಸಬೇಕೆಂದೂ ಮತ್ತು ಆ ಕೆರೆಯ ನಿರ್ಮಾಣ ಕಾರ್ಯದಲ್ಲಿ ಸಹಕರಿಸುತ್ತಿದ್ದ ಪ್ರಜೆಗಳಿಗೆ ವಿನಾಯಿತಿಯನ್ನು ನೀಡಬೇಕೆಂದು ಸಹ ತಿಳಿಸುತ್ತದೆ ಮತ್ತು ಕೃಷಿ, ನೀರಾವರಿ ಮುಂತಾದವುಗಳು ಜನ ಹಿತಾತ್ಮಕ ಕಾರ್ಯವಾಗಿದ್ದು ಅವುಗಳ ರಕ್ಷಣೆಯ ಭಾದ್ಯತೆ ರಾಜ ಮತ್ತು ಪ್ರಜೆಗಳಿಗೆ ಇತ್ತೆಂದು ವಿವರಿಸುತ್ತದೆ. ಯಾರಾದರೂ ಕೆರೆ, ಕಟ್ಟೆಯನ್ನು ನಾಶಮಾಡಿದಲ್ಲಿ ಅಂತಹವರನ್ನು ನೀರಿನಲ್ಲಿ ಮುಳುಗಿಸಿ ಸಾಯಿಸಬೇಕೆಂದು ಮತ್ತು ಪುರಾತನ ಕೆರೆಯನ್ನು ನಿರ್ಲಕ್ಷಿಸಿ ಹಾನಿ ಮಾಡಿದವರಿಗೆ ದಂಡ ಹಾಕುವ ಮೂಲಕ ಶಿಕ್ಷೆ ನೀಡಬೇಕೆಂದು ತಿಳಿಸುತ್ತದೆ.[೫೧]

ಕ್ರಿ.ಪೂ. ೪ನೆಯ ಶತಮಾನದಲ್ಲಿ ಚಂದ್ರಗುಪ್ತ ಮೌರ್ಯನ ಆಸ್ಥಾನಕ್ಕೆ ಗ್ರೀಕ್ ದೇಶದಿಂದ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸನು "ಚಂದ್ರಗುಪ್ತನ ಆಳ್ವಿಕೆಯ ಕಾಲದಲ್ಲಿ ಅನೇಕ

ಅಧಿಕಾರಿಗಳಿದ್ದು, ಅವರುಗಳು ಜಮೀನನ್ನು ಅಳೆದು ಕೆರೆಯ ನೀರನ್ನು ಸಮರ್ಪಕವಾಗಿ ವಿತರಿಸುವುದು ಮತ್ತು ನಾಲೆಗಳ ತೂಬುಗಳ ದುರಸ್ಥಿ ಮಾಡಿ ಸುಸ್ಥಿತಿಯಲ್ಲಿ ಇರುವಂತೆ ನೋಡಿಕೊಳ್ಳುತ್ತಿದ್ದರೆಂದು ಬರೆದಿದ್ದಾನೆ. ಅಲ್ಲದೆ ನೀರಿನ ವಿತರಣೆಯಲ್ಲಿ ಯಾವ ಲೋಪವೂ ಬರದಂತೆ ಎಲ್ಲರಿಗೂ ಸಮ ಪಾಲಾಗಿ ಹಂಚುತ್ತಿದ್ದರೆಂದು ತಿಳಿಸಿರುವನು.[೫೨] ನಾಮಲಿಂಗನುಶಾಸನ ಅಥವಾ ಅಮರಕೋಶವು ಎರಡು ಪ್ರಕಾರದ ಸಾಗುವಳಿ ಭೂಮಿಯನ್ನು ಕುರಿತು ಉಲ್ಲೇಖಿಸುತ್ತದೆ. ಮೊದಲನೆಯ ಪ್ರಕಾರದಲ್ಲಿ ಮಳೆಯ ನೀರನ್ನು ಅವಲಂಬಿಸಿ ಕೃಷಿ ಮಾಡುವ ಪದ್ಧತಿಗೆ ದೇವ ಮಾತ್ರಕವೆಂದು, ನದಿಯ ನೀರನ್ನು ಅವಲಂಬಿಸಿ ಕೃಷಿ ಮಾಡುವುದು ನದಿಮಾತ್ರಕವೆಂದು ತಿಳಿಸುತ್ತದೆ.[೫೩]

ಕರ್ನಾಟಕದ ಕೆಲವು ಪ್ರಮುಖ ರಾಜಮನೆತನಗಳಾದ ಕದಂಬರು, ಗಂಗರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು ಕರ್ನಾಟಕದಲ್ಲಿ ಅನೇಕ ಕೆರೆ, ಕಾಲುವೆ, ಅಣೆಕಟ್ಟುಗಳನ್ನು ನಿರ್ಮಿಸಿರುವುದು ಕಂಡುಬರುತ್ತದೆ. ಕುಡಿಯುವ ನೀರಿನ ಸೌಲಭ್ಯದ ಜೊತೆಗೆ ಬೇಸಾಯಕ್ಕೂ ಈ ಕಾರ್ಯಗಳು ಉಪಯೋಗಕರವಾಗಿದ್ದವು. ಕರ್ನಾಟಕದ ಕೆರೆಯ ಬಗೆಗೆ ಮೊಟ್ಟ ಮೊದಲ ಬಾರಿಗೆ ಮಲುಮಾವಿನ ಮೇಕೆ ದೋಣ ಶಾಸನವು ಉಲ್ಲೇಖಿಸುತ್ತದೆ. ಅಂತೆಯೇ ತಾಳಗುಂದದಲ್ಲಿ ಲಭ್ಯವಿರುವ ಶಾಂತಿವರ್ಮನ ಶಾಸನವು ಕಾವೇರಿ ಮತ್ತು ಅದರ ಉಪನದಿಗಳಿಗೆ ಅಣೆಕಟ್ಟನ್ನು ನಿರ್ಮಿಸಿದುದಾಗಿ ತಿಳಿಸುತ್ತದೆ.[೫೪] ಚಂದ್ರವಳ್ಳಿ ಸಮೀಪದಲ್ಲಿರುವ ಚಂದ್ರವಳ್ಳಿ ಕೆರೆಯು ಕರ್ನಾಟಕದ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಒಂದಾಗಿದೆ. ಕದಂಬರ ರಾಜನಾದ ಮಯೂರವರ್ಮನು ಈ ಕೆರೆಯನ್ನು ನಿರ್ಮಿಸಿದನೆಂದು ಅವನ ಶಾಸನವು ತಿಳಿಸುತ್ತದೆ.[೫೫]

ಕದಂಬರ ಸಮಕಾಲೀನರಾಗಿದ್ದವರು ಗಂಗವಾಡಿಯ ಗಂಗ ಅರಸರು. ಸುಮಾರು ೫ನೆಯ ಶತಮಾನದಿಂದ ೧೦ನೆಯ ಶತಮಾನದವರೆಗೆ ಕರ್ನಾಟಕದ ಕೆಲವು ಭಾಗಗಳನ್ನು ಆಳಿದರು. ದಕ್ಷಿಣ ಭಾರತದ ಇತಿಹಾಸದಲ್ಲಿ ದೀರ್ಘ ಕಾಲದವರೆಗೆ ಪ್ರಮುಖ ಪಾತ್ರವನ್ನು ವಹಿಸಿದ್ದ ಇವರ ಕಾಲಕ್ಕೆ ಸಂಬಂಧಿಸಿದ ಅನೇಕ ಶಿಲಾಶಾಸನಗಳು, ತಾಮ್ರಶಾಸನಗಳು ಅವರ ರಾಜ್ಯದಲ್ಲಿ ಪ್ರಚಲಿತವಾಗಿದ್ದ ನೀರಾವರಿ ಪದ್ಧತಿಯನ್ನು ಕುರಿತು ಮಾಹಿತಿಗಳನ್ನು ನೀಡುತ್ತವೆ. ಕೆಲವು ಶಾಸನಗಳು ಕೆರೆ, ಮಡುವು, ದೋಣೆ, ಗುಂಡು, ಜಲಾಶಯ, ಕೊಳ ಎಂದು ಉಲ್ಲೇಖಿಸಿ[೫೬] ಕೆರೆಗೆ ಇದ್ದಂತಹ ಪರ್ಯಾಯ ಪದಕೋಶವನ್ನು ನಮ್ಮ ಮುಂದಿಡುತ್ತವೆ. ಅಲ್ಲದೆ ಕೆರೆಯ ಆಕಾರವನ್ನು ಬಾಲಚಂದ್ರರ್ಕ ಕೊಳವೆಂದು, ಅರ್ಧಚಂದ್ರಾಕಾರ ಕೊಳವೆಂದು ಪರಿಚಯಿಸುತ್ತವೆ. ಈ ಶಬ್ದಗಳು ವಕ್ರರೂಪದಲ್ಲಿ ನಿರ್ಮಿಸಲಾದ ಕೆರೆಗಳಿಗೆ ಸಂಬಂಧಿಸಿವೆ.[೫೭]

ಚಾಲುಕ್ಯರು ಮತ್ತು ಹೊಯ್ಸಳರು ಕೂಡ ಕರ್ನಾಟಕದಲ್ಲಿ ಕೆರೆಗಳನ್ನು ನಿರ್ಮಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದರೊಂದಿಗೆ ಪ್ರಜಾಹಿತಾತ್ಮಕ ಚಟುವಟಿಕೆಗಳನ್ನು ಮುಂದುವರೆಸಿದರು.

ಬಾದಾಮಿ, ಕಲ್ಯಾಣ ಮುಂತಾದ ಕಡೆಗಳಲ್ಲಿ ಚಾಲುಕ್ಯರು ನಿರ್ಮಿಸಿದ ಕೆರೆಗಳು ಕಂಡುಬಂದರೆ ಹೊಯ್ಸಳರು ಕಟ್ಟಿಸಿದ ಕೆರೆಗಳು ಕರ್ನಾಟಕದ ದಕ್ಷಿಣ ಭಾಗದ ದೋರಸಮುದ್ರ, ಬೇಲೂರು ಮುಂತಾದ ಕಡೆಗಳಲ್ಲಿ ಕಾಣಬಹುದು. ಚಾಲುಕ್ಯ ರಾಜನಾದ ಮೂರನೆಯ ಸೋಮೇಶ್ವರನು (ಕ್ರಿ.ಶ.೧೧೨೬–೩೮)ರಲ್ಲಿ ರಚಿಸಿದ ಮಾನಸೋಲ್ಲಾಸ ಕೃತಿಯು ಕೆರೆ, ಕುಂಟೆ, ಕೊಳ, ಬಾವಿ ಮುಂತಾದವುಗಳನ್ನು ಹೇಗೆ ನಿರ್ಮಿಸಬಹುದೆಂಬುದನ್ನು ತಿಳಿಸುತ್ತದೆ.[೫೮]

ಕ್ರಿ.ಶ. ೧೦೮೮ರ ಆರನೆಯ ವಿಕ್ರಮಾದಿತ್ಯನ ಕಾಲದ ರಾಯಚೂರು ಜಿಲ್ಲೆಯ ಹುಲಿಗಿಯಲ್ಲಿನ ಶಾಸನದಲ್ಲಿ ದಾನ ಪಡೆದ ಚೌವೇದಿಭಟ್ಟ ನದಿಯ ದಂಡೆಗಳನ್ನು ಸರ್ವೇಕ್ಷಿಸಿದ ವಿವರಗಳನ್ನು ನೀಡುತ್ತದೆ. ಇದರಿಂದ ನದಿಯ ನೀರನ್ನು ಸಮರ್ಥನೀಯವಾಗಿ ಬೇಸಾಯಕ್ಕೆ ಉಪಯೋಗಿಸಬಹುದೆಂದು ಮನವರಿಕೆ ಮಾಡಿಕೊಂಡು, ನದಿಗೆ ಅಣೆಕಟ್ಟನ್ನು ನಿರ್ಮಿಸಿ ಕಾಲುವೆಯನ್ನು ತೋಡಿಸಿದನು.[೫೯] ಈ ಶಾಸನವು ತುಂಗಭದ್ರಾ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಕಟ್ಟೆಯನ್ನು ಕುರಿತು ಹೇಳುವ ಶಾಸನವು ಉನ್ನತ ಮಟ್ಟ ಹಾಗೂ ಕೆಳಮಟ್ಟದ ಕಾಲುವೆಗಳ ತಾಂತ್ರಿಕ ನಿರ್ಮಾಣವನ್ನು ವರ್ಣಿಸಿದೆ. ಇಂದಿನ ತುಂಗಭದ್ರಾ ಆಣೆಕಟ್ಟಿನ ಬಲದಂಡೆಯಲ್ಲಿ ಅದೇ ಮಾದರಿಯ ಕಾಲುವೆಗಳನ್ನು ನಿರ್ಮಿಸಲಾಗಿದೆ. ಒಂದು ಸಾವಿರ ವರ್ಷಗಳ ಹಿಂದೆಯೇ ಈ ತಂತ್ರಜ್ಞಾನವನ್ನು ನಮ್ಮ ಪೂರ್ವಿಕರು ತಿಳಿದಿದ್ದರು ಎಂದು ಕಂಡುಬರುತ್ತದೆ.

ಈ ದೇಶದ ಬಹುಭಾಗದ ಅರಸರಂತೆ ವಿಜಯನಗರದ ಅರಸರೂ ದೇಶದ ಆರ್ಥಿಕ ವಿಕಾಸಕ್ಕೆ ವ್ಯವಸಾಯ ಅನಿವಾರ್ಯ ಎಂಬ ಸಂಗತಿಯನ್ನು ಅರಿತಿದ್ದರು. ಅಲ್ಲದೆ ಇಲ್ಲಿನ ಬಹುಪಾಲು ಜನರ ವೃತ್ತಿಯು ಕೃಷಿಯೇ ಆಗಿತ್ತು. ಭಾರತವು ತನ್ನ ವ್ಯವಸಾಯಕ್ಕೆ ಬಹುಪಾಲು ಅನಿಶ್ಚಿತವಾದ ಮಳೆಯನ್ನೇ ಆಧರಿಸಿತ್ತು. ದಕ್ಷಿಣ ಭಾರತದಲ್ಲಿ ವಾರ್ಷಿಕ ಮಳೆಯ ಸರಾಸರಿ ಎಂದರೆ ೨೦ ರಿಂದ ೩೦ ಇಂಚಿನಷ್ಟು, ಆದರೆ ಇದಕ್ಕೆ ಅಪವಾದವೆಂಬಂತೆ ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಅಪಾರವಾದ ಮಳೆ ಆಗುವುದರಿಂದ ಇಲ್ಲಿಂದ ಪೂರ್ವ ದಿಕ್ಕಿಗೆ ಹರಿದುಬರುವ ನದಿಗಳಲ್ಲಿ ಈ ನೀರು ಹರಿದು ಸಮುದ್ರಕ್ಕೆ ಸೇರುತ್ತಿತ್ತು. ದಕ್ಷಿಣ ಭಾರತದ ಅಪಾರ ನೀರಿನ ಸಂಪನ್ಮೂಲ ಈ ನದಿಗಳಲ್ಲಿಯ ನೀರೇ ಆಗಿತ್ತು. ಇದನ್ನು ಸದುಪಯೋಗ ಮಾಡಿಕೊಳ್ಳಲೇಬೇಕಾದ್ದರಿಂದ ಅರಸರು ಈ ಮೇಲುಜಲ ಮತ್ತು ಅಂತರ್ಜಲವನ್ನು ಉಪಯೋಗಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಹೀಗಾಗಿ ವಿಜಯನಗರದ ಅರಸರು ನೀರಾವರಿಗೆಂದೇ ನದಿ, ಕಾಲುವೆ, ಬಾವಿ, ಹಾಗೂ ಅಂತರ್ಜಲವನ್ನು ಬಳಸಿಕೊಂಡಿರುವುದನ್ನು ಕಾಣುತ್ತೇವೆ.

ವಿಜಯನಗರ ದಕ್ಷಿಣ ಭಾರತದಲ್ಲಿಯೇ ಅತ್ಯಂತ ವಿಶಾಲವಾದ ಸಾಮ್ರಾಜ್ಯವಾಗಿತ್ತು. ಅದರ ಸಂಪನ್ಮೂಲಗಳು ವಿಫುಲವಾಗಿದ್ದವು. ವಿಜಯನಗರದ ಅರಸರು ಭಾರಿ ಜಲಾಶಯಗಳ ಹಾಗೂ

ಅಣೆಕಟ್ಟುಗಳ ನಿರ್ಮಾಣದಲ್ಲಿ ಪಡೆದ ಬಹುಪಾಲು ಯಶಸ್ಸಿಗೆ ಇದೇ ಕಾರಣವಾಗಿರುವುದು. ಮೊದಲನೆಯ ಬುಕ್ಕ ಹಾಗೂ ಕೃಷ್ಣದೇವರಾಯನಂತಹ ದೊರೆಗಳು, ಅವರ ಅನೇಕ ಅಧಿಕಾರಿಗಳು, ಶಿಲ್ಪಿಗಳು ಸಹ ತಮ್ಮ ಪ್ರಜೆಗಳ ಹಿತಕ್ಕಾಗಿ ಅಂಥ ಕಾರ್ಯಗಳಲ್ಲಿ ಆಸಕ್ತಿವಹಿಸಿದ್ದೂ ಕಾರಣವಾಗಿದೆ.

ಕೆರೆ ಕಟ್ಟುವುದು ಬೇಸಾಯಕ್ಕೆ ನೀರಾವರಿ ಸೌಲಭ್ಯಗಳನ್ನೊದಗಿಸುವುದು. ಬಾವಿಗಳನ್ನು ತೋಡಿಸುವುದು ಮುಂತಾದ ಕಾರ್ಯಗಳು ಇಹ ಮತ್ತು ಪರಲೋಕದಲ್ಲಿ ಒಳ್ಳೆಯ ಸದ್ಗತಿಯು ದೊರಕುವುದೆಂಬ ಜನರ ಬಲವಾದ ನಂಬಿಕೆಯೇ ಕರ್ನಾಟಕವನ್ನು ಆಳಿದ ಅನೇಕ ಮನೆತನಗಳ ಅರಸರುಗಳು ಈ ಕೆಲಸವನ್ನು ನಿರಂತರವಾಗಿ ಕೈಗೊಂಡಿರುವುದನ್ನು ಸೂಚಿಸುತ್ತದೆ.

ಕರ್ನಾಟಕದಲ್ಲಿ ಅತ್ಯಧಿಕವಾಗಿ ಕೆರೆಗಳು ನಿರ್ಮಾಣಗೊಂಡುದಕ್ಕೆ ಮುಖ್ಯವಾಗಿ ಕ್ರಿ.ಶ. ೧೦ನೆಯ ಶತಮಾನದ ಹವಾಮಾನಗಳನ್ನು ಪರಿಶೀಲಿಸಿದಾಗ ಕಂಡುಕೊಳ್ಳಬಹುದು. ಇತ್ತೀಚೆಗೆ ನಡೆಸಿದ ವೈಜ್ಞಾನಿಕ ಸಂಶೋಧನೆಗಳಿಂದ ಇಂದಿನ ಹವಾಮಾನವು ಮತ್ತು ಹದಿನೈದನೆಯ ಶತಮಾನದ ಹವಾಮಾನವು ಒಂದೇ ಆಗಿತ್ತೆಂದು ದೃಢಪಟ್ಟಿದೆ.[೫೯] ಹದಿನೈದನೆಯ ಶತಮಾನದ ಹವಾಮಾನವು ಇಂದಿನ ಹವಾಮಾನದಂತೆಯೇ ಇರುವುದರಿಂದ ಬಳ್ಳಾರಿ ಜಿಲ್ಲೆಯನ್ನು ಒಳಗೊಂಡಂತೆ ಉತ್ತರ ಕರ್ನಾಟಕದ ಭಾಗಗಳು ಮಳೆಯನ್ನು ಸಾಕಷ್ಟು ಪಡೆಯುತ್ತಿರಲಿಲ್ಲವೆಂದು ಹೇಳಬಹುದು. ಈ ಕಾರಣದಿಂದಾಗಿ ಕೃತಕ ಜಲ ಸಂಗ್ರಾಹಕಗಳ ಅವಶ್ಯಕತೆಯುಂಟಾಯಿತು. ಮತ್ತು ವಿಜಯನಗರದ ಕಾಲದಲ್ಲಿ ಅಧಿಕವಾಗಿ ಕೆರೆ, ಕುಂಟೆ ಮತ್ತು ಕಾಲುವೆಗಳನ್ನು ನಿರ್ಮಿಸಲಾಯಿತು. ಬೆಳೆಯುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ಆಹಾರವನ್ನು ಪೂರೈಸುವ ಸಲುವಾಗಿ ಹೆಚ್ಚುವರಿ ಭೂಮಿಯನ್ನು ಕೃಷಿಗೆ ಒಳಪಡಿಸಲಾಯಿತು. ಇವುಗಳಿಗೆ ನೀರನ್ನು ಪೂರೈಸಲು ಕೃತಕ ಜಲ ಸಂಗ್ರಾಹಕಗಳಾದ ಕೆರೆಗಳು ಹೆಚ್ಚಾಗಿ ಬಳಕೆಗೆ ಬಂದವು.

ವಿಶಾಲಾರ್ಥದಲ್ಲಿ ಸನಾತನ ಧರ್ಮವು ಭಾರತೀಯ ಸಮಾಜದ ತಳಹದಿಯಾಗಿದೆ. ಮಧ್ಯಕಾಲೀನ ಹಾಗೂ ಪುರಾತನ ಚರಿತ್ರೆಯ ಅವಧಿಗಳಲ್ಲಿ ನಡೆದಿರಬಹುದಾದ ಎಲ್ಲಾ ಕಾರ್ಯ ಚಟುವಟಿಕೆಗಳಿಗೂ ಅದೇ ಆಧಾರ. ಹಾಗಾಗಿ ಧಾರ್ಮಿಕ ಕಲ್ಪನೆ ಮತ್ತು ನಂಬಿಕೆ ಹಾಗೂ ಸಾಮಾಜಿಕ ನಂಬಿಕೆ ಹಾಗೂ ಕಲ್ಪನೆಗಳ ಮಧ್ಯ ಇದ್ದಿರಬಹುದಾದ ಭೇದವನ್ನು ಅರಿಯುವುದು ಸುಲಭ ಸಾಧ್ಯವಲ್ಲ. ನೀರಾವರಿ ವ್ಯವಸ್ಥೆಯ ಕುರಿತು ಅಂದಿನ ಕಾಲದಲ್ಲಿಯ ಕಲ್ಪನೆ ಹಾಗೂ ನಂಬಿಕೆಗಳನ್ನು ಇದರ ಹಿನ್ನೆಲೆಯಲ್ಲಿ ತಿಳಿಯಬೇಕಾಗಿದೆ.

ಮೊತ್ತಮೊದಲಿಗೆ ಯಾವುದೇ ನೀರಾವರಿ ಕ್ರಮದ ನಿರ್ಮಾಣ ಕಾರ್ಯವನ್ನು ಪುಣ್ಯ ಕಾರ್ಯವೆಂದೇ ಭಾವಿಸಲಾಗುತ್ತಿತ್ತು. ಏಕೆಂದರೆ ಅದು ಮಾನವ ಜೀವನದ ಅಭ್ಯುದಯಕ್ಕೆ ಮಾತ್ರ

ಸೀಮಿತವಾಗಿರದೆ, ಎಲ್ಲಾ ಪ್ರಾಣಿಗಳ ಹಾಗೂ ಕ್ರಿಮಿಕೀಟಗಳ, ಗಿಡ ಮರಗಳ ಜೀವನಗಳಿಗೂ ಸಹಕಾರಿಯಾಗಿತ್ತು.[೬೦] ಆದುದರಿಂದ ಈ ಕಾರ್ಯವನ್ನು ಮಠಮಂದಿರ ನಿರ್ಮಾಣ ಕಾರ್ಯದಷ್ಟೇ ಪವಿತ್ರ ಎಂದು ಭಾವಿಸಲಾಗುತ್ತಿತ್ತು.[೬೧]

ರಾಜ ಹರಿಹರನ ಶಿವಮೊಗ್ಗ ಜಿಲ್ಲೆಯಲ್ಲಿರುವ ಕ್ರಿ.ಶ. ೧೪೧೩ರ ಶಾಸನವು ಹೇಳುವಂತೆ "ಯಾರಾದರೂ ಜೀರ್ಣಾಯಮ್‌ಉದರೆ' ಅಂದರೆ ಒಡೆದ ಕೆರೆಯ ಜೀರ್ಣೋದ್ಧಾರ, ಬಾವಿಗಳ, ರಾಜ್ಯದ ಶರಣಾಗತಿ ಬಂದವರನ್ನು ರಕ್ಷಿಸುವ, ಬ್ರಾಹ್ಮಣರನ್ನು ಕಾಪಾಡುವ, ದೇವಸ್ಥಾನವನ್ನು ನಿರ್ಮಿಸುವ ಕಾರ್ಯಗಳನ್ನು ಮಾಡಿದರೆ ಅವು ಆದರ್ಶ ಉತ್ತಮ ಮಾನವನ ಗುಣಗಳೆಂದೇ ಭಾವಿಸಲಾಗುತ್ತಿತ್ತು.[೬೨] ಇದರಂತೆಯೇ ಸರೋವರವನ್ನು ನಿರ್ಮಿಸಿದರೆ ಅದು ವ್ಯಕ್ತಿಯಿಂದ ಮಾಡಲಾದ ಏಳು ಪುಣ್ಯ ಕಾರ್ಯಗಳಲ್ಲಿ ಅತಿ ಶ್ರೇಷ್ಠವಾದದು ಎಂದು ಭಾವಿಸಲಾಗುತ್ತಿತ್ತು. ಲಕ್ಕೂರ ಕೆರೆಯ ಮೇಲಿರುವ ಒಂದು ತಮಿಳು ಶಾಸನವು, ಪುಲ್ಲಮಂಗಳಮ್ ಹಳ್ಳಿಯ ಎದುರಿನಲ್ಲಿ ಓರ್ವ ಅಧಿಕಾರಿಯು ಎಲ್ಲ ಪ್ರಾಣಿ ವರ್ಗಕ್ಕೂ ಅನುಕೂಲವಾಗಲೆಂದೇ ಕೆರೆಯನ್ನು ನಿರ್ಮಿಸಿದನಂತೆ.[೬೩] ಕ್ರಿ.ಶ. ೧೩೮೯ರ ಒಂದು ಶಾಸನವು ಆರು ಕಾರ್ಯಗಳನ್ನು ಉತ್ತಮ ಎಂದೇ ಹೇಳಿದೆ ಗಿಡಗಳನ್ನು ನೆಡುವೆ, ಗುಡಿ ನಿರ್ಮಿಸುವ, ಮಗನನ್ನು ಪಡೆಯುವ, ಧರ್ಮ ಪ್ರತಿಷ್ಠಾಪನೆ, ರಾಜ್ಯಸ್ಥಾಪನೆ, ಧನಗಳಿಸುವ ಎಲ್ಲಾ ಕಾರ್ಯಗಳೂ ಮಾನವನ ಜೀವನಕ್ಕೆ ಫಲಪ್ರದಗಳಾಗಿವೆ.[೬೪] ಕ್ರಿ.ಶ. ೧೩೮೯ರ ಕೋಲಾರ ಜಿಲ್ಲೆಯ ಹಿರೇಬಿದನೂರು ಶಾಸನವು ಹೆನ್ನೆ ನದಿಗೆ ಅಣೆಕಟ್ಟನ್ನು, ಸಿಂಗಯ್ಯ ಭಟ್ಟ ಎಂಬ ನೀರಾವರಿ ಎಂಜನಿಯರ್ ಎರಡನೆಯ ಬುಕ್ಕನ ಕಾಲದಲ್ಲಿ ನಿರ್ಮಿಸಿದನೆಂದೂ, ಜೀವಿಗಳಿಗೆಲ್ಲಾ ನೀರೇ ಆಧಾರ ಅಥವಾ ಉದಕವೇ ಪ್ರಾಣವಾಗಿದ್ದರಿಂದ ಆ ಕಾರ್ಯ ಕೈಗೊಂಡ. ಅಲ್ಲದೆ ರಾಜಧಾನಿಯಾದ ಪೆನುಗೊಂಡ ನಗರಕ್ಕೆ ನೀರನ್ನು ಪೂರೈಸುವ ಹಾಗೂ ಬೇಸಾಯಕ್ಕೆ ನೀರು ನೀಡಲೆಂದೇ ಈ ಸಾಹಸ ಕಾರ್ಯವನ್ನು ಮಾಡಲಾಗಿದೆ ಎಂದು ಹೇಳಲಾಗಿದೆ.[೬೫]

ಕ್ರಿ.ಶ. ೧೫೪೦ರ ಕೊಂಡವೀಡು ಹತ್ತಿರದ ವೆಂಕಾಲಯಪಾಡು ಬಳಿಯ ಗೋಪಿಸಮುದ್ರದ ಶಾಸನವು ಅದು ಮಹಾಭಾರತದಿಂದ ಈ ರೀತಿಯಾಗಿ ಉಲ್ಲೇಖಿಸಿದೆ. ದೇವತೆಗಳು, ಮಾನವರು, ಪಿತೃಗಳು, ಗಂಧರ್ವರು, ಉರಗಗಳು, ರಾಕ್ಷಸರು, ಚಲಿಸಲಾರದ ಗಿಡಬಳ್ಳಿಗಳು ಮತ್ತು ಭೂತಗಳು ಜಲಾಯನಗಳನ್ನೇ ಆಧರಿಸಿವೆ. ಏಕೆಂದರೆ ಈ ಜಲಾಶಯಗಳಲ್ಲಿ ಶೇಖರಿಸಿದ ನೀರು ಪ್ರಾಣಿ, ಪಕ್ಷಿ, ಮಾನವ ಮುಂತಾದವರ ಬಾಯಾರಿಕೆ ನೀಗಿಸುತ್ತವೆ. ಆದ್ದರಿಂದ ವ್ಯಕ್ತಿ ಹಾಗೂ ವ್ಯಕ್ತಿಗಳು ಈ ಪುಣ್ಯ ಕಾರ್ಯ ಕೈಗೆತ್ತಿಕೊಳ್ಳಬೇಕು. ಈ ಕಾರ್ಯದಿಂದ ಅಶ್ವಮೇಧಯಾಗ ಮಾಡಿದ ಫಲ ದೊರೆಯುತ್ತದೆ.[೬೬]

ನಮಗೆ ಅಂದಿನ ಕಲ್ಪನೆ ಹಾಗೂ ನಂಬಿಕೆಗಳನ್ನು ಗಮನಿಸಿದಾಗ, ಮನವರಿಕೆಯಾಗುವ ವಿಷಯವೆಂದರೆ, ಸಾರ್ವಜನಿಕರ ವಿಶಾಲ ಕಲ್ಪನೆ, ಅದೆಂದರೆ ದೇವರಿಗೆ ಸಲ್ಲಿಸುವ ಬಲಿ, ದಾನ, ಪೂಜೆ ಮತ್ತು ಬ್ರಾಹ್ಮಣರಿಗೆ ನೀಡುವ ದಾನಗಳಿಗಿಂತ, ಸಾರ್ವಜನಿಕರ ಸುಖಶಾಂತಿ ವಿಕಾಸಕ್ಕೆ ಮತ್ತು ಆರ್ಥಿಕ ಅಭ್ಯುದಯಕ್ಕೆ ನೆರವಾಗುವ ನೀರಾವರಿ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುವುದೇ ಹಿತಕಾರಿ ಎಂದು ಭಾವಿಸಿದ್ದರು. ವಿಷ್ಣು ಧರ್ಮೋತ್ತರ, ಬಾಣನ ಕಾದಂಬರಿಗಳಲ್ಲಿಯೂ ನೀರಿನಿಂದ ಹಾಗೂ ನೀರಾವರಿ ಕಾರ್ಯಗಳಿಂದ ಜನತೆಯ ಆಧ್ಯಾತ್ಮಿಕ ಹಾಗೂ ಆರ್ಥಿಕ ವಿಕಾಸಕ್ಕೆ ಹೆಚ್ಚು ಸಹಕಾರಿಯಾಗಿ, ಮುಂದಿನ ಸಂತತಿಗೆ ಸಮೃದ್ಧ ಶಾಂತಿ ದೊರೆಯುತ್ತದೆ ಎಂಬ ಸಂಗತಿ ಎತ್ತಿ ತೋರಿಸಿದ್ದವು.[೬೭]

ಪೊರುಮಿಲ್ಲಾದ ಸುಪ್ರಸಿದ್ಧ ಶಾಸನ ಹೇಳುವಂತೆ, ಪ್ರಸಿದ್ಧ ಕೆರೆಯನ್ನು ನಿರ್ಮಿಸಿದ ರಾಜಕುಮಾರ ಭಾಸ್ಕರನು ಶಾಸ್ತ್ರಗಳಲ್ಲಿ ತಿಳಿಸಿದ ಏಳು ಪುಣ್ಯ ಕೃತಿಗಳನ್ನು ಮಾಡಿದ್ದನು. ಅವು ಏನೆಂದರೆ ಸಂತತಿಯ ವಿಕಾಸಕ್ಕೆ ಮಗನನ್ನು ಪಡೆಯುವ, ಸಾಹಿತ್ಯ ರಚನೆಯ, ನಿಕ್ಷೇಪವನ್ನು ಹೊಂದುವ, ಶಿವ ಮಂದಿರ ನಿರ್ಮಾಣ, ಕಾಡನ್ನು ಬೆಳೆಸುವ, ಅಗ್ರಹಾರವನ್ನು ನಿರ್ಮಿಸುವ ಮತ್ತು ಕೆರೆಯನ್ನು ಕಟ್ಟಿಸುವುದು.[೬೮] ಅಲ್ಲದೆ ಈ ಶಾಸನವು ನೀರಾವರಿ ಕಾರ್ಯಗಳ ಮಹತ್ವವನ್ನು ತಿಳಿಸುತ್ತಾ, ಹೇಮಾದ್ರಿಯ ದಾನಕಾಂಡ ೧೩ನೆಯ ಶತಮಾನದ ಯಾದವ ಅರಸನ ಮಂತ್ರಿಯ, ಸಂಸ್ಕೃತ ಕೃತಿಯಲ್ಲಿ ಹೇಳಿದ ಸಂಗತಿ ವಿವರಿಸಿದೆ. ಇದರಲ್ಲಿ ಹೇಳಿದಂತೆ ನೀರನ್ನು ದಾನ ಮಾಡುವುದು ಸರ್ವದಾನಗಳಿಗಿಂತ ಶ್ರೇಷ್ಠವಾದುದು..... ಎಂದು ವೇದಗಳಲ್ಲಿ ತಿಳಿಸಲಾಗಿದೆ. ಸ್ಮೃತಿಗಳೂ ಹೇಳಿದಂತೆ ಆಹಾರವೂ ನೀರಿನಿಂದಲೇ ಹುಟ್ಟುವುದು. ಆಹಾರ ಎಂದರೆ ಅನ್ನ ಬ್ರಹ್ಮ...... ನೀರೇ ಪ್ರಪಂಚದ ಚರಾಚರಗಳಿಗೆ ಮೂಲ. ಶ್ರೇಷ್ಠನಾದ ಶಿವನ ಶಿರದ ಮೇಲೆ ಗಂಗೆ ಇರುವಳು. ಸಾಗರ ವಿಷ್ಣುವಿನ ಶಯನ ಸ್ಥಾನ. ಬ್ರಹ್ಮನ ಹುಟ್ಟು ನೀರಿನಿಂದ ಹುಟ್ಟಿದ ಕಮಲ. ಆದುದರಿಂದ ನೀರೇ ಎಲ್ಲಕ್ಕಿಂತ ಶ್ರೇಷ್ಠ. ಒಂದು ಅರವಟ್ಟಿಗೆ ಒಂದು ಬಾವಿ, ಕೆರೆ, ಕಾಲುವೆ ಅಥವಾ ಕಮಲಗಳಿಂದ ಕೂಡಿದ ಸರೋವರಗಳಿಂದ ಒದಗುವ ಶ್ರೇಯಸ್ಸು ಅಧಿಕ. ಏಕೆಂದರೆ ನೀರು ಪ್ರಪಂಚದ ಚರಾಚರ ಪ್ರಾಣಿಗಳನ್ನು ಸಲಹುತ್ತದೆ. ಆದುದರಿಂದ ಈ ಉತ್ತಮ ಕಾರ್ಯಕ್ಕೆ ದೊರಕುವ ಪುಣ್ಯ ಫಲವನ್ನು ಕಮಲೋದ್ಭವ ಬ್ರಹ್ಮನಿಂದಲೂ ಎಣಿಸಲಾಗದು.[೬೯]

ನೀರಾವರಿ ಕಾರ್ಯಕ್ರಮದ ಹಿಂದೆ ಅಡಗಿರುವ ಶ್ರದ್ಧಾಭಕ್ತಿ, ಭಾವನೆಗಳಿಗೆ ಅನುಗುಣವಾಗಿ ಹಲವಾರು ಉದಾಹರಣೆಗಳನ್ನು ಕಾಣಬಹುದಾಗಿದೆ. ಈಗಾಗಲೇ ತಿಳಿದಂತೆ ಧಾರ್ಮಿಕ ಭಾವನೆಗಳೇ ಅಂದಿನ ನೀರಾವರಿ ಕಾರ್ಯಗಳಿಗೆ ಮಾರ್ಗದರ್ಶಿಗಳಾಗಿದ್ದವು. ಕ್ರಿ.ಶ. ೧೪೯೪ರ ಸಾಳುವ

ನರಸಿಂಹನ ಆಡಳಿತದಲ್ಲಿ ಕಂದದಾಯಿ ರಾಮಾನುಜ ಅಯ್ಯಂಗಾರ ಎಂಬ ಅಧಿಕಾರಿಯು ಶ್ರೀವೆಂಕಟೇಶ, ಗೋವಿಂದರಾಜ ಮತ್ತು ಕುಲಶೇಖರಾಳ್ವಾರ, ತಿರುಮಲ, ತಿರುಪತಿಯ ದೇವರುಗಳಿಗೆಂದೇ ಎರಡು ಹಳ್ಳಿಗಳನ್ನು, ನೀರಾವರಿ ಕಾರ್ಯಗಳಿಗೆಂದೇ ದಾನ ನೀಡಿ, ಅಲ್ಲಿ ಅಗೆಸಲಾದ ಕೆರೆಗೆ ಅಯೋಧ್ಯರಾಮ ಸಮುದ್ರ ಎಂದು ನಾಮಕರಣ ಮಾಡಿದನು.[೬೦]

ಕೃಷ್ಣದೇವರಾಯನು, ತಿರುಮಲದೇವಿಯಮ್ಮನ ಸಮುದ್ರ ಎಂಬ ಸರೋವರವನ್ನು, ತಿರುವನಾಮಲ್ಲೈ ಪುಷ್ಕರಿಣೆಗೆ ನೀರು ದೊರಕಿಸುವ ಮುಂತಾದ ಕಾರ್ಯಗಳನ್ನು ಕೈಕೊಂಡ ದಾನಿಗೆ ಪುಣ್ಯ ದೊರೆಯುತ್ತದೆ ಎಂಬ ಮನೋಭಾವನೆಗಳೇ ಈ ಬಗೆಯ ಕಾರ್ಯಗಳಿಗೆ ಪ್ರೋತ್ಸಾಹ ನೀಡಿದವು.[೬೧]

ಕ್ರಿ.ಶ. ೧೪೧೦ ವಿಜಯನಗರದ ಮೊದಲನೆಯ ದೇವರಾಯನ ಶಾಸನ ರಚಿಸಿದ ಮಧುರ ಕವಿಯು, ಲಕ್ಷ್ಮೀಧರನ ತಾಯಿಯು ಅವನ ಕಿವಿಯಲ್ಲಿ ಉಸುರಿದ ಏಳು ಉತ್ತಮ ಒಳ್ಳೆಯ ಗುಣಗಳನ್ನು ವರ್ಣಿಸಿದ್ದಾನೆ. ಇದರಲ್ಲಿ ಕೆರೆ ಹಾಗೂ ಭಾವಿಗಳಿಗೆ ವಿಶೇಷ ಮಹತ್ವ, ಕೆರೆಯಂ ಕಟ್ಟಿಸು, ಬಾವಿಯಂ ಸವೆಸು ಎಂದೇ ವರ್ಣಿಸಿದನ್ನು ಕಂಡಾಗ, ಮಾನವರ ಕಲ್ಯಾಣದಲ್ಲಿ ಇವುಗಳ ಪಾತ್ರ ಏನಿತ್ತು ಎಂದು ತಿಳಿಯಬಹುದಾಗಿದೆ. ಮಿಕ್ಕ ಗುಣಗಳೆಂದರೆ ದೇವಸ್ಥಾನ ನಿರ್ಮಿಸುವ, ಅನಾಥರನ್ನು ಬಿಡಿಸುವ, ಉತ್ತಮರನ್ನು ರಕ್ಷಿಸುವ ಮಿತ್ರರಿಗೆ ಆಶ್ರಯ ನೀಡುವ, ನಂಬಿದವರನ್ನು ಕೈಬಿಡದಿರುವುದು,[೬೨] ನೀರಾವರಿ ಕಾರ್ಯಗಳಿಗೆ ನೀಡಿದ ಮಹತ್ವವನ್ನು ಇಲ್ಲಿ ಗುರುತಿಸಬಹುದಾಗಿದೆ.

ಕ್ರಿ.ಶ. ೧೪೨೮ರ ಅರಸು ದೇವರಾಯನ ಒಂದು ದಾಖಲೆಯಂತೆ ಕೆರೆ ಮತ್ತು ಇತರ ಕಲ್ಯಾಣ ಕಾರ್ಯಗಳಿಂದ ದಾನಿಗಳಿಗೆ, ಪೋಷಕರಿಗೆ ಕಲ್ಯಾಣ ಉಂಟಾಗುತ್ತಿತ್ತು ಎನ್ನುವ ನಂಬಿಕೆ. ದೇವರಾಯ ಮಹಾರಾಯರಿಗೆ ಧರ್ಮವಾಗಬೇಕೆಂದು... ದಾನ[೬೩] ಕ್ರಿ.ಶ. ೧೫೧೭ ಕೃಷ್ಣದೇವರಾಯನ ಆಡಳಿತದಲ್ಲಿ, ರಂಗನಾಥ ದೀಕ್ಷಿತ ಎಂಬ ಬ್ರಾಹ್ಮಣ ಪುರೋಹಿತನು, ರಾಜನಿಂದ ದಾನ ಪಡೆದ ಹಳ್ಳಿಯಲ್ಲಿ, ರಾಜಮಾತೆಯ ಪುಣ್ಯಸ್ಮರಣೆಗೆಂದೇ ಒಂದು ಕೆರೆ ಕಟ್ಟಿಸಿ ಅದಕ್ಕೆ ನಾಗಸಮುದ್ರ ಎಂದೇ ನಾಮಕರಣ ಮಾಡಿದ.[೬೪] ಕ್ರಿ.ಶ. ೧೫೧೭ರ ಒಂದು ಶಾಸನವು ಕೃಷ್ಣದೇವರಾಯನಿಗೆ ಸಂತಾನ ಕಲ್ಯಾಣವಾಗಲೆಂದೇ ಚೋಳ ಸಮುದ್ರ ಹಾಗೂ ಇತರ ಕಾಣಿಕೆಗಳೊಂದಿಗೆ ದೇವತೆ ಚೌಡೇಶ್ವರಿಗೆ ದಾನವನ್ನು ರಾಯಸ್ಥದ ಕೊಂಡಮರಸಯ್ಯ ನೀಡಿದನು. ಅವನ ನಂಬಿಕೆಯಂತೆ ಈ ಬಗೆಯ ದಾನದಿಂದ ಅರಸು ಕೃಷ್ಣದೇವರಾಯನಿಗೆ ಉತ್ತಮ ಸಂತಾನ ಪ್ರಾಪ್ತಿ ದೊರೆಯುತ್ತದೆ.[೬೫]

ಕ್ರಿ.ಶ. ೧೩೯೩ರಲ್ಲಿ ತಂದೆಯ ಪುಣ್ಯ ಸ್ಮರಣೆಗೆಂದೇ ಅರಸು ಎರಡನೆಯ ಹರಿಹರರಾಯನ ಮಗ 'ಶ್ರೀವೀರ ದೇವರಾಯ' ದೇವರಾಯ ಸಮುದ್ರವನ್ನು ನಿರ್ಮಿಸಿದಂತೆ ತಿಳಿದುಬರುತ್ತದೆ.[೬೬]

ಅಚ್ಯುತದೇವರಾಯನ ಆಡಳಿತದಲ್ಲಿ ಬಯಕಾರ ರಾಮಪ್ಪನು ಕ್ರಿ.ಶ. ೧೫೩೯ರಲ್ಲಿ ತನ್ನ ತಾಯಿಯಾದ ಹಿರಿಯ ಲಕ್ಕರಸಮ್ಮನ ಜ್ಞಾಪಕಾರ್ಥವಾಗಿ ಹಿರಿಯಲಕ್ಕ ಸಮುದ್ರವನ್ನು ನಿರ್ಮಿಸಿದನು.[೭೭] ಇದೇ ದಾಖಲೆಯಲ್ಲಿ ಇನ್ನೂ ಹದಿನೇಳು ಕೆರೆಗಳನ್ನು ನಿರ್ಮಿಸಿ ಅವಕ್ಕೆ ತನ್ನ ಬಂಧುಗಳ ಹೆಸರನ್ನು ನೀಡಿದ ವಿವರಗಳು ದೊರೆಯುತ್ತವೆ.[೭೮]

ರಾಜಿಗೌಂಡ ಎಂಬ ಅಧಿಕಾರಿಯ ಪತ್ನಿ ಸೂರಿಗೌಂಡಿ ಎಂಬ ಸ್ತ್ರೀಯು ತನ್ನ ಮೂವರು ಪುತ್ರರಿಗೆ ಎನಗೊಂದು ಪುಣ್ಯ ಮಪ್ಪಂತಾಗಿ ಉತ್ತಮ ಕಾರ್ಯ ಮಾಡಿರಿ ಎಂದು ಆದೇಶಿಸಿದಳು. ತಾಯಿಯ ಆದೇಶದಂತೆ ಮೂವರು ಮಕ್ಕಳೂ ಕೆರೆಯನ್ನು ದುರಸ್ಥಿಗೊಳಿಸಿ ಅದರ ನೀರನ್ನು ಸಾರ್ವಜನಿಕರ ಕಲ್ಯಾಣಕ್ಕೆಂದೇ ಉಪಯೋಗಿಸುವಂತೆ ಮಾಡಿ, ಅದನ್ನು ತಮ್ಮ ತಾಯಿಗೆ ತಿಳಿಸಿದರು. ಅದರಿಂದ ಬರುವ ಉದಕ ದಾನ ಫಲ ತಾಯಿಗೇ ಎಂದು ಹೇಳಿದರು.[೭೯]

ಮೃತರ ಹಾಗೂ ಪಿತೃಗಳ ಆತ್ಮಕ್ಕೆ ಶಾಂತಿ ದೊರೆಯಲಿ ಎಂದೇ ಹಾಗೂ ಅವರ ಸ್ಮಾರಕಕ್ಕೆಂದೇ ಕೆರೆಗಳನ್ನು ಕಟ್ಟಿಸಿ ದಾನ ಮಾಡುತ್ತಿರುವುದು ಕಂಡುಬರುತ್ತದೆ. ಕ್ರಿ.ಶ. ೧೩೪೦ರ ಒಂದು ಶಾಸನವು ಸಮರದಲ್ಲಿ ಮರಣ ಹೊಂದಿದ ನಾಗೇಯ ನಾಯಕನ ಸ್ಮಾರಕಕ್ಕೆಂದೇ ಅವನ ಒಡೆಯ ನಾಡು ತಳವಾರ ಯರಿತಿಮ್ಮನಾಯಕ 'ಬಂಕೆಕೆರೆ'ಯನ್ನು ನೆತ್ತರು ಕೊಡುಗೆ ಎಂದೇ ದಾನ ನೀಡಿದನಂತೆ. ಈ ಕೆರೆಯನ್ನು ಹುತಾತ್ಮ ಸಹೋದರನಾದ, ಅಡಪದ ನಾಗೇಯ ನಾಯಕನಿಗೆ ನೀಡಲಾಗಿತ್ತು. ಇದರ ಉದ್ದೇಶವೆಂದರೆ ಮೃತನ ಆತ್ಮಕ್ಕೆ ಶಾಂತಿ ದೊರಕಿ ಮುಕ್ತಿ ಹೊಂದಲಿ ಎಂದು[೮೦] ಕ್ರಿ.ಶ. ೧೩೬೦ರ ಬುಕ್ಕರಾಯನ ಆಳ್ವಿಕೆಯ ಸಮಯದ ಒಂದು ದಾಖಲೆಯು ಇಬ್ಬೆಯನಾಯಕನು ಮರಣ ಹೊಂದಿದ ತನ್ನ ತಂದೆಯ ಸ್ಮಾರಕವಾಗಿ ಒಂದು ಕೆರೆ ನಿರ್ಮಿಸಿ ಅದಕ್ಕೆ ಭುವಸಮುದ್ರ ಎಂದು ನಾಮಕರಣ ಮಾಡಿದ್ದ. ಈ ಕೆರೆಯ ನಿರ್ಮಾಣದೊಂದಿಗೆ ಅವನು ದೇವಾಲಯವೊಂದನ್ನು ನಿರ್ಮಿಸಿ ಭುವನೇಶ್ವರನನ್ನು ಪ್ರತಿಷ್ಠಾಪಿಸಿ ಅದಕ್ಕೆ ದಾನಗಳನ್ನು ಮಾಡಿದಂತೆ ತಿಳಿಸುತ್ತದೆ.[೮೧] ನಾಗಸಾನಿ ಎಂಬ ಸ್ತ್ರೀ ತನ್ನ ಪತಿ ಹಾಗೂ ಅವನ ೨೧ ಹಿರಿಯರ ಆತ್ಮಕ್ಕೆ ಶಾಂತಿ ಕೋರಿ ಕೆರೆಯನ್ನು ನಿರ್ಮಿಸಿದಳು.[೮೨]

ಕ್ರಿ.ಶ. ೧೪೮೭ರಲ್ಲಿ ನಿಡಗಲ್ಲು ಕೋಟೆಯನ್ನು ಆಳುತ್ತಿದ್ದ ಚಿಕತಿಪ್ಪ ರಾಜೇಂದ್ರ ಎಂಬುವನು ತನ್ನ ರಾಣಿ ಲಕ್ಷ್ಮೀದೇವಿಯ ಸ್ಮಾರಕಕ್ಕೆಂದೇ ಒಂದು ಕೆರೆಯನ್ನು ನಿರ್ಮಿಸಿ ಸಂಪೂರ್ಣ ಹಳ್ಳಿಯನ್ನೇ ಅಗ್ರಹಾರನ್ನಾಗಿಸಿ ಬ್ರಾಹ್ಮಣರಿಗೆ ದಾನ ನೀಡಿದನು.[೮೩] ಕ್ರಿ.ಶ. ೧೫೩೯ರಲ್ಲಿ ಬಯಕಾರ ರಾಮಪ್ಪಯ್ಯ ತನ್ನ ಪುತ್ರಿ ಕಾಮಮ್ಮನ ಸ್ಮರಣಾರ್ಥವಾಗಿ ಕಾಮಸಮುದ್ರವನ್ನು ನಿರ್ಮಿಸಿದನು.[೮೪]

ಅಂದಿನ ಕಾಲದ ಜನರು ನೀರಾವರಿಯನ್ನು ಧಾರ್ಮಿಕ ಭಾವನೆಯಿಂದ ನೋಡುತ್ತಿದ್ದರು. ಹಾಗೆಯೇ ಮಾನವರ ಅಭ್ಯುದಯಕ್ಕೆ ಅದು ಅನಿವಾರ್ಯವಾಗಿತ್ತು ಎಂಬ ಸಂಗತಿ ಎಂದು

ತಿಳಿದಿದ್ದರು. ಮೃತರ ಹೆಸರಿನಲ್ಲಿ ಕೆರೆಗಳನ್ನು ನಿರ್ಮಿಸುವುದು ಅಂದೊಂದು ಮಾದರಿ ನೀರಾವರಿಯಾಗಿತ್ತು. ಇದರಿಂದ ಮರಣ ಹೊಂದಿದವರಿಗೆ ಮುಕ್ತಿ ದೊರೆಯುವುದೆಂಬುದು ನಂಬಿಕೆಯಾಗಿತ್ತು.

**ಕೆರೆಗೆ ಸಂಬಂಧಿಸಿದ ಭಾಗಗಳು**

ಸಾಮಾನ್ಯವಾಗಿ ಜಲಾಯನ ಪ್ರದೇಶವು ಕೆರೆಯ ಭಾಗಕ್ಕಿಂತ ಎತ್ತರದಲ್ಲಿರುತ್ತದೆ. ಈ ಪ್ರದೇಶದಲ್ಲಿ ಅಧಿಕ ಮಳೆಯಾಗುತ್ತದೆ ಮತ್ತು ಅಲ್ಲಿ ಬೀಳುವ ಮಳೆಯ ನೀರು ಹರಿದು ಬಂದ ಕೆರೆಯನ್ನು ಸೇರುತ್ತದೆ. ಗುಡ್ಡಗಳ ನಡುವೆ ಕಣಿವಿ ಪ್ರದೇಶಕ್ಕೆ ಜಲಾಯನ ಪ್ರದೇಶವೆಂದು ಕರೆಯಲಾಗುತ್ತದೆ. ಈ ಪ್ರದೇಶದಲ್ಲಿ ಮಳೆಯ ನೀರು ಮರಗಳ ಸಸ್ಯಗಳಲ್ಲಿ, ಒಣಗಿದ ಎಲೆಗಳ ನಡುವಿನ ಪದರದಲ್ಲಿ ಮತ್ತು ಮಣ್ಣಿನಲ್ಲಿ ಸಂಗ್ರಹಗೊಳ್ಳುತ್ತದೆ. ಹೀಗೆ ಸಂಗ್ರಹಣೆಗೊಂಡ ನೀರು ಸಣ್ಣ ಝರಿಯಂತೆ ಹರಿದು ಬಂದು ಹಳ್ಳಗಳಾಗಿ ಕೆರೆಯ ಪ್ರದೇಶಕ್ಕೆ ಸೇರುತ್ತದೆ. ಮಳೆ ಬೀಳುವ ಪ್ರದೇಶ ಮತ್ತು ಕೆರೆಗೆ ಹರಿದು ಬಂದು ಸೇರುವ ನೀರಿನ ಪ್ರಮಾಣಗಳು ಪರಸ್ಪರ ಸಂಬಂಧವನ್ನು ಹೊಂದಿರುತ್ತವೆ.

ಕೆರೆಯ ತಳ ಎಂದು ಗುರುತಿಸುವ ಭಾಗವು ಸಾಮಾನ್ಯ ಭೂ ಪ್ರದೇಶವಾಗಿರುತ್ತದೆ. ಹಳ್ಳಗಳಿಂದ ಹರಿದು ಬಂದ ನೀರು ಈ ಪ್ರದೇಶದಲ್ಲಿ ಸಂಗ್ರಹವಾಗುತ್ತದೆ. ಹೆಚ್ಚು ಮಳೆಯಾಗಿ ಅಧಿಕ ನೀರು ಬಂದಂತೆ, ನೀರಿನ ಹರವು ವಿಸ್ತಾರಗೊಳ್ಳುತ್ತಾ ಹೋಗಿ ಕೆರೆಯು ತುಂಬುತ್ತದೆ. ಕನಿಷ್ಠ ಮಟ್ಟದ ನೀರು ನಿಲ್ಲುವ ಭೂಭಾಗಕ್ಕೆ ಕೆರೆಯ ತಳ ಎಂದು ಕರೆಯುವರು. ಕೆರೆಯಲ್ಲಿ ಒಂದಾಳೆತ್ತರ ನೀರು ಇರಬೇಕು ಮತ್ತು ತುಂಬಬೇಕು. ಅದಕ್ಕಿಂತ ಹೆಚ್ಚಿನ ನೀರು ಬಂದ ಪಕ್ಷದಲ್ಲಿ ಆ ನೀರು ಕೋಡಿಯ ಮೂಲಕ ಹರಿದು ಹೋಗಬೇಕು ಎಂದು ತಿಮ್ಮಲಾಪುರದ ಕೆರೆಯಲ್ಲಿ ದೊರೆತಿರುವ ಶಾಸನವು ದಾಖಲಿಸಿರುವುದು.[೬೦] ಇದರಿಂದ ಕೆರೆಯಲ್ಲಿ ಕೆರೆಯ ಏರಿಗೆ ಧಕ್ಕೆಯಾಗದಂತೆ ನೀರಿನ ಪ್ರಮಾಣ ಇರಬೇಕು ಎಂಬುದರ ಬಗೆಗೆ ತಿಳಿದುಬರುತ್ತದೆ.

ಕೆರೆಯಲ್ಲಿ ಸಂಗ್ರಹವಾಗುವ ನೀರನ್ನು ಕೆರೆಯನ್ನು ಏರಿಯು ತಡೆಯುತ್ತದೆ. ಆದುದರಿಂದ ಏರಿಯು ಕೆರೆಯ ಒಂದು ಪ್ರಮುಖ ಭಾಗವಾಗಿದೆ. ಈ ಭಾಗವು ಅತ್ಯಂತ ಗಟ್ಟಿಯಾಗಿರ ಬೇಕಾಗಿರುವುದರಿಂದ ಈ ಭಾಗವು ಕಲ್ಲು ಮತ್ತು ಮಣ್ಣಿನಿಂದ ಕಟ್ಟಲ್ಪಡುತ್ತದೆ. ಮಣ್ಣನ್ನು ಹಾಕಿ ಅದನ್ನು ನೀರಿನಿಂದ ನೆನಸಿ ಗಟ್ಟಿಮಾಡಿ ಅದರ ಮೇಲೆ ಮಣ್ಣನ್ನು ಹಾಕಿ ಗಟ್ಟಿ ಮಾಡುತ್ತಾ ಹೋಗುತ್ತಾರೆ. ಕೆರೆ ಏರಿಯ ತಳಭಾಗವು ಸಾಮಾನ್ಯವಾಗಿ ವಿಶಾಲವಾಗಿದ್ದು ಅದು ಮೇಲಕ್ಕೆ ಹೋದಂತೆ ಕಿರಿದಾಗುತ್ತಾ ಹೋಗುತ್ತದೆ. ಕೆರೆಯ ಏರಿಯ ಮೇಲಿರುವ ಭಾಗಕ್ಕೆ ಕಲ್ಲಿನ ಜೋಡಣೆಯನ್ನು ಹೊಂದಿಸಿರುತ್ತಾರೆ. ಇದಕ್ಕೆ ಕಟ್ಟುವಾಡ ಎಂದು ಕರೆಯಲಾಗಿದೆ. ಕಲ್ಲಿನ ಜೋಡಣೆಯು ಏರಿಗೆ

ಆಗುವ ಧಕ್ಕೆಯನ್ನು ಮತ್ತು ಮಣ್ಣು ಕೊರೆತವನ್ನು ತಡೆಯುತ್ತದೆ. ಏರಿಯ ಆಯಕಟ್ಟಿನ ಭಾಗವು ಇಳಿಜಾರಾಗಿರುತ್ತದೆ. ಈ ಇಳಿಜಾರು ರಚನೆಯು ನೀರಿನ ಒತ್ತಡವನ್ನು ವಿರುದ್ಧ ದಿಕ್ಕಿನಿಂದ ತಡೆದು ಏರಿಗೆ ಸಾಕಷ್ಟು ಬಲವನ್ನು ತಂದುಕೊಡುತ್ತದೆ. ಕೆರೆಯ ಏರಿಯನ್ನು ನೇರವಾಗಿ ಕಟ್ಟದೇ ಅಂಕುಡೊಂಕಾಗಿ ಕಟ್ಟುವರು. ಇದರಿಂದ ನೀರಿನಿಂದ ಏರಿಗೆ ಬೀಳುವ ಒತ್ತಡವು ಸಮನಾಗಿ ಹಂಚಿ ಹೋಗುತ್ತದೆ ಮತ್ತು ಕೆರೆಯ ಏರಿ ಒಡೆದಲ್ಲಿ ಅದನ್ನು ಸರಿಪಡಿಸುವುದು ಸುಲಭವಾಗುತ್ತದೆ.

ತೂಬುಗಳು ಕೆರೆಯ ಮುಖ್ಯ ಅವಿಭಾಜ್ಯ ಅಂಗಗಳಾಗಿವೆ. ಕೆರೆಯ ನೀರನ್ನು ಹೊರಗೆ ಹೋಗದಂತೆ ತಡೆಹಿಡಿಯುವ ಸಾಧನಗಳೇ ತೂಬುಗಳು. ಸಾಮಾನ್ಯವಾಗಿ ಕಲ್ಲಿನಿಂದ ತೂಬುಗಳನ್ನು ರಚಿಸಿದ್ದು ಎರಡು ಅಥವಾ ನಾಲ್ಕು ಕಂಬಗಳಿಂದ ಕೂಡಿರುತ್ತವೆ. ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡ ಕಲ್ಲನ್ನು ಇರಿಸಿ, ನಂತರ ಉದ್ದವಾದ ಕಲ್ಲುಗಳ ಮೇಲ್ಭಾಗದಲ್ಲಿ ಅಡ್ಡಗಲ್ಲನ್ನು ಹಾಸಲಾಗುತ್ತದೆ. ಈ ಎರಡು ಅಡ್ಡಗಲ್ಲುಗಳ ನಡುವೆ ಸುಮಾರು ೨೫ ಸೆಂ.ಮೀ. ವ್ಯಾಸದ ರಂಧ್ರವಾಗಿರುತ್ತದೆ. ಈ ರಂಧ್ರದ ಅಳತೆಗೆ ತಕ್ಕುದಾದ ಮರದ ತುಂಡನ್ನು ಇಟ್ಟು ಮುಚ್ಚಲಾಗುತ್ತದೆ. ಈ ರಂಧ್ರವನ್ನು ತೆರೆದಾಗ ನೀರು ಕಾಲುವೆಯ ಮುಖಾಂತರ ಹರಿದು ಆಯಕಟ್ಟು ಪ್ರದೇಶಕ್ಕೆ ಹೋಗುತ್ತದೆ. ತೂಬುಗಳಲ್ಲಿ ಎರಡು ವಿಧಗಳನ್ನು ಗುರುತಿಸಲಾಗಿದೆ. ೧ ತೂಬು ಮತ್ತು ೨ ಗಡಿಗ ತೂಬು ನೀರು ಸಂಗ್ರಹಣಾ ಸಾಮರ್ಥ್ಯವನ್ನು ಗಮನದಲ್ಲಿರಿಸಿಕೊಂಡು ತೂಬುಗಳನ್ನು ಅಳವಡಿಸಲಾಗುವುದು. ಕಾಲುವೆ, ತೂಬು, ಕೆರೆಯ ಏರಿಗೆ ಯಾವುದೇ ವಿಧವಾದ ಅಪಾಯವಾಗದಂತೆ ತೂಬುಗಳನ್ನು ಸಾಮಾನ್ಯವಾಗಿ ಕೆರೆ ಏರಿಯಿಂದ ಹತ್ತರಿಂದ ಹದಿನೈದು ಅಡಿ ದೂರದಲ್ಲಿ ಇರಿಸಿರುವುದು ಕಂಡುಬರುತ್ತದೆ.

ಕೋಡಿಯು ಬಹಳ ಮುಖ್ಯವಾದ ಕೆರೆಯ ಭಾಗಗಳಲ್ಲೊಂದಾಗಿದೆ. ಕೆರೆಯಲ್ಲಿ ನೀರು ಸಂಗ್ರಹವಾಗಿ ಗರಿಷ್ಠ ಮಟ್ಟ ತಲುಪಿದಾಗ ಹೆಚ್ಚುವರಿ ನೀರು ಈ ಕೋಡಿಯ ಮೂಲಕ ಹರಿದುಹೋಗುತ್ತದೆ. ಕೆರೆ ಏರಿಯ ಒತ್ತಡವನ್ನು ತಡೆಯಲು ಕೋಡಿಗಳನ್ನು ಅಳವಡಿಸಲಾಗುತ್ತದೆ. ಕೆರೆಯನ್ನು ಕಟ್ಟುವವನ ಸಾಮರ್ಥ್ಯವು ಕೋಡಿಯ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಅದನ್ನು ಅಳವಡಿಸುವುದರಲ್ಲಿ ಕಂಡುಬರುತ್ತದೆ. ಕೆರೆಯ ಗರಿಷ್ಠ ಮಟ್ಟ ಮತ್ತು ಕೋಡಿಯ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಅದನ್ನು ಅಳವಡಿಸುವುದರಲ್ಲಿ ಕಂಡುಬರುತ್ತದೆ. ಕೆರೆಯ ಗರಿಷ್ಠಮಟ್ಟ ಮತ್ತು ಕೋಡಿಯ ಮಟ್ಟ ಸಾಮಾನ್ಯವಾಗಿ ಒಂದೇ ಆಗಿರುವುದರಿಂದ ಕಂಡುಬರುತ್ತದೆ. ಕೆರೆಯ ಏರಿಯು ಕೋಡಿಯ ಮೇಲೆ ಕುಸಿಯದಂತೆ ಕೋಡಿಯ ಎರಡೂ ಕಡೆಗಳಲ್ಲಿ ಭದ್ರವಾದ ಕಲ್ಲಿನ ಗೋಡೆಯನ್ನು ನಿರ್ಮಿಸಿರುವುದು ಕಂಡುಬರುತ್ತದೆ.

ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವು ಕೆರೆಯ ಅಥವಾ ನೀರು ಸಂಗ್ರಹವಾಗುವ ವಿರುದ್ಧ ದಿಕ್ಕಿನಲ್ಲಿರುತ್ತದೆ. ಈ ಪ್ರದೇಶದಲ್ಲಿಯೇ ವ್ಯವಸಾಯವನ್ನು ಮಾಡಲಾಗುವುದು. ಕೆರೆಯ ನೀರಾವರಿಗೊಳಪಟ್ಟ, ಅಂದರೆ ಕೃಷಿ ಮಾಡಲ್ಪಟ್ಟ ಪ್ರದೇಶಕ್ಕೆ ಆಯಕಟ್ಟು ಅಥವಾ ಅಚ್ಚುಕಟ್ಟು ಪ್ರದೇಶವೆಂದು ಕರೆಯಲಾಗುವುದು. ಪೊರುಮಾಮಿಲ್ಲ ಮತ್ತು ಗುಂಡನ ಹಳ್ಳಿಯ ಶಾಸನಗಳಂತೆ ಆಯಕಟ್ಟು ಪ್ರದೇಶವು ಸಮಾನವಾಗಿರಬೇಕು. ಆಯಕಟ್ಟು ಪ್ರದೇಶವನ್ನು ಅದರ ಗುಣದಂತೆ ಉತ್ತಮ, ಮಧ್ಯಮ, ಅಧಮ ಎಂದು ವಿಂಗಡಿಸಲಾಗಿದೆ.

ಕೆರೆಯ ನಿರ್ಮಾಣವನ್ನು ಕುರಿತಂತೆ ಒಂದು ಶಾಸನವು ಸಂಪೂರ್ಣವಾದ ಮಾಹಿತಿಯನ್ನು ಕೊಡುತ್ತದೆ. ಕೆರೆಗಳ ಅಧ್ಯಯನಕ್ಕೆ ಅತೀ ಮುಖ್ಯವಾಗಿದ್ದು, ಕೆರೆಗಳ ಬಗೆಗಿನ ಅನೇಕ ಮಾಹಿತಿಗಳನ್ನು ಅರಿಯಲು ಸಹಕಾರಿಯಾಗಿರುವುದರಿಂದ ಈ ಶಾಸನವು ಒಂದು ಮೈಲಿಗಲ್ಲು ಎಂದು ಹೇಳಬಹುದಾಗಿದೆ. ಆಂಧ್ರ ಪ್ರದೇಶದಲ್ಲಿರುವ ಕಡಪ ಜಿಲ್ಲೆಯ ಪೊರುಮಾಮಿಲ್ಲ ಎಂಬ ಗ್ರಾಮದ ಕೆರೆಯ ದಂಡೆಯಲ್ಲಿ ದೊರಕಿರುವ ಈ ಶಾಸನವು ಯುವರಾಜ ಭಾಸ್ಕರನ ಹೆಸರನ್ನು ಉಲ್ಲೇಖಿಸುತ್ತದೆ. ಮೊದಲನೆಯ ಬುಕ್ಕರಾಯನ ಕಾಲವಾದ ಕ್ರಿ.ಶ. ೧೩೬೯ಕ್ಕೆ ಸೇರಿದುದಾಗಿದೆ.[೮೫]

ಒಂದು ಕೆರೆಯನ್ನು ನಿರ್ಮಿಸಬೇಕಾದರೆ, ಏನೆಲ್ಲ ಕ್ರಮ ಮತ್ತು ಮುನ್ನೆಚ್ಚರಿಕೆಗಳನ್ನು ತೆಗೆದುಕೊಳ್ಳಬೇಕೆಂದು ತಿಳಿಸುವುದರಲ್ಲಿ ಈ ಶಾಸನದ ಮುಖ್ಯತ್ವವು ಅಡಗಿದೆ.

* ಕೆರೆ ಕಟ್ಟುವವನಾದ ರಾಜನು ಸಂತೃಪ್ತನಾಗಿಯೂ, ಸಂತೋಷದಿಂದ ಕೂಡಿದವನಾಗಿಯೂ ಮತ್ತು ಅಚಂದ್ರಾರ್ಕವಾಗಿ ಹೆಸರು ಗಳಿಸಿಕೊಳ್ಳುವವನಾಗಿಯೂ, ಅಂತವನು ಕೆರೆಯ ನಿರ್ಮಾಣಕ್ಕೆ ತೊಡಗಿಕೊಳ್ಳಬೇಕು.
* ಜಲಶಾಸ್ತ್ರದಲ್ಲಿ ನೈಪುಣ್ಯತೆ ಹೊಂದಿದ ಬ್ರಾಹ್ಮಣನು ಈ ಕಾರ್ಯದಲ್ಲಿ ತೊಡಗಬೇಕು.
* ಕೆರೆ ಕಟ್ಟುವುದಕ್ಕೆ ಉತ್ತಮ ಜೇಡಿಮಣ್ಣು ಕೂಡಿರುವಂತಹ ಪ್ರದೇಶವನ್ನು ಆಯ್ದುಕೊಳ್ಳಬೇಕು.
* ನದಿಯ ನೀರಿನ ಆಶ್ರಯವು ಅಥವಾ ಬುಗ್ಗೆಯು ಕೆರೆಯಿಂದ ಸುಮಾರು ಮೂರು ಯೋಜನಗಳಷ್ಟು ದೂರದಲ್ಲಿರಬೇಕು.
* ಬೆಟ್ಟಗಳ ಸಾಲು ಇದ್ದಲ್ಲಿ, ಅವುಗಳನ್ನು ಕೆರೆಯನ್ನು ನಿರ್ಮಿಸಲು ಉಪಯೋಗಿಸಿಕೊಳ್ಳಬೇಕು.
* ಬೆಟ್ಟಗಳ ನಡುವಿನ ಕಣಿವೆ ಪ್ರದೇಶದಲ್ಲಿ ಅತಿ ದೊಡ್ಡದಲ್ಲದ ಮತ್ತು ಸದೃಢವಾದ ಏರಿಯನ್ನು ಕಟ್ಟಬೇಕು.
* ಕೆರೆಯ ಪ್ರದೇಶದ ಸಮೀಪದಲ್ಲಿ ಫಲ ಕೊಡುವ ಭೂಮಿ ಇರಬೇಕು.

* ಕೆರೆಯ ನೀರಿನ ಹರವು ವಿಸ್ತಾರವಾಗಿರಬೇಕು. ಹಾಗೆಯೇ ಆಳವಾಗಿಯೂ ಇರಬೇಕು.
* ಕೆರೆಯ ಸಮೀಪದಲ್ಲಿರುವ ಜಮೀನು ಫಲವತ್ತಾಗಿರಬೇಕು. ಹಾಗೂ ಅಲ್ಲಿ ಹಣ್ಣು, ಹಂಪಲಗಳ ವನಗಳು ಇರಬೇಕು ಮತ್ತು ಜಮೀನು ಸಮನಾಗಿ ಏರಿಳಿತವಿಲ್ಲದೆ ಇರಬೇಕು.
* ಕೆರೆಯ ತೂಬುಗಳಲ್ಲಿನ ಕಲ್ಲು ಅಥವಾ ನಿಯಂತ್ರಕಗಳು ಭದ್ರವಾಗಿರಬೇಕು ಮತ್ತು ನೀರಿನ ಒತ್ತಡದಿಂದ ಕಾಪಾಡುವಷ್ಟು ಸದೃಢವಾಗಿರಬೇಕು.
* ಕೆರೆಗಳ ಕಟ್ಟುವ ತಂತ್ರಜ್ಞಾನವನ್ನು ಬಲ್ಲಂತವರು ಹನ್ನೆರಡು ಮಂದಿಯಿರಬೇಕು. ಅವರೆಲ್ಲರೂ ಮೇಲೆ ಉಲ್ಲೇಖಿಸಿದ ಹನ್ನೊಂದು ಅಂಶಗಳನ್ನು ಅರಿತಿರಬೇಕು.[೮೭]

ಇದೇ ಶಾಸನವು ಒಂದು ಕೆರೆಯನ್ನು ನಿರ್ಮಿಸಬೇಕಾದಾಗ ತೆಗೆದುಕೊಳ್ಳಬೇಕಾದ ಅತೀ ಮುಖ್ಯವಾದ ಕೆಲವು ಮುನ್ನೆಚ್ಚರಿಕೆ ಕ್ರಮಗಳನ್ನು ತಿಳಿಸುತ್ತದೆ.

* ಕೆರೆಯಿಂದ ನೀರು ಸ್ರವಿಸಬಾರದು
* ಕೆರೆಯ ಪಾತ್ರದಲ್ಲಿನ ಮಣ್ಣು ಉಪ್ಪಿನಾಂಶದಿಂದ ಕೂಡಿರಬಾರದು.
* ಎರಡು ರಾಜ್ಯಗಳ ನಡುವಿನ ಗಡಿ ಪ್ರದೇಶವನ್ನು ಆಯ್ಕೆ ಮಾಡಬಾರದು.
* ಕೆರೆಯ ಮಧ್ಯಭಾಗವನ್ನು ಗಮನಿಸಬೇಕು. ಅವು ಎತ್ತರ ಅಥವಾ ಉಬ್ಬಾಗಿರಬಾರದು.
* ಅತ್ಯಲ್ಪ ನೀರು ಬರುವ ಪ್ರದೇಶವನ್ನು ಆಯ್ಕೆ ಮಾಡಬಾರದು ಮತ್ತು ಅತಿ ಹೆಚ್ಚು ಆಯಕಟ್ಟು ಇರುವ ಜಾಗವನ್ನು ಆರಿಸಬಾರದು.
* ಸ್ವಲ್ಪ ಜಮೀನಿದ್ದು, ಅಧಿಕ ನೀರು ಬರುವಂತಹ ಜಾಗವನ್ನು ಆಯ್ಕೆ ಮಾಡಬಾರದು.[೮೭]

ಈ ಶಾಸನದಿಂದ ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ತಂತ್ರಜ್ಞಾನವು ಎಷ್ಟರ ಮಟ್ಟಿಗೆ ಬೆಳೆದಿತ್ತು ಎಂಬುದು ನಮಗೆ ತಿಳಿದುಬರುತ್ತದೆ. ಅವರು ನಿಸರ್ಗವನ್ನು ಉಪಯುಕ್ತವಾಗಿ ಬಳಸಿಕೊಂಡು ಕೆರೆ ಕಟ್ಟುವ ಕಾರ್ಯಕ್ಕೆ ಸಾಕಷ್ಟು ಮಹತ್ವವನ್ನು ನೀಡಿದ್ದರೆಂದು ತಿಳಿದುಬರುತ್ತದೆ.

ವಿಜಯನಗರ ಅರಸರ ಕಾಲದಲ್ಲಿ ಆಡಳಿತವನ್ನು ವಿಕೇಂದ್ರಿಕರಿಸಿ ನೀರಾವರಿ ವ್ಯವಸ್ಥೆಗೆ ಮತ್ತಷ್ಟು ಪ್ರೋತ್ಸಾಹವನ್ನು ನೀಡಿದರೆಂದು ತಿಳಿದುಬರುತ್ತದೆ. ಇವರ ಕಾಲದಲ್ಲಿ ಅಮರನಾಯಕರ ಪದ್ಧತಿಯು ಬೆಳಕಿಗೆ ಬಂದಿದ್ದು, ಸ್ಥಳೀಯ ಅಧಿಕಾರಿಗಳು, ನಾಯಕರು ಅಥವಾ ಅಮರ ನಾಯಕರು ಶೇ. ೨೯.೯೦ರಷ್ಟು ನೀರಾವರಿ ವ್ಯವಸ್ಥೆಗೆ ಕಾರಣೀಭೂತರಾಗಿದ್ದಾರೆ. ಇವರೊಂದಿಗೆ ಶ್ರೀಸಾಮಾನ್ಯರೂ ಮತ್ತು ಸಾಮಂತರೂ ಗಣನೀಯವಾಗಿ ತಮ್ಮ ಕೊಡುಗೆಯನ್ನು ನೀಡಿರುವರು.

ವಿಜಯನಗರ ಕಾಲದ ಶಾಸನಗಳ ಸಮೀಕ್ಷೆಯಿಂದ ಈ ಕೆಳಕಂಡ ಕೆಲವು ಕುತೂಹಲಕಾರಿಯಾದ ಅಂಕಿ-ಅಂಶಗಳು ಬೆಳಕಿಗೆ ಬಂದಿವೆ.[೮೮]

**ಕೋಷ್ಟಕ**

| **ಕೆರೆ ಕಟ್ಟಿಸಿದವರು** | **ಶೇಕಡವಾರು** |
|---|---|
| ರಾಜರು | ೫.೭೨ |
| ಮಂತ್ರಿಗಳು | ೭.೯೦ |
| ರಾಜ್ಯೋದ್ಯೋಗಿಗಳು | ೫.೭೨ |
| ಮಾಂಡಲೀಕರು | ೩.೬೬ |
| ಸ್ಥಳೀಯ ಅಧಿಕಾರಿಗಳು | ೨೯.೯೦ |
| ಸಾಮಂತರು | ೨೦.೫೪ |
| ಸಾಮಾನ್ಯರು | ೨೬.೫೬ |

ಮೇಲೆ ನೀಡಿರುವ ಕೋಷ್ಟಕದಲ್ಲಿ ಕಂಡುಬರುವಂತೆ ಕೆರೆಯ ನಿರ್ಮಾಣಗಳನ್ನು ಸ್ಥಳೀಯ ಅಧಿಕಾರಿಗಳು ಹೆಚ್ಚಾಗಿ ನಿರ್ಮಿಸಿರುವುದನ್ನು ಕಾಣಬಹುದು. ಇವರ ನಂತರ ಜನಸಾಮಾನ್ಯರು ಈ ಕೆಲಸದಲ್ಲಿ ತೊಡಗಿಕೊಂಡಿರುವುದು ಕಂಡುಬರುತ್ತದೆ. "ವಿಜಯನಗರ ಕಾಲದಲ್ಲಿ ಕೇಂದ್ರೀಕೃತ ಆಡಳಿತವನ್ನು ವಿಕೇಂದ್ರಿಕೃತಗೊಳಿಸಿ, ನಾಯಕರುಗಳು ಆಡಳಿತ ನಡೆಸುತ್ತಿದ್ದ ಕಾರಣದಿಂದ ಇಂತಹ ಜನೋಪಯೋಗಿ ಕಾರ್ಯಗಳು ಹೆಚ್ಚಾಗಿ ಈ ಕಾಲದಲ್ಲಿ ನಡೆದವೆಂದು ಕೊಟ್ರಯ್ಯನವರು ಅಭಿಪ್ರಾಯಪಡುತ್ತಾರೆ.[೮೯]

ವಿಜಯನಗರ ಸಾಮ್ರಾಜ್ಯದಲ್ಲಿ ಅಚ್ಯುತದೇವರಾಯನ ಆಡಳಿತದಲ್ಲಿ ಅಧಿಕಾರಿಯಾಗಿದ್ದ ಬಯಕಾರ ರಾಮಪ್ಪನು ಅಂದಿನ ಕಾಲದ ರೀತಿಯಂತೆ ಜನಸಮೂಹದ ಸೌಖ್ಯಕ್ಕಾಗಿ ಹಲವು ಸತ್ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದನು. ದೇವಾಲಯಗಳ ನಿರ್ಮಾಣ ಬಯಕಾರ ರಾಮಪ್ಪನ ಪಾರಮಾರ್ಥಿಕ ಸಾಧನೆಗಳಾದರೆ ಕೆರೆ ಮತ್ತು ಬಾವಿಗಳ ನಿರ್ಮಾಣ ಲೌಕಿಕ ಸಾಧನೆಗಳಾಗಿವೆ. ನಾಡಿನ ಜನತೆಯ ಹಿತಕ್ಕೋಸ್ಕರ ಇವನು ಸುಮಾರು ಹದಿನಾರಕ್ಕೂ ಹೆಚ್ಚು ಕೆರೆಗಳು ಮತ್ತು ಹಲವಾರು ಬಾವಿಗಳನ್ನು ತೋಡಿಸುವುದರ ಮೂಲಕ ಪ್ರಾಚೀನ ಪರಂಪರೆಯನ್ನು ಮುಂದುವರೆಸಿದನು. ಏಕವ್ಯಕ್ತಿಯಾಗಿ ಅಷ್ಟೊಂದು ಕೆರೆಗಳನ್ನು ನಿರ್ಮಿಸಿರುವುದು ಮಹತ್ತರವಾದ ಸಾಧನೆಯೇ ಆಗಿದೆ. ನಾಡಿನ ಇತಿಹಾಸದಲ್ಲಿ ಅರಸ ಅಥವಾ ಅಧಿಕಾರಿ ಯಾರೇ ಆಗಿರಲಿ ಅಷ್ಟು ಅಧಿಕ ಸಂಖ್ಯೆಯಲ್ಲಿ ಒಬ್ಬನೇ ಕೆರೆಗಳನ್ನು ಕಟ್ಟಿಸಿರುವ ಉದಾಹರಣೆ ದೊರಕವುದು ಅಪರೂಪವೇ ಆಗಿದೆ.

ಬಯಕಾರ ರಾಮಪ್ಪನು ಈಗಿನ ಹೊಸಪೇಟೆ ತಾಲ್ಲೂಕಿನ ತಿಮ್ಮಲಾಪುರವನ್ನು ತನ್ನ ಮುಖ್ಯ ಕೇಂದ್ರವನ್ನಾಗಿಸಿಕೊಂಡಿದ್ದನು. ಬಯಕಾರ ರಾಮಪ್ಪನು ನಿರ್ಮಿಸಿದ ಕೆರೆಗಳು ಕೂಡ್ಲಿಗಿ, ಸಂಡೂರು, ಹಗರಿಬೊಮ್ಮನಹಳ್ಳಿ ಈ ತಾಲ್ಲೂಕುಗಳಲ್ಲಿ ಕಂಡುಬರುತ್ತವೆ. ಈ ಭಾಗದ ಪ್ರದೇಶವು ಒಣಭೂಮಿಯಾಗಿದ್ದು, ಸಂಪೂರ್ಣವಾಗಿ ಮಳೆಯನ್ನೇ ಆಧರಿಸಿಕೊಂಡಿವೆ.

ವಿಜಯನಗರ ಕಾಲದ ಕೆರೆಗಳನ್ನು ವೈಜ್ಞಾನಿಕವಾಗಿ ಎರಡು ಗುಂಪುಗಳನ್ನಾಗಿ ವಿಂಗಡಿಸಬಹುದು. ಮೊದಲ ಕೆರೆಗಳ ಸಮೂಹವು ಸಮುದ್ರ ಮಟ್ಟದಿಂದ ಸುಮಾರು ೫೦೦ ಮೀಟರ್‌ಗಳಷ್ಟು ಎತ್ತರದಲ್ಲಿರುವಂತಹುಗಳು ಮತ್ತು ಎರಡನೆಯ ಸಮೂಹವು ೪೦೦–೫೦೦ ಮೀಟರ್‌ಗಳಷ್ಟು ಎತ್ತರದ ಪ್ರದೇಶಗಳಲ್ಲಿಯೇ ನಿರ್ಮಿಸಲಾಗಿದೆ. ಒಂದೇ ಕಾಲದಲ್ಲಿ ಎಲ್ಲಾ ಕೆರೆಗಳೂ ನಿರ್ಮಾಣಗೊಂಡಿಲ್ಲ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಅವುಗಳನ್ನು ನಿರ್ಮಿಸಿದ್ದಾರೆ. ಆದರೂ ಈ ಎಲ್ಲಾ ಕೆರೆಗಳ ಸರಾಸರಿ ಎತ್ತರವನ್ನು ನಾವು ಗಣನೆಗೆ ತೆಗೆದುಕೊಂಡರೆ, ಇವು ಸುಮಾರು ೫೦೦ ಮೀಟರ್‌ಗಳ ವ್ಯಾಪ್ತಿಯಲ್ಲಿಯೇ ಬರುತ್ತವೆ. ಮತ್ತೊಂದು ಸಂಗತಿಯೆಂದರೆ, ತುಂಗಭದ್ರಾ ನದಿಯು ಸಹ ಸಮುದ್ರ ಮಟ್ಟದಿಂದ ೫೦೦ ಮೀಟರ್‌ಗಳಷ್ಟು ಎತ್ತರದಲ್ಲಿ ಹರಿಯುತ್ತದೆ. ಆ ನದಿಯ ಪಾತ್ರದ ಎತ್ತರ ಮತ್ತು ವಿಜಯನಗರ ಕಾಲದ ಕೆರೆಗಳ ಎತ್ತರವೂ ಒಂದೇ ಆಗಿದೆ.[೯೦] ಕೆರೆ ಕಟ್ಟುವುದರಲ್ಲಿ ವಿಜಯನಗರ ಕಾಲದಲ್ಲಿ ಇದ್ದ ನೈಪುಣ್ಯತೆ ಹಾಗೂ ಉನ್ನತ ತಾಂತ್ರಿಕ ಜ್ಞಾನ ಮಟ್ಟವು ಎಷ್ಟರ ಮಟ್ಟಿಗೆ ಇತ್ತೆಂದು ತಿಳಿಸುವುದರೊಂದಿಗೆ ಆ ಕಾಲದಲ್ಲಿ ಇಂತಹ ರಚನೆಗಳಿಗೆ ಅವರು ನೀಡುತ್ತಿದ್ದ ಪ್ರಾಮುಖ್ಯತೆಯನ್ನು ತಿಳಿಸುತ್ತವೆ.

ವಿಜಯನಗರ ಕಾಲದ ಕೆರೆಗಳ ಏರಿಗಳು ಸಹ ಒಂದು ನಿರ್ದಿಷ್ಟವಾದ ದಿಕ್ಕಿಗೆ ಇರುವುದು ಸಹ ಗಮನಾರ್ಹ ಸಂಗತಿಯಾಗಿದೆ. ಬಹುತೇಕ ಕೆರೆ ಏರಿಗಳು ಉತ್ತರ ದಿಕ್ಕಿನಲ್ಲಿ ಕಂಡುಬರುತ್ತವೆ. ತಾಲ್ಲೂಕಿನ ದಕ್ಷಿಣ ಭಾಗವು ಎತ್ತರವಾಗಿದ್ದು, ಈ ಪ್ರದೇಶದಲ್ಲಿ ಬೀಳುವ ಮಳೆಯು ಸಣ್ಣ ತೊರೆಗಳಾಗಿ ಉತ್ತರ ಭಾಗಕ್ಕೆ ಹರಿಯುತ್ತವೆ. ಮತ್ತು ತುಂಗಭದ್ರಾ ನದಿಗೆ ಸೇರುತ್ತವೆ. ಆದ್ದರಿಂದ ಅಂತಹ ಸಣ್ಣ ತೊರೆಗಳ ಸಹಾಯದಿಂದ ಕೆರೆಗೆ ನೀರನ್ನು ಹಾಯಿಸಿಕೊಂಡು ನೈಸರ್ಗಿಕ ಕ್ಷಿತಿಜ ಭೂಮಟ್ಟಕ್ಕೆ ಅನುಗುಣವಾಗಿ ಆಯಕಟ್ಟಿನ ಕಾಲುವೆಗಳನ್ನು ನಿರ್ಮಿಸಿರುತ್ತಾರೆ. ಆದುದರಿಂದ ಕೆರೆ ಏರಿಗಳನ್ನು ಸಹ ಉತ್ತರ ದಿಕ್ಕಿಗೆ ಕಟ್ಟಲಾಗಿದೆ.

ಬಯಕಾರ ರಾಮಪ್ಪನು ನಿರ್ಮಿಸಿರುವ ಕೆರೆಗಳೆಲ್ಲಾ ದೊಡ್ಡದಾಗಿವೆ. ಜನರು ಇಂದಿಗೂ ಅವುಗಳನ್ನು ಉಪಯೋಗಿಸುತ್ತಿದ್ದಾರೆ. ಶಾಸನಗಳಲ್ಲಿನ ಉಲ್ಲೇಖಗಳಂತೆ ಬಯಕಾರ ರಾಮಪ್ಪನು ನಿರ್ಮಿಸಿರುವ ಕೆರೆಗಳು ಈ ರೀತಿಯಾಗಿವೆ. ೧. ಅಚ್ಯುತಮ್ಮ ಸಮುದ್ರ[೯೧], ೨. ಬಾಚ–ಸಮುದ್ರ[೯೨],

೩. ರಾಮಸಮುದ್ರ[೯೩], ೪. ಅಕ್ಕಸಮುದ್ರ[೯೪], ೫. ಕಾಮಸಮುದ್ರ[೯೫], ೬. ಅಮ್ಮಸಮುದ್ರ[೯೬], ೭.ವೀರಸಮುದ್ರ[೯೭], ೮. ಅಚ್ಯುತೇಂದ್ರಸಮುದ್ರ[೯೮], ೯. ವೆಂಕಟೇಂದ್ರಸಮುದ್ರ[೯೯], ೧೦. ಪಿನಲಕ್ಕಸಮುದ್ರ[೧೦೦] ೧೧. ಪೆದ್ದಲಕ್ಕಸಮುದ್ರ[೧೦೧], ೧೨. ಚಿನ್ನತಿಪ್ಪಸಮುದ್ರ[೧೦೨], ೧೩. ಲಿಂಗಾಲಯತಟಾಕ[೧೦೩], ೧೪.ವೆಂಕಟಯ್ಯ ಸಮುದ್ರ[೧೦೪] ೧೫. ಪೆದ್ದತಿಮ್ಮ ಸಮುದ್ರ[೧೦೫], ೧೬. ಚಿನ್ನಬಾಚಸಮುದ್ರ[೧೦೬].

ಅತಿಹೆಚ್ಚು ಸಂಖ್ಯೆಯ ಕೆರೆಗಳನ್ನು ಕಟ್ಟಿಸಿದ ಈತನು ಪ್ರಥಮ ಸ್ಥಾನದಲ್ಲಿ ನಿಲ್ಲುತ್ತಾನೆ. ರಾಮಪ್ಪಯ್ಯನ ಕಾರ್ಯದ ಇನ್ನೊಂದು ಗಮನಾರ್ಹವಾದ ಅಂಶವೆಂದರೆ ಈ ಕೆರೆಗಳಿಗೆ ಆಳರಸರ ಪರಿವಾರದವರ ಇಲ್ಲವೇ ತನ್ನ ಪರಿವಾರದವರ ಹೆಸರುಗಳನ್ನು ಇಟ್ಟಿದ್ದು, ಈತನ ಕಾರ್ಯದ ಇನ್ನೊಂದು ಅಸಾಧಾರಣ ಅಂಶವೆಂದರೆ ತಾನು ಕಟ್ಟಿಸಿದ ಕೆರೆಗಳ ಸುತ್ತಮುತ್ತಲೂ ತೋಟಗಳನ್ನು ಮಾಡಿಸಿ ಚಂದಗೊಳಿಸಿದ್ದು.

ಈಗಿನ ಸಂಶೋಧನೆಯ ಹಿನ್ನೆಲೆಯಲ್ಲಿ ಬಯಕಾರ ರಾಮಪ್ಪನು ನಿರ್ಮಿಸಿದ ಕೆರೆಗಳನ್ನು ಗುರುತಿಸುವುದಾದರೆ ಸಂಡೂರು ತಾಲ್ಲೂಕಿನ ಚಿಕ್ಕ ಕೆರೆಯೊಳಗಿನ ಹಳ್ಳಿಯಲ್ಲಿ ಕೆರೆಯೊಂದಿದ್ದು, ಅದರ ಪಕ್ಕದಲ್ಲಿರುವ ಶಾಸನವು ಅಚ್ಯುತದೇವರಾಯನ ಆಳ್ವಿಕೆಯ ಕಾಲಕ್ಕೆ ಸೇರಿದ್ದು, ಶಾಲಿವಾಹನ ಶಕವರುಷ ೧೪೬೧ ವಿಕಾರಿ, ಭಾದ್ರಪದ, ಶು.೧೨ಕ್ಕೆ ಸರಿಯಾದ ಕ್ರಿ.ಶ. ೨೬-೮-೧೫೩೯ ಮಂಗಳವಾರದಂದು ಬಯಕಾರ ರಾಮಪ್ಪನು ತನ್ನ ತಾಯಿ ಹಿರಿಯ ಲಕ್ಕರಸಮ್ಮನ ಹೆಸರಿನಲ್ಲಿ ಪೆದಲಕ್ಕ ಸಮುದ್ರ ಅಥವಾ ಹಿರಿಯಲಕ್ಕ ಸಮುದ್ರವನ್ನು ಕಟ್ಟಿಸಿದ ವಿವರವನ್ನು ನೀಡುತ್ತದೆ. ಸಂಡೂರು ತಾಲ್ಲೂಕಿನ ಶಿರಹಟ್ಟಿ ಹಳ್ಳಿಯಲ್ಲಿ ಲಿಂಗಾಲಯತಟಾಕವನ್ನು ನಿರ್ಮಿಸಲಾಗಿದೆ. ಈ ತಟಾಕವನ್ನು ತನ್ನ ಮಗ ಲಿಂಗಾಲಯ್ಯನಿಗೆ ಪುಣ್ಯವಾಗಲೆಂದು ಕಟ್ಟಿಸಿದನು. ಇದೇ ತಾಲ್ಲೂಕಿನ ನಂದಿಹಳ್ಳಿಯಲ್ಲಿ ತನ್ನ ತಂದೆಯ ಹೆಸರಿನಲ್ಲಿ ತಿಮ್ಮಸಮುದ್ರವನ್ನು ಕಟ್ಟಿಸಿರುವನು. ಹಗರಿಬೊಮ್ಮನಹಳ್ಳಿ ಮಂಗಿಮಾವಿನಹಳ್ಳಿಯಲ್ಲಿ ತನ್ನ ಮಗಳಾದ ಕಾಮಮ್ಮನ ಹೆಸರಿನಲ್ಲಿ ಕಾಮಸಮುದ್ರವನ್ನು ನಿರ್ಮಿಸಿದನು. ಅಚ್ಯುತಮ್ಮನ ಹೆಸರಿನಲ್ಲಿರುವ ಅಚ್ಯುತಮ್ಮ ಸಮುದ್ರವನ್ನು ಸಂಡೂರು ತಾಲ್ಲೂಕಿನ ಹುಲಿಕುಂಟದಲ್ಲಿ ನಿರ್ಮಿಸಿದನು. ಪೋತಲಕಟ್ಟೆ ಗ್ರಾಮದಲ್ಲಿ ಆಕಸಮುದ್ರವನ್ನು ತನ್ನ ಮಗ ಆಕಪ್ಪನ ಹೆಸರಿನಲ್ಲಿ ಕಟ್ಟಿಸಿದನು. ಬಾಚಸಮುದ್ರವನ್ನು ತನ್ನ ಚಿಕ್ಕಪ್ಪ ಬಾಚರಸನ ಹೆಸರಿನಲ್ಲಿ ತಿಮ್ಮಲಾಪುರದಲ್ಲೂ, ವೀರಸಮುದ್ರವನ್ನು ತನ್ನ ಪತ್ನಿ ವೀರಮ್ಮನ ಹೆಸರಿನಲ್ಲಿ ವಂಟಿಗೋಡು ಗ್ರಾಮದಲ್ಲೂ ಕಟ್ಟಿಸಿರುವನು. ತಿಮ್ಮಲಾಪುರದ ಈಶಾನ್ಯಕ್ಕೆ ಕಾಡಿನಲ್ಲಿ ಪ್ರಾಚೀನ ಕಾಲದ ಕೆರೆಯೊಂದು ಕಂಡುಬರುತ್ತಿದ್ದು ಇದನ್ನು ಸ್ಥಳೀಯವಾಗಿ 'ಬಡಕಕೆರೆ'ಯೆಂದು ಕರೆಯಲಾಗುತ್ತಿದೆ. ಬಯಕಾರ ರಾಮಪ್ಪನ ಕೇಂದ್ರಸ್ಥಾನವಾದ ತಿಮ್ಮಲಾಪುರದ ಸಮೀಪದಲ್ಲಿಯೇ ಇದು ಕಂಡುಬರುವುದರಿಂದ ಇದು ಬಯಕಾರ ರಾಮಪ್ಪನು ನಿರ್ಮಿಸಿರುವ ಕೆರೆಯಾಗಿರಬೇಕೆಂದು ಊಹಿಸಬಹುದಾಗಿದೆ.[೧೦೭] ಕ್ರಿ.ಶ. ೧೫೩೫ರ ಒಂದು ಶಾಸನದಂತೆ

ಚಿಕ್ಕ ಗಂಡಸಿಗೆ ನೂತನ ನಾಮಕರಣ ಲಕ್ಕಸಮುದ್ರ ಎಂದೇ ಕರೆಯಲಾಯಿತು. ಈ ಕೆರೆಯನ್ನು ರಾಜನ ಗೆಳೆಯನಾದ ರಾಮಪ್ಪನ ತಾಯಿಯ ಹೆಸರಾದ ಲಕ್ಕಮಾಂಬ ಎಂದೇ ಹೆಸರಿಡಲಾಯಿತು.[೧೦೮]

ಬಯಕಾರ ರಾಮಪ್ಪನು ಪೊರುಮಾಮಿಲ್ಲ ಶಾಸನವು ಕೆರೆಯನ್ನು ನಿರ್ಮಿಸಬೇಕಾದರೆ, ಏನೆಲ್ಲಾ ಕ್ರಮ ಮತ್ತು ಮುನ್ನೆಚ್ಚರಿಕೆಗಳನ್ನು ತೆಗೆದುಕೊಳ್ಳಬೇಕೆಂದು ತಿಳಿಸಿರುವುದೋ ಆ ಎಲ್ಲಾ ರೀತಿಯ ಕ್ರಮಗಳನ್ನು ಕೈಗೊಂಡಿರುವುದನ್ನು ಗಮನಿಸಬಹುದಾಗಿದೆ. ಬಯಕಾರ ರಾಮಪ್ಪನು ಕೆರೆಗಳನ್ನು ನಿರ್ಮಿಸಿರುವ ಪ್ರದೇಶಗಳು ಉತ್ತಮ ಜೇಡಿ ಮಣ್ಣಿನಿಂದ ಕೂಡಿದ ಪ್ರದೇಶಗಳಾಗಿವೆ. ಕೆರೆಯ ನೀರಿನ ಹರವು ವಿಸ್ತಾರವಾಗಿಯೂ, ಆಳವಾಗಿಯೂ ಇರುವಂಥವಾಗಿವೆ. ಕೆರೆಯ ಪಕ್ಕದಲ್ಲಿಯೇ ಫಲವತ್ತಾದ ಜಮೀನುಗಳಿವೆ. ಅಲ್ಲದೆ ಮುನ್ನೆಚ್ಚರಿಕೆ ಕ್ರಮಗಳನ್ನು ಪಾಲಿಸಿರುವುದು ಕಂಡುಬರುತ್ತದೆ.

ಹೊಸಪೇಟೆ ತಾಲ್ಲೂಕಿಗೆ ಹೊಂದಿಕೊಂಡಂತೆ ಆ ವಿಜಯನಗರ ಕಾಲದ ಬಹುತೇಕ ಕೆರೆಗಳ ಏರಿಯು ಉತ್ತರಾಭಿಮುಖವಾಗಿದ್ದರೆ, ಬಯಕಾರ ರಾಮಪ್ಪನು ನಿರ್ಮಿಸಿದ ಬಹುತೇಕ ಕೆರೆಗಳ ಏರಿಗಳು ಪಶ್ಚಿಮಾಭಿಮುಖವಾಗಿ ಇರುವುದು ಕಂಡುಬರುತ್ತದೆ. ಇದಕ್ಕೆ ಕಾರಣವೆಂದರೆ ಹೊಸಪೇಟೆಯಿಂದ ಸಂಡೂರಿನುದ್ದಕ್ಕೂ ಬಾಚಿಕೊಂಡಿರುವ ಬೆಟ್ಟಗಳು ಉತ್ತರ ದಕ್ಷಿಣವಾಗಿ ಹರಡಿಕೊಂಡಿದ್ದು, ಅವುಗಳ ಮೇಲೆ ಬಿದ್ದ ನೀರು ಪಶ್ಚಿಮಾಭಿಮುಖವಾಗಿ ಹರಿದು ತುಂಗಭದ್ರಾ ನದಿಯನ್ನು ಸೇರುತ್ತವೆ.

ತುಂಗಭದ್ರಾ ನದಿಗೆ ಸೇರುವ ನೀರನ್ನು ತಡೆಹಿಡಿದು ಕೆರೆಯನ್ನು ಕಟ್ಟಿರುವುದರಿಂದ ಕೆರೆ ಏರಿಗಳು ಪಶ್ಚಿಮವಾಗಿವೆ.

ಭೌಗೋಳಿಕ ಪರಿಸರವನ್ನು ಅವಲಂಬಿಸಿ ಬಹುತೇಕವಾಗಿ ಕೆರೆಗಳ ಆಕಾರಗಳು ಕಂಡುಬರುತ್ತವೆ. ಚಕ್ರಪಾಣಿಮಿಶ್ರನ ವಿಶ್ವವಲ್ಲಭ ಕೃತಿಯು ವಿವಿಧ ಆಕಾರದ ಕೆರೆಗಳನ್ನು ಪ್ರಸ್ತಾಪಿಸುತ್ತದೆ. ಅವುಗಳಲ್ಲಿ ವೃತ್ತಾಕಾರ, ಚತುಷ್ಕೋನ, ಬಹುಕೋನಾಕೃತಿ, ಲಂಬಾಕಾರ, ಅರ್ಧಚಂದ್ರಾಕಾರಗಳು ಮತ್ತು ಆಯತಾಕಾರಗಳು ಸೇರಿವೆ.[೧೦೯] ಕಶ್ಯಪನು ಕೃಷಿಸೂಕ್ತಿಯಲ್ಲಿ ವೃತ್ತ, ಲಂಭ ಮತ್ತು ಅರ್ಧಚಂದ್ರಾಕಾರಗಳಲ್ಲಿ ಕೆರೆಯ ಆಕಾರವು ಇರಬಹುದೆಂದು ತಿಳಿಸುತ್ತಾನೆ.[೧೧೦] ಪರಿಸರಕ್ಕೆ ಅನುಗುಣವಾಗಿ ಕೆರೆಗಳನ್ನು ನಿರ್ಮಿಸಿರುವುದು ಸಹಜವೇ ಆಗಿದೆ. ಕೆರೆಗಳ ರಕ್ಷಣೆ ಮತ್ತು ದೀರ್ಘಕಾಲ ಬಾಳಿಕೆಗೆ ಬರಬೇಕೆಂದು ಕೆರೆಯ ಏರಿಯನ್ನು ಯಾವಾಗಲೂ ಅಂಕುಡೊಂಕಾಗಿ ನಿರ್ಮಿಸುತ್ತಿದ್ದರು. ಇದರಿಂದಾಗಿ ನೀರಿನ ಒತ್ತಡವು ಕೆರೆಯ ಏರಿಯಲ್ಲಿ ಹಂಚಿ ಹೋಗಿ ಕೆರೆ ಏರಿಯು ಸುರಕ್ಷಿತವಾಗಿರುತ್ತಿತ್ತು. ಒಮ್ಮೆ ಕೆರೆ ಕಟ್ಟೆ ಹೊಡೆದರೂ, ಏರಿಯ ಸಣ್ಣ ಭಾಗವು ಮಾತ್ರವೇ ಒಡೆಯುತ್ತಿತ್ತು. ಇದನ್ನು ದುರಸ್ಥಿಗೊಳಿಸುವುದು ಸುಲಭವಾಗಿತ್ತು. ಆ ಕಾರಣದಿಂದ ಕೆರೆಯನ್ನು ಅಂಕುಡೊಂಕಾಗಿ ನಿರ್ಮಿಸುತ್ತಿದ್ದರು. ಬಯಕಾರ

ರಾಮಪ್ಪನ ಕೆರೆಗಳನ್ನು ವೀಕ್ಷಿಸಿದಾಗ ಬಹುತೇಕ ಕೆರೆಗಳು ಅರ್ಧಚಂದ್ರಾಕಾರವಾಗಿ, ಕೆಲವು ಕೆರೆಗಳು ಅಂಕುಡೊಂಕಾಗಿರುವುದು ಕಂಡುಬರುತ್ತದೆ.

ಮಳೆಯ ನೀರನ್ನು ಆಶ್ರಯಿಸಿರುವಂತಹ ಕೆರೆಗಳನ್ನು ನಿರ್ಮಿಸುವಾಗ, ಪರಿಸರಕ್ಕನುಗುಣವಾಗಿ, ಮೂರು ಅಥವಾ ನಾಲ್ಕು ಕೆರೆಗಳನ್ನು ಸಮೀಪದಲ್ಲಿಯೇ ಒಂದಕ್ಕೊಂದು ಹೊಂದಿಕೊಂಡಿರುವಂತೆ, ಕಟ್ಟಿರುವುದನ್ನು ಗಮನಿಸಬಹುದಾಗಿದೆ. ಈ ರೀತಿಯಾದ ವ್ಯವಸ್ಥೆಯಿಂದ ಎರಡು ಪ್ರಯೋಜನಗಳಿವೆ. ಮೊದಲನೆಯದಾಗಿ ಒಂದು ಕೆರೆ ತುಂಬಿದಾಗ, ಹೆಚ್ಚುವರಿ ನೀರು ಮತ್ತೊಂದು ಕೆರೆಗೆ ಹರಿದುಬರುತ್ತದೆ. ಇದರಿಂದಾಗಿ ಮೊದಲನೆಯ ಕೆರೆಗೆ ಹೆಚ್ಚುವರಿ ನೀರು ಬಂದ ಪಕ್ಷದಲ್ಲಿಯೂ ಏರಿಗೆ ಯಾವುದೇ ವಿಧದ ಅಪಾಯವುಂಟಾಗುವುದಿಲ್ಲ. ಆ ಕೆರೆಯು ಸುರಕ್ಷಿತವಾಗಿರುತ್ತದೆ ಎರಡನೆಯ ಪ್ರಯೋಜವೆಂದರೆ ಹೆಚ್ಚುವರಿ ನೀರು ಪೋಲಾಗದಂತೆ ಎರಡನೆಯ ಕೆರೆಯಲ್ಲಿ ಶೇಖರಗೊಳ್ಳುತ್ತದೆ. ತಿಮ್ಮಲಾಪುರದಲ್ಲಿ ಈ ಪ್ರಯೋಗವನ್ನು ಕಾಣಬಹುದಾಗಿದೆ. ಚಿಲಕನಹಟ್ಟಿಯ ಪೂರ್ವಕ್ಕಿರುವ ಕೆರೆಯು ತುಂಬಿದಾಗ ಆ ಕೆರೆಯ ಹೆಚ್ಚುವರಿ ನೀರು ಚಿಲಕನಹಟ್ಟಿಯ ಪಶ್ಚಿಮಕ್ಕಿರುವ ಕೆರೆಯನ್ನು ನೀರುತ್ತದೆ. ಅಲ್ಲಿಯೂ ಹೆಚ್ಚಾದ ನೀರು ಮಂಗಿಮಾವಿನಹಳ್ಳಿ ಕೆರೆಯನ್ನು ಸೇರುತ್ತದೆ. ನಮ್ಮ ಪೂರ್ವಜರು ತಮ್ಮ ದೀರ್ಘ ಅನುಭವದಿಂದ ಈ ವಿಷಯವನ್ನು ಕಂಡುಕೊಂಡು ಅತ್ಯಂತ ವೈಜ್ಞಾನಿಕವಾಗಿ ತಮ್ಮ ದೈನಂದಿನ ಜೀವನದಲ್ಲಿ ಬಳಕೆಗೆ ತಂದಿರುವುದು ಶ್ಲಾಘನೀಯವಾಗಿದೆ.

ತಿಮ್ಮಲಾಪುರದ ಒಂದು ತೇದಿ ಇಲ್ಲದ ಶಾಸನವು ಕೌತುಕ ವಿಷಯವನ್ನು ತಿಳಿಸುತ್ತದೆ. ಕೆರೆಯಲ್ಲಿಯ ಒಂದು ಬಂಡೆಯ ಮೇಲೆ ಇದನ್ನು ಕೆತ್ತಲಾಗಿದೆ. ಅದು ಹೇಳುವಂತೆ ಕೆರೆಯ ಆಳೆತ್ತರದ ನೀರು ಸಂಗ್ರಹವನ್ನು ತಿಮ್ಮಲಾಪುರದ ಭೂಮಿಗಳಿಗೆಂದೇ ಉಪಯೋಗಿಸಬೇಕು. ವಿಸ್ಮಯಕಾರಿ ವಿಷಯ ಎಂದರೆ ಈ ಕೆರೆಯ ಆಳೆತ್ತರದ ನೀರನ್ನು ಮಾತ್ರ ಉಪಯೋಗಿಸಿ ಮಿಕ್ಕ ನೀರನ್ನು ಬೇರೆ ಕೆರೆಗಳಿಗೆ ಹರಿದು ಹೋಗಲು ಬಿಡಬೇಕು. ಕೆರೆಯಲ್ಲಿ ಶಾಸನ ಕೆತ್ತಿದ ಬಂಡೆಯು ಆಳೆತ್ತರ ಇದ್ದು ನೀರಿನ ಮಟ್ಟವನ್ನು ಸೂಚಿಸುತ್ತಿತ್ತೆಂದು ತೋರುತ್ತದೆ. ಬಹುಶಃ ಅದಕ್ಕಿಂತ ಹೆಚ್ಚಿನ ನೀರು ಶೇಖರಿಸಿದಲ್ಲಿ ಕೆರೆ ಒಡೆದು ಹೋಗುವ ಸಂಭವವೂ ಇತ್ತೆಂದು ತೋರುತ್ತದೆ.[೧೧೧]

ಬಯಕಾರ ರಾಮಪ್ಪನು ಕಟ್ಟಿಸಿದ ಕೆರೆಗಳು ಇಂದಿಗೂ ಹಲವರಿಗೆ ಉಪಯೋಗವಾಗಿರುವುದನ್ನು ಗುರುತಿಸಬಹುದಾಗಿದೆ. ರಾಮಪ್ಪನು ನಿರ್ಮಿಸಿದ ಎಲ್ಲಾ ಕೆರೆಗಳು ಮಳೆಯಾಧಾರಿತ ಕೆರೆಗಳಾಗಿವೆ. ಮಳೆಯು ಚೆನ್ನಾಗಿ ಬಂದು ಕೆರೆಗಳು ತುಂಬಿದರೆ ಅಚ್ಚುಕಟ್ಟು ಪ್ರದೇಶದ ಜನರು ಮುಖ್ಯವಾಗಿ ಭತ್ತವನ್ನು ಬೆಳೆಯುತ್ತಾರೆ ಮತ್ತು ಬೇಸಿಗೆಯ ಸಮಯದಲ್ಲಿ ಅಲ್ಪಾವಧಿ ಬೆಳೆಗಳಾದ ಶೇಂಗಾ, ಹಲಸಂದಿ, ಮೆಕ್ಕೆಜೋಳ, ರಾಗಿ, ಹೆಸರು, ಉದ್ದು, ತರಕಾರಿಗಳನ್ನು ಬೆಳೆಯುವರು. ಈ ಕೆರೆಗಳು

ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ೪೫ ಎಕರೆಯಿಂದ ೧೦೦ ಎಕರೆ ಅಚ್ಚುಕಟ್ಟು ಪ್ರದೇಶಗಳಿಗೆ ನೀರನ್ನು ಒದಗಿಸುವವು. ಇವುಗಳಲ್ಲಿ ನಡುವಲ ಕೆರೆ, ಜಂಬಯ್ಯನ ಕೆರೆ, ಪೋತಲಕಟ್ಟೆಕೆರೆ, ವಡಕೆರೆ, ನಂದಿಹಳ್ಳಿ ಕೆರೆಗಳು ಕಾಡಿನ ಅಂಚಿನಲ್ಲಿರುವುದರಿಂದ ಕಾಡು ಪ್ರಾಣಿಗಳಾದ ಚಿರತೆ, ಕಾಡುಹಂದಿ, ನವಿಲು, ಕಾಡುಬೆಕ್ಕು, ಇನ್ನಿತರ ಪ್ರಾಣಿ ಪಕ್ಷಿಗಳ ಬಾಯಾರಿಕೆಯನ್ನು ನಿವಾರಿಸುತ್ತವೆ. ಜನತೆಯು ಈ ಕೆರೆಗಳ ನೀರನ್ನು ಕುಡಿಯುವುದರ ಸಲುವಾಗಿ ಬಟ್ಟೆ ಒಗೆಯಲು ದನಕರುಗಳ ಮೈ ತೊಳೆಯಲು ಉಪಯೋಗಿಸುವರು.

ತಿಮ್ಮಲಾಪುರದಲ್ಲಿನ ನೀರುಗಂಟಿಗಳು, ಅಲ್ಲಿಯ ಪೋತಲಕಟ್ಟೆ, ನಡುವಲಕೆರೆ, ಜಂಬಯ್ಯನ ಕೆರೆಗಳ ನೀರನ್ನು ಆ ಕೆರೆಯ ಆಯಕಟ್ಟು ಪ್ರದೇಶಗಳಿಗೆ ಹರಿಸುತ್ತಾರೆ. ಜಮೀನಿನ ಅವಶ್ಯಕತೆಗನುಗುಣವಾಗಿ ಒಂದು ಸಲುಕ್ಕಿ ಅಥವಾ ಎರಡು ಸಲುಕ್ಕಿಯಷ್ಟು ನೀರನ್ನು ಕೆರೆಯಿಂದ ಹರಿಸುತ್ತಾರೆ. ಸಲುಕ್ಕಿಯೆಂದರೆ ಒಂದು ರಾತ್ರಿಯಲ್ಲಿ ಒಂದು ಎಕರೆಗೆ ಬೇಕಾಗುವಷ್ಟು ನೀರು ಎಂದರ್ಥ. ಕೆರೆಗಳು ಭರ್ತಿಯಾಗಿ ಆ ವರ್ಷ ಅಚ್ಚುಕಟ್ಟಿನಲ್ಲಿ ವ್ಯವಸಾಯವನ್ನು ಕೈಗೊಂಡರೆ ಮಾತ್ರ ಇವರುಗಳಿಗೆ ಕೆಲಸ ಇಲ್ಲದಿದ್ದರೆ ಈ ನೀರುಗಂಟಿಗಳು ಬೇರೆ ಕಡೆಗಳಲ್ಲಿ ವ್ಯವಸಾಯ ಮತ್ತು ಕೂಲಿ ಕೆಲಸಕ್ಕೆ ಹೋಗಿ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಾರೆ.

ಬಯಕಾರ ರಾಮಪ್ಪನು ನಿರ್ಮಿಸಿದ ಕೆರೆಗಳ ಜಲಾಯನ ಪ್ರದೇಶದಲ್ಲಿ ಅತಿ ಹೆಚ್ಚು ಗಣಿಗಾರಿಕೆ ನಡೆಯುತ್ತಿರುವುದರಿಂದ ಮಳೆಗಾಲದಲ್ಲಿ ಮಳೆಯ ನೀರಿನ ಜೊತೆಗೆ ಗಣಿ ತ್ಯಾಜ್ಯದ ಮಣ್ಣು ನೇರವಾಗಿ ಕೆರೆಗಳಿಗೆ ಒಂದು ಸೇರುತ್ತದೆ. ಇದರಿಂದಾಗಿ ಬಹುಪಾಲು ಕೆರೆಗಳು ಹೂಳಿನಿಂದ ತುಂಬಿದ್ದು, ಅವುಗಳ ನೀರಿನ ಹರವಿನ ವಿಸ್ತಾರ ಹಾಗೂ ಆಳವು ಕಡಿಮೆಯಾಗಿ ಅವುಗಳ ನೀರಿನ ಸಂಗ್ರಹಣೆಯ ಮಟ್ಟವು ಕಡಿಮೆಯಾಗಿದೆ. ಆದುದರಿಂದ ಈ ಕೆರೆಗಳನ್ನು ಸರಕಾರವು ರಕ್ಷಿಸಬೇಕೆಂದರೆ ಕೆರೆಗೆ ಬರುವ ಹೂಳನ್ನು ತಡೆಯಲು ಹಳ್ಳಗಳಿಗೆ ಅಡ್ಡ ಕಟ್ಟೆಗಳನ್ನು ನಿರ್ಮಿಸಬೇಕು. ಹಾಗೂ ಈ ಕೆರೆಗಳ ಹೂಳೆತ್ತುವ ಕಾರ್ಯವನ್ನು ನೀರಾವರಿ ಇಲಾಖೆಯವರು ಕೈಗೆತ್ತಿಕೊಳ್ಳಬೇಕಾಗಿದೆ.

**ಬಾವಿಗಳು**

ವಿಜಯನಗರ ಸಾಮ್ರಾಜ್ಯದ ಬಹುಪಾಲು ಭೂಪ್ರದೇಶವು ಅಲ್ಪಾವಧಿಯ ಮುಂಗಾರು ಮಳೆಯ ಮೇಲೆ ಅವಲಂಬಿತವಾಗಿತ್ತು. ಈ ಮುಂಗಾರು ಮಳೆಯ ಅನಿಶ್ಚಿತವಾಗಿತ್ತು. ಈ ಕಾರಣದಿಂದಾಗಿ ನೀರಾವರಿ ಕಾರ್ಯಗಳಿಗೆ ಅಂದಿನವರು ವಿವಿಧ ಕ್ರಮ ಕೈಕೊಂಡರು. ನದಿ ಮತ್ತು ಕೆರೆ ನೀರಾವರಿಯ ವಿಧಾನದಿಂದ ನೀರಾವರಿ ಕಾರ್ಯಗಳು ಅವಶ್ಯಕತೆ ಸಂಪೂರ್ಣವಾಗಿ ಸಾಕಾಗುತ್ತಿರಲಿಲ್ಲ. ಹೀಗಾಗಿ ಅವರು ಅಂತರ್ಜಲ ಮೂಲವನ್ನು ಅವಲಂಬಿಸಲೇಬೇಕಾಯಿತು.

ಇದರಿಂದ ಪ್ರಾದೇಶಿಕ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಬಾವಿಗಳನ್ನು ಅಗೆದು ಬೇಸಾಯಕ್ಕೆ ಬಳಸಿಕೊಂಡರು.

ನೀರಾವರಿ ಕಾರ್ಯಕ್ರಮಗಳಲ್ಲಿ ಸಾಮಾಜಿಕ ಮತ್ತು ಧಾರ್ಮಿಕವಾಗಿ ಬಾವಿಗಳಿಗೆ ತನ್ನದೇ ಆದ ಸ್ಥಾನವಿದೆ ಎಂಬುದನ್ನು ಮರೆಯಲಾಗದು. ಏಕೆಂದರೆ ವಿಷ್ಣು ಧರ್ಮೋತ್ತರದಲ್ಲಿ ಸಾರ್ವಜನಿಕರ ಹಿತಕ್ಕಾಗಿ ಬಾವಿ ಅಗೆಸಿದವನು ವರುಣಲೋಕದಲ್ಲಿ ಸ್ಥಾನ ಪಡೆಯುತ್ತಾನೆ ಎಂದು ತಿಳಿಸಿದೆ.[೧೧೨] ಸಾಹಿತ್ಯ ಕೃತಿಗಳಾದ ಬಾಣನ ಬರಹ, ಹಾಗೂ ಮಿಶ್ರ ಚಕ್ರಪಾಣಿಯ ವಿಶ್ವವಲ್ಲಭ ಮುಂತಾದ ಪುರಾತನ ಗ್ರಂಥಗಳಲ್ಲಿ ಬಾವಿಗಳ ಬಗೆಗೆ ಪವಿತ್ರ ಮತ್ತು ಪುಣ್ಯ ಭಾವನೆಗಳನ್ನು ವ್ಯಕ್ತಪಡಿಸಿದೆ.[೧೧೩] ವಿವಿಧ ಹೆಸರಿನ ಬಾವಿಗಳು ಕಂಡುಬರುತ್ತಿದ್ದ ಅವು ಹೀಗಿವೆ. ಶ್ರೀಮುಖ, ವಿಜಯ, ಪ್ರಾಂತ, ಧುದುಂಬಿ, ಮನೋಹರ, ಚೂಡಾಮಣಿ, ಭದ್ರ, ಜಯ, ಮಂದ ಮತ್ತು ಶಂಕರ.[೧೧೪]

ಬಾವಿಗಳು, ನೀರಾವರಿ ಉಪಯೋಗಕ್ಕಲ್ಲದೆ, ಮಾನವರ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಅಂಗಗಳಾಗಿದ್ದವು. ಅನೇಕ ವೇಳೆ ಅವು ದೇವಾಲಯದ ಹಾಗೂ ದೇವರುಗಳ ವಿವಿಧ ಕಾರ್ಯಗಳಿಗೆಂದೇ ನಿರ್ಮಿಸಲಾಗಿದ್ದವು. ಅನೇಕ ಕಾರ್ಯಗಳಿಗೆಂದೇ ಜನರು ಇಂದಿಗೂ ಬಾವಿಗಳನ್ನು ಅವಲಂಬಿಸಿದ್ದಾರೆ. ಬಾವಿಯಲ್ಲಿ ಗಂಗಮ್ಮ ಇರುತ್ತಾಳೆ ಎಂಬುದು ಅನೇಕರ ಭಾವನೆಯಾಗಿದೆ.

ಬಾವಿ ತೋಡಿಸಲು ನೀರು ಎಲ್ಲಿ ದೊರೆಯಬಹುದು ಎಂಬುದನ್ನು ತಿಳಿಯಲು ವಿವಿಧ ಮಾರ್ಗಗಳನ್ನು ಹಿಂದಿನ ಕಾಲದ ಜನರು ತಮ್ಮ ಅನುಭವದಿಂದ ಅರಿತಿದ್ದರು. ಈ ವಿಧಾನಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದವು. ಜಲ ಸಂಶೋಧಕರು ತಮ್ಮದೇ ಆದ ವಿಧಾನಗಳಿಂದ ಎಲ್ಲಿ ನೀರು ದೊರೆಯಬಹುದು ಎಂಬ ಸ್ಥಳಗಳನ್ನು ಗುರುತಿಸುತ್ತಿದ್ದರು. ಆ ಸ್ಥಳಗಳಲ್ಲಿ ಬಾವಿಗಳನ್ನು ತೋಡಲಾಗುತ್ತಿತ್ತು. ಹನ್ನೊಂದನೆಯ ಶತಮಾನಕ್ಕೆ ಸೇರಿದ 'ಲೋಕೋಪಕಾರ' ಎಂಬ ಕನ್ನಡ ಕೃತಿಯು ಜಲಸಂಶೋಧನೆಯ ಕುರಿತು ಒಂದು ಅಧ್ಯಾಯವನ್ನೇ ಹೊಂದಿದೆ. ಅದು ಹಲವಾರು ಗಿಡ, ಬಳ್ಳಿಗಳು ಬೆಳೆದಿದ್ದರೆ ಅದರಡಿಯಲ್ಲಿ ನೀರು ದೊರೆಯುತ್ತದೆ ಎಂಬುದನ್ನು ಸೂಚಿಸಿದೆ. ಅದು ಹೇಳುವಂತೆ ಆಲದಮರ, ಅಂಜೂರ ಗಿಡ ಮತ್ತು ಹಾವಿನ ಹುತ್ತು, ಪಚ್ಚೆಕಲ್ಲು, ಅಭ್ರಕ, ಪಾದರಸ ಹಾಗೂ ಲೋಹಗಳು ಇರುವ ಸ್ಥಾನದಲ್ಲಿ ನೀರು ಇರುತ್ತದೆ ಎಂದು ಹೇಳಿದೆ.[೧೧೫]

ನೀರಾವರಿಗೆಂದೇ ನಿರ್ಮಿಸಿದ ಬಾವಿಗಳು ಊರಿನಿಂದ ಹೊರಗಡೆಯ ಪ್ರದೇಶಗಳಾದ ಹೊಲ, ತೋಟ, ಗದ್ದೆಗಳಲ್ಲಿರುತ್ತಿದ್ದವು. ಜನರಿಗೆ ಕುಡಿಯಲು ಮತ್ತು ದೇವಸ್ಥಾನದಲ್ಲಿನ ಧಾರ್ಮಿಕ ಕಾರ್ಯಗಳಿಗೆಂದೇ ತೆಗೆಸಿದ ಬಾವಿಗಳು ಜನವಸತಿ ಪ್ರದೇಶದಲ್ಲಿರುತ್ತಿದ್ದವು. ಇವುಗಳ ರಚನೆ ಸಂಕಿರಣತೆಯಿಂದ ಒಡಗೂಡಿರುತ್ತಿತ್ತು. ಏಕೆಂದರೆ ಕೆಲವು ಬಾವಿಗಳು ದೇವತಾ ಮೂರ್ತಿಗಳಿಂದಲೂ,

ಮಂಟಪಗಳಿಂದಲೂ, ನಾಲ್ಕೂ ಬದಿಯಲ್ಲಿ ಪಾವಟಿಗೆಗಳಿಂದಲೂ ಕೂಡಿರುತ್ತಿದ್ದವು. ಅಲ್ಲದೆ ದೇವಸ್ಥಾನದ ಹೂದೋಟಗಳಿಗೆ ನೀರುಣಿಸುತ್ತಿದ್ದವು.

ಕ್ರಿ.ಶ. ೧೩೭೭ರ ಹಂಪೆಯ ಒಂದು ಶಾಸನವು ಭಕ್ತರ ನಾಗಪ್ಪ ಎಂಬುವನು ಒಂದು ಬಾವಿಯನ್ನು ಹಾಗೂ ಅದರ ಬಳಿಯಲ್ಲಿ ಒಂದು ಅಶ್ವತ್ಥ ವೃಕ್ಷವನ್ನು ನಡೆಸಿದನು. ಈ ಕಾರಣದಿಂದಾಗಿ ಈ ಸ್ಥಳವನ್ನು ಒಂದು ತೀರ್ಥವೆಂದೇ ಭಾವಿಸಿದರು.[೧೧೬] ಕ್ರಿ.ಶ. ೧೩೮೦ ಎರಡನೆಯ ಹರಿಹರನ ಕಾಲದ ಹಂಪೆಯ ಶಾಸನವು ಬಡ್ಡೆಯನಾಯಕ ಎಂಬ ಬೇಟೆಗಾರ 'ಯಡವಂಕ' ಎಂಬಲ್ಲಿದ್ದ ಹೂಟೆಯ ಬಳಿ 'ಒರ್ತೆಕುಂಡ' ಕೊಳವನ್ನು ನಿರ್ಮಿಸಿದನು. ಅರಸನ ಆಸ್ಥಾನದ ಸೇವಕನಾಗಿದ್ದ ಇವನು ಈ ಊಟಿ ಬಾವಿಯನ್ನು ಮೈಲಾರದೇವರ ಪವಿತ್ರ ಅಭಿಷೇಕದ ನೀರಿಗೆಂದೇ ಅಗೆಸಿದನು. ಆ ದೇವರನ್ನು ವರ್ತಿಯ ಮೈಲಾರ ದೇವನೆಂದೇ ಕರೆಯಲಾಯಿತು. ಈ ಬಾವಿಯನ್ನು ದೇವಸ್ಥಾನದ ಧಾರ್ಮಿಕ ಕಾರ್ಯಗಳಿಗೆ ಮಾತ್ರ ಬಳಸಲಾಗುತ್ತಿತ್ತು.[೧೧೭] ಹಿಂದೆ ವಿಜಯನಗರದ ಪರಿಮಿತಿಯಲಿದ್ದು ಮಲಪನಗುಡಿಯ ಶಾಸನವು ಕ್ರಿ.ಶ. ೧೪೧೨ಕ್ಕೆ ಸೇರಿದ್ದು ತುಂಬಾ ಕುತೂಹಲಕಾರಿಯಾಗಿದೆ. ಇದು ಹೇಳುವಂತೆ 'ಮಾಳಿಗೆ-ಕೂಪ-ಆರಾಮ' ಅಂದರೆ ಬಾವಿ ತೋಟದಿಂದೊಡಗೂಡಿದ ವಿಶ್ರಾಂತಿಧಾಮ. ಈ ಬಾವಿಯ ಉದ್ದೇಶವೆಂದರೆ ವಿಜಯನಗರದ ಹೆದ್ದಾರಿಯಲ್ಲಿ ಹೋಗುವ ಪ್ರಯಾಣಿಕರಿಗೆ ಬಾಯಾರಿಕೆಯನ್ನು ಹಿಂಗಿಸುವುದು ಹಾಗೂ ಅವರ ಮಾರ್ಗಾಯಾಸ ಪರಿಹಾರಕ್ಕಾಗಿ ತೋಟ ನಿರ್ಮಿಸಿದ್ದರು. ಈ ಅರವಟ್ಟಿಗೆ ಹಾಗೂ ತೋಟದ ಉಸ್ತುವಾರಿಗೆಂದೇ ಬುಳ್ಳಯ್ಯ ನಾಯಕನ ಮಗನಾದ ಹೆಗಡೆ ಸೋವನ್ನನೆಂಬ ದಾನಿಯು ಭೂಮಿಯನ್ನು ನೀಡಿದ್ದನು. ಇದರಿಂದ ಬಂದ ಆದಾಯವನ್ನು ಹಲವರು ಹಂಚಿಕೊಳ್ಳಬೇಕಾಗಿತ್ತು.[೧೧೮] ಹಂಪೆಯಲ್ಲಿನ ಒಂದು ಶಾಸನವು ಅಹಮ್ಮದ್‌ಖಾನ್ ಎಂಬ ಮುಸ್ಲಿಂ ಅಧಿಕಾರಿಯು ಧರ್ಮಶಾಲೆ ಹಾಗೂ ಬಾವಿಯ ಕಾರ್ಯಕ್ಕಾಗಿ ದಾನ ನೀಡಿದನು. ಮತ್ತು ಅವನು ಇದನ್ನು ಸಾರ್ವಜನಿಕರ ಸೌಖ್ಯಕ್ಕಾಗಿ ಹಾಗೂ ತನ್ನ ಒಡೆಯನಾದ ಎರಡನೇ ದೇವರಾಯನ ಪುಣ್ಯಸ್ಮರಣೆಗೆಂದೇ ಕ್ರಿ.ಶ. ೧೪೩೯ರಲ್ಲಿ ನಿರ್ಮಿಸಿದನು ಎಂದು ತಿಳಿಸುತ್ತದೆ.[೧೧೯] ಕ್ರಿ.ಶ. ೧೫೧೩ರ ಕಮಲಾಪುರದ ಶಾಸನವು ಎರಡು ವಿಧವಾದ ಬಾವಿಗಳನ್ನು ಸೂಚಿಸುತ್ತದೆ. ನಡಬಾವಿ, ಕಪ್ಪಲೆಬಾವಿ ಇದು ಅಂದಿನ ಬಾವಿಗಳ ರಚನೆಯ ವಿಧಾನವನ್ನು ಸೂಚಿಸುತ್ತದೆ. ಹಂಪೆಯಲ್ಲಿ ನೀರನ್ನು ಸಂಗ್ರಹಿಸಿಡುತ್ತಿದ್ದ ಸ್ಥಳಗಳನ್ನು ಸ್ನಾನಗೃಹ, ಅಷ್ಟಕೋನ ಸ್ನಾನಗೃಹ, ಸಾರ್ವಜನಿಕ ಸ್ನಾನಗೃಹ, ಇಳಿಯುವ ಬಾವಿ, ಜಲಮಂಟಪ, ವಿಹಾರಮಂಟಪ ಮುಂತಾದ ಹೆಸರಿನಿಂದ ಕರೆಯುತ್ತಿರುವುದನ್ನು ಕಾಣಬಹುದಾಗಿದೆ.

ತಿಮ್ಮಲಾಪುರದ ವೀರಭದ್ರ ದೇವಾಲಯದ ಮುಂದೆ ಸುಂದರವಾದ ಬಾವಿಯೊಂದಿಗೆ ಇದಕ್ಕೆ ೯೦ ಡಿಗ್ರಿ ಆಕಾರದಲ್ಲಿ ಪಾವಟಿಗೆಗಳನ್ನು ನಿರ್ಮಿಸಲಾಗಿದೆ. ಇದನ್ನು ಬಯಕಾರ ರಾಮಪ್ಪನು

ತನ್ನ ಮಗ ಲಿಂಗಾಲಯ್ಯನಿಗೆ ಪುಣ್ಯವಾಗಬೇಕೆಂದು ಕ್ರಿ.ಶ. ೧೫೪೯ರಲ್ಲಿ ಕಟ್ಟಿಸಿ, ಅದನ್ನು ಲಿಂಗಾಲಯ ಬಾವಿ ಎಂದು ಕರೆದಿರುವನು.[೨೦] ಹಾರುವನಹಳ್ಳಿಯ ೫೭ನೇ ಶಾಸನವು ಬಯಕಾರ ರಾಮಪ್ಪನ ಅಧಿಕಾರಿ ನಮಶಿವಾಯನು ಬಯಕಾರ ರಾಮಪ್ಪನ ಹೆಂಡತಿ ವೀರಂಮನ ಹೆಸರಿನಲ್ಲಿ ಒಂದು ಅರವಟ್ಟಿಗೆ ಮತ್ತು ಬಾವಿಯನ್ನು ಕಟ್ಟಿಸಿದನೆಂದು ಹೇಳುತ್ತದೆ.[೨೧] ಚಿಲಕನಹಟ್ಟಿಯ ೬೦ನೆಯ ಶಾಸನವು ಬಯಕಾರ ರಾಮಪ್ಪನು ತನ್ನ ಮಗಳು ಲಖರಸಮ್ಮನ ಹೆಸರಿನಲ್ಲಿ ಅರವಟ್ಟಿಗೆ ಮತ್ತು ಬಾವಿಯೊಂದನ್ನು ನಿರ್ಮಿಸಿದ ಸುಳಿವೊಂದನ್ನು ನೀಡುತ್ತದೆ.[೨೨] ಚಿಲಕನಹಟ್ಟಿಯ ಕನಕಪ್ಪನ ಹೊಲದಲ್ಲಿರುವ ಶಾಸನವು ೧೫೪೯ರಲ್ಲಿ ಬಯಕಾರ ರಾಮಪ್ಪನ ಪತ್ನಿಯಾದ ವೀರಮ್ಮಮ್ಮನು ತನ್ನ ಹೆಸರಿನಲ್ಲಿ ತೋಪೊಂದನ್ನು ನಡೆಸಿದ ವಿವರವಿದೆ.[೨೩] ಇದೇ ಹೊಲದಲ್ಲಿರುವ ಇನ್ನೊಂದು ಶಾಸನವು ಕ್ರಿ.ಶ. ೧೫೪೯ರಲ್ಲಿ ಬಯಕಾರ ರಾಮಪ್ಪನು ತನ್ನ ಹೆಸರಿನಲ್ಲಿ ತೋಪೊಂದನ್ನು ನೆಡಿಸಿದ ವಿವರವನ್ನು ಕೊಡುತ್ತದೆ.[೨೪]

ಹೊಸಪೇಟೆ ತಾಲ್ಲೂಕು ಚಿಲಕನಹಟ್ಟಿ ಜಂಬಯ್ಯನವರ ಜಮೀನ ಬಳಿ ಇರುವ ಶಾಸನವು ಬಯಕಾರ ರಾಮಪ್ಪನ ಅಧಿಕಾರಿ ನಮಶಿವಾಯನು ತನ್ನ ಹೆಸರಿನಲ್ಲಿ ತೋಪೊಂದನ್ನು ಕಟ್ಟಿಸಿದ ವಿವರವನ್ನು ಉಲ್ಲೇಖಿಸಿದೆ.[೨೫] ಕ್ರಿ.ಶ. ೧೫೩೬ರಲ್ಲಿ ಬಯಕಾರ ರಾಮಪ್ಪನು ನಂದಿ ಬಂಡೆಯ ಅರವಟ್ಟಿಗೆಯನ್ನು ಕಟ್ಟಿಸಿದ ವಿವರವನ್ನು ಮರಿಯಮ್ಮನಹಳ್ಳಿಯ ರೈಲ್ವೆ ಟ್ರಾಕ್ ಬಳಿಯ ಶಾಸನವು ಹೇಳುತ್ತದೆ.[೨೬] ಕೂಡ್ಲಿಗಿ ತಾಲ್ಲೂಕು ಶಿವಪುರ ಗ್ರಾಮದ ವಾಯುವ್ಯ ಭಾಗದಲ್ಲಿರುವ ಶಾಸನವು ೧೫೩೬ರಲ್ಲಿ ಬಯಕಾರ ರಾಮಪ್ಪನ ಪಾರುಪತ್ಯೆಗಾರ ನಮಶಿವಾಯನು ಬಯಕಾರ ರಾಮಪ್ಪನ ಹೆಸರಿನಲ್ಲಿ ಬಾವಿಯೊಂದನ್ನು ಕಟ್ಟಿಸಿದ ವಿವರವನ್ನು ಉಲ್ಲೇಖಿಸಿದೆ.[೨೭] ಮಗಿಮಾವಿನಹಳ್ಳಿಯ ಶಾಸನವು ಬಯಕಾರ ರಾಮಪ್ಪನು ತನ್ನ ಮಗ ಸಿಂಗಾಲಯ್ಯನಿಗೆ ಪುಣ್ಯವಾಗಲೆಂದು ಜಂಬುನಾಥನ ವಿಗ್ರಹವನ್ನು ಪ್ರತಿಷ್ಠಾಪಿಸಿದ ವಿವರವನ್ನು ಕೊಡುತ್ತದೆ.[೨೮]

**ಅಗ್ರಹಾರಗಳು**

ಒಂದು ಹೊಸ ಹಳ್ಳಿಯನ್ನು ನಿರ್ಮಿಸಬೇಕಾದರೆ, ಅದರ ಬಳಿಯ ಭೂಮಿಯನ್ನು ಸಾಗುವಳಿಗೊಳಿಸಲು ಅದರ ಆಸುಪಾಸು ಇರುವ ಕಾಡನ್ನು ನಿವಾರಿಸಿ ಭೂಮಿಯನ್ನು ಸಮತಟ್ಟಾಗಿಸಿ, ಅಲ್ಲಿ ಒಂದು ಕೆರೆಯನ್ನು ನಿರ್ಮಿಸಿ ನೀರಾವರಿಗೆ ಅವಕಾಶ ಮಾಡಿಕೊಡಬೇಕಾಗುತ್ತಿತ್ತು. ಕ್ರಿ.ಶ. ೧೪೧೬ರ ಒಂದು ಶಾಸನ ಹೇಳುವಂತೆ '......... ನಾವು ನಿಮಗೆ ತುಂಡು ಭೂಮಿ ನೀಡುವೆವು...... ಅದರಲ್ಲಿಯ ಕಾಡನ್ನು ಕಡಿದು ನೀವು ಅದನ್ನು ಸಾಗುವಳಿಗೆ ಏರ್ಪಡಿಸಬೇಕು, ನೀವು ತೋಡುವ ಕೆರೆಯು....' ಅದಲ್ಲದೆ ಇದೇ ಶಾಸನವು ಕೆರೆ ನಿರ್ಮಿಸಿದವರು ಹಾಗೂ ರಾಜ್ಯವು ೩:೧ ದಶಮಾಂಶದಂತೆ ಅಲ್ಲಿಯ ಭೂಮಿಯನ್ನು ಹಂಚಿಕೊಳ್ಳಬೇಕೆಂದು ಸೂಚಿಸಿದೆ.[೨೯]

ಒಂದು ಅಗ್ರಹಾರ ಅಥವಾ ಬ್ರಾಹ್ಮಣರ ಬೀಡನ್ನು ಸ್ಥಾಪಿಸಲು ಒಂದು ದಾರಿ ಎಂದರೆ ಅವರಿಗೆ ಖಾಲಿ ಭೂಮಿಯನ್ನು ಅಥವಾ ಅಡವಿ ಭೂಮಿಯನ್ನು ವಹಿಸಿಕೊಡುವುದು, ಅಲ್ಲಿ ಕೆರೆ ತೋಡಿಸುವುದು ಅವರ ಆದ್ಯ ಕರ್ತವ್ಯ ಅಥವಾ ಜವಾಬ್ದಾರಿಯಾಗುತ್ತಿತ್ತು. ಮೊದಲು ಕೆರೆ ನಿರ್ಮಾಣ, ಆಮೇಲೆ ಅಗ್ರಹಾರ ಸ್ಥಾಪನೆಯಾಗುತ್ತಿತ್ತು. ನಾಗನಾಯಕ ಎಂಬ ಅಧಿಕಾರಿ ಹಣ ಖರ್ಚು ಮಾಡಿ ಕೆರೆ ಕಟ್ಟಿದ್ದನ್ನು ತಿಳಿಸುತ್ತದೆ. ಅನಂತರ ಆತ ನಾನಾ ಶಾಸ್ತ್ರಗಳಲ್ಲಿ ಪಾರಂಗತರಾಗಿದ್ದ ನಲವತ್ತು ವಿದ್ವಾಂಸರನ್ನು ಕರೆಯಿಸಿ, ಅವರು ಬೇಕೇನ ಹಳ್ಳಿಯಲ್ಲಿ ನೆಲಸುವಂತೆ ಮಾಡಿದ ಆ ಸ್ಥಳವನ್ನು ಅಗ್ರಹಾರವಾಗಿ ಮಾಡುವಂತೆ ದೊರೆಯನ್ನು ಬೇಡಿಕೊಂಡ ಕೆರೆ ಹಾಗೂ ಅಗ್ರಹಾರ ಎರಡನ್ನೂ ದೊರೆಯ ಹೆಸರಿನಲ್ಲಿ ದೇವಸಮುದ್ರ ಎಂದು ಕರೆಯಲಾಯಿತು.

ಕನ್ನಡ ನಾಡಿನ ಅರಸರು ಮತ್ತು ಜನತೆಯ ಪರಂಪರೆಯ ಶಾಸನಗಳನ್ನು ಅಧ್ಯಯನ ಮಾಡಿದರೆ, ಅವು ಅಗ್ರಹಾರಗಳ ನಿರ್ಮಾಣಗಳ ಬಗ್ಗೆ ಮಾಹಿತಿಯನ್ನು ಕೊಡುತ್ತವೆ. ಶಾಸನಗಳು ತಿಳಿಸುವಂತೆ ಅಗ್ರಹಾರವು ವೃಕ್ಷರಾಜಗಳಿಂದ ಕೂಡಿರಬೇಕು. ಅವುಗಳಿಗೆ ನೀರುಣಿಸುವ ಕಾಲುವೆಗಳಿರಬೇಕು. ಅವುಗಳ ಸುತ್ತಲೂ ಸಮುದ್ರಗಳಂತಿರುವ ಕೆರೆಗಳಿರಬೇಕು. ಹಸಿರು ನಳನಳಿಸುವ ಬೆಳೆಗಳಿರಬೇಕು. ಹಾಗೂ ಜನಸಮೂಹ ಮತ್ತು ದೇವಾಲಯಗಳಿರಬೇಕು. ಈ ಪ್ರಾಚೀನ ಪರಂಪರೆಗೆ ಅನುಗುಣವಾಗಿ ಬಯಕಾರ ರಾಮಪ್ಪನು ಕರ್ನಾಟಕ ಮತ್ತು ಆಂಧ್ರದ ವಿವಿಧ ಸ್ಥಳಗಳಲ್ಲಿ ಅಗ್ರಹಾರಗಳನ್ನು ಕಟ್ಟಿಸಿದನು.

ರಾಮಪ್ಪನು ಇಂದಿನ ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಹೊನ್ನವಳ್ಳಿ ಸೀಮೆಯ ಆಡಳಿತಗಾರನಾಗಿದ್ದಾಗ ಕ್ರಿ.ಶ. ೧೫೩೫ರಲ್ಲಿ ಚಿಕ್ಕ ಗಂಡಸಿಯಲ್ಲಿ ಅಗ್ರಹಾರವನ್ನು ಸ್ಥಾಪಿಸಿದನು. ಅದನ್ನು ಲಕ್ಕಸಮುದ್ರ ಎಂದೇ ಕರೆಯಲಾಯಿತು. ಇಲ್ಲಿನ ಕೆರೆಯನ್ನು ತನ್ನ ತಾಯಿಯ ಹೆಸರಿನಲ್ಲಿ ಕರೆದನು. ಇಲ್ಲಿ ಹಲವಾರು ಬ್ರಾಹ್ಮಣರಿಗೆ ಅನೇಕ ಹಳ್ಳಿಗಳನ್ನು ಹಂಪಿಯ ವಿರೂಪಾಕ್ಷ ಮತ್ತು ವಿಠಲದೇವರ ಸನ್ನಿಧಿಯಲ್ಲಿ ದಾನವಾಗಿ ನೀಡಿದನು.[೧೬೦] ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕಿನ ಹುಲಿಕುಂಟ ಗ್ರಾಮದಲ್ಲಿ ಅಚ್ಯುತಮ್ಮ ಸಮುದ್ರ ಕಟ್ಟಿಸಿ, ಮತ್ತೊಂದು ಅಗ್ರಹಾರವನ್ನು ನಿರ್ಮಿಸಿದನು. ತನ್ನ ಮಗಳಿಗೆ ಪುಣ್ಯವಾಗಲೆಂದು ಈ ಸೇವೆಯನ್ನು ಕೈಗೊಂಡು ಆ ಅಗ್ರಹಾರವನ್ನು ಅಚ್ಯುತಮ್ಮಪುರವೆಂದು ಕರೆದು ಅಲ್ಲಿ ಬಾಲಕೃಷ್ಣ ದೇವಾಲಯವನ್ನು ಕಟ್ಟಿಸಿದನು.[೧೬೧] ಅಲ್ಲದೇ ತನ್ನ ತಂದೆಗೆ ಪುಣ್ಯ ಪ್ರಾಪ್ತವಾಗಲೆಂದು ಕ್ಷುಲ್ಲಕರಡ್ಡು ಹಳ್ಳಿ ಮತ್ತು ಚಿಗೋಡು ಗ್ರಾಮಗಳನ್ನು ಒಂದುಗೂಡಿಸಿ ಶ್ರೀತಿಮ್ಮಾಪುರ ಅಗ್ರಹಾರವೆಂದು ಕರೆದನು.[೧೬೨] ಮಂಗಿಮಾವಿನಹಳ್ಳಿಯನ್ನು ಪೆದತಿಮ್ಮಾಲಾಪುರವೆಂಬ ಹೆಸರಿನಲ್ಲಿ ಮತ್ತೊಂದು ಅಗ್ರಹಾರವನ್ನಾಗಿ ಪರಿವರ್ತಿಸಿ ಅಲ್ಲಿ ತನ್ನ ತಂದೆ ಪೆದತಿಮ್ಮಯ್ಯ ಮತ್ತು

ತಾಯಿ ಹಿರಿಯ ಲಕ್ಕಲೀಶಮ್ಮಗೆ ಪುಣ್ಯವಾಗಲೆಂದು ಕ್ರಿಶ. ೧೫೪೯ರಲ್ಲಿ ಗೋಪಿನಾಥ ದೇವಾಲಯವನ್ನು ಕಟ್ಟಿಸಿದನು.[೧೩೩]

ಅಗ್ರಹಾರಗಳನ್ನು ಸ್ಥಾಪಿಸುವ ಮೂಲಕ ಬಯಕಾರ ರಾಮಪ್ಪನು ಸಾಹಿತ್ಯ ಮತ್ತು ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದನು. ಈತನು ತನ್ನ ಶಿಷ್ಯೆಯಾದ ಗೋಪಮ್ಮನಿಗೆ ಸಂಗೀತ ಮತ್ತು ಆಗಮಶಾಸ್ತ್ರಗಳನ್ನು ಬೋಧಿಸಿದ್ದನು. ಅಗ್ರಹಾರಗಳ ಸ್ಥಾಪನೆ, ದೇವಾಲಯಗಳ ನಿರ್ಮಾಣ, ವಿದ್ವತ್ಕೃತಿಗಳ ರಚನೆ, ದಾನ ಧರ್ಮ ಕಾರ್ಯಗಳು, ಕೆರೆ, ಬಾವಿ ಕಟ್ಟಿಸುವಂತ ಲೋಕೋಪಯೋಗಿ ಕಾರ್ಯಗಳು ಮುಂತಾದ ಕ್ರಿಯಾಶೀಲ ಕೆಲಸಗಳು ಬಯಕಾರ ರಾಮಪ್ಪನ ಶಕ್ತಿ ಸಾಮರ್ಥ್ಯಗಳು ಅಸದೃಶವಾಗಿವೆ ಎಂದು ಹೇಳಬಹುದು.

**ಅಡಿಟಿಪ್ಪಣಿಗಳು:**

೦೧. Geroge Buchlcr (T4) The laways of Manu-Scared Boon of the Gart, 25, 7-5, 115 page-234

೦೨. ವೆಂಕಟರತ್ನಂ ಎ.ವಿ, ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರಕಾರ, ಪು-೨೨.

೦೩. ಎ.ಕ.೪, ಸಿ.ಎಚ್., ೨೦೬.

೦೪. ಕ.ವಿ.ವಿ. ಶಾ.ಸಂ-೫, ಭಾಗ-೧, ಸಂಖ್ಯೆ - ೧೭೩

೦೫. ನೆಲಟೂರು ವೆಂಕಟ ರಮಣಯ್ಯ, ಅನು: ಗುರುಮೂರ್ತಿ ಪೆಂಡಕೂರು ಪು.೧೦೯.

೦೬. F.E.P.P. 303-4

೦೭. ಅದೇ, ಪುಟ-೩೧೮

೦೮. Forther Sources of Vijayanagara History, Vol-II, No-122.

೦೯. ಇಂಗ್ಲೀಷ್-ಕನ್ನಡ ನಿಘಂಟು, ಮೈಸೂರು ವಿಶ್ವವಿದ್ಯಾಲಯ, ಪು ೧೯೯೯

೧೦. ರಾಮಚಂದ್ರರಾವ್ ಎಸ್.ಕೆ. ಭಾರತದ ದೇವಾಲಯದ ನೆಲೆ-ಹಿನ್ನೆಲೆ ಬೆಂ.ವಿ.ವಿ.ಪು ೭

೧೧. ಶಿವರಾಮಕಾರಂತ ಕೆ. ಭಾರತೀಯ ಶಿಲ್ಪ ಪು ೧೫

೧೨. ಎ.ಕ XV ಮೊಳಕಾಲ್ಮುರು ೨೨ ಕ್ರಿಶ ೯೬೩

೧೩. ರಾವ್ ಎಸ್.ಆರ್., ಜೆ.ಒ.ಇ.ಎಸ್.ಐ ವ್ಯಾಲೂಂ II ಪುಟ ೮೨

೧೪. ಸರ್ಕಾರ್ ಡಿ.ಸಿ. ಸೆಲೆಕ್ಟ್ ಇನ್ಸ್ಕ್ರಿಪ್ಷನ್ ಪುಟ ೯೦-೯೧

೧೫. ರಾವ್ ಎಸ್.ಆರ್., ಜೆ.ಓ.ಇ.ಎಸ್.ಐ

೧೬. ಅಗರವಾಲ್ ಪಿ.ಕೆ., ಟೆಂಪಲ್ ಆರ್ಕಿಟೆಕ್ಚರ್ ಇನ್ ಗುಪ್ತ ಪೀರಿಯಡ್ ಪುಟ ೨೫-೩೬

೧೭. ರಾಮಚಂದ್ರರಾವ್ ಎಸ್.ಕೆ., ಭಾರತದ ದೇವಾಲಯ ನೆಲೆ-ಹಿನ್ನಲೆ ಪು-೧೬

೧೮. ವೆಂಕೋಬರಾವ್ ವಿ., ಮೈಸೂರು ದೇಶದ ವಾಸುಶಿಲ್ಪ ಪು-೧೬

೧೯. ರಾಮಚಂದ್ರರಾವ್ ಎಸ್.ಕೆ., ಭಾರತದ ದೇವಾಲಯ ನೆಲೆ-ಹಿನ್ನಲೆ ಪು-೨೩

೨೦. ಶಿವರಾಮಕಾರಂತ ಕೆ., ಚಾಲುಕ್ಯ ವಾಸ್ತುಶಿಲ್ಪಕಲೆ ಪು-೧೦

೨೧. ರಾಮಚಂದ್ರರಾವ್ ಎಸ್.ಕೆ., ಭಾರತದ ದೇವಾಲಯ ನೆಲೆ-ಹಿನ್ನಲೆ ಪು ೨೨

೨೨. ಎ.ಕ. VII ಶಿಕಾರಿಪುರ ೧೭೬ ಕ್ರಿಶ ೪೫೦

೨೩. ಶ್ರೀಕಂಠಶಾಸ್ತ್ರಿ ಎಸ್., ಹೊಯ್ಸಳ ವಾಸ್ತುಶಿಲ್ಪ ಪು-೧

೨೪. ಸುಂದರ ಅ. ಪುಟ-೨೬೫

೨೫. ಗುಪ್ತ ಆರ್.ಎಸ್., ದಿ ಆರ್ಟ್ ಅಂಡ್ ಆರ್ಕಿಟೆಕ್ಚರ್ ಆಫ್ ಐಹೊಳೆ ಪುಟ ೧೧

೨೬. ಪ್ರಭಾಕರ್ ಎಂ.ಎಸ್. ದೇವಾಲಯ ವಾಸ್ತು ಚಂದ್ರಿಕೆ ಪು ೨೦

೨೭. ರಾವ್ ಎಸ್.ಆರ್., ದಿ ನೋಟ್ ಆನ್ ದಿ ಕ್ರಾನಾಲಜಿ ಆಫ್ ಅರ್ಲಿ ಚಾಲುಕ್ಯನ್ ಟೆಂಪಲ್ಸ್, ಸಂ-೧೫.ಪು೯

೨೮. ಶೀಲಾಕಾಂತ ಪತ್ತಾರ, ಬಾದಾಮಿ ಸಾಂಸ್ಕೃತಿಕ ಅಧ್ಯಯನ

೨೯. ಅಪರಾಜಿತ ಪೃಚ್ಛಾ, ಅಧ್ಯಾಯ ೧೪೬, ಶ್ಲೋಕ ೩೬-೩೭ ಪು ೨೬೭

೩೦. ಶಿವರಾಮಕಾರಂತ ಕೆ., ಚಾಲುಕ್ಯ ವಾಸ್ತು ಮತ್ತು ಶಿಲ್ಪ ಪು ೧೮

೩೧. ಗುಡಿ ಜನರ ಜೀವನಾಡಿ, ಪೂರ್ವೋಕ್ತ, ಪು ೪೯

೩೨. ಸ್ಟೆಲ್ಲಾ ಕ್ರಾಮರೀಷ್, ದಿ ಹಿಂದೂ ಟೆಂಪಲ್ ಸಂ-ಟ ಪು ೨೯೧

೩೩. ರಾಜಶೇಖರನ್.ಎಸ್. ಕರ್ನಾಟಕ ವಾಸ್ತು ಶಿಲ್ಪ ಮತ್ತು ಚಿತ್ರಕಲೆ ಪು ೬೭

೩೪. ನಾಗರಾಜರಾವ್ ಎಚ್.ಎಂ. ಹೊಯ್ಸಳ ವಾಸ್ತುಶಿಲ್ಪ ಪು ೧೮

೩೫. ಪರ್ಸಿ ಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್ ವ್ಯಲ್ಯೂಂ-I, ಪು ೯೧

೩೬. ಇತಿಹಾಸ ದರ್ಶನ ಸಂ-೧, ಪು ೪೮

೩೭. ಪರ್ಸಿಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್ ವ್ಯಾಲ್ಯೂಂ-I, ಪು ೪೮

೩೮. ಶಿವರುದ್ರಸ್ವಾಮಿ ಎಸ್.ಎನ್., ಬಯಕಾರ ರಾಮಪ್ಪ ಪುಟ-೨೧

೩೯. ಅದೇ, ಪುಟ-೨೨

೪೦. ಅಯ್ಯರ್ ರಾಮಸ್ವಾಮಿ ಎಂ.ಎಸ್. (ಸಂ) ಸ್ವರಮೇಳಕಲಾನಿಧಿ ಪುಟ-೪೩

೪೧. ನರಸಿಂಹ ಬಿ. ಮೆಟ್ರೋಪಾಲಟೀಸ್ ವಿಜಯನಗರ ಪು ೩೧-೩೮

೪೨. ಶಿವರುದ್ರಸ್ವಾಮಿ ಎಸ್.ಎನ್., ಹಂಪಿಯ ಕಮಲ್ ಮಹಲ್: ಕೆಲ ಹೊಸ ಶೋಧನೆಗಳು. ಪುಟ-೧೫೨.

೪೩. ರಾಬರ್ಟ್ ಸಿವೆಲ್. ದಿ ಫರ್‌ಗಾಟನ್ ಎಂಪಾಯರ್ ಪು ೨೮೨

೪೪. ಶರ್ವಾನಿ ಹೆಚ್.ಕೆ. ಮತ್ತು ಜೋಷಿ.ಪಿ. ಹಸ್ಟರಿ ಆಫ್ ಮೆಡಿವಲ್ ಡೆಕ್ಕನ್ ಪು ೩೨೭

೪೫. ಅಯ್ಯರ್ ರಾಮಸ್ವಾಮಿ., ಎಂ.ಎಸ್.ಐ,ಬಿ,ಐ,ಡಿ. ಪು.೪೩

೪೬ ಎನ್ ಸೈಕ್ಲೋಪಿಡಿಯಾ ಬ್ರಿಟಾನಿಕಾ, ಸಂ.xvii ಪುಟ-೬೪೧.

೪೭ ಬಿಸ್ತಾ ಆರ್.ಎಸ್. ದೋಲಾವೆರಾ ಎ ಹರಪ್ಪನ್ ಸೆಟಲ್‌ಮೆಂಟ್.

೪೮. ಋಗ್ವೇದ ಮಂಡಲ, I, ೧೦೫, ಸೂಕ್ತ, ೧೨ನೆಯ ಶ್ಲೋಕ.

೪೯. ಶರ್ಮಾ ಪಿ.ಕೆ. ಜನರಲ್ ಆಫ್ ಇಂಡಿಯನ್ ಹಿಸ್ಟರಿ ಸಂ.xi ಪುಟ-೩೦೨.

೫೦. ಮಹಾಭಾರತ ಸಭಾಪರ್ವ, v. ೭೭

೫೧. ಕೌಟಿಲ್ಯನ ಅರ್ಥಶಾಸ್ತ್ರ-II, ೨೧.೧೮

೫೨. ಅದೇ, ೩೫೨.

೫೩. ಶರ್ಮಾ ಪಿ.ಕೆ. ಪೂರ್ವೋಕ್ತ

೫೪. ಭೂಮಿವರ್ಗ, ಪುಟ-೩೨೦.

೫೫. ರಾವ್.ಸಿ.ಎಚ್., ಮೈಸೂರು ಗ್ಯಾಸಟಿಯರ್, ಸಂ-೧, ಪುಟ-೧೦.

೫೬ ರಮೇಶ್.ಕೆ.ವಿ. ಇನ್ಸ್‌ಕ್ರಿಪ್ಷನ್ ಆಫ್ ವೆಸ್ಟರ್ನ್ ಗಂಗಾಸ್, ಪುಟ-೧೬.

೫೭ ಅದೇ, ಪೂರ್ವೋಕ್ತ, ಪುಟ-೧೧೪-೧೧೭.

೫೮. I.b.I.d- No.137, P-410.

೫೯. ISVE. P-18-19.

೬೦. ಹೆಚ್.ಎ.ಎಸ್. ಸಂಖ್ಯೆ-೧೦೫, ಪುಟ-೧೦.

೬೧. ವಾಸುದೇವನ್ ಸಿ.ಎಸ್. ಹಂಪಿ ಪರಿಸರದ ಕೆರೆಗಳು. ಪುಟ-೧೮.

೬೨. ಇ.ಪಿ.ಡಿ. ಕಾರ್ನ್ ವ್ಯಾಲ್ಯೂಂ ಸಂ.II. ೪೦೨.

೬೩. ನಿರುಪಮಾ (ಸಂ). ಆಮೂಕ್ತ ಮೌಲ್ಯದ (ಭಾಷಾಂತರ). ಪುಟ-೨೩೭.

೬೪. ಐ.ಬಿ.ಐ.ಡಿ. ವ್ಯಾಲ್ಯೂಂ-VII. ಸಂ-೩೦. ಪುಟ-೩೮-೩೯.

೬೫. ಮೈ.ಎ.ಆರ್.. ೧೯೧೪. ಪುಟ-೪೫.

೬೬ ರಮಣಯ್ಯ ಎನ್.ವಿ. ಸ್ಟಡೀಸ್ ಇನ್ ಹಿಸ್ಟರಿ ದಿ ಥರ್ಡ್ ಡೈನಾಸ್ಟಿ ಆಫ್ ದಿ ವಿಜಯನಗರ. ಪುಟ-೧೮೭.

೬೭ ಇ.ಪಿ.ಐ. ಕಾರ್ನ್. ವ್ಯಾಲ್ಯೂಂ X. ಜಿ.ಬಿ.೬. ಪುಟ-೨೨೯.

೬೮. ಸಾ.ಇಂ.ಇ. ವ್ಯಾಲ್ಯೂಂ XVI. ಸಂ.೧೨೧. ಪುಟ-೧೩೪.

೬೯. Nevbaver. J.J. The Step Wells of Gujarat. P.6

೭೦. E.P.I.1nd Vol.XIV, Lines 20-21, P-101.

೭೧. ಅಪ್ಪಾದೊರೈ. ಎ. ಎಕನಾಮಿಕ್ಸ್ ಕಂಡೀಷನ್ಸ್ ಇನ್ ಸೌತ್ ಇಂಡಿಯಾ. ವ್ಯಾಲ್ಯೂಂ I. ಪುಟ-೨೦೧.

೭೨. ಐ.ಬಿ.ಐ.ಡಿ. ವ್ಯಾಲ್ಯೂಂ II. ಸಂ-೧೨೮. ಪುಟ-೨೯೦.

೭೩. ಎ.ಆರ್.ಎಸ್.ಟಿ.. ಇಪಿಡಿ. ಪುಟ-೧೮೭.

೭೪. ಸೌ.ಇ.ಇ. ವ್ಯಾಲ್ಯೂಂ IV. ಸಂ.೨೬೭. ಪುಟ-೬೪.

೭೫. ಇ.ಪಿ.ಡಿ. ಕಾರ್ನ್. ವ್ಯಾಲ್ಯೂಂ X. ಸಂ.೧೦೪. ಪುಟ-೨೫.

೭೬ ಸೌ.ಇ.ಇ. ವ್ಯಾಲ್ಯೂಂ IX. ಸಂ.೫೦೪. ಪುಟ-೫೧೮.

೭೭ ಅದೇ. ಸಂ.೫೦೭. ಪುಟ-೨೫೧.

೭೮. ನೆಲ್ಲೂರು ಇನ್‌ಕ್ರಿಪ್ಷನ್ಸ್. ಭಾ-೧. ಪುಟ-೨೦೫-೨೩೯.

೭೯. ಕ.ವಿ.ವಿ. ಶಾಸನ ಸಂ.೧. ಬಳ್ಳಾರಿ.

೮೦. ಅದೇ.

೮೧. ಐ.ಬಿ.ಐ.ಡಿ. ಪು-೪೪೯.

೮೨. ಇ.ಪಿ.ಡಿ. ಕಾರ್ನ್. ವ್ಯಾಲ್ಯೂಂ VII. ಸಿ.ಪಿ.ಸಂ.೬೫. ಪುಟ-೬೪.

೮೩. ಐ.ಬಿ.ಐ.ಡಿ. ವ್ಯಾಲ್ಯೂಂ XI, ಡಿ.ಜಿ. ಸಂ.೧೨೦, ಪುಟ-೧೮೨.

೮೪. ಅದೇ, ಸಂ-೫೬, ಪುಟ-೨೩.

೮೫. ಇ.ಪಿ.ಐ. ಕಾರ್ನ್, ವ್ಯಾಲ್ಯೂಂ XII, ಪಾವಗಡ, ಸಂ.೫೫, ಪುಟ-೩೭೮.

೮೬. ಬಳ್ಳಾರಿ ಜಿಲ್ಲೆ ಶಾಸನ ಸಂ.೧

೮೭. ಎಫ್. ಕಾರ್ನ್, ಸಂ.VII, ಸಂ.ಎಸ್.ಹೆಚ್.೩೫.

೮೮. ದೀಕ್ಷಿತ್ ಜಿ.ಎಸ್. ಮತ್ತು ಇತರರು ಟ್ಯಾಂಕ್ ಇರಿಗೇಷನ್ ಇನ್ ಕರ್ನಾಟಕ, ಪುಟ-೧೩೯-೧೪೨.

೮೯. ವಾಸುದೇವನ್ ಸಿ.ಎಸ್, ಹಂಪಿ ಪರಿಸರದ ಕೆರೆಗಳು, ಪುಟ-೨೨-೨೩.

೯೦. ಅದೇ.

೯೧. ಕುಪ್ಪುಸ್ವಾಮಿ ಜಿ.ಆರ್. ಕ್ಯು.ಜೆ.ಎಂ.ಎಸ್. ಸಂ.LXXIV, ಸಂ-೪, ಪುಟ-೪೨೦.

೯೨. ಐ.ಎಸ್.ವಿ.ಇ. ಪುಟ-೬೭.

೯೩. ಹಂಪಿ ಪರಿಸರದ ಕೆರೆಗಳು, ಪುಟ-೩೧.

೯೪. ಕ.ವಿ.ವಿ. ಶಾ.ಸಂ. ಬಳ್ಳಾರಿ-೧, ಪುಟ-೩೧.

೯೫. ಅದೇ.

೯೬ ಅದೇ.

೯೭ ಅದೇ.

೯೮. ಅದೇ.

೯೯. ಅದೇ.

೧೦೦. ಅದೇ.

೧೦೧. ಅದೇ.

೧೦೨. ಅದೇ.

೧೦೩. ಅದೇ.

೧೦೪. ಅದೇ.

೧೦೫. ಅದೇ.

೧೦೬. ಅದೇ.

೧೦೭. ಅದೇ.

೧೦೮. ಅದೇ.

೧೦೯. ಅದೇ.

೧೧೦. ಕ್ಷೇತ್ರಕಾರ್ಯದಲ್ಲಿ ಗುರುತಿಸಲಾಗಿದೆ.

೧೧೧. ಇ.ಪಿ.ಡಿ.ಕಾರ್ನ್ ಅರಸಿಕೆರೆ, ೧೨೬, ಪುಟ-೧೬೯.

೧೧೨. ಧ್ರುವನಾರಾಯಣ ಎಂ. (ಅನು) ಕೊಟ್ರಯ್ಯ ಸಿ.ವಿ.ಎಂ., ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪುಟ-೭೪-೭೫.

೧೧೩. ಅದೇ. ಪುಟ-೩೫.

೧೧೪. ಅದೇ. ಪುಟ-೧೦೧.

೧೧೫. Nevbaver. J.J. The Step Wells of Gujarat. P.6

೧೧೬. ಐ.ಬಿ.ಐ.ಡಿ.

೧೧೭. ದೀಕ್ಷಿತ್ ಡಿ.ಡಿ. ಅಗ್ರಿಕಲ್ಚರ್, ಇರಿಗೇಷನ್, ಅಂಡ್ ಹಾರ್ವಿಕಲ್ಚರ್ ಇನ್ ಏನ್ಷಯಿಂಟ್ ಇಂಡಿಯಾ, ಪುಟ-೨೧೭.

೧೧೮. ಕರ್ನಾಟಕ ಸ್ಟೇಟ್ ಗ್ಯಾಸಟೀಯರ್, ಭಾ-೧, ಪುಟ-೬೬೯.

೧೧೯. ವಿಜಯನಗರ ಪ್ರೊಗ್ರೇಸ್ ಆಫ್ ರಿಸರ್ಚ್, ವ್ಯಾಲೂಂ-III, ಸಂ-೧೦೫, ಪುಟ-೪೯-೫೦.

೧೨೦. ಪಾಟೀಲ್ ಸಿ.ಎಸ್. ಮಾಳಿಗೆ ಕೂಪ ಆರಾಮ ಅಟ್ ಮಲಪನಗುಡಿ, ಅದೇ-೧೭೭.

೧೨೧. ಅದೇ, ಪುಟ-೬೩.

೧೨೨. ಬಳ್ಳಾರಿ ಜಿಲ್ಲಾ ಶಾಸನ ಸಂ-೧, ಸಂ.೫೫, ಪುಟ-೧೭೮.

೧೨೩. ಅದೇ, ಸಂ.೫೭, ಪುಟ-೧೯೦.

೧೨೪. ಅದೇ, ಸಂ.೬೦, ಪುಟ-೧೯೧.

೧೨೫. ಅದೇ, ಸಂ.೫೭, ಪುಟ-೧೯೦.

೧೨೬. ಅದೇ, ಸಂ.೫೮, ಪುಟ-೧೯೧.

೧೨೭. ಅಪ್ರಕಟಿತ ಶಾಸನ

೧೨೮. ಅದೇ.

೧೨೯. ಅದೇ.

೧೩೦. ಅದೇ.

೧೩೧. ಮಹಾಲಿಂಗಂ ಟಿ.ವಿ. ಅಡ್ಮಿನಿಸ್ಟ್ರೇಷನ್ ಅಂಡ್ ಸೋಷಯಲ್ ಲೈಫ್ ಅಂಡರ್ ವಿಜಯನಗರ, ಭಾ-೨, ಪುಟ-೭೮.

೧೩೨. ಇ.ಪಿ.ಐ. ಕಾರ್ನ್ V, ಅರಸೀಕೆರೆ ಸಂ-೧೨೬, ಪುಟ-೧೬೯.

೧೩೩. ಬಳ್ಳಾರಿ ಶಾಸನ ಸಂ-೧.

೧೩೪. ಅದೇ.

೧೩೫. ಅದೇ.

## ಅಧ್ಯಾಯ ೫

# ಸಂಗೀತ ಕ್ಷೇತ್ರಕ್ಕೆ ಕೊಡುಗೆ

ಅ. ಕರ್ನಾಟಕ ಸಂಗೀತದ ಬೆಳವಣಿಗೆ

ಆ. ಪುರಂದರದಾಸರ-ಕನಕದಾಸರ ಕೊಡುಗೆ

ಇ. ಸ್ವರಮೇಳಕಳಾನಿಧಿ

ಅಧ್ಯಾಯ ೫

# ಸಂಗೀತ ಕ್ಷೇತ್ರಕ್ಕೆ ಕೊಡುಗೆ

**ಕರ್ನಾಟಕ ಸಂಗೀತದ ಬೆಳವಣಿಗೆ:**

ಕಲೆಗಳಲೆಲ್ಲಾ ಸಂಗೀತವೇ ಅತ್ಯಂತ ಪ್ರಾಚೀನವಾದುದು ಮತ್ತು ಪ್ರಭಾವಶೀಲವಾದುದು. ಸಂಗೀತದ ಮೂಲವನ್ನು ಶೋಧಿಸುವ ಕಾರ್ಯ ಸುಲಭವಾದುದಲ್ಲ. ಸಂಗೀತದ ತಾಯಿ ಬೇರು ಪ್ರಕೃತಿಯೇ ಆಗಿದೆ. ಪ್ರಕೃತಿದತ್ತವಾದ ಸಂಗೀತದ ಬಗೆಬಗೆಯ ಪ್ರಕಾರಗಳು ವೃಕ್ಷದ ಕೊಂಬೆಗಳಂತೆ ವಿಶಾಲವಾಗಿ ಜಗತ್ತಿನಾದ್ಯಂತ ಪಸರಿಸಿಕೊಂಡಿವೆ. ಹಕ್ಕಿಗಳ ಚಿಲಿ–ಪಿಲಿ, ದುಂಬಿಯ ಝೇಂಕಾರ, ನದಿಯ ಮಂಜುಳ ಕಲರವ, ಎಲೆಗಳ ಮೇಲೆ ಬೀಳುವ ಮಳೆಯ ಹನಿಯ ಶಬ್ದ, ಕಡಲಿನ ಮೊರೆತ, ಮೊದಲಾದ ನಿಸರ್ಗದ ಧ್ವನಿಯ ಅನುಕರಣೆಯನ್ನು ಮಾಡಲು ಮಾನವನು ಯತ್ನಿಸಿದಾಗ ಆತನಿಗೆ ಅರಿವಿಲ್ಲದೆಯೇ ನಾದವು ಆತನ ಮುಖದಿಂದ ಹೊರಹೊಮ್ಮಿರಬಹುದು.

ಮನುಷ್ಯನು ಭೂಮಿಯ ಮೇಲೆ ಕಾಣಿಸಿಕೊಳ್ಳುವುದಕ್ಕೆ ಮೊದಲೇ ಸಂಗೀತದ ಪ್ರಭಾವ ಪ್ರಕೃತಿಯ ಪರಿಸರದಲ್ಲಿ ಪಸರಿಸಿತ್ತೆಂದು ಹೇಳಬಹುದು. ನಾದರೂಪಿಯಾದ ಈ ಸೃಷ್ಟಿಯೊಡನೆಯೇ ಸಂಗೀತ ಹುಟ್ಟಿತು. ಅಷ್ಟೇ ಅಲ್ಲ ವಿಶ್ವ ವ್ಯಕ್ತಿಯ ಅಭಿವ್ಯಕ್ತಿ ಸಂಗೀತವೇ ಈ ಸೃಷ್ಟಿ. ಈ ಸೃಷ್ಟಿಯ ಪ್ರತಿಯೊಂದು ಅಣುವಿನಲ್ಲಿಯೂ ನಾದದ ಅಂಶ ಅಂತರ್ಗತವಾಗಿದೆ. ಬಹುಮುಖವಾದ ತನ್ನ ವಿನ್ಯಾಸವನ್ನು ಅದು ಪ್ರಕೃತಿಯ ಘಟನೆಗಳಲ್ಲಿ, ಲಯಬದ್ಧವಾದ ಪುನರಾವರ್ತನೆಯ ಕ್ರಮದಿಂದ ತೋರಿಸುತ್ತದೆ. ವಿಸ್ತಾರವಾದ ಅರ್ಥದಲ್ಲಿ ಈ ಪ್ರಕೃತಿ ಘಟನೆಗಳೇ ಸಂಗೀತದ ಮೂಲ ಎನ್ನಬಹುದು.

ಪಶು-ಪಕ್ಷಿಗಳ ಕೂಗು ಸಪ್ತ ಸ್ವರದ ಉಗಮಕ್ಕೆ ಕಾರಣವಾಗಿರಬಹುದೆಂಬ ಸಂಗತಿಯನ್ನು ಅಮರಕೋಶದಲ್ಲಿ ನವಿಲಿನ ಕೇಕೆ, ಎತ್ತಿನ ಕೂಗು, ಕುರಿಯ ಕೆನೆತ, ಕ್ರೌಂಚ ಪಕ್ಷಿಯ ಉಲಿ, ವಸಂತದ ಕೋಗಿಲೆಯ ಇಂಚರ, ಕುದುರೆಯ ಹೇಷಾವರ ಮತ್ತು ಗಜದ ಘೀಳು, ಇವುಗಳು ಕ್ರಮವಾಗಿ ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ದೈವತ ಮತ್ತು ನಿಷಾರ ಸ್ವರಗಳನ್ನು ಸೂಚಿಸುವುದೆಂದು ಹೇಳಲಾಗಿದೆ. ನಿಜಗುಣ ಶಿವಯೋಗಿಗಳವರು "ಬಳಿಕ ನೌಲು ಕೂಗು, ಗೂಳಿಗುಟ್ರ, ಅಜಧ್ವನಿ, ಕ್ರೌಂಚಸ್ವನ, ಕೋಗಿಲೆಯ ಹಾಡು ಜಾತ್ಯಾಶ್ವದ ಹಲಹಲ ಧ್ವನಿ, ಮತ್ತಗಜ ಬೃಂಹಿತೆಗಳ ಪರಿಪಾಟಿಯಿಂದ ಷಡ್ಜಾದಿ ಸಪ್ತಸ್ವರಗಳಿಗನುಕರಣ ಧ್ವನಿಗಳು ಶ್ರಾವ್ಯವಾಗಿರ್ಪವು"[೧] ಎಂದು ಹೇಳಿರುವರು. ಅಲ್ಲದೆ ಮಯೂರ ಧ್ವನಿ, ವೃಷಭ ಧ್ವನಿ, ಅಜಧ್ವನಿ, ಸಿಂಹಧ್ವನಿ, ಕೋಕಿಲಧ್ವನಿ, ಜಾತ್ಯಶ್ವಧ್ವನಿ, ಮದಗಜ ಧ್ವನಿಯೆಂಬವೆ ಪರಿಪಾಟಿಯಿಂದ ಷಡ್ಜಾದಿ ಸ್ವರ ಧ್ವನಿ ಭೇದಂಗಳು ಎಂದಿರುವರು.[೨] ಮಹಾಕಾವ್ಯಗಳಲ್ಲಿ ಹಾಗೂ ಪುರಾಣಗಳಲ್ಲಿ ಮಾನವನು ಮರಗಳು, ಅವುಗಳ ತೊಗಟೆ, ಪ್ರಾಣಿಗಳ ಚರ್ಮ ಮತ್ತು ನರಗಳನ್ನು ಉಪಯೋಗಿಸಿ ವಾದ್ಯಗಳನ್ನು ತಯಾರಿಸಿ ನುಡಿಸುತ್ತಿದ್ದ ದೃಷ್ಟಾಂತಗಳು ಕಂಡುಬರುತ್ತವೆ.

ಸರಳ ಸಂಗೀತ ಪ್ರಕಾರಕ್ಕೆ ಸೇರಿದ ಲಾವಣಿ ಮತ್ತು ಜಾನಪದ ಗೀತೆಗಳು, ಪ್ರಕೃತಿ ದತ್ತವಾದ ವಾದ್ಯಗಳೊಂದಿಗೆ ಮೊತ್ತ ಮೊದಲು ಅಸ್ತಿತ್ವಕ್ಕೆ ಬಂದಿರಬಹುದಾದ ಸಂಗೀತ ಪ್ರಕಾರಗಳಾಗಿವೆ. ಬದುಕಿನ ದೈಹಿಕ ಶ್ರಮದ ಏಕತಾನತೆಯ ಉಪಶಮನ ಹಾಗೂ ಮಾನಸಿಕ ವಿಶ್ರಾಂತಿಗಾಗಿ ಪ್ರಪಂಚದ ಎಲ್ಲೆಡೆಯೂ ಈ ಬಗೆಯ ಸಂಗೀತವು ಗೋಚರಿಸಿದೆವೆಂದು ನಂಬಲಾಗಿದೆ. ಆಯಾ ಪ್ರದೇಶದ ಹವಾಮಾನ, ಜನಜೀವನ, ಸಂಸ್ಕೃತಿ ಇವೇ ಮೊದಲಾದ ಅಂಶಗಳನ್ನು ಆಧರಿಸಿ ಅಲ್ಲಿಯ ವಾತಾವರಣಕ್ಕೆ ತಕ್ಕಂತೆ ವಾದ್ಯಗಳೂ, ಸಂಗೀತಗಳೂ, ವಾದ್ಯಗಳೂ ಹೊರಹೊಮ್ಮಿವೆ. ಇವುಗಳು ಒಂದು ಸ್ಥಳದಿಂದ ಮತ್ತೊಂದಕ್ಕೆ ವಿಭಿನ್ನವಾಗಿವೆ.

ಗಾನಶಾಸ್ತ್ರದಾಯಿನಿ ಕೃತಿಯಲ್ಲಿ "ಆಯಾ ಸಂಸ್ಕೃತಿಗಳಿಗೆ ಅನುಗುಣವಾಗಿ ಜನಾಂಗಗಳು ಕಾಲದೇಶದ ನಿಬಂಧನೆಗಳೊಡನೆ ಭಾವದ ಚಿಂತನೆಯ ಒಂದು ಮುಖವನ್ನು ಅಭಿವ್ಯಕ್ತಿಗೊಳಿಸಲು ಕಲೆಗಳ ಗೊತ್ತಾದ ಒಂದು ಮಾರ್ಗವನ್ನೇ ಅಥವಾ ಪದ್ಧತಿಯನ್ನೋ ಅಳವಡಿಸಿಕೊಳ್ಳುವ ಪ್ರವೃತ್ತಿ ವಿಶ್ವಸಾಮಾನ್ಯವಾದುದು. ಕಲೆಗಳ ಎಲ್ಲ ಪದ್ಧತಿಗಳ ಉದ್ದೇಶ ಆಯಾ ದೇಶಗಳ ಸಾಂಸ್ಕೃತಿಕ ಪ್ರಗತಿಯನ್ನು ಸಾಧಿಸುವುದಾದರೂ ಅವುಗಳು ನಿರೂಪಣೆಯಲ್ಲಿ, ಚಿತ್ರಣದಲ್ಲಿ, ಭಿತ್ತಿಗಳಲ್ಲಿ, ತತ್ವ ಸಂಪ್ರದಾಯಗಳಲ್ಲಿ ಒಂದೊಂದು ತಮ್ಮದೇ ಆದ ನಾವೀನ್ಯ ಹಾಗೂ ವೈಶಿಷ್ಟ್ಯವನ್ನು ಹೊಂದಿರುತ್ತದೆ"[೩] ಎಂದು ಹೇಳಲಾಗಿದೆ.

ಭರತ ಖಂಡವು ಸಂಗೀತವೊಂದು ಅಲೌಕಿಕ ವಿದ್ಯೆಯೆಂದು, ದೈವಿಕವಾದ ಹಿನ್ನೆಲೆಯಲ್ಲಿ ಬೆಳೆಸಿಕೊಂಡು ಬಂದಿದೆ. ಅನೇಕ ಪ್ರಯೋಗಗಳನ್ನು ನಡೆಸಿದೆ. ಸೂಕ್ಷ್ಮಾತಿಸೂಕ್ಷ್ಮವಾದ ಭಾವನೆಗಳ ಸಂವೇದನೆಗಳ ಅಭಿವ್ಯಕ್ತಿಗೆ ಸಮರ್ಥವಾದ ಮಾಧ್ಯಮವನ್ನಾಗಿ ಮಾಡಿದೆ. ಪ್ರಾಚೀನ ಮಹರ್ಷಿಗಳು ನಾದವನ್ನು ಎರಡು ಬಗೆಯಾಗಿ ವಿಭಾಗಿಸಿರುವರು. ಅವುಗಳೆಂದರೆ ಅನಾಹತನಾದ, ಆಹತನಾದ, ಸೃಷ್ಟಿಯ ಎಲ್ಲೆಡೆ ಸಹಜವಾಗಿ ವ್ಯಾಪಿಸಿರುವ ನಾದವೆ ಅನಾಹತವಾದ, ಆಹತನಾದವೆಂದರೆ ಪ್ರಯತ್ನ ಪೂರ್ವಕವಾಗಿ ಮನುಷ್ಯ ನಿರ್ಮಿತ ನಾದ. ಪರಿಮಿತವಾದ ಅರ್ಥದಲ್ಲಿ ಆಹತನಾದದ ವ್ಯವಸ್ಥೆಯನ್ನಷ್ಟೆ ಈಗ ನಾವು ಪರಿಗಣಿಸುತ್ತಿದ್ದರೂ ವಿಶಾಲವಾದ ಅರ್ಥದಲ್ಲಿ ಅನಾಹತನಾದವೂ ಸಂಗೀತವೇ, ಸಾಮಾನ್ಯ ಕಿವಿಗಳಿಗೆ ಅದು ಅಗೋಚರವಾಗಿರಬಹುದು. ಕೆಲವೊಮ್ಮೆ ಧ್ಯಾನಗೋಚರವಾಗಬಹುದು. ಸಂಗೀತ ರತ್ನಾಕರದಲ್ಲಿ ಅನಾಹತನಾದದ ಸ್ವರೂಪವನ್ನು ಅನಾಹತಂ ಗುರೂಪದಿಷ್ಟ ಮಾರ್ಗೇಮುನಯಃ ಸಮುನಪಾಸತೇ" ಅಂದರೆ ಗುರುಗಳು ಉಪದೇಶದ ಮಾರ್ಗದಲ್ಲೇ ಋಷಿಗಳು ಅನಾಹತನಾದವನ್ನು ಉಪಾಸಿರುತ್ತಾರೆ ಎಂದು ಸೂಚಿಸಿದ್ದಾನೆ.

ಅನಾಹತನಾದ ಪ್ರೇರಣೆ, ಪ್ರಭಾವ ಮತ್ತು ಪರಿಸರಗಳಿಂದ ಮನುಷ್ಯ ನಿರ್ಮಿಸುವ ನಾದವೇ ಆಹತನಾದ. ಇದರಲ್ಲಿ ಉಂಟಾದ ವ್ಯವಸ್ಥಿತ ರೂಪವೇ ಸಂಗೀತ. ಪ್ರಕೃತಿಯಲ್ಲಿ ನಿತ್ಯ ನೂತನವಾದ ನೂರಾರು ಬಗೆಯ ಲಯಬದ್ಧವಾದ ನಾದಗಳ ಏರಿಳಿತವನ್ನು ಪುನರಾವರ್ತನೆಯನ್ನು ಹೆಜ್ಜೆ ಹೆಜ್ಜೆಗೂ ಕಾಣಬಹುದು. ನಾದಬ್ರಹ್ಮ ರೂಪಿಯಾದ ಪ್ರಕೃತಿಯ ಮಡಿಲಲ್ಲಿ ಬಾಳಬೇಕಾದ ಮಾನವ, ತನ್ನ ಭಾವನೆಗಳನ್ನು ಹೇಳಲು ನಾದವನ್ನೇ ಅವಲಂಬಿಸಿದೆ. ಸಂತೋಷವನ್ನು, ದುಃಖವನ್ನು, ಪ್ರೀತಿಯನ್ನು ತೋಡಿಕೊಳ್ಳುವಾಗ ಒಂದೊಂದು ಬಗೆಯ ನಾದವನ್ನೇ, ಧ್ವನಿಯ ಏರಿಳಿತವನ್ನೋ ವ್ಯಕ್ತಪಡಿಸಿದ ಮತ್ತು ಅದಕ್ಕೆ ಅನುಗುಣವಾಗಿ ಮುಖವಿನ್ಯಾಸಗಳೂ ಅಂಗ ಚಲನೆಗಳೂ ಕಾಣಿಸಿಕೊಂಡವು. ಸಂಗೀತ ಮತ್ತು ನೃತ್ಯಕ್ಕೆ ಇದೇ ಮೂಲವಾಗಿ ಪರಿಗಣಿಸಿತು. ಮಾನವನ ಅನೇಕ ಭಾವಗಳಿಗೆ ಅನುಗುಣವಾಗಿ ಆಂಗಿಕವಾಗಿ ಚಲನೆ ಮತ್ತು ನಾದ ವಿನ್ಯಾಸಗಳು ಉಂಟಾಗುತ್ತವೆ. ಆಂಗಿಕವಾದ ಅಭಿನಯ ವ್ಯವಸ್ಥಿತವಾಗಿ ರೂಪುಗೊಂಡಾಗ ನೃತ್ಯಕಲೆ ಎನಿಸಿಕೊಳ್ಳುತ್ತದೆ. ನಾದ ವಿನ್ಯಾಸದ ವ್ಯವಸ್ಥೆಯೇ ಸಂಗೀತಕ್ಕೆ ತಳಹದಿಯಾಗುತ್ತದೆ. ಇವೆರೆಡೂ ಆರಂಭದಲ್ಲಿ ಜೊತೆ ಜೊತೆಯಾಗಿಯೇ ಹುಟ್ಟಿಬಂದವುಗಳು. "ಗೀತಂ ವಾದ್ಯಂಚ, ನೃತ್ಯಂಚ, ತ್ರಯಂ ಸಂಗೀತ ಮುಚ್ಯತೇ" ಎಂಬ ಮಾತು ಬಾಯಿ ಸಂಗೀತ, ವಾದ್ಯಸಂಗೀತ ಮತ್ತು ನೃತ್ಯ ಈ ಮೂರು ಸಂಗೀತ ಎನ್ನುವ ಮಾತಿನಲ್ಲಿ ಅಡಕಗೊಳ್ಳುತ್ತಿದ್ದವು ಎನ್ನುವುದನ್ನು ಸೂಚಿಸುತ್ತದೆ. ಸಂಗೀತ ಮತ್ತು ನೃತ್ಯಗಳೆರಡು ಮನಸ್ಸಿನಲ್ಲಿ ಉಕ್ಕಿ ಬರುವ ಭಾವನೆಗಳಿಗೆ ಕೊಡುವ ದೈಹಿಕ ಪ್ರತಿಕ್ರಿಯೆಗಳು ಈ ಪ್ರತಿಕ್ರಿಯೆ ಆಂಗಿಕವಾದಾಗ ನರ್ತನವಾಗುತ್ತದೆ. ಲಯಬದ್ಧನಾದ ವಿನ್ಯಾಸವಾದಾಗ ಸಂಗೀತವಾಗುತ್ತದೆ.

ಸಂಗೀತದ ಹುಟ್ಟನ್ನು ಕುರಿತಂತೆ ಹಲವಾರು ಅಭಿಪ್ರಾಯಗಳಿವೆ. ಗಂಡು, ಹೆಣ್ಣನ್ನು ಆಕರ್ಷಿಸುವುದಕ್ಕಾಗಿ ಉಂಟುಮಾಡುವ ನಾದವೇ ಸಂಗೀತದ ತಳಹದಿ. ಪ್ರಣಯಾಸಕ್ತ ಭಾವನೆ ಸಂಗೀತಕ್ಕೆ ಮೂಲಕಾರಣ ಎನ್ನುವುದು ಕೆಲವರ ಅಭಿಪ್ರಾಯ. ಇದಕ್ಕೆ ಉದಾಹರಣೆಯಾಗಿ ಪ್ರಾಣಿಗಳ ಪ್ರಣಯ ಜೀವನವನ್ನು ಕೊಡುತ್ತಾರೆ. ಆದರೆ ಕೆಲವರು ಇದನ್ನು ಸಂಪೂರ್ಣವಾಗಿ ಒಪ್ಪುವುದಿಲ್ಲ. ಕೇವಲ ಪ್ರಣಯ ಭಾವದಿಂದ ಮಾತ್ರವೇ ಸಂಗೀತ ಉದಯವಾಯಿತೆಂದು ಹೇಳುವ ಅಗತ್ಯವಿಲ್ಲ. ಇತರ ಅನೇಕ ಭಾವನೆಗಳೂ ಇದೇ ರೀತಿಯ ಪ್ರತಿಕ್ರಿಯೆಯನ್ನು ಉಂಟುಮಾಡಿ ಸಂಗೀತದ ಉಗಮಕ್ಕೆ ಕಾರಣವಾಗಿರಬಹುದೆಂದು ಅಭಿಪ್ರಾಯಪಡುತ್ತಾರೆ.[೪]

ಭಾಷೆ ಹುಟ್ಟುವುದಕ್ಕೆ ಬಹಳ ಮುಂಚೆಯೇ ಭಾವನೆಗಳನ್ನು ಅಭಿವ್ಯಕ್ತಗೊಳಿಸುವ ಪರಿಣಾಮಕಾರಿ ಸಾಧನವಾಗಿ ಸಂಗೀತವು ಪರಿಣಮಿಸಿತ್ತು. ಕಾಲಕ್ರಮೇಣ ಶಬ್ದ ಮತ್ತು ಅರ್ಥಗಳು ಒಂದು ನಿರ್ದಿಷ್ಟವಾದ ಸಂಬಂಧವನ್ನು ಪಡೆಯತೊಡಗಿದವು. ಅನುಭವಕ್ಕೆ ಮತ್ತು ಭಾವನೆಗೆ ಶಬ್ದ ಒಂದು ನಿರ್ದಿಷ್ಟ ಸಂಕೇತವಾಗಿ ಪರಿಣಮಿಸಿತು. ಅಂದರೆ ಭಾಷೆ ಹುಟ್ಟಿತು. ತನ್ನ ಅನುಭವವನ್ನು ಶಬ್ದಗಳಿಂದ ಹಿಡಿದಿಡುವ ಪ್ರಯತ್ನ ಇದರಿಂದ ಫಲಿಸಿತು. ಅದುವರೆಗೂ ಅವನು ಬಳಸುತ್ತಿದ್ದ ನಾದ ವಿನ್ಯಾಸದ ಮೇಲೂ ಇದು ತನ್ನ ಪ್ರಭಾವವನ್ನು ಬೀರದೇ ಇರಲಿಲ್ಲ. ಕೇವಲ ನಾದದ ಏರಿಳಿತಕ್ಕೆ ಬದಲಾಗಿ, ಅರ್ಥ ಸಹಿತವಾದ ಭಾಷೆಯನ್ನು ಬಳಸಿಕೊಂಡು ಅದಕ್ಕೆ ನಾದದ ತರಂಗವನ್ನು ತುಂಬಿದ ಇದೇ ಆದಿ ಮಾನವನ ಆದಿಗೀತೆಗಳಾಗಿ ಪರಿಣಮಿಸಿದವು.[೫]

ಪ್ರಾಚೀನ ಹಿಂದೂ ಸಂಸ್ಕೃತಿ ದೈವಿಕ ಮೂಲವಾದದ್ದು, ಭಾರತೀಯರಿಗೆ ಮತ, ಧರ್ಮ ಜೀವನದ ಅಂಗವೇ ಹೊರತು ಕೇವಲ ಬೌದ್ಧಿಕ ಸಿದ್ಧಾಂತವಲ್ಲ. ಧರ್ಮ ಮಾನವನ ಜೀವನವನ್ನು ರೂಪಿಸಿದ ಪ್ರಬಲವಾದ ಶಕ್ತಿಗಳಲ್ಲಿ ಪ್ರಮುಖವಾದುದು. ಪ್ರಕೃತಿಯ ಘಟನೆಗಳನ್ನು ಕಂಡಾಗ ಅದಕ್ಕೆ ಕಾರಣವಾಗಿರಬಹುದಾದ ಅದೃಶ್ಯ ಶಕ್ತಿಗಳ ಕಡೆಗೆ ಶ್ರದ್ಧೆ ತಿರುಗಿತು. ಇದು ಧರ್ಮಕ್ಕೆ ತಳಹದಿಯಾಯಿತು. ಈ ಧರ್ಮಕ್ಕೆ ಎಲ್ಲ ಕಲೆಗಳ ಮೂಲಕ ಶ್ರದ್ಧೆಯನ್ನು ಅರ್ಪಿಸಿದ. ಜಗತ್ತಿನ ಯಾವುದೇ ಸಂಸ್ಕೃತಿಯನ್ನು ನೋಡಿದರೂ ಪ್ರಧಾನವಾಗಿ ಧಾರ್ಮಿಕ ಭಾವನೆಯೇ ಒಂದಲ್ಲ ಒಂದು ರೂಪದಲ್ಲಿ ಪ್ರಚೋದಕ ಶಕ್ತಿಯಾಗಿದ್ದು, ಅದರ ಹಿನ್ನೆಲೆಯಲ್ಲಿ ಕಲೆಗಳು ರೂಪುಗೊಳ್ಳುವುದಕ್ಕೆ ಕಾರಣವಾಗಿದೆ ಎಂಬುದು ಕಂಡುಬರುತ್ತದೆ. ಭಾರತೀಯ ಸಂಗೀತಕ್ಕೂ ಈ ಮಾತುಗಳು ಅನ್ವಯಿಸುತ್ತವೆ. ಸಂಗೀತ ಶಿವನಿಂದಲೇ ನಿರ್ಮಿತವಾಯಿತೆಂಬ ಪೌರಾಣಿಕ ಕಥೆಯಾಗಲೀ, ವಿದ್ಯೆಯ ದೇವತೆಯಾದ ಸರಸ್ವತಿಯು ವೀಣಾಪಾಣಿ ಎಂಬ ಕಲ್ಪನೆಯಾಗಲೀ ಈ ಮನೋಧರ್ಮದಿಂದ ಪ್ರೇರಿತವಾದುವುಗಳು.

ತ್ಯಾಗರಾಜರು ಮೂಲಾಧಾರಜ ನಾದಮೆರಗುಟ ಎಂದು ಹೇಳಿದ್ದಾರೆ. ಅಂದರೆ ನಾದವು ಮೂಲಾಧಾರದಿಂದ ಹುಟ್ಟುತ್ತದೆ ಎಂದು ತಮ್ಮ ಶಂಕರಾಭರಣ ರಾಗದ, ಸ್ವರರಾಗ ಸುಧಾರಸಯುತ

ಭಕ್ತಿ ಎಂಬ ಕೃತಿಯಲ್ಲಿ ಹೇಳಿದ್ದಾರೆ. ವಿಷ್ಣುವಿನ ಶಂಖದಿಂದ ಪ್ರಣವನಾದ ಅಂದರೆ ಓಂಕಾರವು ಅನುರಣವಾಗಿ ವಿಶ್ವವ್ಯಾಪ್ತಿಯಾಗಿ, ಸಂಗೀತಕ್ಕೆ ಮೂಲವಾಗಿ, ನಾರದ ಮಹರ್ಷಿಗಳ ಮೂಲಕ ಭೂಲೋಕದಲ್ಲಿ ಪ್ರಸಾರವಾಯಿತು ಎನ್ನುವ ನಂಬಿಕೆಯಿದೆ. ವೃತಾಸುರನ ಸಂಹಾರವಾದ ನಂತರ ಶಿವನು ನುಡಿಸಿದ ಡಮರುಗವು ಅನೇಕ ಚರ್ಮ ವಾದ್ಯಗಳ ಅವಿಷ್ಕಾರಕ್ಕೆ ಕಾರಣವಾಯಿತೆಂಬ ಅಭಿಪ್ರಾಯವಿದೆ. ಶಿವನ ಪಂಚ ಮುಖಗಳಿಂದ ಪಂಚಾಂಗಗಳು ಉದ್ಭವಿಸಿ ಆತನ ಕೈಯಲ್ಲಿನ ಪಿನಾಕವು ವಿವಿಧ ಬಗೆಯ ತಂತೀ ವಾದ್ಯಗಳು ರೂಪುಗೊಳ್ಳಲು ಕಾರಣವಾಯಿತೆಂದು ತಿಳಿಯಲಾಗಿದೆ.

ಶಿವನ ಸಪ್ತ ಮುಖಗಳಲ್ಲಿ, ಸಪ್ತ ಸ್ವರಗಳು ಕ್ರಮವಾಗಿ ಉಂಟಾದುದರ ಕುರಿತು ವಿವರಣೆಯನ್ನು ನಿಜಗುಣ ಶಿವಯೋಗಿಯವರು ಈ ರೀತಿಯಾಗಿ ಕೊಟ್ಟಿದ್ದಾರೆ. "ಸಪ್ತ ಸ್ವರಗಳು ಉತ್ಪತ್ತಿ ಕ್ರಮದಲ್ಲಿ ಪರಶಿವನ ಈಶ್ವರ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ, ನಿರಂಗಮೆಂಬೇಳು ಮುಖ ಕ್ರಮವಿಡಿದು ಷಡ, ಋಷಭ, ಗಾಂಧಾರ, ಮಧ್ಯಮ, ಪಂಚಮ, ದೈವತ, ನಿಷಾದಮೆಂಬ ಸಪ್ತಸ್ವರಂಗಳಾದವು.[೬] ಪುಂಡರೀಕ ವಿಠ್ಠಲನು ಶಿವನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನ ಮುಖಗಳಿಂದ ಪಂಚರಾಗಗಳೂ (ಪುರುಷ) ಒಂದೊಂದು ರಾಗಗಳಲ್ಲಿಯೂ ಐದು ಜನ ರಾಗಿಣಿಯರೂ (ಪತ್ನಿಯರು) ಐದು ಜನ ಪುತ್ರರೂ (ಪುತ್ರರಾಗ) ಜನಿಸಿದರೆಂದೂ, ಗಿರಿಜೆಯ ಮುಖದಿಂದ ನಟ ನಾರಾಯಣ ರಾಗವೂ ಉದ್ಭವವಾಯಿತೆಂದು ರಾಗಮೂಲ ಕೃತಿಯಲ್ಲಿ ತಿಳಿಸಿರುವನು.[೭]

ವೇದಗಾಯನ ಕ್ರಿ.ಪೂ. ೨೦೦೦ ವರ್ಷಗಳ ಹಿಂದೆಯೇ ಬಳಕೆಯಲ್ಲಿದ್ದು, ಜಗತ್ತಿನ ಅತಿ ಪುರಾತನ ಸಂಗೀತ ಪ್ರಭೇದವಾಗಿದೆ. ಭಾರತೀಯರಾದ ನಮಗೆ ಅತಿ ಪ್ರಾಚೀನ ಸಂಗೀತವು ನಮ್ಮದೆಂಬ ಹೆಗ್ಗಳಿಕೆ ಸಂದಿದೆ. ನಮಗೆ ಉಪಲಬ್ಧವಿರುವ ಮಟ್ಟಿಗೆ ಅತ್ಯಂತ ಪ್ರಾಚೀನವಾದ ಗೀತೆಗಳೆಂದರೆ ಋಗ್ವೇದ ಸೂಕ್ತಗಳು ಹರಪ್ಪಾ ಮತ್ತು ಮೆಹೆಂಜೋದಾರೋಗಳಲ್ಲಿ ದೊರಕಿರುವ ಒಂದು ಬಗೆಯ ವೀಣೆ ಮತ್ತು ಇತರ ವಾದ್ಯಗಳು ಋಗ್ವೇದಕ್ಕಿಂತ ಹಿಂದೆಯೇ ಸಂಗೀತದಲ್ಲಿ ಪ್ರಯೋಗಗಳು ನಡೆದಿದ್ದವೆಂಬುದಕ್ಕೆ ಸಾಕ್ಷಿಯಾಗಿವೆ. ಸಿಂಧೂ ಸಂಸ್ಕೃತಿಯ ಜನರು ಇತರ ಕಲೆಗಳಂತೆ ಸಂಗೀತದಲ್ಲಿಯೂ ಬಹುಶಃ ಪರಿಣಿತರಾಗಿದ್ದರೆಂದು ಕಂಡುಬರುತ್ತದೆ. ಆದರೆ ಅಂದಿನ ಸಂಗೀತದ ಸ್ವರೂಪ ಹೇಗಿದ್ದಿತೆಂಬುದನ್ನು ತಿಳಿಯಲು ಸರಿಯಾದ ಆಧಾರಗಳು ಉಪಲಬ್ಧವಿಲ್ಲ. ವೇದಯುಗದ ಮತ್ತು ಅದರ ನಂತರ ಸಂಗೀತ, ತನಗಿಂತ ಹಿಂದಿನ ಸಿಂಧೂ ಸಂಸ್ಕೃತಿಯ ಅನುಭವದ ಮೇಲೆ ಬೆಳೆದು ಅದನ್ನು ತನ್ನಲ್ಲಿ ಅಡಗಿಸಿಕೊಂಡಿರಬೇಕೆಂದು ಊಹಿಸಲಾಗಿದೆ.

ನಾಲ್ಕು ವೇದಗಳಲ್ಲೊಂದಾದ ಸಾಮವೇದದಿಂದ ಭಾರತೀಯ ಸಂಗೀತದ ಹುಟ್ಟು ಉಂಟಾಗಿದೆ. ಬ್ರಹ್ಮನು ಸಾಮವೇದದಿಂದ ಸಂಗೀತವನ್ನು ಸಂಗ್ರಹಿಸಿದನು ಎನ್ನುವುದನ್ನು "ಸಾಮವೇದದಿಂದ

ಗೀತಂ ಸಂಜಗ್ರಾಹ ಪಿತಾಮಹಃ"[೮] ಎನ್ನುವ ಉಕ್ತಿ ಹೇಳುತ್ತದೆ. ಭಾರತೀಯ ಸಂಗೀತದ ಉಗಮವನ್ನು ಪೌರಾಣಿಕ ದೃಷ್ಟಿಕೋನದಿಂದ ವಿಶ್ಲೇಷಿಸಿದಾಗ ತ್ರಿಮೂರ್ತಿಗಳಲ್ಲೊಬ್ಬನಾದ ಚತುರ್ಮುಖ ಬ್ರಹ್ಮನು ಸಕಲ ಚರಾಚರ ವಸ್ತುಗಳ ಸೃಷ್ಟಿಕರ್ತನೆಂದು ತಿಳಿಯಲಾಗಿದೆ. ವೇದಗಳ ಯುಗದಿಂದ ಈಚೆಗೆ ಭಾರತೀಯ ಸಂಗೀತ ಬೆಳೆದು ಬಂದುದನ್ನು ಗುರುತಿಸುವುದಕ್ಕೆ ಸಾಕಷ್ಟು ಆಧಾರಗಳು ಸಿಕ್ಕುತ್ತವೆ.

ಸಾಮಗಾನದಲ್ಲಿ ಒಂದು ಸ್ವರ ಪ್ರಯೋಗದ ಅನುವಾಚನವಾದ ಅರ್ಚಿಕಗಾನವು ಎರಡು ಗಾಥಿಕ ಗಾನಕ್ಕೆ ಎಡೆಮಾಡಿಕೊಟ್ಟಿತು. ಕಾಲಕ್ರಮೇಣ ಮೂರು ಸ್ವರಗಳ ಸಾಮಿಕ ಗಾನವು ಬಳಕೆಗೆ ಬಂದು, ಗಾಥಿಕ ಗಾನವು ಒಂದು ಸ್ವರ ಕೆಳಗಿನ ಮತ್ತು ಒಂದು ಸ್ವರ ಮೇಲಿನ ಗಾನದ ನಡುವೆ ಕಂಡುಬಂದಿತು. ಈ ಬಗೆಯ ಹಾಡಿಕೆಯನ್ನು ಉದಾತ್ತ, ಅನುದಾತ್ತ ಮತ್ತು ಸ್ವರಿತಗಳೆಂದು ಕರೆಯಲಾಗಿದೆ. ಶಾಸ್ತ್ರಕಾರರು ಸ್ವರ ವಿನ್ಯಾಸಗಳ ಭೇದದಿಂದ ಸಂಗೀತದಲ್ಲಿ ಏಳು ವಿಧಗಳನ್ನು ಗುರುತಿಸಿದ್ದಾರೆ. "ಅರ್ಚಿಕ, ಗಾಥಿಕ, ಸಾಮಿಕ, ಒಂದು, ಎರಡು, ಮೂರು ಸ್ವರಗಳಿಂದ ಕೂಡಿರುತ್ತವೆ. ಹಾಗೆಯೇ ನಾಲ್ಕು ಸ್ವರಗಳಿಂದ ಕೂಡಿದುದನ್ನು "ಸ್ವರಾಂತ"ವೆಂದೂ ಐದು ಸ್ವರಗಳುಳ್ಳದ್ದನ್ನು "ಜೌಡವ"ವೆಂದೂ ಆರು ಸ್ವರಗಳಿದ್ದರೆ, "ಷೌಡವ"ವೆಂದೂ, ಸಪ್ತ ಸ್ವರ ಸಮನ್ವಿತವಾಗಿದ್ದರೆ 'ಸಂಪೂರ್ಣ' ವೆಂದೂ ಹೆಸರಿಸಿದ್ದಾರೆ. 'ಮತಂಗನ' ಬೃಹದ್ದೇಶಿ'ಯು ಸಂಗೀತವು ಈ ಏಳು ಸ್ವರಗಳ ಸ್ತರಗಳನ್ನು ದಾಟಿಕೊಂಡು ಪೂರ್ಣತೆ ಪಡೆಯಿತೆಂದು ಹೇಳುತ್ತದೆ.

ಉದಾತ್ತ, ಸ್ವರಿತ, ಅನುದಾತ್ತ, ಮತ್ತು ಸ್ವರಾಂತರಗಳನ್ನು ವೇದದ ಸಂಗೀತ ಮುಖ್ಯವಾಗಿ ಬಳಸಿಕೊಂಡಿತು. ಶಾಸ್ತ್ರಕಾರರು ಅದನ್ನು 'ಮಾರ್ಗ' ಸಂಗೀತ ಎಂದು ಕರೆದಿದ್ದಾರೆ. ಕೊನೆಯ ಮೂರನ್ನು ಅಂದರೆ ಐದರಿಂದ ಏಳರವರೆಗಿನ ಸ್ವರಗಳನ್ನು ಬಳಸಿಕೊಂಡ ಸಂಗೀತವನ್ನು 'ದೇಶೀ' ಎಂದು ಕರೆಯಲಾಗಿದೆ.[೯] 'ಮಾರ್ಗ' ಎಂದರೆ ಅನ್ವೇಷಿತ ಮತ್ತು 'ದೃಷ್ಟ' ಎಂದರೆ ಹುಡಕಿಕೊಂಡು ಹೋಗಿ ಕೊನೆಯಲ್ಲಿ ಕಂಡರು ಎಂದು ಅದನ್ನು ವಿವರಿಸಲು ಪ್ರಯತ್ನಿಸಲಾಗಿದೆ.[೧೦]

ಮಾರ್ಗ ಸಂಗೀತ ಕೇವಲ ವೈದಿಕ ಸಂಗೀತವಾಗಿ ಪರಿಣಮಿಸಿ, ಪರಿಮಿತವಾದ ವ್ಯಾಪ್ತಿಯನ್ನು ಪಡೆದಾಗ, ಅದರ ಜೊತೆಯಲ್ಲಿಯೇ ವೈದಿಕವಲ್ಲದ ಲೌಕಿಕ ಸಂಗೀತವೂ ಬೆಳೆದು ಬರುವುದು ಅನಿವಾರ್ಯವಾಯಿತು. ಅದನ್ನೇ 'ದೇಸೀ' ಎಂದು ಕರೆಯಲಾಗಿದೆ. ದೇಸೀ ಸಂಗೀತವೇ ಮುಂದೆ ಪ್ರಾದೇಶಿಕ ವಿಭಿನ್ನತೆಗೆ ಒಳಗಾಗಿ ಕರ್ನಾಟಕ ಮತ್ತು ಹಿಂದೂಸ್ತಾನಿ ಎಂಬ ಪ್ರಧಾನವಾದ ಎರಡು ಕವಲುಗಳಾಗಿ ಪರಿಣಮಿಸಿತು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ದಕ್ಷಿಣಾದಿ ಸಂಗೀತ ವಿಭಾಗವು 'ಕರ್ನಾಟಕ ಸಂಗೀತ' ಎಂಬ ಹೆಸರಿನಿಂದಲೇ ಪ್ರಸಿದ್ಧವಾದುದು. ಸಂಗೀತದ ಬೆಳವಣಿಗೆಯಲ್ಲಿ ಕರ್ನಾಟಕವು ವಹಿಸಿದ ಪಾತ್ರಕ್ಕೆ ಇದು ಉಜ್ವಲವಾದ ಸಾಕ್ಷಿಯಾಗಿದೆ.

ಸಂಗೀತದ ಬೆಳವಣಿಗೆಯನ್ನು ಸ್ಥೂಲವಾಗಿ ಹೀಗೆ ತೋರಿಸಬಹುದಾಗಿದೆ.




ಭಾರತೀಯ ಸಂಗೀತ ಪದ್ಧತಿಗಳಿಗೆ, ಸಾಮವೇದದಿಂದ ಆರಂಭವಾಗಿ ದತ್ತಿಲ, ಕೋಹಿಲ, ಭರತ ಮೊದಲಾದವರ ಗ್ರಂಥಗಳಲ್ಲಿ ಶಾಸ್ತ್ರೀಯವಾಗಿ ನಿರೂಪಿತವಾಗಿರುವ ಸಂಗೀತ ಪದ್ಧತಿ ಆಧಾರವಾಗಿದೆ. ಭರತನ ಅತ್ಯಂತ ಪ್ರಾಚೀನ ಗ್ರಂಥವಾದ ನಾಟ್ಯ ಶಾಸ್ತ್ರವೇ ಭಾರತೀಯ ಸಂಗೀತಕ್ಕೆ ಮೂಲ ಆಕರ ಗ್ರಂಥವಾಗಿದೆ. ಸಂಸ್ಕೃತ ಭಾಷೆಯಲ್ಲಿರುವ ಈ ಗ್ರಂಥವು ನಾಟ್ಯ ಮತ್ತು ಸಂಗೀತದ ವಿವರಗಳನ್ನು ಒಳಗೊಂಡಿದೆ. ನಾಟ್ಯಶಾಸ್ತ್ರ ಶಿಕ್ಷಣ ಮೌಲ್ಯವುಳ್ಳ ಸರ್ವೋತ್ಕೃಷ್ಟ ಗ್ರಂಥವಾಗಿದೆ. ಸುಮಾರು ೨೦೦೦ ವರ್ಷಗಳ ಹಿಂದೆ ರಚಿತವಾದ ಈ ಗ್ರಂಥದಲ್ಲಿ ಮೂರ್ಛನೆ, ತಾನ, ಜಾತಿ, ವರ್ಣ, ಅಲಂಕಾರ, ಮೊದಲಾದ ಸಂಗೀತ ಪಾರಿಭಾಷಿಕ ಶಬ್ದಗಳ ವಿಷಯಗಳ ವಿವರಣೆಯನ್ನು ವಿವರಿಸಲಾಗಿದೆ. ಈ ಗ್ರಂಥದಲ್ಲಿ ಲಾಸ್ಯ, ನಿರ್ಗೀತ ಮತ್ತು ಬಹಿರ್ಗೀತಗಳು ಕ್ರಮವಾಗಿ ನಾಟ್ಯ ಸಂಗೀತವನ್ನು, ವಾದ್ಯ ಸಂಗೀತವನ್ನು ಮತ್ತು ಗಾಯನವನ್ನು ಸೂಚಿಸುತ್ತವೆ. ವೇದ ಕಾಲದಿಂದ ಬೆಳೆದು ಬಂದ ಸಂಗೀತ ಪದ್ಧತಿಯನ್ನು ಒಂದು ಸಾಮಾನ್ಯ ನಿಯಮಕ್ಕೆ ಒಳಪಡಿಸಿ ಶಾಸ್ತ್ರ ಮಾರ್ಗವನ್ನು ರೂಪಿಸಲು ಪ್ರಯತ್ನ ಪಟ್ಟವರಲ್ಲಿ ಈಗ ತಿಳಿದ ಮಟ್ಟಿಗೆ ಭರತನೇ ಮೊದಲನೆಯವನು. ಅನಂತರದ ಲಕ್ಷಣಾಚಾರ್ಯರು ತಮ್ಮ ತಾತ್ವಿಕ ಜಿಜ್ಞಾಸೆ ಮತ್ತು ಪ್ರಾಯೋಗಿಕ ಪರಿಶ್ರಮಗಳಿಂದ ಸಂಗೀತವನ್ನು ಬೆಳೆಸಿಕೊಂಡು ಬಂದರು. ಭರತನ ನಾಟ್ಯಶಾಸ್ತ್ರ, ಸಂಗೀತದ ಅನೇಕ ಸಮಸ್ಯೆಗಳನ್ನು ಚರ್ಚಿಸಿ ಅದಕ್ಕೆ ತಕ್ಕ ಪರಿಭಾಷೆಯನ್ನು ಕಲ್ಪಿಸಿ ಒಂದು ಪ್ರಮುಖವಾದ ಘಟ್ಟವನ್ನು ನಿರ್ಮಿಸಿದ ಮೇಲೆ ಬಂದ ಗ್ರಂಥಗಳಲ್ಲಿ ಬಹು ಪ್ರಮುಖವಾದುದು ಮತ್ತು ಪ್ರಾಚೀನವಾದುದು ಮತಂಗನ ಬೃಹದ್ದೇಶಿ "ಇವನ ಕಾಲಕ್ಕಾಗಲೀ ಬಹುಶಃ ದಕ್ಷಿಣ ಭಾರತದಲ್ಲಿಯೂ ಸ್ಥಳೀಯ ಸಂಗೀತ ರೀತಿಯೊಂದು ಬಳಕೆಯಲ್ಲಿದ್ದು, ಇದನ್ನು ಒಳಗೊಂಡಂತೆ ಮುಂದಿನ ಭಾರತೀಯ ಸಂಗೀತ ಮಾರ್ಗ ಬೆಳೆದಂತೆ ತೋರುತ್ತದೆ. ಭರತನ ನಾಟ್ಯಶಾಸ್ತ್ರದಲ್ಲಿ ಗಾಯನ ವಾದನ, ರಸ, ಅಲಂಕಾರ ಮುಂತಾದ ಎಲ್ಲಾ ಸಂಗೀತಗಳಿಗೂ ಸಾಮಾನ್ಯವಾದ ವಿಷಯಗಳಿದ್ದರೆ, ಸುಮಾರು ೪ನೆಯ, ೫ನೆಯ ಶತಮಾನದಲ್ಲಿದ್ದ ಮತಂಗನ ಬೃಹದ್ದೇಶೀ ಎಂಬ ಪ್ರಮಾಣ ಗ್ರಂಥ ದಕ್ಷಿಣ ಭಾರತದ ಸಂಗೀತವನ್ನು ವಸ್ತುವಾಗಿ ಗ್ರಹಿಸಿ, ಭರತ ಹೇಳುವ ಸಂಗೀತ ಜಾತಿಗಳ ಬದಲು ರಾಗ ಸಂಗೀತದ

ವಿಷಯವನ್ನು ಮೊಟ್ಟ ಮೊದಲಿಗೆ ಪ್ರತಿಪಾದಿಸುತ್ತದೆ. ರಾಗಗಳನ್ನು ಶುದ್ಧ, ಸಂಕೀರ್ಣವೆಂದು ವಿಭಾಗ ಮಾಡಿ ಶ್ರುತಿ, ಸ್ವರ, ವರ್ಣ, ಅಲಂಕಾರ ಮುಂತಾದ ಹಲವು ವಿವರಗಳನ್ನು ಮತಂಗ ನಿರೂಪಿಸಿದ್ದಾನೆ."[೧೧] "ಮಾರ್ಗ ಸಂಗೀತದಿಂದ ಬೇರೆಯಾದ ದೇಸೀ ರಾಗಗಳನ್ನೇ ಬೃಹತ್ತಾಗಿ ಈತ ಹೇಳಿರುವುದರಿಂದ 'ಬೃಹದ್ದೇಶೀ' ಎಂಬ ಹೆಸರು ಈ ಗ್ರಂಥಕ್ಕೆ ಅನ್ವರ್ಥವಾಗಿದೆ. ಸಂಗೀತಶಾಸ್ತ್ರ ಪರಂಪರೆಯ ಬೆಳವಣಿಗೆಯಲ್ಲಿ ಈ ಗ್ರಂಥ ಒಂದು ಪ್ರಮುಖವಾದ ಘಟ್ಟ, ಇವನು ಕನ್ನಡ ಭಾಷೆಯನ್ನು ಬಲ್ಲವನಾಗಿದ್ದನೆಂಬುದಕ್ಕೆ ಅವನ ಗ್ರಂಥದಲ್ಲಿ ಸ್ಪಷ್ಟವಾದ ಆಧಾರಗಳು ದೊರಕುತ್ತವೆ. ಕನ್ನಡದ ಅನೇಕ ಸಂಗೀತ ರಚನೆಯ ಕೃತಿಗಳನ್ನು ಈತನು ಹೆಸರಿಸುತ್ತಾನೆಂದು ತಿಳಿದುಬಂದಿದೆ."[೧೨]

ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರ ಭೂಲೋಕ ಮಲ್ಲ (೧೧೧೬-೧೧೨೮) ಸಂಸ್ಕೃತದಲ್ಲಿ ರಚಿಸಿದ ಮಾನಸೊಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ ಸಂಗೀತ ಕ್ಷೇತ್ರದ ಅತ್ಯಂತ ಶ್ರೇಷ್ಠ ಗ್ರಂಥ ಹಾಗೂ ವಿಶ್ವಕೋಶ. ಈ ಗ್ರಂಥದಲ್ಲಿ ಆ ಕಾಲದಲ್ಲಿ ಪ್ರಚಲಿತದಲ್ಲಿದ್ದ ಸಂಗೀತದ ಪ್ರಸ್ತಾಪವಿದೆ. ಇದರಲ್ಲಿ ವಿನೋದ ವಿಶಂತಿಯ ಮೂರು ಅಧ್ಯಾಯಗಳಲ್ಲಿ ಸಂಗೀತ ಶಾಸ್ತ್ರದ ವಿವರಗಳಿವೆ. ಪ್ರಾದೇಶಿಕ ರಾಗಗಳು, ಅವುಗಳ ಲಕ್ಷಣಗಳು ಮತ್ತು ಅನೇಕ ಪ್ರಬಂಧಗಳನ್ನು ದೃಷ್ಟಾಂತಗಳೊಡನೆ ವಿವರಿಸಲಾಗಿದೆ.

೧೨ನೆಯ ಶತಮಾನದವರೆಗೆ ಏಕರೂಪವಾಗಿದ್ದ ಭಾರತೀಯ ಸಂಗೀತ ಮುಸಲ್ಮಾನರ ಆಗಮನದಿಂದಾಗಿ ಹಾಗೂ ಅವರ ಸಂಗೀತ ಕಲೆಯಿಂದ ಪ್ರಭಾವಿತವಾಗಿ ಅನಿವಾರ್ಯವಾಗಿ ಎರಡು ಕವಲುಗಳಾಗಿ ಒಡೆಯಿತು. ಉತ್ತರ ಭಾರತದ ಸಂಗೀತ ಶೈಲಿ ಹಿಂದೂಸ್ಥಾನಿ ಸಂಗೀತವೆನಿಸಿದರೆ ದಕ್ಷಿಣ ಭಾರತದ ಸಂಗೀತ ಕರ್ನಾಟಕ ಸಂಗೀತವೆನಿಸಿತು. "ಹಿಂದೂಸ್ಥಾನಿ ಮತ್ತು ಕರ್ನಾಟಕ ಸಂಗೀತ ಪದ್ಧತಿಗಳೆರಡಕ್ಕೂ ಇರುವ ಶಾಸ್ತ್ರ ಗ್ರಂಥಗಳು ಬಹುಮಟ್ಟಿಗೆ ಸಮಾನವಾದವು. ಅವುಗಳಲ್ಲಿ ಅಂತರ್ಗತವಾಗಿರುವ ಭಾರತೀಯ ಮನೋಧರ್ಮವೂ ಒಂದೇ. ಅವುಗಳಲ್ಲಿನ ಆದರ್ಶದಲ್ಲಿಯೂ ವ್ಯತ್ಯಾಸವಿಲ್ಲ. ಹೀಗೆ ತತ್ವತಃ ಅವುಗಳಲ್ಲಿ ಏಕತೆ ಇದ್ದರೂ ಪ್ರಾಯೋಗಿಕವಾದ ಸಾಧನೆಯಲ್ಲಿ ಮತ್ತು ಅಭಿವ್ಯಕ್ತಿಯಲ್ಲಿ ಭಿನ್ನತೆ ತಲೆದೋರಿತು. ಇದಕ್ಕೆ ಕೆಲವರ ಅಭಿಪ್ರಾಯದಂತೆ ಉತ್ತರದಲ್ಲಿ ಉಂಟಾದ ಮುಸ್ಲಿಂರ ಪ್ರಭಾವಕ್ಕೆ ಒಳಗಾಗಿ ಅಲ್ಲಿ ಬದಲಾವಣೆ ತಲೆದೋರಿರಬೇಕು. ಆದರೆ ದಕ್ಷಿಣ ಭಾರತದಲ್ಲಿ, ಪ್ರಾಚೀನ ಭಾರತೀಯ ಸಂಗೀತ ಪದ್ಧತಿ, ಸಂಕರವಿಲ್ಲದೆ ಶುದ್ಧರೂಪದಿಂದ ಉಳಿದುಬಂದಿತು. ಹಾಗೆ ಅದನ್ನು ಉಳಿಸುವುದಕ್ಕೆ ಕರ್ನಾಟಕವೇ ಕಾರಣವಾದುದರಿಂದ ಇದು ಕರ್ನಾಟಕ ಸಂಗೀತವೆಂಬ ಹೆಸರು ಪಡೆಯಿತು ಎಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ."[೧೩]

ಕರ್ನಾಟಕ ಸಂಗೀತ, ನಾದ ಮತ್ತು ಸಾಹಿತ್ಯಗಳೆರಡನ್ನು ಬಹಳ ಸುಂದರವಾದ ರೀತಿಯಲ್ಲಿ ಸಮನ್ವಯಗೊಳಿಸಿದೆ. ರಾಗದ ಪ್ರಾರಂಭದ ಆಲಾಪನೆ, ಕೇವಲ ನಾದರೂಪಿಯಾಗಿ ಆಯಾ

ರಾಗದ ಸೂಕ್ಷ್ಮ ಭಾವನೆಗಳನ್ನು ಮಿಡಿದು ರಸತ್ವಕ್ಕೇರಿಸಿ ಕಲಾತ್ಮಕವಾದ ರಂಜನೆಯಿಂದ ಪರವಶಗೊಳಿಸುತ್ತದೆ. ಅದಾದ ನಂತರ ಆ ರಾಗದಲ್ಲಿ ಕೃತಿ ಪ್ರಾರಂಭವಾಗುತ್ತದೆ. ಅಲ್ಲಿ ಕೇವಲ ನಾದ ವಿನ್ಯಾಸವಲ್ಲ, ಅದರೊಡನೆ ಸಾಹಿತ್ಯದ ಸೊಗಸನ್ನು ಅರಿತು ಅದು ವ್ಯಕ್ತಿಗೊಳ್ಳುವಂತೆ ಹಾಡಬೇಕೆಂಬುದು ಕರ್ನಾಟಕ ಸಂಗೀತದ ಸಪ್ತ ಜ್ಯೋತಿಗಳಲ್ಲಿ ಒಂದಾದ 'ಸಾಹಿತ್ಯ ಶುದ್ಧಿ' ಎಂಬ ಮಾತು ಈ ಸಂಗೀತಕ್ಕೆ ವಿಶೇಷವಾಗಿ ಅನ್ವಯವಾಗುತ್ತದೆ. ಕೃತಿಯ ಕೊನೆಯಲ್ಲಿ ಮತ್ತೆ ಸ್ವರ ಕಲ್ಪನೆ ಬಂದು ಸಂಗೀತದ ಕಲ್ಪನಾ ಸೃಷ್ಟಿಗೆ ಅವಕಾಶವನ್ನು ಒದಗಿಸುತ್ತದೆ. ಹಿಂದೂಸ್ತಾನಿ ಸಂಗೀತ, ನಾದ ಪ್ರಧಾನವನ್ನಾಗಿ ತೋರುತ್ತದೆ. ಒಂದೊಂದು ಸ್ವರವನ್ನು ಹಿಂಜಿ, ಹಿಂಜಿ, ಅದನ್ನು ಆಧಾರ ಶೃತಿಯಲ್ಲಿ ಅಡಗಿಸಿ ಅಡಗಿಸಿ, ವಿವಿಧ ವಿನ್ಯಾಸಗಳನ್ನು ಸಾಧಿಸಿ ತೋರಿಸುತ್ತಾ ನಾದದ ಹೊಳೆ ತುಂಬಿ ಭೋರ್ಗರೆದು ಹರಿಯುವಂತೆ ಮಾಡುತ್ತಾನೆ ಹಿಂದೂಸ್ತಾನಿ ಸಂಗೀತಗಾರ. ಅಲ್ಲಿ ನಾದವೇ ಪ್ರಧಾನ. ಅದು ಸಾಹಿತ್ಯವನ್ನು ಗೌಣವಾಗಿ ಅವಲಂಬಿಸಿ ತಾನು ಮಳೆಯಂತೆ ಸುರಿಯುತ್ತದೆ. ಚಿಲುಮೆಯಂತೆ ಉಕ್ಕುತ್ತದೆ. ಸಮುದ್ರದಂತೆ ಮೊರೆಯುತ್ತದೆ. ಬೆಳಕಿನಂತೆ ಮೆರೆಯುತ್ತದೆ."[೧೪]

ಹಿಂದೂಸ್ತಾನಿ ಸಂಗೀತ ಶೃತಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತದೆ. ಕರ್ನಾಟಕ ಸಂಗೀತ ತಾಳಕ್ಕೆ ಹೆಚ್ಚಿನ ಗಮನವನ್ನು ಕೊಡುತ್ತದೆ. ಶೃತಿ ಮತ್ತು ತಾಳಗಳೆರಡೂ ವಾಸ್ತವವಾಗಿ ಸಂಗೀತಕ್ಕೆ ಅನಿವಾರ್ಯವಾದ ಅಂಗಗಳು, ಸಂಗೀತದ ಮೂಲ ದ್ರವ್ಯಗಳಾದ ನಾದ ಮತ್ತು ಕಾಲಗಳನ್ನು ನಿಯಂತ್ರಿಸುವ ಅಂಶಗಳಿವು. ಇವುಗಳಿಗೆ ಕೊಟ್ಟಿರುವ ಸ್ಥಾನದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಇರಬಹುದೇ ಹೊರತು ಒಂದನ್ನು ಬಿಟ್ಟು ಇನ್ನೊಂದು ಇರಲಾರದು. ಶ್ರುತಿ ಮತ್ತು ಲಯವನ್ನು ಕುರಿತು ಪ್ರಸಿದ್ಧವಾದ ಹೇಳಿಕೆಯೇ ಉಂಟು ಅದೆಂದರೆ "ಶ್ರುತಿರ್ಮಾತಾ ಲಯಃಪಿತಾ" ಶ್ರುತಿಯೇ ತಾಯಿ, ಮತ್ತು ಲಯ ಅಥವಾ ತಾಳವೇ ತಂದೆ ಮಾತೃಧರ್ಮಗಳಾದ ಕೋಮಲತೆ, ದಯೆ, ಶಾಂತಿ, ಮೊದಲಾದ ಗುಣಗಳು ಶ್ರುತಿ ಪ್ರಧಾನವಾದ ಹಿಂದೂಸ್ತಾನಿ ಸಂಗೀತದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಪಿತೃ ಧರ್ಮಗಳಾದ ಗಾಂಭೀರ್ಯ, ಉತ್ಸಾಹ, ಹಠ ಮೊದಲಾದ ಗುಣಗಳು ತಾಳ ಪ್ರಧಾನವಾದ ಕರ್ನಾಟಕ ಸಂಗೀತದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಈ ಪ್ರಮುಖವಾದ ಅಂಶದ ಮೇಲೆ ಇವುಗಳ ಬೆಳವಣಿಗೆಯಲ್ಲಿ ವ್ಯತ್ಯಾಸ ಪ್ರಾರಂಭವಾಯಿತು. ಮತ್ತು ಕಾಲಕಳೆದಂತೆ ಹೆಚ್ಚು ಹೆಚ್ಚು ದೂರವಾಗುತ್ತಲೇ ಹೋದವು. ಕರ್ನಾಟಕ ಸಂಗೀತ ಅನೇಕ ವೇಳೆ ಬುದ್ಧಿ ಪ್ರಧಾನವಾಗಿ ಪರಿಣಮಿಸಿತು. ಹಿಂದೂಸ್ಥಾನಿ ಸಂಗೀತವು ಶ್ರುತಿ ಮಾಧುರ್ಯವನ್ನು ಮುಖ್ಯವನ್ನಾಗಿಟ್ಟುಕೊಂಡುದರಿಂದ ಹೆಚ್ಚು ಜನಪ್ರಿಯವಾಗುವ ಗುಣಗಳನ್ನು ಬೆಳೆಸಿಕೊಂಡಿತು. ಇವೆರಡೂ ಭಾರತೀಯ ಸಂಗೀತದ ಎರಡು ದೊಡ್ಡ ಕವಲುಗಳು. ಅವನ್ನು ಬೆಳೆಸಿದ ತಾಯಿ ಬೇರು ಒಂದೇ.

ವೈಜ್ಞಾನಿಕ ಸಿದ್ಧಾಂತದ ಮೇಲೆ ಪಲ್ಲವಿಸಿದ ಪ್ರಕಾರಗಳಾಗಿವೆ. ಉತ್ತರಾದಿ-ದಕ್ಷಿಣಾದಿ ಸಂಗೀತ ಪದ್ಧತಿಗಳು, ಮುಸಲ್ಮಾನರ ಆಳ್ವಿಕೆಯ ಸಂದರ್ಭದಲ್ಲಿ ಮುಸ್ಲಿಂರ ಪ್ರಭಾವದಿಂದ ಮಾರ್ಪಾಡಾದ ಸಂಗೀತ ಹಿಂದೂಸ್ತಾನಿಯೆನಿಸಿ, ಮಾರ್ಪಾಡಾಗದೇ ಉಳಿದ ಸಂಗೀತ ಕರ್ನಾಟಕ ಸಂಗೀತವೆನಿಸಿದೆ. ಅಲ್ಲಾವುದ್ದೀನ್ ಖಿಲ್ಜಿಯ ಆಸ್ಥಾನ ವಿದ್ವಾಂಸನಾದ ಅಮೀರ್ ಖುಸ್ರು ಎಂಬ ಸಂಗೀತಜ್ಞನ ಪಾರ್ಸಿ ಮತ್ತು ಇರಾಣಿ ಸಂಗೀತದ ಸುಧಾರಣೆಯ ಹೊಸ ಸಂಗೀತ ಪದ್ಧತಿಯೇ ಹಿಂದೂಸ್ತಾನಿ ಸಂಗೀತವೆಂದು ಕೆಲ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ದಕ್ಷಿಣದ ಗೋಪಾಲನಾಯಕನ ಪಾಂಡಿತ್ಯದಿಂದ ಪ್ರಭಾವಿತನಾಗಿ ಅಮೀರ್ ಖುಸ್ರು ಪಾರ್ಸಿ-ಇರಾಣಿ ಸಂಗೀತವನ್ನು ತುಸು ಮಾರ್ಪಾಡು ಮಾಡಿ, ಭಾರತೀಯ ಸಂಗೀತದೊಡನೆ ಮೇಳೈಸಿ, ಭಾರತದಲ್ಲಿ ಬಳಕೆಗೆ ತಂದನೆಂದೂ, ಇದುವೇ ಹಿಂದೂಸ್ತಾನಿ ಸಂಗೀತವೆಂದೂ ಕೆಲವರ ಅಭಿಪ್ರಾಯವಾಗಿದೆ.

ಶಾರ್ಙ್ಗದೇವನ ಸಂಗೀತ ರತ್ನಾಕರ ಗ್ರಂಥವನ್ನು ಹಿಂದೂಸ್ತಾನಿ ಹಾಗೂ ಕರ್ನಾಟಕ ಸಂಗೀತ ಪದ್ಧತಿಗಳೆರಡೂ ತಮ್ಮ ಆಧಾರ ಗ್ರಂಥವೆಂದು ಸ್ವೀಕರಿಸಿವೆ. 'ಸಂಗೀತ ರತ್ನಾಕರ'ವನ್ನು ಹಿಂದೂಸ್ತಾನಿ ಸಂಗೀತದ ಒಂದು ಶ್ರೇಷ್ಠ ಆಧಾರ ಗ್ರಂಥವೆಂದು ಹಿಂದೂಸ್ತಾನಿ ಸಂಗೀತದ ದಿಗ್ಗಜರಾದ ಪಂ॥ ಭಾತಖಂಡೆಯವರು ತಮ್ಮ ಉತ್ತರ ಭಾರತೀಯ ಸಂಗೀತದ ಸಂಕ್ಷಿಪ್ತ ಇತಿಹಾಸದಲ್ಲಿ ಮಾನ್ಯ ಮಾಡಿದ್ದಾರೆ. ತುಳಜಾಜಿಯ 'ಸಂಗೀತ ಸಾರಾಮೃತ' ಕೆಳದಿ ಸಂಸ್ಥಾನದ ಬಸವರಾಜನ 'ಶಿವತತ್ವ ರತ್ನಾಕರ' ಚತುರ ದಾಮೋದರನ ಸಂಗೀತ ದರ್ಪಣ, ಇವೇ ಮೊದಲಾದ ಲಕ್ಷಣ ಗ್ರಂಥಗಳು ಎರಡೂ ಸಂಗೀತ ಪದ್ಧತಿಗಳಿಗೆ ಲಕ್ಷಣ ಗ್ರಂಥಗಳಾಗಿವೆ.

ಭರತಾಧಿಗಳಿಂದ ಬಂದ ಭಾರತೀಯ ಸಂಗೀತದ ನಿರಂತರ ಧಾರೆಯನ್ನು ಕರ್ನಾಟಕ ಪೋಷಿಸಿಕೊಂಡು ಬಂದುದಲ್ಲದೆ, ತನ್ನ ಅಮೃತ ವರ್ಷವನ್ನು ಅದಕ್ಕೆ ಕರೆದು ಮಹಾಪೂರದಿಂದ ತುಂಬಿ ಹರಿಯುವಂತೆ ಮಾಡಿತು. ಹೊರದೇಶಗಳಿಂದ, ಅದೂ ಮುಖ್ಯವಾಗಿ ಮುಸ್ಲಿಂರ ದಾಳಿಯ ನಂತರ ಉತ್ತರ ಭಾರತದಲ್ಲಿನ ಕಲೆಗಳೆಲ್ಲಾ ತತ್ತರಿಸ ತೊಡಗಿದಾಗ ಅವುಗಳಿಗೆ ಪೋಷಣೆಯನ್ನಿತ್ತು. ಅವುಗಳನ್ನು ಸಮನ್ವಯ ದೃಷ್ಟಿಯಿಂದ ಬೆಳೆಸಿದ ಕರ್ನಾಟಕದ ಔದಾರ್ಯಕ್ಕೆ ಸಂಗೀತವೂ ಹೊರತಾಗಲಿಲ್ಲ. ಉತ್ತರದ ಸಂಗೀತ ಮುಸ್ಲಿಂ ಪ್ರಭಾವದಿಂದ ಬದಲಾಗತೊಡಗಿದಾಗ ಅದಕ್ಕೊಂದು ಸಂಪ್ರದಾಯದ ಕಟ್ಟನ್ನು ಹಾಕಿ ದಕ್ಷಿಣದಲ್ಲಿ ಭಾರತೀಯತನವನ್ನು ಉಳಿಸಿಕೊಂಡು ಬರಲು ಕರ್ನಾಟಕ ಕಾರಣವಾಯಿತು. ತತ್ಪರಿಣಾಮವಾಗಿ ದಕ್ಷಿಣ ಭಾರತದ ಸಂಗೀತ 'ಕರ್ನಾಟಕ ಸಂಗೀತ' ಎಂಬ ಸಾರ್ಥಕ ನಾಮದಿಂದಲೇ ಪ್ರಸಿದ್ಧವಾಯಿತು.

ದಕ್ಷಿಣ ಭಾರತದಲ್ಲಿ ಸಂಗೀತದ ಸ್ವರೂಪವನ್ನು ತಿಳಿಸುವ ಅತಿ ಪ್ರಾಚೀನವಾದ ದೇಶ ಭಾಷೆಯ ಗ್ರಂಥವೆಂದರೆ ತಮಿಳಿನ ಶಿಲಪ್ಪದಿಗಾರಂ, ಇಲಂಗೋವಾದಿಗಳ್ ಎಂಬ ಚೇರಮ

ರಾಜನಿಂದ ಕ್ರಿ.ಶ. ಸುಮಾರು ೪ನೆಯ ಶತಮಾನದಲ್ಲಿ ರಚಿತವಾದ ಈ ಗ್ರಂಥ, ರಾಗಗಳು, ಸ್ವರಗಳು, ಆರೋಹ, ಅವರೋಹ ಮೊದಲಾದ ಶಾಸ್ತ್ರೀಯ ಅಂಶಗಳನ್ನು ಹೇಳುತ್ತದೆ. ಭರತನ ನಾಟ್ಯಶಾಸ್ತ್ರವನ್ನು ಬಿಟ್ಟರೆ ಸಂಗೀತದಲ್ಲಿ ಬಹುಪ್ರಾಚೀನವಾದ ಮತ್ತು ಪ್ರಮುಖವಾದ ಗ್ರಂಥ ಬೃಹದ್ದೇಶಿ ಮತಂಗ ಇದರ ಕರ್ತೃ. ಇವನು ಸುಮಾರು ೪-೫ನೆಯ ಶತಮಾನದಲ್ಲಿದ್ದವನು. ಋಷ್ಯಮೂಕ ಪರ್ವತದ ಬಳಿಯಲ್ಲಿ ವಾಸಿಸುತ್ತಿದ್ದ ಕನ್ನಡ ನಾಡಿನವನು ಎಂದು ತಿಳಿದುಬರುತ್ತದೆ. ಕನ್ನಡದ ಅನೇಕ ಸಂಗೀತ ರಚನೆಯ ಕೃತಿಗಳನ್ನು ಹೆಸರಿಸುತ್ತಾನೆ. ಮತಂಗನ ಬೃಹದ್ದೇಶೀ ಗ್ರಂಥ ದಕ್ಷಿಣ ಭಾರತದ ಸಂಗೀತವನ್ನು ವಸ್ತುವಾಗಿ ಗ್ರಹಿಸಿ, ಭರತ ಹೇಳುವ ಸಂಗೀತ ಜಾತಿಗಳ ಬದಲು ರಾಗ ಸಂಗೀತದ ವಿಷಯವನ್ನು ಮೊತ್ತ ಮೊದಲ ಬಾರಿಗೆ ಪ್ರತಿಪಾದಿಸುತ್ತದೆ. ರಾಗಗಳನ್ನು ಶುದ್ಧ, ಸಂಕೀರ್ಣವೆಂದು ವಿಭಾಗ ಮಾಡಿ ಶ್ರುತಿ, ಸ್ವರ, ವರ್ಣ, ಅಲಂಕಾರ ಮುಂತಾದ ಹಲವು ವಿವರವನ್ನು ಮತಂಗ ನಿರೂಪಿಸಿದ್ದಾನೆ.

ಸಂಗೀತ ಕ್ಷೇತ್ರದ ಅತ್ಯಂತ ಶ್ರೇಷ್ಠ ಗ್ರಂಥ ಹಾಗೂ ವಿಶ್ವಕೋಶ ಎಂದು ಪರಿಗಣಿಸಲ್ಪಟ್ಟಿರುವುದು ಚಾಲುಕ್ಯ ಚಕ್ರವರ್ತಿ ಮೂರನೆಯ ಸೋಮೇಶ್ವರನು (೧೧೧೬–೧೧೨೭) ಸಂಸ್ಕೃತದಲ್ಲಿ ರಚಿಸಿದ ಮಾನಸೋಲ್ಲಾಸ ಅಥವಾ ಅಭಿಲಾಷಿತಾರ್ಥ ಚಿಂತಾಮಣಿ, ಕರ್ನಾಟಕ ಸಂಗೀತವೆಂಬ ಹೆಸರು ಸೋಮೇಶ್ವರನಿಂದ ಬಳಕೆಗೆ ಬಂದಿತೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

೧೨ನೆಯ ಶತಮಾನದಲ್ಲಿ ಪುರಿಯ ಜಗನ್ನಾಥ ದೇವಾಲಯದಲ್ಲಿದ್ದಂತಹ ಜಯದೇವನೆಂಬ ಕವಿಯು 'ಕರ್ನಾಟ ರಾಗೇಣಗೀಯತೇ' ಎಂದು ಹೇಳಿರುವಲ್ಲಿ ಅವನ ಕಾಲದಲ್ಲಿ ಕರ್ನಾಟ ಎಂಬ ರಾಗವಿದ್ದಿತು ಎಂದು ತಿಳಿದುಬರುತ್ತದೆ. "ಜಯದೇವ ಕವಿ ತನ್ನ ಪದ್ಯಗಳನ್ನು ವಸಂತ, ಗುರ್ಜರೀ, ಗುಣಕರೀ ಇತ್ಯಾದಿ ಯಾವ ಯಾವ ರಾಗಗಳಲ್ಲಿ ಹಾಡಬೇಕೆಂಬುದನ್ನು ಅಲ್ಲಲ್ಲಿ ನಿರ್ದೇಶಿಸಿದ್ದಾನೆ. ಕೆಲವೆಡೆಯಲ್ಲಿ 'ಕರ್ಣಾಟ ರಾಗೇಣ ಗೀಯತೇ' ಎಂದಿದ್ದಾನೆ, ಅವನ ಕಾಲಕ್ಕೆ ಕರ್ಣಾಟಕವೆಂಬ ರಾಗವಿದ್ದಿತೇ ಹೊರತು ಅದೊಂದು ಸ್ವತಂತ್ರ ಸಂಗೀತ ಪದ್ಧತಿಯಾಗಿರಲಿಲ್ಲ. ಇದ್ದುದೊಂದೇ ಭಾರತೀಯ ಸಂಗೀತ. ಅದರ ವಿಕಾಸಕ್ಕೆ ಕಾರಣಕರ್ತರು ಕರ್ನಾಟಕದವರು. ನಾಸ್ಯದೇವ, ಸೋಮೇಶ್ವರ, ಲಕ್ಷ್ಮಣಸೇನರಂತಹ ರಾಜರು, ಶಾರ್ಙ್ಗದೇವನಂತಹ ಪಂಡಿತರು ಮತ್ತು ಕಲ್ಯಾಣದ ಶಿವಶರಣರಂತಹ ಕವಿ ಗಾಯಕ ಚಕ್ರವರ್ತಿಗಳು"[೧೫]

ಪ್ರಾಚೀನ ಕರ್ನಾಟಕದಲ್ಲಿ ಸಂಗೀತ ಜನಪ್ರಿಯವಾಗಿದ್ದು ವಿಶೇಷ ಪ್ರೋತ್ಸಾಹವನ್ನು ಪಡೆದುಕೊಂಡಿತ್ತೆಂಬುದಕ್ಕೆ ಶಾಸನಗಳ ಮತ್ತು ಸಾಹಿತ್ಯದ ಆಧಾರಗಳು ದೊರಕುತ್ತವೆ. ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಅಂದಿನ ಕಾಲದ ಸಂಗೀತದ ಪ್ರಸ್ತಾಪವಿದೆ. ವಿನೋದ ವಿಶಂತಿಯ ಮೂರು ಅಧ್ಯಾಯಗಳಲ್ಲಿ ಪ್ರಾದೇಶಿಕ ರಾಗಗಳು, ಅವುಗಳ ಲಕ್ಷಣಗಳ ಮತ್ತು ಅನೇಕ ಪ್ರಬಂಧಗಳನ್ನು

ದೃಷ್ಟಾಂತಗಳೊಡನೆ ವಿವರಿಸಲಾಗಿದೆ. ಸೋಮೇಶ್ವರನ ಮಗನಾದ ಎರಡನೆಯ ಜಗದೇಕ ಮಲ್ಲನು (೧೧೩೫-೧೧೫೦) 'ಸಂಗೀತ ಚೂಡಾಮಣಿ' ಎಂಬ ಗ್ರಂಥವನ್ನು ರಚಿಸಿರುವನು. ಇವನು ತನ್ನ ಗ್ರಂಥದಲ್ಲಿ ನೂರಕ್ಕೂ ಮಿಗಿಲಾಗಿ ರಚನಾರೂಪಗಳನ್ನು ವಿವರಿಸಿದ್ದಾನೆ. ದೇವಗಿರಿಯ ಸೇವುಣ ದೊರೆ ಸಿಂಘಣನ ಆಶ್ರಯದಲ್ಲಿ ಶ್ರೀಕರಣಿಕಾಗ್ರಣಿಯಾಗಿದ್ದ ಶಾರ್ಙ್ಗದೇವನ (೧೧೯೯-೧೨೪೭) ಸಂಗೀತ ರತ್ನಾಕರ ಸಂಗೀತ ಶಾಸ್ತ್ರಕ್ಕೆ ಭದ್ರವಾದ ಬುನಾದಿ ಹಾಕಿತೆಂದರೆ ತಪ್ಪಾಗಲಾರದು. ೧೩೩೦ರ ಸುಮಾರಿಗಿದ್ದ ಸಿಂಹಭೂಪಾಲನು ಶಾರ್ಙ್ಗದೇವನ ಸಂಗೀತದ ರತ್ನಾಕರಕ್ಕೆ ಟೀಕೆಯನ್ನು ಬರೆದಿದ್ದಾನೆ.

ಸಂಗೀತಕ್ಕೆ ಈ ದೇಶದಲ್ಲಿ ಇದ್ದ ವಿಶೇಷ ಪ್ರೋತ್ಸಾಹ ಹಾಗೂ ಹಲವು ಶಾಸ್ತ್ರಕಾರರ ಪರಿಶ್ರಮದಿಂದ ಕರ್ನಾಟಕ ದೇಶದಲ್ಲಿ ಒಂದು ವಿಶಿಷ್ಟ ಸಂಗೀತ ಪದ್ಧತಿ ಬೆಳೆಯಲು ಆರಂಭಿಸಿದ್ದರಲ್ಲಿ ಆಶ್ಚರ್ಯವೇನೂ ಇರಲಾರದು. ಈ ಸಂಗೀತ ಪದ್ಧತಿಯನ್ನೇ ಕರ್ಣಾಟಕ ಸಂಗೀತ ಎಂದು ಕರೆದಿರುವುದು ಸಹಜವಾಗಿದೆ. ೧೪ನೆಯ ಶತಮಾನದಲ್ಲಿ ಕರ್ನಾಟಕದಲ್ಲಿದ್ದ ಲಕ್ಷಣಕಾರ ಹರಿಪಾಲದೇವ (೧೩೯೯-೮೦) 'ತದಪಿ ದ್ವಿವಿಧಂ ಪ್ರೋಕ್ತಂ ದಕ್ಷಿಣೋತ್ತರ ಭೇದಂತಃ । ಕರ್ಣಾಟಕಂ ದಕ್ಷಿಣೇ ಸ್ಯಾದ್ಧಿಂದುಸ್ತಾನೀ ತಥೋತ್ತರೇ' ಎಂದು ಸ್ಪಷ್ಟವಾಗಿ ಅಂದಿಗೆ ಕರ್ಣಾಟಕ ಸಂಗೀತ ಎಂಬ ಪದ್ಧತಿ ರೂಢಿಯಾಗಿತ್ತೆಂದು ಹೇಳಿದ್ದಾನೆ.

ಭಾರತೀಯ ಸಂಗೀತ ಶಾಸ್ತ್ರದಲ್ಲಿ ಉಜ್ವಲವಾದ ಧ್ರುವ ನಕ್ಷತ್ರದಂತಿರುವ ಹೆಸರು ಸಾರಂಗ ದೇವನದು. 'ಸಂಗೀತ ರತ್ನಾಕರ' ಈತನ ಕೃತಿ. ಈತನ ಇನ್ನೊಂದು ಹೆಸರು ಶಾರ್ಙ್ಗದೇವ. ಈತನ ಕಾಲ ಸುಮಾರು ಕ್ರಿ.ಶ. ೧೨೧೦ರಿಂದ ೧೨೪೭. ದೇವಗಿರಿಯ ಯಾದವ ಅರಸ ಸಿಂಘಣನ ಬಳಿ ಕೋಶಾಧಿಕಾರಿಯಾಗಿದ್ದ ಈತನು ಸಕಲ ಶಾಸ್ತ್ರ ಪಾರಂಗತನಾಗಿದ್ದನು. ಸಂಗೀತ ರತ್ನಾಕರವು ಸ್ವರಗತಾಧ್ಯಾಯ, ರಾಗ ವಿವೇಕಾಧ್ಯಾಯ, ಪ್ರಕೀರ್ಣಾಧ್ಯಾಯ, ಪ್ರಬಂಧಾಧ್ಯಾಯ, ತಾಳಾಧ್ಯಾಯ ಮತ್ತು ವಾದ್ಯಾಧ್ಯಾಯ, ನೃತ್ಯಾಧ್ಯಾಯ ಎಂಬ ಏಳು ಅಧ್ಯಾಯಗಳನ್ನು ಒಳಗೊಂಡಿದೆ.

ಮೊದಲನೆಯ ಸ್ವರಗತಾಧ್ಯಾಯದಲ್ಲಿ ಮಾನವ ದೇಹ, ನಾದದ ಹುಟ್ಟು, ಸ್ಥಾನಗಳು, ಶ್ರುತಿಗಳು, ಶುದ್ಧ ಸ್ವರಗಳು, ಹನ್ನೆರಡು ವಿಕೃತ ಸ್ವರಗಳು, ಸ್ವರಭೇದಗಳಾದ ವಾದಿ, ಸಂವಾದಿ, ವಿವಾದಿ, ಅನುವಾದಿ ಸ್ವರಗಳು, ಅವುಗಳ ಕುಲ, ಜಾತಿ, ಬಣ್ಣ, ದ್ವೀಪ ಮತ್ತು ಋಷಿಗಳ ವಿವರಣೆಯಿದೆ.

ಎರಡನೆಯ ರಾಗ ವಿವೇಕ ಅಧ್ಯಾಯದಲ್ಲಿ ಗ್ರಾಮರಾಗ, ರಾಗಾಂಗಳ ವಿವರಣೆ, ಗ್ರಾಮ, ಉಪ, ರಾಗ, ಭಾಷಾ, ವಿಭಾಷಾ ಮತ್ತು ಅಂತರ ಭಾಷಾಗಳು, ಮಾರ್ಗ ರಾಗಗಳು, ರಾಗಾಂಗ, ಭಾಷಾಂಗ, ವಿಪಾಂಗ, ಕ್ರಿಯಾಂಗ ರಾಗಗಳು, ದೇಶೀ ರಾಗಗಳ ವಿವರಣೆಯಿದೆ.

ಮೂರನೆಯ ಪ್ರಕೀರ್ಣಕ ಅಧ್ಯಾಯದಲ್ಲಿ ವಾಗ್ಗೇಯಕಾರನ ಗುಣ-ಲಕ್ಷಣಗಳ ವಿವೇಚನೆ ಲಕ್ಷ್ಯ ಸಂಗೀತದ ವಿವರಣೆಯಿದೆ.

ನಾಲ್ಕನೆಯ ಅಧ್ಯಾಯದಲ್ಲಿ ೩೨ ಬಗೆಯ ಪ್ರಬಂಧಗಳನ್ನು ಚರ್ಚಿಸಲಾಗಿದೆ. ಪ್ರಬಂಧದಲ್ಲಿ ಎರಡು ವಿಧ ಅವುಗಳೆಂದರೆ ಶುದ್ಧ, ಛಾಯಾಂಗ, ಸೂಡದಲ್ಲಿರುವಂಥವು ಆಲಿ ಹಾಡಿನ ರೀತಿಯಲ್ಲಿ ನೆಲೆಯಾದವು ಆಲಿಕ್ರಮ ಪ್ರಬಂಧಗಳು, ವಿಪ್ರಕೀರ್ಣ ಪ್ರಬಂಧಗಳು, ಛಾಯಾಲಗ ಸೂಡವೆಂಬ ಪ್ರಬಂಧವನ್ನು ಅವಲಂಬಿಸಿರುವ ಪ್ರಬಂಧಗಳ ವಿವರಣೆಯಿದೆ.

ತಾಳಾಧ್ಯಾಯದಲ್ಲಿ ಮಾರ್ಗ ತಾಳಗಳಾದ ಚಚ್ಚಪುಟ, ಚಾಚಪುಟ ಇತ್ಯಾದಿ ತಾಳಗಳೊಂದಿಗೆ ೧೨೦ ದೇಶೀ ತಾಳಗಳ ವಿವರಣೆಯಿದೆ. ದೇಶೀ ತಾಳಗಳು ಷಡಂಗಗಳಿಂದಲೂ, ಮಾತ್ರಾಕಾಲದಿಂದ ಕೂಡಿವೆ.

ಆರನೆಯ ಅಧ್ಯಾಯದಲ್ಲಿ ವಾದ್ಯಗಳಿಗೆ ಸಂಬಂಧಿಸಿದ ಅತಿ ವಿಶದ ಸಂಗತಿಗಳಿವೆ. ಎಲ್ಲ ಲಾಕ್ಷಣಿಕರಂತೆ ಶಾರ್ಙ್ಗದೇವನೂ ಸಹ ವಾದ್ಯವನ್ನು ನಾಲ್ಕು ಬಗೆಯಲ್ಲಿ ತತ, ಅನದ್ಧ, ಸುಷಿರ, ಘನವೆಂದು ವಿಂಗಡಿಸಿದ್ದಾನೆ.

ಬಹುಮುಖ ಪ್ರತಿಭೆಯುಳ್ಳ ಮಹಾವ್ಯಕ್ತಿತ್ವ ಸಾರಂಗದೇವನದು. ಬಹುಶಾಸ್ತ್ರ ಪರಿಣಿತಿ ಸೂಕ್ಷ್ಮಗ್ರಾಹಿಯಾದ ಮನೋಧರ್ಮ, ನಿಶಿತಮತಿ, ನಿಷ್ಪಕ್ಷಪಾತವಾದ ವಿವೇಚನಾ ದೃಷ್ಟಿ ಇವುಗಳನ್ನು ಆತನ ಗ್ರಂಥದ ಆದ್ಯಂತವೂ ಕಾಣಬಹುದೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.[೧೬] ಈ ಕಾರಣದಿಂದಲೇ ಭಾರತದ ಆದ್ಯಂತವೂ, ಹಿಂದೂಸ್ತಾನಿ, ಕರ್ಣಾಟಕ ಸಂಗೀತಗಳೆರಡಕ್ಕೂ ಆಧಾರಭೂತವಾದ ಪ್ರಮಾಣ ಗ್ರಂಥವಾಗಿ ಉಳಿದಿದೆ. ಕರ್ನಾಟಕದಲ್ಲಿ ಜನಿಸಿದ ಈ ಪ್ರತಿಭಾ ಸಂಪನ್ನ ಸಂಗೀತ ಪ್ರಪಂಚದಲ್ಲಿ ವಿಶ್ವಮಾನವಾಗಿ ಉಳಿದಿದ್ದಾನೆ.

ದೇವಗಿರಿಯ ಯಾದವರ ಬಳಿಯಿದ್ದ ಗೋಪಾಲನಾಯಕ ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡು ಸಂಗೀತ ಪದ್ಧತಿಗಳಲ್ಲಿ ಪ್ರಸಿದ್ಧವಾದ ವ್ಯಕ್ತಿಯಾಗಿರುವನು. ದೇವಗಿರಿಯ ಮೇಲೆ ಮಲ್ಲಿಕಾಫರನು ಧಾಳಿ ಮಾಡಿ ನಾಶಗೊಳಿಸಿದಾಗ, ಗೋಪಾಲನಾಯಕನ ಹೆಸರನ್ನು ಕೇಳಿದ್ದ ಆತನು ಅವನ ವ್ಯಕ್ತಿತ್ವಕ್ಕೆ ಮಾರು ಹೋಗಿ ಆತನನ್ನು ಬಹಳ ಗೌರವದಿಂದ ಕಂಡು ಪಲ್ಲಕ್ಕಿಯಲ್ಲಿ ಅವನನ್ನು ಕೂರಿಸಿ ಉತ್ತರ ಭಾರತಕ್ಕೆ ಆತನನ್ನು ಕರೆದೊಯ್ದನಂತೆ ಅಲ್ಲಿ ಹಿಂದೂಸ್ತಾನಿ ಸಂಗೀತದಲ್ಲಿಯೂ ಪರಿಣಿತನಾಗಿ ಆ ಪದ್ಧತಿಯ ಮಹಾದಿಗ್ಗಜಗಳಲ್ಲಿ ಒಬ್ಬನಾಗಿ ಪರಿಣಮಿಸಿದನು. ಮೂವತ್ತೆರಡು ರಾಗಗಳನ್ನು ಉಳ್ಳಂತಹ ಕೃತಿಯನ್ನು ರಚಿಸಿದಂತೆ ಕಂಡುಬರುತ್ತದೆ. ಆದರೆ ಈತನ ಶಾಸ್ತ್ರ ಕೃತಿಗಳಾವುವು ಉಪಲಬ್ಧವಾದಂತೆ ಕಂಡುಬರುವುದಿಲ್ಲ. ಕರ್ನಾಟಕದಿಂದ ಹೋಗಿ ಉತ್ತರ ಭಾರತದಲ್ಲಿ ತಮ್ಮ ಕೀರ್ತಿ ಧ್ವಜವನ್ನು ನೆಟ್ಟ ಸಮರ್ಥಶಾಲಿಗಳ ಅಗ್ರ ಪಂಕ್ತಿಗೆ ಗೋಪಾಲ ನಾಯಕ ಸೇರುತ್ತಾನೆ.[೧೭]

ವಿಜಯನಗರ ಅರಸರ ಕಾಲದಲ್ಲಿ ಕರ್ಣಾಟಕ ಸಂಗೀತ ಸ್ಪಷ್ಟ ರೂಪುರೇಖೆಗಳೊಡನೆ ವಿಶಿಷ್ಟ ಆವಿಷ್ಕಾರಗಳೊಡನೆ, ರೂಪು ತಳೆಯಿತು. ಹಿಂದಿನ ಕಾಲದಲ್ಲಿದ್ದ ಜನಮನ್ನಣೆ ಅದೇ ದಾಟಿಯಲ್ಲಿ ಮುಂದುವರೆದಿದ್ದು ಮತ್ತು ಅಂದಿನ ದೊರೆಗಳ ವಿಶೇಷ ಪ್ರೋತ್ಸಾಹ ಈ ಮುನ್ನಡೆಗೆ ಕಾರಣ. ಸಮಕಾಲೀನ ಸಾಹಿತ್ಯ ಗ್ರಂಥಗಳಲ್ಲಿ ಬರುವ ಹಲವಾರು ಉಲ್ಲೇಖಗಳು ಸಂಗೀತ ಅಂದು ಜನಪ್ರಿಯವಾಗಿತ್ತೆಂಬುದನ್ನು ಶಾಸ್ತ್ರಬದ್ಧವಾಗಿತ್ತೆಂಬುದನ್ನು ಸೂಚಿಸುತ್ತವೆ.

ವಿಜಯನಗರ ಅರಸರ ಕಾಲದಲ್ಲಿ ಅವರ ಪ್ರೋತ್ಸಾಹದ ನೆರಳಿನಲ್ಲಿ ಈ ನಾಡಿನ ಸಂಗೀತದ ಶಾಸ್ತ್ರೀಯ ನಿರೂಪಣೆ ಹೆಚ್ಚಿನ ಮಟ್ಟಿಗೆ ಸಾಗಿತಾಗಿ ಇದೇ ಈ ಸಂಗೀತ ಪ್ರಕಾರಕ್ಕೆ ಕರ್ಣಾಟಕ ಸಂಗೀತ ಎಂಬ ಹೆಸರು ಬರಲು ಕಾರಣವಾಯಿತು ಎಂಬ ಊಹೆ ಇದೆ. ವಿದ್ಯಾರಣ್ಯರು ರಚಿಸಿದ ಕೃತಿ ಸಂಗೀತಸಾರ ಸಂಗೀತ ಪ್ರಪಂಚದಲ್ಲಿ ಪ್ರಸಿದ್ಧವಾದ ಇನ್ನೊಂದು ಕೃತಿ. ಮೇಳ ಜನ್ಯ ಪದ್ಧತಿಯ ಮೇಲೆ ರಾಗಗಳನ್ನು ವಿಭಜಿಸಲು ಪ್ರಯತ್ನಿಸಿದವರಲ್ಲಿ ವಿದ್ಯಾರಣ್ಯರು ಪ್ರಾಚೀನರೆನ್ನಬಹುದು. ವಿದ್ಯಾರಣ್ಯರು ತಮ್ಮ ಸಂಗೀತಸಾರದಲ್ಲಿ ಹದಿನೈದು ಮೇಳ ರಾಗಗಳನ್ನು ಹೇಳಿ ಐವತ್ತು ಪ್ರಚುರ ಪ್ರಯೋಗಗಳುಳ್ಳ ರಾಗಗಳನ್ನಳವಡಿಸಿದ್ದಾರೆಂದು ಗೋವಿಂದ ದೀಕ್ಷಿತ ತನ್ನ 'ಸಂಗೀತ ಸುಧೆ'ಯಲ್ಲಿ (೧೬೧೪) ಹೇಳುತ್ತಾನೆ. ಕರ್ನಾಟಕ ಭಾಗ್ಯ ವಿದ್ಯಾರಣ್ಯ ಶ್ರೀಚರಣಾಗ್ರಣೇಭ್ಯಃ ಆರಭ್ಯರಾಗಾನ್ ಪ್ರಚುರ ಪ್ರಯೋಗನ್ ಪಂಚಾಶತಃ ಚ ಕಲಯೇ ಷಡಂಗಾನ' ಎಂಬುದು ಅವನ ಮಾತು. ವಿದ್ಯಾರಣ್ಯರು ಮೇಳರಾಗಗಳ ನಿರ್ದೇಶನವಲ್ಲದೆ ತಮ್ಮ ಗ್ರಂಥದಲ್ಲಿ ರಾಗಾಲಾಪನೆಯ ವಿಧಿಗಳನ್ನು ನಿರೂಪಿಸಿದ್ದಾರೆಂದು ದೀಕ್ಷಿತ್‌ನಿಂದ ತಿಳಿದುಬರುತ್ತದೆ. ವಿದ್ಯಾರಣ್ಯರ ಸಂಗೀತಸಾರದಲ್ಲಿ ಹಿಂದೂಸ್ತಾನಿ, ಕರ್ಣಾಟಕ ಸಂಗೀತವೆಂಬ ಸ್ಪಷ್ಟವಾದ ವಿಭೇದ ಕಂಡುಬರುತ್ತದೆ. ವಿಜಯನಗರ ಸಾಮ್ರಾಜ್ಯ ಮುಂದೆ ಕರ್ಣಾಟಕ ಸಂಗೀತವನ್ನು ಸಮೃದ್ಧಿಯಾಗಿ ಬೆಳೆಸುವುದಕ್ಕೆ ಇದು ನಾಂದಿಯಾಯಿತ್ತೆನ್ನಬಹುದು.[೧೮]

ಇಮ್ಮಡಿ ಪ್ರೌಢದೇವರಾಯನ ಆಳ್ವಿಕೆಯ (ಸುಮಾರು ೧೪೪೬-೬೫) ಕಾಲದಲ್ಲಿದ್ದು, ಅಭಿನವ ಭರತಾಚಾರ್ಯ, ರಾಯವಾಗ್ಗೇಯಕಾರ ಮುಂತಾದ ಪ್ರಶಸ್ತಿಗಳನ್ನು ಪಡೆದಿದ್ದ ಕಲ್ಲಿನಾಥನೆಂಬ ವಿದ್ವಾಂಸನು ಶಾರ್ಙ್ಗದೇವನ ಕೃತಿಗೆ 'ಕಲಾನಿಧಿ'ಯೆಂಬ ಟೀಕೆಯನ್ನು ರಚಿಸಿದನು. ಒಂದು ಕಾಲಕ್ಕೆ ಸಂಗೀತ ಪ್ರಪಂಚದಲ್ಲಿ ಹನೂಮನ್ಮತ, ನಾರದ ಮತ, ಸೋಮೇಶ್ವರ ಮತಗಳಿದ್ದಂತೆ, ಕಲ್ಲಿನಾಥ ಮತವೆಂಬ ವಿಶಿಷ್ಟವಾದ ಸಂಪ್ರದಾಯವೇ ಇದ್ದಿತು ಎಂದು ತಿಳಿದುಬರುತ್ತದೆ.[೧೯] ಕರ್ನಾಟಕದ ಗರ್ಭದಿಂದ ಅವತರಿಸಿ ಸಂಗೀತ ಪ್ರಪಂಚದಲ್ಲಿ ಕಾಲಿರಿಸಿದ ಮಹಾನ್ ವ್ಯಕ್ತಿ ಕಲ್ಲಿನಾಥನು, ಮೂಲಗ್ರಂಥದಲ್ಲಿ ಸೂತ್ರದಲ್ಲಿರುವ ಅಂಶಗಳನ್ನು ವಿವರಿಸಿ ಪ್ರಮಾಣಬದ್ಧವಾಗಿ ಸ್ಪಷ್ಟಪಡಿಸುವ ಈತನ ವಿದ್ಯಾವೈಖರಿ ವಿಸ್ಮಯವಾದುದು.

ಶಬ್ದಾರ್ಥ, ತಾತ್ಪರ್ಯ, ಧ್ವನಿ, ವಿಶೇಷ ಮೊದಲಾದವುಗಳಿಂದ ಮೂಲಗ್ರಂಥದ ಕ್ಲಿಷ್ಟ ಭಾಗಗಳನ್ನು ವಿವರಿಸುತ್ತಾನೆ. ಅನಂತರ ಆಯಾ ವಿಷಯಕ್ಕೆ ಸಂಬಂಧಪಟ್ಟ ತನ್ನ ವಾದವನ್ನು ಮಂಡಿಸುತ್ತಾನೆ. ಪೂರ್ವಾಚಾರ್ಯರ ಮಾತುಗಳಿಂದ ತನ್ನನ್ನು ಸಮರ್ಥಿಸಿಕೊಳ್ಳುತ್ತಾನೆ. ಈತನ ವ್ಯಾಖ್ಯಾನ, ಸಂದಿಗ್ಧ ಸ್ಥಿತಿಯಲ್ಲಿದ್ದ ಅಂದಿನ ಸಂಗೀತದ ಬೆಳವಣಿಗೆಗೆ ಸರಿಯಾದ ಮಾರ್ಗದರ್ಶನ ಮಾಡುವ ಪ್ರಬೋಧಕ ಶಕ್ತಿಯಾಗಿ ಪರಿಣಮಿಸಿತು. ಸ್ವರಗಳ ಚೌಕಟ್ಟು, ರಾಗ ವಿಭಾಗಗಳು ಮತ್ತು ಸಂಗೀತದ ಇತರ ಸೂಕ್ಷ್ಮವಾದ ಮತ್ತು ಪಾರಿಭಾಷಿಕವಾದ ಸಮಸ್ಯೆಗಳು ಈ ಮೊದಲಾದವು ಗಳನ್ನೆತ್ತಿಕೊಂಡು ಪ್ರಗತಿಪರವಾದ ಮುನ್ನಡೆಯ ದೃಷ್ಟಿಯಿಂದ ವಿವೇಚಿಸಿರುವನು. ಪರಂಪರೆಯ ಹಂದರದ ಮೇಲೆ ಪ್ರತಿಭಾವಲ್ಲರಿ ಹಬ್ಬಿಸಿ, ಭಾರತೀಯ ಸಂಗೀತದ ಕೇಂದ್ರವಾಗಿ ಪರಿಣಮಿಸಿದನು. ಕಲ್ಲಿನಾಥನ ಕಲಾನಿಧಿಯ ಪ್ರಭಾವವು ಅನಂತರ ಬಂದ ಶಾಸ್ತ್ರಕಾರರ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತದೆ.

ತಾಳ ದೀಪಿಕೆಯನ್ನು ಬರೆದ ಗೋಪೇಂದ್ರ ತಿಪ್ಪಭೂಪಾಲ (ಸು. ೧೪೨೩-೪೬) ಸಂಗೀತ ಶಾಸ್ತ್ರವನ್ನು ಸ್ಫುಟಗೊಳಿಸಲು ಯತ್ನಿಸಿದನು. ಇವನ ಕಾಲಕ್ಕೆ ವಿಜಯನಗರದಲ್ಲಿ ಶಾಸ್ತ್ರೀಯ ಸಂಗೀತ ವಿಶೇಷವಾಗಿ ಜನಪ್ರಿಯವಾಗಿದ್ದಿತೆಂದು ತಿಳಿದುಬರುತ್ತದೆ. ರಾಣಿ ವಾಸದವರಿಗೆ ನಾಟ್ಯಾಚಾರ್ಯನಾಗಿದ್ದ ಬಂಧಂ ಲಕ್ಷ್ಮೀನಾರಾಯಣನಿಂದ ರಚಿತವಾದ ಸಂಗೀತ ಸೂರ್ಯೋದಯ ಎಂಬ ಸಂಸ್ಕೃತ ಸಂಗೀತಶಾಸ್ತ್ರ ಗ್ರಂಥ ಕೃಷ್ಣದೇವರಾಯನ ಕಾಲದಲ್ಲಿ ಬೆಳಕಿಗೆ ಬಂದಿತು.

ದಕ್ಷಿಣಾದಿ ಸಂಗೀತದ ಸ್ವರೂಪವನ್ನು ಚಿತ್ರಿಸುವ ಮತ್ತೊಂದು ಮಹತ್ವದ ಗ್ರಂಥ. ಸ್ವರಮೇಳಕಳಾನಿಧಿ, ವಿಜಯನಗರದ ಅಳಿಯ ರಾಮರಾಯನಿಗೆ ಅಮಾತ್ಯನಾಗಿದ್ದ ಬಯಕಾರ ರಾಮಪ್ಪ ಈ ಗ್ರಂಥದ ಕರ್ತೃ(೧೫೫೦) ಸ್ವರಮೇಳಕಳಾನಿಧಿಯಲ್ಲಿ, ಉಪೋದ್ಘಾತ ಪ್ರಕರಣ, ಸ್ವರ ಪ್ರಕರಣ, ವೀಣಾ ಪ್ರಕರಣ, ಮೇಳ ಪ್ರಕರಣ ಮತ್ತು ರಾಗ ಪ್ರಕರಣವೆಂಬ ಐದು ಅಧ್ಯಾಯಗಳಿದ್ದು, ೩೨೮ ದ್ವಿಪದಿಗಳಿವೆ. ಬಯಕಾರ ರಾಮಪ್ಪನು ತನ್ನ ಗ್ರಂಥದಲ್ಲಿ ಇಪ್ಪತ್ತು ಮೇಳಗಳನ್ನು ನಮೂದಿಸಿ, ರಾಗಗಳನ್ನು ಉತ್ತಮ, ಮಧ್ಯಮ ಮತ್ತು ಅಧಮಗಳೆಂದು ವರ್ಗೀಕರಿಸಿದ್ದಾನೆ. ವೀಣಾ ವಾದ್ಯದ ವಿವರಣೆಗೆ ಒಂದು ಅಧ್ಯಾಯವನ್ನೇ ಬರೆದಿದ್ದಾನೆ. ಸ್ವರಮೇಳಕಳಾನಿಧಿ ಕರ್ಣಾಟಕ ಸಂಗೀತದಲ್ಲಿ ಕ್ರಾಂತಿಯನ್ನು ತಂದ ಗ್ರಂಥ, ಆ ಕಾಲಕ್ಕೆ ಸಂಗೀತ ಶಾಸ್ತ್ರದಲ್ಲಿ ಲಕ್ಷ್ಯ, ಲಕ್ಷಣಗಳ ವಿಷಯದಲ್ಲಿ ವಿಶೇಷವಾದ ಗೊಂದಲವಿದ್ದುದರಿಂದ ಇವುಗಳನ್ನು ಸಮೀಕರಿಸಿ ಗ್ರಂಥ ರಚನೆ ಮಾಡಿರುವುದಾಗಿ ಹೇಳಿಕೊಂಡಿದ್ದಾನೆ. ಇವನು ಪ್ರಯೋಗದ ದೃಷ್ಟಿಯನ್ನೇ ಹಿಡಿದು ಪ್ರಚುರವಾಗಿದ್ದ ಎಲ್ಲಾ ದೇಸೀ ರಾಗಗಳನ್ನು ಇಪ್ಪತ್ತು ಮೇಳಗಳಲ್ಲಿ ಅಡಕ ಮಾಡಲು ಯತ್ನಿಸಿದ ಹಿಂದಿನ ಕಾಲದಿಂದ ಬಂದಿದ್ದ ಗ್ರಾಮ ಮಾರ್ಛನ ಪದ್ಧತಿಯಿಂದ ರಾಗಗಳನ್ನು ಹಿಡಿಯುವ, ಹೆಸರಿಸುವ ಹುಟ್ಟಿಸುವ ಪದ್ಧತಿಯನ್ನು

ಧೈರ್ಯದಿಂದ ಬದಿಗಿಟ್ಟಾತ ರಾಮಾಮಾತ್ಯ ಈ ಪದ್ಧತಿ ಲಕ್ಷಣ ಪ್ರಧಾನವಾದದ್ದು ಮೇಳವೆಂಬ ಮಾತಿಗೆ ಹಿರಿಮೆ ಕೊಟ್ಟವರಲ್ಲಿ ರಾಮಾಮಾತ್ಯ ಮೊದಲಿಗ ಒಂದು ನವೋದಯ ಯುಗದಲ್ಲಿ ಸ್ವರಮೇಳ ಕಳಾನಿಧಿಯನ್ನು ಬರೆದು ಹೊಸ ಅಭಿಪ್ರಾಯಗಳಿಗೆ ಶಾಸ್ತ್ರೀಯವಾದ ವ್ಯವಸ್ಥೆಯನ್ನುಂಟು ಮಾಡಲು ಪಟ್ಟಿರುವ ಪ್ರಯತ್ನ ಸ್ತುತ್ಯಾರ್ಹವಾದುದು.

ನಿಜಗುಣ ಶಿವಯೋಗಿಯವರ ವಿವೇಕ ಚಿಂತಾಮಣಿ (ಸು. ೧೫೫೦) ಕನ್ನಡ ಒಂದು ವಿಶ್ವಕೋಶವಾಗಿದೆ. ವಿವೇಕ ಚಿಂತಾಮಣಿಯು ದಕ್ಷಿಣಾದಿ ಸಂಗೀತ ಶಾಸ್ತ್ರವನ್ನು ಕನ್ನಡದಲ್ಲಿ ತಿಳಿಸುವ ಮೊತ್ತ ಮೊದಲ ಗ್ರಂಥವಾಗಿದೆ. ನಿಜಗುಣರು ಕೊಳ್ಳೆಗಾಲದ ಶಂಭುಲಿಂಗ ಬೆಟ್ಟದಲ್ಲಿ ವಾಸಿಸುತ್ತಿದ್ದರೆಂದು ತಿಳಿದುಬರುತ್ತದೆ. ಶಂಭುಲಿಂಗವೆಂಬುದು ಇವರ ಅಂಕಿತನಾಮ. ವಿವೇಕ ಚಿಂತಾಮಣಿಯಲ್ಲಿ ಮೊದಲನೆಯದಾಗಿ ಸ್ವರೋತ್ಪ್ಯಾದಿಕ್ರಮದ ವಿವರಣೆಯಿದೆ. ಹತ್ತು ಬಗೆಯ ನಾದ, ಸಪ್ತ ಸ್ವರಗಳ ಉಗಮ, ಸ್ವರೋತ್ಪತ್ತಿ, ಸಪ್ತ ಸ್ವರಗಳ ಹೆಸರು, ಅವುಗಳ ಜನನ ಸ್ಥಾನದ ವಿವರಣೆಯಿದೆ. ಈ ಕೃತಿಯ ನಾಲ್ಕನೆಯ ಅಧ್ಯಾಯವನ್ನು ಸಂಗೀತ ಶಾಸ್ತ್ರದ ನಿರೂಪಣೆಗೆ ವಿನಿಯೋಗಿಸಿರುವುದಲ್ಲದೆ ಪಲ್ಲವಿ ಮತ್ತು ಚರಣಗಳನ್ನುಳ್ಳ ಸಹಸ್ರಾರು ಶೈವಪರ ಕೀರ್ತನೆಗಳನ್ನು ರಚಿಸಲಾಗಿದೆ. ಈ ಕೀರ್ತನೆಗಳಲ್ಲಿ ಒಂದರಿಂದ ಆ ಕಾಲದ ವೀಣೆಗೆ ಹದಿನಾರು ಮೆಟ್ಟಿಲುಗಳು ಇದ್ದವೆಂದು ತಿಳಿಯುತ್ತದೆ. ವಿವೇಕ ಚಿಂತಾಮಣಿಯಲ್ಲಿನ ವಿಷಯಗಳ ನಿರೂಪಣೆ ಇತರ ಗ್ರಂಥಗಳ ನಿರೂಪಣೆಯೊಡನೆ ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಕಂಡುಬರುತ್ತದೆ.

ಕರ್ನಾಟಕದ ಶಿವಗಂಗಾ ಕ್ಷೇತ್ರದ ಬಳಿ ಇರುವ ಸಾತನೂರಿನ ಪುಂಡರೀಕ ವಿಠಲನದು (ಕ್ರಿ.ಶ. ೧೫೬೨-೬೧) ಮಹಾನ್ ಪಾಂಡಿತ್ಯದ ವ್ಯಕ್ತಿತ್ವ, ಕರ್ನಾಟಕದಿಂದ ಸಿಡಿದು ಉತ್ತರ ಭಾರತದಲ್ಲಿ ತನ್ನ ಪ್ರಭೆಯನ್ನು ಬೀರಿದವನು. ಸೂಕ್ಷ್ಮಮತಿಯಾದ ಈತನು ಕರ್ಣಾಟಕ ಸಂಗೀತದಲ್ಲಿ ಮಹಾಪರಿಣಿತನಾಗಿ ಉತ್ತರ ಭಾರತದಲ್ಲಿ ಪಾಂಡಿತ್ಯದ ದಿಗ್ವಿಜಯಗಳನ್ನು ಕೈಗೊಂಡನು. ಹಿಂದೂಸ್ತಾನಿ ಸಂಗೀತ ಅತ್ಯಂತ ಉಚ್ಚ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ದ್ರುಪದಗಾನ ಪದ್ಧತಿಯ ಜನಕನಾದ ಮಾನತನ್ವಾರ ಮತ್ತು ಭಾನು ಪಂಡಿತರಲ್ಲದೆ ಅಕ್ಬರನ ಆಸ್ಥಾನದಲ್ಲಿದ್ದ ತಾನ್‌ಸೇನ್, ಬಾಬುರಾಮದಾಸ್, ಮೊದಲಾದವರ ಮಧ್ಯದಲ್ಲಿ ಕರ್ಣಾಟಕ ಸಂಗೀತ ಮತ್ತು ನೃತ್ಯಗಳ ವಿರಾಟ ರೂಪ ದರ್ಶನ ಮಾಡಿಸಿ ಅವರ ಮೆಚ್ಚುಗೆ ಪಡೆದಿದ್ದನು. ಹಿಂದೂಸ್ಥಾನಿ ಸಂಗೀತದಲ್ಲಿ ಪರಿಣಿತನಾಗಿ ಲಕ್ಷ್ಯ, ಲಕ್ಷಣಗಳಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ಆಚಾರ್ಯ ಪುರುಷನೆನ್ನುವ ಮಟ್ಟಕ್ಕೇರಿದನು. ಪುಂಡರೀಕ ವಿಠಲನ ಮೂರು ಕೃತಿಗಳು ದೊರೆತಿರುವವು. ರಾಗಚಂದ್ರೋದಯ, ರಾಗಮಂಜರಿ ಮತ್ತು ನರ್ತನ ನಿರ್ಣಯಗಳು, ಇದಲ್ಲದೆ. 'ರಾಗಮಾಲಾ' ಎಂಬ ಇನ್ನೊಂದು ಗ್ರಂಥವನ್ನು ಬರೆದಿದ್ದಾನೆಂಬ

ಅಭಿಪ್ರಾಯವಿದೆ. ಆದರೆ ರಾಗಮಾಲಾ ಸ್ವತಂತ್ರ ಕೃತಿಯಲ್ಲ, ನರ್ತನ ನಿರ್ಣಯದ ಸಂಗ್ರಹ ಗ್ರಂಥವೆಂದು ತಿಳಿದುಬರುತ್ತದೆ.[೨೦]

ರಾಗ ಚಂದ್ರೋದಯಕ್ಕೆ 'ಸದ್ರಾಗ ಚಂದ್ರೋದಯ', 'ಷಡ್ರಾಗ ಚಂದ್ರೋದಯ' ಎನ್ನುವ ಹೆಸರುಗಳೂ ಪ್ರಚಲಿತವಾಗಿವೆ. ಇದರಲ್ಲಿ ಸ್ವರಪ್ರಸಾದ, ಸ್ವರಮೇಲ ಪ್ರಸಾದ ಮತ್ತು ಗಮಕ ಕಾಲಪ್ತಿ, ಎಂಬ ಮೂರು ಪ್ರಕರಣಗಳಿವೆ. ಸ್ವರ ಪ್ರಸಾದದಲ್ಲಿ ಇಪ್ಪತ್ತೆರಡು ಶ್ರುತಿಗಳು, ಪ್ರಕೃತಿ, ವಿಕೃತಿ, ಸ್ವರ ವ್ಯವಸ್ಥೆ ಇತ್ಯಾದಿ ಸಂಗೀತದ ಮೂಲಭೂತ ಅಂಶಗಳನ್ನು ಹೇಳಿದ್ದಾನೆ. ಸ್ವರಮೇಲ ಪ್ರಸಾದವೆಂಬ ಎರಡನೆಯ ಪ್ರಕರಣದಲ್ಲಿ ಪ್ರಕೃತಿ, ವಿಕೃತಿ, ಸ್ವರಸ್ಥಾನಗಳ ವ್ಯವಸ್ಥೆಯಿಂದ ಜನಿಸುವ ಮೇಳಗಳ ಸಂಖ್ಯೆಯನ್ನು ಇಲ್ಲಿ ಚರ್ಚಿಸಿದ್ದಾನೆ. ಮೂರನೆಯ ಪ್ರಕರಣ ಗಮಕ ಮತ್ತು ಆಲಪ್ತಿಗಳ ಪ್ರಭೇದಗಳನ್ನೂ ರಾಗಗಳ ವಾದನ ಕ್ರಮವನ್ನು ನಿರೂಪಿಸುತ್ತದೆ.

ಸಂಗೀತ ಶಾಸ್ತ್ರ ಪರಂಪರೆಯಲ್ಲಿ ರಾಗಚಂದ್ರೋದಯ ಬಹಳ ಮುಖ್ಯವಾದುದು. ಮೇಳಕರ್ತ ಯೋಜನೆಯನ್ನು ವಿವರವಾಗಿ ನಿರೂಪಿಸಿದ ಕೀರ್ತಿ ಪುಂಡರೀಕ ವಿಠಲನದು. ಈ ಗ್ರಂಥದ ಇನ್ನೊಂದು ವೈಶಿಷ್ಟ್ಯವೆಂದರೆ ರಾಗ ಲಕ್ಷಣಗಳನ್ನು ಹೇಳುವ ರೀತಿ ಹಿಂದೆ ಪ್ರಚಲಿತವಾಗಿದ್ದ, ಅಸ್ಪಷ್ಟ ವಿಧಾನಗಳನ್ನು ಬಿಟ್ಟು ಪುಂಡರೀಕನು ಆಯಾ ರಾಗದ ಸ್ಪಷ್ಟ ರೂಪವನ್ನು ಮೊದಲು ನಿರೂಪಿಸುತ್ತಾನೆ. ಆಯಾ ರಾಗಗಳು ಬಳಸುವ ಪ್ರಕೃತಿ, ವಿಕೃತಿ, ಸ್ವರ ಪ್ರಭೇದಗಳನ್ನು ಮೊಟ್ಟ ಮೊದಲು ಉಲ್ಲೇಖಿಸಿ ಅನಂತರ ಅವುಗಳ ವಿವರಣೆಗೆ ಹೋಗುತ್ತಾನೆ.

ರಾಗಮಂಜರಿ ಎರಡು ಅಧ್ಯಾಯಗಳನ್ನುಳ್ಳ ಚಿಕ್ಕ ಗ್ರಂಥ. ಅನುಷ್ಟುಪ್ ಛಂದಸ್ಸಿನಲ್ಲಿ ರಚಿತವಾಗಿದೆ. ಮೊದಲನೆಯದು ಸ್ವರಾಧ್ಯಾಯ. ಇಲ್ಲಿ ನಾದ, ಶ್ರುತಿ, ಸ್ವರಗ್ರಾಮ, ಮೂರ್ಛನಾ, ಗಮಕಗಳು ಮೊದಲಾದ ಸಂಗೀತಕ್ಕೆ ಪೀಠಿಕಾ ರೂಪವಾದ ಪಾರಿಭಾಷಿಕ ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ಎರಡನೆಯ ರಾಗಾಧ್ಯಾಯದಲ್ಲಿ ೨೦ ಮೇಳಗಳನ್ನು, ೬೬ ರಾಗಗಳನ್ನು ವರ್ಣಿಸಿದ್ದಾನೆ. ಅನೇಕವು ಕರ್ಣಾಟಕ ಸಂಗೀತದ ರಾಗಗಳಾಗಿವೆ.

ನರ್ತನ ನಿರ್ಣಯ ಪುಂಡಲೀಕ ವಿಠಲನ ಮೂರನೇ ಗ್ರಂಥವಾಗಿದೆ. ಶ್ರೀ. ರಾ. ಸತ್ಯನಾರಾಯಣ ಅವರು ಹಸ್ತಪ್ರತಿಯಲ್ಲೇ ಇರುವ ಅದನ್ನು ಅಧ್ಯಯನ ಮಾಡಿ ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಪರ್ಶಿಯನ್ ಸಂಗೀತದಲ್ಲಿ ಸ್ವರಾಷ್ಟಕವನ್ನು ವಿಭಾಗಿಸುವ ಹದಿನೇಳು ಸ್ವರಾಂತರಗಳನ್ನು, ಹದಿನೆಂಟು ಶ್ರುತಿಗಳೆಂದು ಕರೆದು, ಮತ್ತು ಅಲ್ಲಿನ ಅನೇಕ ರಾಗಗಳನ್ನು ಭಾರತೀಯ ಸಂಗೀತಕ್ಕಳವಡಿಸಿ, ವಿಶೇಷ ಕೌಶಲ್ಯವನ್ನು ತೋರಿಸಿದ್ದಾನೆ. ಭಾರತೀಯ ಸಂಗೀತದಲ್ಲಿ ಈ ಹದಿನೆಂಟು ಶ್ರುತಿಗಳನ್ನು ರತ್ನಾಕರ ಸ್ವತಃ ಆಂಜನೇಯ ಹೇಳಿದ್ದಾನೆಂದು ರಾಮಕೃಷ್ಣ ಕವಿಯು ಭರತ ಕೋಶದಲ್ಲಿ ಹೇಳಿರುವ

ಅಸಮರ್ಥಿತ ಮಾತನ್ನು ಬಿಟ್ಟರೆ ಮೊದಲ ಬಾರಿಗೆ ಹೇಳಿರುವುದು ಪುಂಡರೀಕನೇ....... ನರ್ತನ ನಿರ್ಣಯದ ಮೊದಲನೆಯ ಪ್ರಕರಣದಲ್ಲಿ ನೃತ್ಯಕ್ಕೆ ಅನುಕೂಲಿಸುವ ತಾಳ ಮೃದಂಗಾದಿಗಳ ವರ್ಣನೆ ರಚನೆಗಳೂ, ಎರಡನೆಯವರಲ್ಲಿ ಇವುಗಳ ಧಾರಣ ಮತ್ತು ವಾದನ ವಿಧಿಗಳೂ, ವಿವಿಧ ತಾಳಗಳೂ ವರ್ಣಿತವಾಗಿವೆ. ಮೂರನೆಯ ಪ್ರಕರಣದಲ್ಲಿ ರಾಗಮಂಜರಿಯಲ್ಲಿರುವಂತೆಯೇ ಶ್ರುತಿ, ಸ್ವರ, ಗ್ರಾಮ, ಮೂರ್ಛನೆ, ತಾನ ಪ್ರಸ್ತಾರಮಿತಿನಷ್ಟ, ಉದ್ದಿಷ್ಟ, ವರ್ಣಾಲಂಕಾರಗಳು, ಸ್ಥಾಯವಾಗಗಳು, ಆಲಪ್ತಿ ಪ್ರಭೇದಗಳು, ರಾಗಲಾಪನಾ ವಿಧಾನ, ವಾದನ ವಿಧಾನ, ಮೃದಂಗ ಲಕ್ಷಣ, ೬೬ ರಾಗಗಳಿಗೆ ಸ್ವರ ನಿರ್ದೇಶಿತ ಲಕ್ಷಣ, ಮೂರ್ತಕರಣ ಮೂಲಕ ಧ್ಯಾನಶ್ಲೋಕ, ಗೇಯ ರಚನಾ ರೀತಿಗಳು, ಹಾಡಿನ ಗುಣದೋಷಗಳು, ವಾಗ್ಗೇಯಕಾರನ ಲಕ್ಷಣಗಳು ಇಷ್ಟನ್ನೂ ಕೊಟ್ಟಿದ್ದಾನೆ. ನಾಲ್ಕನೆಯ ನೃತ್ಯಾಧ್ಯಾಯದಲ್ಲಿ ನಾಟ್ಯ, ನರ್ತನ, ಅಭಿನಯ ಮೊದಲಾದವುಗಳನ್ನು ನಿರೂಪಿಸಿದ್ದಾನೆ.

ಸಂಗೀತ ಶಾಸ್ತ್ರಕ್ಕೆ ಪುಂಡರೀಕ ವಿಠಲನ ಕೊಡುಗೆ ಅಸದೃಶ್ಯವಾದುದು. ಆತನು ಸಂಗೀತಕ್ಕೆ ಸಲ್ಲಿಸಿದ ಸೇವೆ ಬಹುಮುಖವಾದುದಾಗಿದೆ. ಭರತ ಖಂಡದ ಸಂಗೀತ ಪ್ರಪಂಚದಲ್ಲಿಯೇ ಕ್ರಾಂತಿಯ ತರಂಗಗಳನ್ನೆಬ್ಬಿಸಿದ ಪುಂಡರೀಕ ವಿಠಲ ಸಂಗೀತ ರಂಗದಲ್ಲಿ ಕರ್ನಾಟಕದ ಮಹತ್ವಾದನೆಯ ಸಂಕೇತವಾಗಿ ಉಳಿದಿದ್ದಾನೆ.

ತಂಜಾವೂರಿನ ಅರಸು ರಘುನಾಥ ನಾಯಕನ ಆಳ್ವಿಕೆಯಲ್ಲಿ (ಸು.೧೬೧೪-೨೮) ಮಂತ್ರಿಯಾಗಿದ್ದು, ಸಂಗೀತ ಸುಧೆ, ಎಂಬ ಪ್ರಖ್ಯಾತ ಗ್ರಂಥವನ್ನು ಬರೆದ ದೀಕ್ಷಿತನು ಕನ್ನಡದವನು. ಪ್ರಸ್ತುತ ಪ್ರಚುರವಾಗಿರುವ ವೀಣೆಯ ಸ್ವರೂಪವನ್ನು ಸಿದ್ಧಮಾಡಿದವನು ಈ ವೀಣೆಗೆ ತಂಜಾವೂರು ವೀಣೆಯೆಂದೇ ಹೆಸರಾಗಿದೆ.

ಕರ್ನಾಟಕ ಸಂಗೀತಶಾಸ್ತ್ರ ಪರಂಪರೆಯಲ್ಲಿ ಕೊನೆಯ ಒಂದು ದೊಡ್ಡ ಘಟ್ಟ ವೆಂಕಟ ಮುಖಿಯ "ಚತುರ್ದಂಡಿ ಪ್ರಕಾಶಿಕಾ" ಎನ್ನುವ ಗ್ರಂಥ ಸಂಗೀತಕ್ಕೆ ಪ್ರಧಾನವಾದ ಗೀತ, ಆಲಾಪ, ಠಾಯ, ಪ್ರಬಂಧಗಳನ್ನು ಆಧಾರ ಸ್ತಂಭಗಳನ್ನಾಗಿ ತೋರಿಸುವ ಕೃತಿಯಾಗಿದೆ. 'ಚತುರ್ದಂಡಿ ಪ್ರಕಾಶಿಕಾ' ವೆಂಕಟಮುಖಿಯು ಕನ್ನಡಿಗನಾಗಿದ್ದು, ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಸಮೀಪದ ಊರಿನವನೆಂದು ತಿಳಿದುಬಂದಿದೆ. ಕಾಲ ಸು. ೧೬೨೦ ಹಿಂದಿನ ಶಾಸ್ತ್ರಕಾರರ ಅನುಭವವನ್ನೆಲ್ಲಾ ಕ್ರೋಢೀಕರಿಸಿ ಆತನು ನಿರ್ಣಯಿಸಿದ ಎಪ್ಪತ್ತೆರಡು ಮೇಳಕರ್ತಗಳ ಯೋಜನೆ, ಮತ್ತು ಜನ್ಯ ಜನಕ ರಾಗಗಳ ಸ್ವರೂಪ, ಸಂಗೀತ ಪದ್ಧತಿಯಲ್ಲಿ ಈ ಹೊತ್ತಿಗೂ ಜೀವಂತವಾಗಿ ಉಳಿದಿದೆ. ತಂಜಾವೂರಿನ ವಿಜಯ ರಾಘವನಾಯಕನ ಆದೇಶದ ಮೇರೆಗೆ ಬರೆದ ಈ ಪ್ರಸಿದ್ಧ ಗ್ರಂಥ ಕರ್ಣಾಟಕ ಸಂಗೀತಕ್ಕೆ ಸ್ಪಷ್ಟವಾದ ಕಟ್ಟಡವನ್ನು ಕಟ್ಟಿಕೊಟ್ಟಿತು. ಎಲ್ಲಾ ರಾಗಗಳನ್ನು ನುಡಿಸಲು ಅನುಕೂಲವಾಗುವಂತೆ

ಮೇಳದ ಮೆಟ್ಟಿಲುಗಳನ್ನು ಮೇಣದಲ್ಲಿ ಸ್ಥಿರವಾಗಿರಿಸಿದ ಇಂದಿನ ವೀಣೆ ಈತನ ಕಲ್ಪನೆಯಂತೆ.[೨೨] ಈ ಗ್ರಂಥದಲ್ಲಿ ವೀಣೆ, ಶ್ರುತಿ, ಸ್ವರ, ಮೇಳ, ಆಲಾಪ, ಶಾಯ, ರಾಗ, ಗೀತ, ಪ್ರಬಂಧಗಳನ್ನು ವಿವರಿಸುವ ಪರಿಚ್ಛೇಧವಿದೆ. ಈತನು ರಾಗಾಂಗ, ಉಪಾಂಗ, ಭಾಷಾಂಗ, ರಾಗಗಳಿಗೆ ಶ್ಲೋಕ ರೂಪದಲ್ಲಿ ಲಕ್ಷಣವನ್ನು, ಗೀತ ರೂಪದಲ್ಲಿ ಲಕ್ಷ್ಯವನ್ನು ನಿರೂಪಿಸಿದ್ದಾನೆ.

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ತಚ್ಚೂರು ಶಿಂಗರಾಚಾರ್ಯರು ತಮ್ಮ ಹಿರಿಯ ಸಹೋದರ ಶಿಂಗರಾಚಾರ್ಯರೊಡನೆ ಸೇರಿಕೊಂಡು ಸ್ವರಮಂಜರಿ, ಗಾಯಕ ಪಾರಿಜಾತಂ, ಸಂಗೀತ ಕಲಾನಿಧಿ, ಗಾಯಕ ಲೋಚನಂ, ಗಾಯಕ ಸಿದ್ಧಾಂಜನಂ, ಗಾನೇಂದು ಶೇಖರಂ, ಭಾಗವತ ಸಾರಾಮೃತಂ ಎಂಬ ಶಾಸ್ತ್ರಗ್ರಂಥಗಳನ್ನು ರಚಿಸಿ ಪ್ರಕಟಿಸುವುದು ಕಂಡುಬರುತ್ತದೆ.

ಕನ್ನಡ ಶಾಸನಗಳಲ್ಲಿ, ಸಾಹಿತ್ಯ ಕೃತಿಗಳಲ್ಲಿ, ಶಿಲ್ಪಾದಿ ಕಲೆಗಳಲ್ಲಿ, ಅತಿ ಪ್ರಾಚೀನ ಕಾಲದಿಂದಲೂ ಸಂಗೀತಕ್ಕೆ ಪ್ರಾಶಸ್ತ್ಯ ಸಿಕ್ಕಿರುವುದಕ್ಕೆ ಸೂಚನೆ ಕಂಡುಬರುತ್ತದೆ. ಸಂಗೀತ, ನೃತ್ಯಗಳ ವರ್ಣನೆ ಸಾಹಿತ್ಯದಲ್ಲಿಯೂ ವಿಫುಲವಾಗಿ ಕಂಡುಬರುತ್ತದೆ. ಕಾವ್ಯದಲ್ಲಿರಬೇಕಾದ ವರ್ಣನೆಗಳಲ್ಲಿ ಅದೂ ಒಂದು ಅಂಗವಾಗಿ, ಎಷ್ಟೋ ವೇಳೆ ಆ ವರ್ಣನೆ ಸಾಂಪ್ರದಾಯಿಕವಾಗಿ ಪರಿಣಮಿಸುವುದುಂಟು. ಪಂಪನು ಮಾಡುವ ನೀಲಾಂಜನೆಯ ನೃತ್ಯದ ವರ್ಣನೆ ಮತ್ತು ಇತರ ಕಡೆಗಳಲ್ಲಿ ಅಲ್ಲಲ್ಲಿ ಆತನು ಕೊಡುವ ಸಂಗೀತದ ಸೂಚನೆಗಳು ಬಹುಸುಂದರವಾಗಿವೆ. ಹಾಗೆಯೇ ನಾಗಚಂದ್ರ, ರನ್ನ, ಜನ್ನ, ರತ್ನಾಕರ ಮೊದಲಾದ ಕವಿಗಳಲ್ಲಿ ಕಲಾವಂತಿಕೆಯ ವರ್ಣನೆ ಕಂಡುಬರುತ್ತದೆ.

ಕರ್ನಾಟಕದಲ್ಲಿ ಅತ್ಯಂತ ಪ್ರಾಚೀನವಾದ ಸಂಗೀತ ಕೃತಿಗಳಾವುವೆಂಬುದನ್ನು ಸ್ಪಷ್ಟವಾಗಿ ಇದಮಿತ್ಥಂ ಎಂದು ಹೇಳುವಂತಿಲ್ಲ. ಕ್ರಿ.ಶ. ೫ನೇ ಶತಮಾನದಷ್ಟು ಹಿಂದಿನದಾದ ಬೃಹದ್ದೇಶಿಯಲ್ಲಿಯೂ ಕನ್ನಡದ ಕೆಲವು ಪ್ರಬಂಧಗಳ ಉಲ್ಲೇಖ ಕಂಡುಬರುತ್ತದೆ. ಅವುಗಳನ್ನು ಬಿಟ್ಟರೆ ನಮಗೆ ದೊರೆತಿರುವ ಪ್ರಾಚೀನವಾದ ಹಾಡುಗಳೆಂದರೆ ಹನ್ನೆರಡನೇ ಶತಮಾನದಲ್ಲಿ ಬಸವಾದಿ ಶಿವಶರಣರಿಂದ ರಚಿತವಾದವುಗಳು. ಬಸವಾದಿ ಶರಣರು ವಚನಗಳಲ್ಲದೆ ಹಾಡುಗಳನ್ನು ಬರೆದಿದ್ದಾರೆಂಬುದಕ್ಕೆ ಸಾಕಷ್ಟು ಸಮರ್ಥನೆಗಳು ದೊರಕುತ್ತವೆ.[೨೪] ಶರಣರ ವಚನಗಳಲ್ಲಿಯೂ ಸಂಗೀತದ ಉಲ್ಲೇಖ ಅನೇಕ ಕಡೆಗಳಲ್ಲಿ ಬಂದಿದೆ. 'ಎನ್ನ ಕಾಯವ ದಂಡಿಗೆ ಮಾಡಯ್ಯ' ಎನ್ನುವ ಬಸವಣ್ಣನವರ ವಚನ 'ಬತ್ತೀಸ ರಾಗವ ಹಾಡಯ್ಯ, ಉರದಲೊತ್ತಿ ಬಾರಿಸು ಕೂಡಲ ಸಂಗಮದೇವ' ಎಂದು ಕೊನೆಗೊಳ್ಳುತ್ತದೆ. ಇದರಿಂದ ಆ ಕಾಲದಲ್ಲಿ ೩೨ ರಾಗಗಳು ಕರ್ನಾಟಕದಲ್ಲಿ ಮುಖ್ಯವಾಗಿದ್ದವೆಂದು ಕಂಡುಬರುತ್ತದೆ. ಶರಣರು ವಚನಗಳನ್ನು ಹಾಡುತ್ತಿದ್ದರಬಹುದು, ಅಲ್ಲದೆ ಪಲ್ಲವಿ ಸಹಿತವಾದ ಸಂಗೀತ ಕೃತಿಗಳನ್ನು ಅವರು ರಚಿಸಿದ್ದರೆಂಬುದಕ್ಕೆ ಅಂತಹ ಅನೇಕ ಹಾಡುಗಳು ದೊರೆತಿರುವುದೇ

ಸಾಕ್ಷಿ.[೨೫] ಹರಿಹರನೂ ಸಹ 'ಗೀತೆಗಳುಂ ಪಾಡುತುಂ' ಎಂದಿದ್ದಾರೆ. ಇವೆಲ್ಲವನ್ನು ನೋಡಿದರೆ ಆ ಕಾಲದಲ್ಲಿ ಸಂಗೀತ ಪ್ರಮುಖವಾಗಿದ್ದಿತೆಂದು ತಿಳಿದುಬರುತ್ತದೆ.

ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ, ಬತ್ತಲೇಶ್ವರ ಮುಂತಾದ ಶರಣಶರಣೆಯರೂ ಪ್ರೌಢದೇವರಾಯನ ಕಾಲದಲ್ಲಿದ್ದ ೧೦೧ ವಿರಕ್ತರಲ್ಲಿ ಅನೇಕರೂ, ಗುರುಬಸವ, ಕರಸ್ಥಲದ ನಾಗಿದೇವ, ನಿರ್ವಾಣ ಬೋಳೇಶ ಮುಂತಾದವರೂ ವಿಚಾರ ಪ್ರಧಾನವಾದ ಸಂಗೀತ ಕೃತಿಗಳನ್ನು ರಚಿಸಿದರು. ಡಾ. ಎಲ್. ಬಸವರಾಜರ ಅಭಿಪ್ರಾಯದಂತೆ ಬಸವಣ್ಣ, ಪ್ರಭುದೇವ, ಅಕ್ಕಮಹಾದೇವಿ ಮೊದಲಾದ ಶರಣ ಶರಣೆಯರು ಬರೆದಿರುವ ಹಾಡುಗಳನ್ನು ನೋಡಿದರೆ ಆ ಕಾಲದಲ್ಲಿ ಸಂಗೀತ ಕೃತಿಗಳ ರಚನೆ ಯಾವ ಮಟ್ಟದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಇವು ನಾದ ಪ್ರಧಾನವಾದ ಕೃತಿಗಳಲ್ಲ; ವಿಚಾರ ಪ್ರಧಾನವಾದವು. ವಿಚಾರಕ್ಕೆ ಸಂಗಾತಿಯಾಗಿ ಸಂಗೀತ ಮೂಡಿಬಂದಿದೆ. ಕೆಲವು ಕೃತಿಗಳಂತೂ ಅಲ್ಲಿ ಮೂಡಿರುವ ವಿಚಾರದ ವೈಭವ ಭಂಗ ತಾರದಂತೆ ಹಾಡಲು ಅನುಕೂಲವಾಗಿ, ಅಡಕವಾಗಿ ಮೂಡಿಬಂದಿವೆ.[೨೬]

ದಾಸ ಯುಗಕ್ಕೆ ಮೊದಲು ಸಂಗೀತ ಪ್ರಪಂಚದಲ್ಲಿ ಅದ್ಭುತ ಸಾಧನೆಯನ್ನು ಮಾಡಿದ ಮಹಾನ್ ವ್ಯಕ್ತಿಯೆಂದರೆ ನಿಜಗುಣ ಶಿವಯೋಗಿಗಳು. ಇವರ ಕೈವಲ್ಯ ಪದ್ಧತಿ, ಆಧ್ಯಾತ್ಮಿಕ ಸಿದ್ಧಿಯೊಡನೆ ಬೆರೆತು ಉಜ್ವಲವಾದ ಸಂಗೀತ ಪ್ರಭೆಯನ್ನು ಬೆಳಗುತ್ತಾ ನಿಂತಿದೆ. ನಿಜಗುಣರು ತಮ್ಮ ಷಟ್‌ಶಾಸ್ತ್ರಗಳನ್ನೆಲ್ಲಾ ತ್ರಿಪದಿ, ಸಾಂಗತ್ಯ, ಮೊದಲಾದ ಹಾಡುಗಬ್ಬಗಳಲ್ಲಿಯೇ ರಚಿಸಿರುವರು. ಆದರೆ ಪಲ್ಲವಾದಿಯಾಗಿ ರಾಗ ತಾಳ ಸಮನ್ವಿತವಾದ ಸಂಗೀತ ಕೃತಿಗಳೆಂದರೆ ಕೈವಲ್ಯ ಪದ್ಧತಿಯ ಹಾಡುಗಳು. ನಾದನಾಮಕ್ರಿಯೆ, ಧನ್ಯಾಸಿ, ಶಂಕರಾಭರಣ, ಲಲಿತೆ, ದೇಸೀ, ಸಾರಗ, ಸವ್ವಾಲೆವರ್ನ, ಭೈರವ, ತೋಡಿ, ಕಾಂಬೋದಿ, ಭವುಳಿ, ಕುರಂಜಿ, ಮಧುಮಾಧವಿ, ಚಾಪದಿನರ್ವ, ಸೌರಾಷ್ಟ್ರ, ಸಾಳಂಗ, ವಸಂತ, ಅಹಲಿ, ಪಹಡಿ, ಶ್ರೀರಾಗಮಾಳವ, ಭೂಪಾಳಿ, ಮಧ್ಯೆಮಾವತಿ, ಸಾವೇರಿ, ನಾಚ, ಸಾವಂತ, ಕಲ್ಯಾಣಿ ಮೊದಲಾದ ಅನೇಕ ರಾಗಗಳಲ್ಲಿ ಸುಂದರವಾದ ಕೃತಿಗಳನ್ನು ರಚಿಸಿದ್ದಾರೆ. ಭಾವಪ್ರಧಾನವಾದ ನಾದ ಮಾಧುರ್ಯ ಮತ್ತು ಪದವಿನ್ಯಾಸದಿಂದ ಕೂಡಿದ ಸಂಗೀತ ಸಾಹಿತ್ಯಗಳ ಸಮನ್ವಯವುಳ್ಳ ಶ್ರೇಷ್ಠ ಕೃತಿಗಳು ಇಲ್ಲವೆ. ಸಾಹಿತ್ಯ ಮತ್ತು ಸಂಗೀತಗಳೆರಡರ ಸಮನ್ವಯವನ್ನು ಸಾಧಿಸಿ ಕರ್ನಾಟಕ ಸಂಗೀತದ ಸಾರ್ಥಕತೆ ಇಂತಹ ಗೀತೆಗಳಿಂದ ಮನದಟ್ಟಾಗುತ್ತದೆ ಎನ್ನುವುದರಲ್ಲಿ ಅತಿಶಯೋಕ್ತಿಯಿಲ್ಲ.

ಕರ್ನಾಟಕ ಸಂಗೀತದಲ್ಲಿ ಇನ್ನೊಂದು ದೊಡ್ಡ ಘಟ್ಟ ದಾಸಕೂಟ. ಸಂಗೀತವು ವ್ಯಾಪಕವೂ ಜನಪ್ರಿಯವೂ ಆದ ಮಾಧ್ಯಮವಾಗಿ ದಾಸರಿಂದ ಪರಿಣಮಿಸಿತು. ನರಹರಿತೀರ್ಥರು ಹರಿದಾಸ

ಸಾಹಿತ್ಯದ ಆದ್ಯ ಆಚಾರ್ಯರು, ರಘುಪತಿ ಎಂಬ ಅಂಕಿತದಲ್ಲಿ ಕನ್ನಡದ ಹಾಡುಗಳನ್ನು ರಚಿಸಿದರು. ಸುಳಾದಿಗಳ ಆದ್ಯ ಪ್ರವರ್ತಕರು ಶ್ರೀಪಾದರಾಯರು. ರಂಗವಿಠಲ ಮುದ್ರಿಕೆಯಿಂದ ಕನ್ನಡದಲ್ಲಿ ಅನೇಕ ಸುಳಾದಿಗಳನ್ನು ದೇವರನಾಮಗಳನ್ನು ರಚಿಸಿದ್ದಾರೆ. ಶ್ರೀಪಾದರಾಯರ ಶಿಷ್ಯರಾದ ವ್ಯಾಸರಾಯರು ಶ್ರೀ ಕೃಷ್ಣ ಮುದ್ರಿಕೆಯಿಂದ ದೇವರನಾಮಗಳನ್ನು, ಸುಳಾದಿಗಳನ್ನು ರಚಿಸಿರುವರು. ವ್ಯಾಸರಾಯರು ತಮ್ಮ ಶಿಷ್ಯರುಗಳಾದ ಪುರಂದರದಾಸ, ಕನಕದಾಸ, ವಾದಿರಾಜ ಇವರಿಗೆ ಸಂಗೀತ ಕೃತಿಗಳ ರಚನೆಯಲ್ಲಿ ಮಾರ್ಗದರ್ಶಕರಾದವರು. ಹರಿದಾಸರಲ್ಲಿ ಮುಖ್ಯರಾದವರು ಅಪಾರ ಸಂಖ್ಯೆಯ ಕೀರ್ತನೆಗಳನ್ನು ರಚಿಸಿರುವ ಪುರಂದರದಾಸರು. ಕರ್ನಾಟಕ ಸಂಗೀತವನ್ನು ಕಲಿಯಲು ವೈಜ್ಞಾನಿಕವೂ ವ್ಯವಸ್ಥಿತವೂ ಆದ ಪದ್ಧತಿಯನ್ನು ರೂಪಿಸಿದರು. ಪುರಂದರದಾಸರು ನಾಲ್ಕು ಕಾಲುಲಕ್ಷ ಕೀರ್ತನೆಗಳನ್ನು ರಚಿಸಿದ್ದಾರೆಂಬ ಪ್ರತೀತಿಯಿದೆ. ಸದ್ಯಕ್ಕೆ ಪುರಂದರದಾಸರವೆಂದು ಒಂದು ಸಾವಿರ ಕೀರ್ತನೆಗಳನ್ನು ಸೂಚಿಸುವ ವಿದ್ಯಾಲಂಕಾರ ಪ್ರೊ. ಸಾ.ಕೃ.ರಾಮಚಂದ್ರರಾಯರು ನಾಲ್ಕು ಸಂಪುಟಗಳಲ್ಲಿ ಸಂಪಾದಿಸಿ ಪ್ರಕಟಿಸಿರುವ ಪುರಂದರ ಸಾಹಿತ್ಯ ದರ್ಶನದಲ್ಲಿ ೧೩೦೦ ಕೀರ್ತನೆಗಳನ್ನು ಸೇರಿಸಿದ್ದಾರೆ.[೨] ದಾಸ ಪರಂಪರೆಯಲ್ಲಿ ಪ್ರಮುಖರಾದ ಮತ್ತೊಬ್ಬರೆಂದರೆ ಕನಕದಾಸರು. ದಾಸ ಪರಂಪರೆಯಲ್ಲಿ ಪುರಂದರ ದಾಸರಷ್ಟೇ ಕನಕದಾಸರ ಕೊಡುಗೆ ಅತಿ ಮಹತ್ವದ್ದಾಗಿದೆ. ಇವರ ಕೀರ್ತನೆಗಳು ಸುಮಾರು ೨೫೦ರಷ್ಟಿವೆ. ಕನಕದಾಸರು ರಾಮಧ್ಯಾನ ಚರಿತ್ರೆ, ನಳಚರಿತ್ರೆ ಮತ್ತು ಮೋಹನ ತರಂಗಿಣಿ ಕಾವ್ಯಗಳನ್ನು, ನೃಸಿಂಹಸ್ತವ, ಹರಿಭಕ್ತಿಸಾರ ಎಂಬ ಭಕ್ತಿ ರಚನೆಗಳನ್ನು ರಚಿಸಿರುವರು. ಅನಂತರದಲ್ಲಿ ವಿಜಯದಾಸರು, ಗೋಪಾಲದಾಸರು, ರಾಘವೇಂದ್ರ ಸ್ವಾಮಿಗಳು, ಮೋಹನದಾಸರು ಮತ್ತು ಜಗನ್ನಾಥದಾಸರೇ ಮುಂತಾದವರು ದಾಸ ಸಾಹಿತ್ಯವನ್ನು ಬೆಳೆಸಿದರು. ಈ ಕಾಲಕ್ಕೆ ಅನೇಕ ರಾಗಗಳನ್ನು ಬಳಸಿಕೊಂಡು ವೈವಿಧ್ಯಮಯವೂ, ಶಾಸ್ತ್ರೀಯವೂ ಆದ ಮಾರ್ಗದಲ್ಲಿ ಬೆಳೆದುಬಂದ ಸಂಗೀತವನ್ನು ಅತ್ಯಂತ ಜನಪ್ರಿಯವಾಗಿ ಹರಿದಾಸರು ಪರಿವರ್ತಿಸಿದರು.

ಹರಿದಾಸರು ಜನರ ಭಾಷೆಗೆ ಹೊಂದುವಂತೆ ವಾಕ್ಯರಚನೆ ಮತ್ತು ಪದಗಳನ್ನು ಮಾರ್ಪಡಿಸಿ ಒಂದು ಹೊಸ ಶೈಲಿಯನ್ನು ಸೃಷ್ಟಿಸಿದರು. ಪ್ರಾಸ, ಅನುಪ್ರಾಸ, ಯಮಕ, ಅಲಂಕಾರಗಳು, ದ್ವಿತೀಯಾಕ್ಷರ ಮತ್ತು ಅಂತ್ಯಪ್ರಾಸ, ಉಪಮಾನ, ರೂಪಕ, ಸ್ವಭಾವೋಕ್ತಿ, ನಿಂದಾಸ್ತುತಿ, ಜನಜೀವನಕ್ಕೆ ಸಂಬಂಧಿಸಿದ ಅನುಭವಸಿದ್ಧವಾದ ಉಪಮಾನಗಳನ್ನು ಬಳಸಿ ಕೃತಿಗಳನ್ನು ರಚಿಸಿದ್ದಾರೆ. ಗೀತ, ವಾದ್ಯ, ನೃತ್ಯಗಳಲ್ಲಿ ಹರಿದಾಸರು ಪರಿಣಿತರಾಗಿದ್ದರು. ಹರಿದಾಸರ ಕೀರ್ತನೆಗಳೆಲ್ಲವೂ ಸುಂದರವಾಗಿ ಲಯಬದ್ಧವಾಗಿವೆ. ಈ ರೀತಿಯಾಗಿ ದಾಸರ ಕಾಲದಿಂದ ಈಚೆಗೆ ಕರ್ಣಾಟಕ ಸಂಗೀತ ಒಂದು ಖಚಿತ ರೂಪವನ್ನು ಪಡೆಯಿತು.

೧೮ನೆಯ ಶತಮಾನದಿಂದ ಸಂಗೀತ, ಸಾಹಿತ್ಯ ರಚನೆ ಅನೇಕ ಹರಿದಾಸರಿಂದ ವಿಫುಲವಾಗಿ ನಡೆಯಿತು. ಅಂಥ ವಾಗ್ಗೇಯಕಾರರಲ್ಲಿ ಪ್ರತಿಯೊಬ್ಬರ ರಚನೆಯಲ್ಲೂ ಸಂಗೀತ ದೃಷ್ಟಿಯಿಂದ ಅವರದೇ ಆದ ವೈಶಿಷ್ಟ್ಯವಿದೆ. ವಿಜಯದಾಸರ (೧೮ನೇ ಶತಮಾನ) ಸಮಕಾಲೀನರಾದ ಪ್ರಸನ್ನ ವೆಂಕಟದಾಸರು ಭಾಗವತ ಮತ್ತು ಜೋಗುಳ ಪದಗಳನ್ನು ರಚಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಸಮಕಾಲೀನವರೆಂದು ಹೇಳಲಾಗುವ ಸುರಪುರದ ಆನಂದದಾಸರು 'ಸಂಗೀತ ಮಾಧುರ್ಯ' ಸಾಹಿತ್ಯ ಸೌಂದರ್ಯಗಳ ಮಧುರ ಮಿಲನವಿರುವ ಕೃತಿಗಳನ್ನು ರಚಿಸಿ ಸುರಪುರದ ಶೈಲಿಯನ್ನು ಸ್ಥಾಪಿಸಿದರು.

೨೦ನೆಯ ಶತಮಾನದವರೆಗಿನ ಹರಿದಾಸ ಕೃತಿಗಳ ಸಂಪತ್ತನ್ನು ಹೆಚ್ಚಿಸಿದವರಲ್ಲಿ ವೆಂಕಟವಿಠಲ, ವೈಕುಂಠಕೇಶವ, ಅಚ್ಯುತವಿಠಲ, ವಾಸುದೇವವಿಠಲ, ಕಮಲೇಶವಿಠಲ, ಭೀಮೇಶವಿಠಲ, ಜನಾರ್ಧನ ವಿಠಲ, ಶ್ರೀಪತಿವಿಠಲ, ಶ್ರೀವಿಠಲ ಪ್ರಸನ್ನವೆಂಕಟಾಪತಿ, ಅಚಲಾನಂದವಿಠಲ, ವೆಂಕಟೇಶ ಎಂಬ ಹರಿದಾಸರು ಮುಖ್ಯರಾಗಿದ್ದಾರೆ.

ಮತಂಗಮನ ಮಹಾಕೃತಿಯಾದ 'ಬೃಹದ್ದೇಶಿ'ಯಿಂದ ಹಿಡಿದು, ಸಂಗೀತಶಾಸ್ತ್ರದಲ್ಲಿ ಕೊನೆಯ ಮಾತನ್ನು ಹೇಳಿದ ವೆಂಕಟಮುಖಿಯವರೆಗೆ, ಸಂಗೀತಶಾಸ್ತ್ರ ಪರಂಪರೆಯನ್ನು ವಿಕಾಸಮಾರ್ಗದಲ್ಲಿ ಬೆಳೆಸಿದವರು ಪ್ರಧಾನವಾಗಿ ಕನ್ನಡಿಗರು. ಕರ್ಣಾಟಕದ ಪ್ರಭಾವದಿಂದ ಹೊರತಾಗಿ ಹೊಚ್ಚ ಹೊಸದನ್ನು ಹೇಳುವ ಸಂಗೀತ ಶಾಸ್ತ್ರ ಗ್ರಂಥಗಳು ಇಲ್ಲವೆಂದರೂಸ ಅತಿಶಯೋಕ್ತಿಯಾಗಲಾರದು. ಕರ್ಣಾಟಕದ ಶಾಸ್ತ್ರಕಾರರ, ವಾಗ್ಗೇಯಕಾರರ ಸಂತರ ಪ್ರಭಾವವು ಸಂಗೀತದ ಬೆಳವಣಿಗೆಯಲ್ಲಿ ಪ್ರಧಾನವಾದ ಪಾತ್ರವನ್ನು ವಹಿಸಿತು. ಕಾಲಕಾಲಕ್ಕೆ ಇಲ್ಲಿ ಮೂಡಿಬಂದ ಲಾಕ್ಷಣಿಕರು, ಮೇಧಾವಿಗಳು, ಪಂಡಿತರು, ಸಂತರು, ಶರಣರು, ಸಾಧಕರು ಈ ಸಂಗೀತ ಮಾರ್ಗವನ್ನು ವೈಶಿಷ್ಟ್ಯಪೂರ್ಣವಾಗಿ ಬೆಳೆಸಿದರು. ವಿಸ್ತಾರವಾದ ಮತ್ತು ಉನ್ನತವಾದ ಕ್ಷೇತ್ರಕ್ಕೆ ಅದನ್ನು ಎತ್ತಿ ಹಿಡಿದರು. ಆದುದರಿಂದ ಈ ಸಂಗೀತ ಪದ್ಧತಿಗೆ 'ಕರ್ಣಾಟಕ ಸಂಗೀತ' ಎಂಬ ಹೆಸರು ಬಂದುದು ಸಹಜವಾಗಿದೆ. ಕರ್ನಾಟಕ ಆ ಹೆಸರು ಸಾರ್ಥಕವಾಗುವಂಥ ಕಾಣಿಕೆಯನ್ನಿತ್ತು ಬೆಳೆಸಿಕೊಂಡು ಬಂದಿದೆ.

**ಪುರಂದರ ದಾಸರ – ಕನಕದಾಸರ ಕೊಡುಗೆ**

ಭಕ್ತಿಯನ್ನೇ ಮೂಲ ಧರ್ಮವಾಗಿ ಪಡೆದ ಸಾಹಿತ್ಯ ಪರಂಪರೆಗಳು ಪ್ರಧಾನವಾಗಿ ಎರಡು ಕರ್ನಾಟಕದ ಸಾಹಿತ್ಯ ಇತಿಹಾಸದಲ್ಲಿ ಕಂಡುಬರುತ್ತವೆ. ಅವುಗಳೆಂದರೆ ಒಂದು ಶರಣರ ವಚನ ಚಳುವಳಿ, ಎರಡನೆಯದು ಹರಿದಾಸರ ಸಾಹಿತ್ಯ. ಭಕ್ತಿ ಎಂಬುದೇ ವಾಸ್ತವವಾಗಿ ಸ್ವರಸವಾಹಿಯಾದ ಒಂದು ಭಾವ. ಇದು ರಸವೂ ಹೌದು, ಭಾವವೂ ಹೌದು. ನಿಸರ್ಗದ ಸೌಂದರ್ಯವನ್ನು ಕುರಿತು

ವಿಸ್ಮಯ, ಭಯಾನಕತೆಯನ್ನು ಕುರಿತ ಭೀತಿ ಹಾಗೂ ಪ್ರಕೃತಿ ನೀಡಿದ ಸವಲತ್ತುಗಳನ್ನು ಕುರಿತ ಕೃತಜ್ಞತೆ, ಈ ಎಲ್ಲಾ ಭಾವಗಳ ಸಂಕೀರ್ಣ ರೂಪವಾಗಿ ಭಕ್ತಿ ಹುಟ್ಟಿಕೊಂಡಿತು. ದೇವರು ಭಕ್ತಿಯ ಹೊಟ್ಟೆಯಲ್ಲಿಯೇ ಅವತರಿಸಿದ ಭಕ್ತಿಯ ಉಗಮವನ್ನು ಕುರಿತು ಚರ್ಚಿಸುವಾಗ ಇದು ಆರಂಭವಾದದ್ದು ಎಲ್ಲಿ ಎಂಬ ಬಗ್ಗೆ ಇದುವರೆಗೂ ಒಮ್ಮತ ಮೂಡಿಲ್ಲ.

ಭಕ್ತಿ ಪರಂಪರೆಯಲ್ಲಿ ಸಮಾಜದ ಬೇರೆ ಬೇರೆ ಸ್ತರಗಳಿಂದ ಬಂದವರಿದ್ದಾರೆ. ಇವರಲ್ಲಿ ನೇಯ್ಗೆಯವರಿದ್ದಾರೆ, ಚಮ್ಮಾರರಿದ್ದಾರೆ, ಬೇಡರಿದ್ದಾರೆ, ಕಮ್ಮಾರರಿದ್ದಾರೆ, ಅಗಸರಿದ್ದಾರೆ, ತೋಟಗಾರರಿದ್ದಾರೆ, ಕ್ಷತ್ರಿಯರು, ಬ್ರಾಹ್ಮಣರು ಕೂಡ ಇದ್ದಾರೆ. ದೇವಾಲಯ ಮತ್ತು ಮಠ ಮಾನ್ಯಗಳ ಪರಿಸರದಿಂದ ಬಂದ ಸ್ವಾಮಿಗಳೂ, ಮಠಾದೀಶರೂ ಇದ್ದಾರೆ. ಈ ಭಕ್ತಿಯ ಲೋಕದಲ್ಲಿ ಗಂಡು–ಹೆಣ್ಣಿನ ಭೇದವಿಲ್ಲ. ಅರಸು–ಆಳು ಎಂಬ ಭೇದವಿಲ್ಲ ಮೇಲು–ಕೀಳು ಎಂಬ ಅಂತರವಿಲ್ಲ. ಭಕ್ತಿಯ ಲೋಕ ಒಂದು ವಿಶಿಷ್ಟವಾದ ಸಮಾನತೆಯ ಲೋಕವಾಗಿದೆ.

ದಾಸರ ಸಾಹಿತ್ಯದ ಉಗಮ ವಿಚಾರ ಅನೇಕ ಸಂಗ್ದಿಗ್ದಗಳಿಗೆ ಒಳಗಾಗಿದೆ. ದಾಸಪರಂಪರೆಯ ಮೂಲ ಪುರುಷ ಯಾರು ಎನ್ನುವ ವಿಷಯದಲ್ಲಿ ಸಾಕಷ್ಟು ಚರ್ಚೆಗಳು ನಡೆದಿವೆ. ಶ್ರೀ ನರಹರಿ ತೀರ್ಥರು (ಕ್ರಿಶ೧೨೦೫–೧೨೧೪) ದೇವರನಾಮಗಳನ್ನು ರಚಿಸಿದವರಲ್ಲಿ ಮೊದಲಿಗರು. ರಘುಪತಿ, ರಘುಕುಲತಿಲಕ, ನೃಪತಿ ರಘುಪತಿ, ಎಂಬ ಅಂಕಿತವಿರುವ ಇವರ ಮೂರು ಹಾಡುಗಳು ಮಾತ್ರ ಉಪಲಬ್ಧವಾಗಿವೆ. ಹರಿದಾಸ ಸಾಹಿತ್ಯವನ್ನು ಪುನರುಜ್ಜೀವನಗೊಳಿಸಿದವರು ಶ್ರೀಪಾದರಾಜರು (ಕ್ರಿ.ಶ.೧೪೦೪–೧೫೦೨). ನರಹರಿ ತೀರ್ಥರ ರಚನೆಗಳಿಂದ ಪ್ರೇರೇಪಿತರಾದ ಇವರು ಶ್ರೀರಂಗದಲ್ಲಿ ಹಲವು ವರ್ಷಗಳು ಇದ್ದಾಗ ವೈಷ್ಣವ ಸಂತರಾದ ೧೨ ಮಂದಿ ಆಳ್ವಾರರ ದಿವ್ಯ ಪ್ರಬಂಧಗಳನ್ನು ಅರಿತಿದ್ದಲ್ಲದೆ ಅವುಗಳಿಗೆ ಕೊಟ್ಟಿರುವ ಪ್ರಾಶಸ್ತ್ಯವನ್ನು ಗಮನಿಸಿದ್ದರು ಮತ್ತು ಕನ್ನಡ ನಾಡಿನಲ್ಲಿ ಶಿವಶರಣರ ವಚನಗಳು ಜನಪ್ರಿಯವಾಗಿದ್ದನ್ನು ಗಮನಿಸಿದ್ದರು. ಆ ಪರಿಣಾಮವಾಗಿ ದಾಸ ಸಾಹಿತ್ಯದ ಪ್ರಮುಖ ಕಾರ್ಯರೂಪಗಳಾದ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತಿನಾಮ ಇತ್ಯಾದಿಗಳನ್ನು ರಚಿಸಿ, ಹಾಡಿ ಕೀರ್ತನಕಾರರಿಗೆ ಮಾರ್ಗದರ್ಶಿಯಾದರು.

ಪ್ರಾಚೀನ ಕಾಲದಿಂದಲೂ ಶೈವ ಭಕ್ತಿ ಮತ್ತು ವಿಷ್ಣು ಭಕ್ತಿ ಎಂಬ ಯಮಳ ನದಿಗಳು ದಕ್ಷಿಣದಿಂದ ಉತ್ತರಕ್ಕೆ ಹರಿದವು ಎಂಬುದು ಚಾರಿತ್ರಿಕ ವಿಷಯವಾಗಿದೆ. ತಮಿಳುನಾಡಿನ ಶೈವಧರ್ಮ ಮತ್ತು ಕನ್ನಡ ನಾಡಿನ ವೀರಶೈವ ಧರ್ಮಕ್ಕೆ ಅನ್ಯೋನ್ಯ ಸಂಬಂಧವಿರುವುದು ತಿಳಿದು ಬರುತ್ತದೆ. ತಮಿಳು ನಾಡಿನಲ್ಲಿ ೬–೭–೮ನೇ ಶತಮಾನಗಳಲ್ಲಿದ್ದ ಶೈವ ಸಂತರು ವೀರಶೈವರಿಗೆ ೬೩ ಪುರಾತನರು ಎಂಬುದು ತಿಳಿದ ವಿಷಯವಾಗಿದೆ. ಈ ಶಿವಸಂತರು ಭಗವಂತನ ನಾಮ ಕೀರ್ತನೆಗಳನ್ನು

ತೇವಾರಂ, ತಿರುವಾಚಕಂ ಮೊದಲಾಗಿ ರಚಿಸಿ ಹಾಡುತ್ತಿದ್ದರು. ಅವುಗಳಿಗೆ ರಾಗ ನಿರ್ದೇಶನವಿತ್ತು. ಶಿವಶರಣರ ಹಾಡುಗಳಿಗೆ ತೇವಾರಂ ಹಾಡುಗಳು ಮಾದರಿಯಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ ಎನ್ನುವುದು ವಿದ್ವಾಂಸರ ಅಭಿಪ್ರಾಯವಾಗಿದೆ. "ತಮಿಳಿನ ತೇವಾರಂ ಸ್ತೋತ್ರ ಗೀತೆಗಳನ್ನು ಹೋಲುವ ಯಾವುದಾದರೂ ರಚನೆ ಇದ್ದರೆ ಅದು ವಚನ ಸಾಹಿತ್ಯದಲ್ಲಿ ಬಸವಣ್ಣ, ಚೆನ್ನಬಸವ, ಸಿದ್ಧರಾಮ ಮುಂತಾದವರು ಹಾಡಿದರು ಎಂದು ರಾಗ ನಿರ್ದೇಶನದೊಂದಿಗೆ ಅವರವರ ಅಂಕಿತಗಳೊಂದಿಗೆ ಶೂನ್ಯ ಸಂಪಾದನೆಯಲ್ಲಿ ಸಿಗುವ ಪದಗಳು."[೨೮]

ಮಧ್ವಾಚಾರ್ಯರ ಪಂಥದವರಾದ ಭಾಗವತರಾದ ಹರಿದಾಸರು, ಕನ್ನಡ ಮತ್ತು ಕೀರ್ತನೆ ಪ್ರಕಾರವನ್ನು ಧರ್ಮ ಪ್ರಚಾರ ಮತ್ತು ಸಮಾಜ ಸುಧಾರಣೆಗಾಗಿ ಸಾರ್ಥಕವಾಗಿ ಬಳಸಿರುವರು. ವಿಜಯನಗರ ಸಾಮ್ರಾಜ್ಯದ ಉಚ್ಛ್ರಾಯ ಕಾಲ ೧೫-೧೬ನೇ ಶತಮಾನಗಳು ಈ ಕಾಲದಲ್ಲಿ ರಾಜಗುರುವಾಗಿದ್ದವರು ಶ್ರೀವ್ಯಾಸರಾಯರು (ಕ್ರಿ.ಶ.೧೪೪೧-೧೫೩೯) ಶ್ರೀಪಾದರಾಜಸ್ವಾಮಿಗಳವರ ಶಿಷ್ಯರಾಗಿದ್ದ ಇವರು ಮತ್ತು ಇವರ ಶಿಷ್ಯರ ಉದ್ದೇಶ ಜನಸಾಮಾನ್ಯರನ್ನು ಭಕ್ತಿ ಪಂಥದ ಕಡೆಗೆ ಆಕರ್ಷಿಸುವುದು, ಸ್ವಧರ್ಮ ಪ್ರಚಾರದೊಂದಿಗೆ ಪರಧರ್ಮ ಸಹಿಷ್ಣುತೆ ಇವರ ವೈಶಿಷ್ಟವಾಗಿತ್ತು.

ದಾಸ ಸಾಹಿತ್ಯಕ್ಕೆ ಕಾರಣವಾದ ದಾಸರು ದೀಕ್ಷೆಯನ್ನು ಪಡೆಯಲೇಬೇಕಾಗಿತ್ತು. ಶರಣರು ಲಿಂಗದೀಕ್ಷೆ ಪಡೆದಂತೆ ಇವರು ದಾಸ ದೀಕ್ಷೆಯನ್ನು ಪಡೆಯಬೇಕಾಗಿತ್ತು. ವಿಭಿನ್ನವಾದ ಈ ದಾಸ ಪಂಥದ ಲಕ್ಷಣಗಳು ವೈದಿಕರಿಗಿಂತ ಭಿನ್ನವಾಗಿವೆ. ದಾಸ ಪಂಥದ ಲಕ್ಷಣಗಳನ್ನು ವ್ಯಾಸರಾಯರು ಈ ರೀತಿಯಾಗಿ ಹೇಳಿದ್ದಾರೆ.

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತೋ
ಭೇದಃ ಜೀವಗಣಾಃ ಹರೇರನು ಚರಾಃ ನೀಚೋಚ್ಚಭಾವಂಗತಾಃ
ಮುಕ್ತಿರ್ನೈಜ ಸುಖಾನುಭೂತಿರಮಿಲಾ ಭಕ್ತಿಶ್ಚ ತತ್ಸಾದನಂ
ಹೃಕ್ಷಾದಿ ತ್ರಿತಯಂ ಪ್ರಮಾಣಮಿಖಿಲಾಮ್ನಾಯೈಕ ವೇದ್ಯೋ ಹರಿಃ।[೨೯]

ಈ ವೃತ್ತದಲ್ಲಿ ಪ್ರಮುಖವಾಗಿರುವ ಒಂಬತ್ತು ಅಂಶಗಳು 'ಪ್ರಮೇಯನವರತ್ನಮಾಲಾ' ಎಂದು ಹೆಸರಾಗಿವೆ. ಸುಳಾದಿಯೊಂದರಲ್ಲಿ ವಿಜಯದಾಸರು ಇವನ್ನು ವಿಶದಪಡಿಸಿದ್ದಾರೆ. ಅವುಗಳು ಈ ರೀತಿಯಾಗಿವೆ.

* ಶ್ರೀಮನ್ಮಧ್ವಮತದಲ್ಲಿ ಹರಿಯೇ ಸರ್ವೋತ್ತಮನು
* ಜಗತ್ತು ಸತ್ಯವಾದುದು

* ಪಂಚ ಭೇದಗಳು ನಿಜವಾದವು
* ಎಲ್ಲಾ ಜೀವಿಗಳು ಹರಿಯ ಅನುಚರರು
* ಉಚ್ಚ ಮತ್ತು ನೀಚವೆಂಬ ತರತಮ ಭೇದವುಂಟು
* ಮುಕ್ತಿ ಎಂಬುದು ನಿಜ ಸುಖಾನುಭೂತಿ
* ಅಮಲ ಭಕ್ತಿಯೇ ಮುಕ್ತಿಗೆ ಸಾಧನೆ ಮತ್ತು
* ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಇವು ಪ್ರಮಾಣಗಳು ಮತ್ತು
* ಶ್ರೀಹರಿಯನ್ನು ವೇದಗಳಿಂದ ಮಾತ್ರ ತಿಳಿಯಲು ಸಾಧ್ಯ.

ಇವುಗಳನ್ನು ಇನ್ನೊಂದು ರೀತಿಯಲ್ಲಿ ಸೂಚಿಸಿರುವುದು ಹೀಗಿದೆ. ಸ್ಮೃತಿ, ಶೃತಿ, ಇತಿಹಾಸ, ಪುರಾಣಗಳನ್ನು ನಂಬುವೆನು. ಸಾಲ ಮಾಡನು: ಸಾಲದು ಎನೆನು. ನಾಳೆಗೆ ಇಡೆನು. ಹರಿದಿನ ವ್ರತಾಚರಣೆ ಬಿಡೆನು. ಗುರುನಿಂದೆ. ಹರಿನಿಂದೆ ಆಲಿಸಿದೊಡೆ ಆತ್ಮ ಶುದ್ಧಿಯ ಮಾಡಿಕೊಳ್ಳುವೆನು, ಹರಿಸೇವೆಗೆಂದು ಈ ಬಾಳನು ಮೀಸಲಿಡುವೆನು.[೨೦]

ಒಂದು ರೀತಿಯಲ್ಲಿ ಕೀರ್ತನ ಸಾಹಿತ್ಯ ಮಾಧ್ವ ದರ್ಶನದ ಪ್ರಸಾರಕ್ಕೆಂದು ಸಂಕಲ್ಪ ಮಾಡಿ ಹೊರಟರೂ ಅದು ಪರ್ಯಾವಸಾನಗೊಂಡ ರೀತಿ ಮಾತ್ರ ಆಶ್ಚರ್ಯಕರವಾಗಿ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಅಗತ್ಯಗಳ ಕಡೆಗೆ ಹೊರಟಂತೆ ಕಾಣುತ್ತದೆ. ವಚನ ಸಾಹಿತ್ಯವನ್ನು ಇದು ಈ ಅರ್ಥದಲ್ಲಿ ಹೋಲುತ್ತದೆ. ಹೊಸ ದರ್ಶನವೊಂದನ್ನು ಹುಡುಕುವುದಕ್ಕಾಗಿ ಹೊರಟ ವಚನ ಶಾಸ್ತ್ರ ತನ್ನ ಭಾಷಿಕ ಹಾಗೂ ಸಾಹಿತ್ಯಿಕ ಸಿದ್ಧಿಗಳಿಂದ ಅದ್ವಿತೀಯವಾದ ಸಿದ್ಧಿ ಪಡೆದಂತೆ, ಹರಿದಾಸ ಸಾಹಿತ್ಯವೂ ಮಾಧ್ವ ದರ್ಶನದಲ್ಲಿ ಬೇರು ಬಿಟ್ಟರೂ ಕುಸುಮಿಸಿ ಫಲಿತವಾದದ್ದು ಸಂಗೀತ ಸಾಹಿತ್ಯಗಳ ಸಮೃದ್ಧಿಯಲ್ಲಿ.

ದಾಸರು ಮತ ಪ್ರಚಾರದ ಸಂದರ್ಭದಲ್ಲಿ ಹರಿನಾಮ ಸಂಕೀರ್ತನವನ್ನೇ ಅಲ್ಲದೆ ಪುರಾಣ ಕಥೆಗಳನ್ನು ಜನರಿಗೆ ಹೇಳಬೇಕಾಗುತ್ತಿತ್ತು. ಜನಪದದಲ್ಲಿರುವ ಕೋಲಾಟ, ಒಗಟು, ಭಜನೆ, ಲಾಲಿ, ಸುವ್ವಾಲಿ, ಶಕುನ, ತ್ರಿಪದಿ, ಚೌಪದಿ, ಕಂದ, ಒಗಟು ಇವುಗಳನ್ನೆಲ್ಲ ಬಳಸಿಕೊಳ್ಳಬೇಕಾಗುತ್ತಿತ್ತು. ಸಂಸ್ಕೃತದಲ್ಲಿ ಪ್ರಖಾಂಡ ಪಂಡಿತರಾಗಿದ್ದ ದಾಸರು ಸಂಗೀತ ಶಾಸ್ತ್ರವನ್ನು ತಿಳಿದವರಾಗಿದ್ದರು. ಆ ಕಾರಣದಿಂದಾಗಿಯೇ ಕನ್ನಡದಲ್ಲಿ ದೇವರ ಸಂಕೀರ್ತನೆಯನ್ನು ಮಾಡಿ ಸಂಗೀತದ ವಿಶಿಷ್ಟರೂಪಗಳಾದ ಸುಳಾದಿ, ಉಗಾಭೋಗಗಳನ್ನು ಹಾಡಿದರು. ಈ ಕಾರಣದಿಂದಲೇ ಪುರಂದರದಾಸರು ಕರ್ನಾಟಕ ಸಂಗೀತ ಪ್ರಪಿತಾಮಹ ಎನ್ನಿಸಿಕೊಳ್ಳುವಂತೆ ಕೀರ್ತನೆಗಳನ್ನು ರಚಿಸಿದರು. ಬೇರಾವ ಹಾಡುಗಳಲ್ಲಿಯೂ

ಕಾಣದಂತೆ ಗಣಪನನ್ನು ಸ್ತುತಿಸುವ ಇವರ ಪಿಳ್ಳಾರಿ ಗೀತೆಗಳು ಸಂಗೀತ ಲೋಕಕ್ಕೆ ಪ್ರವೇಶ ಮಾಡಿಸುವ ಲಕ್ಷ್ಯ ಲಕ್ಷಣ ಸಮನ್ವಿತ ಕೀರ್ತನೆಗಳಾಗಿವೆ.

ಜನಸಾಮಾನ್ಯರನ್ನು ಕುರಿತು ಜನ ಸಂಪರ್ಕವನ್ನು ಸಾಧಿಸಿ ಕನ್ನಡ ಪರವಾದ ಒಲವಿನಿಂದ ಕೂಡಿದ ದಾಸರನ್ನು ದಾಸ ಕೂಟದವರೆಂದು, ಜನ ಸಂಪರ್ಕಕ್ಕೆ ಬರದೆ ಗಂಭೀರ ಸ್ವಭಾವದವರಾಗಿ ಸಂಸ್ಕೃತ ಬಳಸುವ ವಿದ್ವತ್ ವರ್ಗದ ದಾಸರುಗಳನ್ನು ಕುರಿತು ವ್ಯಾಸಕೂಟದವರೆಂದು ವರ್ಗೀಕರಿಸಿರುವುದು ಕಂಡುಬರುತ್ತದೆ. ಪರಂಪರೆಯ ಪ್ರಕಾರ ದ್ವೈತ ಸಿದ್ಧಾಂತವನ್ನು ಸಂಸ್ಕೃತ ಗ್ರಂಥಗಳ ಮೂಲಕ ವಿದ್ವಾಂಸರೊಡನೆ ನಿರೂಪಿಸುವ ಕೂಟವನ್ನು ವ್ಯಾಸಕೂಟವೆಂದು, ಕನ್ನಡದ ಮೂಲಕ ಅದರಲ್ಲೂ ಕೀರ್ತನೆಗಳ ಮೂಲಕ ನಿರೂಪಿಸುವುದು ದಾಸಕೂಟವೆಂಬ ವಾದವೂ ಇದೆ. ಈ ಎರಡು ಕೂಟಗಳಲ್ಲಿ ಪರಸ್ಪರ ಅವಮಾನಿಸುವ ಸಂದರ್ಭಗಳು ಇಲ್ಲದಿರಲಿಲ್ಲ ಎಂದು ಡಾ.ರಂ.ಶ್ರೀ.ಮುಗಳಿಯವರು ಅಭಿಪ್ರಾಯಪಡುತ್ತಾರೆ.

ಕೀರ್ತನಕಾರರಲ್ಲಿ ವಚನಕಾರರಂತೆ ಎಲ್ಲ ಸ್ತರದ ಜನರೂ ಇಲ್ಲ. ಅಲ್ಲಿರುವವರೆಲ್ಲ ಸಾಮಾನ್ಯವಾಗಿ ದ್ವಿಜರೇ, ಮಧ್ವ ಪರಂಪರೆಯಲ್ಲಿ ಬರುವ ಈ ಪರಂಪರೆಯಲ್ಲಿ ವಿಸ್ಮಯಕರವಾದ ರೀತಿಯಲ್ಲಿ ಇಬ್ಬರು ಬಹು ಮಹತ್ವದ ಭಿನ್ನಮತೀಯರಾದ ಕನಕ–ಪುರಂದರು ಕಾಣಿಸಿಕೊಳ್ಳುತ್ತಾರೆ. ಇವರಿಬ್ಬರ ಬದುಕಿನಲ್ಲಿಯೂ ವೈರಾಗ್ಯಕ್ಕೆ ಕಾರಣವಾದ ಅದ್ಭುತಗಳು ಜರುಗಿದ ಮೇಲೆ ವ್ಯಾಸರಾಯರಂಥ ಉದಾರಿಗಳಿಂದ ಹರಿದಾಸರ ವರ್ಗಕ್ಕೆ ಸೇರಿದರು. ಈ ಇಬ್ಬರ ಸೇರುವಿಕೆ ಒಂದು ರೀತಿಯಲ್ಲಿ ಹರಿದಾಸ ಸಾಹಿತ್ಯಕ್ಕೆ ವಿಶೇಷವಾದ ಕಾಂತಿಯನ್ನು, ಸತ್ವವನ್ನು ತುಂಬಿಬಿಟ್ಟಿತ್ತು. ಕನಕದಾಸರು ಕೀರ್ತನೆಗಳನ್ನೇ ಅಲ್ಲದೆ ಸಾಹಿತ್ಯ ರಚನೆಯ ದೃಷ್ಟಿಯಿಂದಲೂ ಖ್ಯಾತನಾಮರಾದರೆ, ಪುರಂದರರು ಕೀರ್ತನೆ ಪ್ರಕಾರವೊಂದರಲ್ಲಿಯೇ ಅತ್ಯಧ್ಭುತವಾದ ಪ್ರತಿಭೆಯನ್ನು ಮೆರೆದರು. ಅಷ್ಟೇ ಏಕೆ ತ್ಯಾಗರಾಜರಿಂದಲೂ ಸ್ತುತ್ಯರಾಗುವಂತಹ ಸಂಗೀತ ಪ್ರತಿಭೆಯನ್ನು ಪಡೆದಿದ್ದವರು.[೬೧] ಈ ಹಿನ್ನೆಲೆಯಲ್ಲಿ ನೋಡಿದರೆ ದಾಸ ಪರಂಪರೆಯಲ್ಲಿ ಕನಕ ಪುರಂದರಿಬ್ಬರನ್ನು ಬಿಟ್ಟರೆ ಮಿಕ್ಕವರೆಲ್ಲರೂ ದ್ವಿಜರೇ ಆಗಿರುವುದು ದಾಸ ಸಾಹಿತ್ಯದ ಇತಿ–ಮಿತಿಗಳನ್ನು ಸೂಚಿಸುವಂತಿದೆ. ಹರಿದಾಸ ಸಾಹಿತ್ಯ ಎನ್ನುತ್ತಿದ್ದಂತೆ ಕೀರ್ತನ ಸಾಹಿತ್ಯವೆಂದೇ ಅರ್ಥಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ ಇದು ಹರಿಸಾಹಿತ್ಯವಲ್ಲ; ಹರಿದಾಸರ ಸಾಹಿತ್ಯ.[೬೨]

ಕನಕದಾಸರದು ಪುರಂದರದಾಸರ ಜೊತೆ ಜೊತೆ ನೆನಪಿಗೆ ರೂಢಿಯಾಗಿರುವ ಹೆಸರಾಗಿದೆ. ಇವರಿಗೆ ದಾಸರಲ್ಲಿ ಕವಿಗಳು ಎನ್ನುವ ಪ್ರಶಸ್ತಿಯಿದೆ. ಪ್ರಾರಂಭದಲ್ಲಿ ತಾತಾಚಾರ್ಯರ ಶಿಷ್ಯರಾಗಿದ್ದ ಇವರು ಅನಂತರದಲ್ಲಿ ವ್ಯಾಸರಾಯರ ಶಿಷ್ಯರಾದರು. ಪುರಂದರದಾಸರು, ಬೇಲೂರು ವೈಕುಂಠದಾಸರು,

ವಾದಿರಾಜರು ಇವರ ಒಡನಾಡಿಗಳಾಗಿದ್ದರು. ಆಗಿನ ಸಮಾಜದ ಕೆಳಸ್ತರದಲ್ಲಿ ಹುಟ್ಟಿ ಗುಣಕರ್ಮಗಳಿಂದ ದಾಸರಾಗಿ ಸರ್ವರ ಆದರಣೀಯರಾದವರು. ಆರಂಭದಿಂದಲೇ ಬಾಡದಾದಿ ಕೇಶವ, ಕಾಗಿನೆಲೆ ಆದಿಕೇಶವ ಎನ್ನುವ ಅಂಕಿತದಿಂದ ಕನ್ನಡ ಪದಗಳನ್ನು ರಚಿಸುತ್ತಿದ್ದರು.

ಕನಕದಾಸರ ಜೀವನ, ಮತ, ಕಾಲ ಇವುಗಳ ಬಗ್ಗೆ ವಿದ್ವಾಂಸರಲ್ಲಿ ಅಭಿಪ್ರಾಯ ಭೇದಗಳು ಕಂಡು ಬರುತ್ತವೆ. ತಮಗೆ ದೊರಕಿರುವ ಆಧಾರಗಳಿಂದ ಆಯಾ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದು ಕಂಡು ಬರುತ್ತದೆ. ಕನಕದಾಸರ ತಂದೆ ಬೀರಪ್ಪ ತಾಯಿ ಬಚ್ಚಮ್ಮ ಕನಕದಾಸರ ತಂದೆ ಬಾಡನಾಡಿನ ದಣ್ಣಾಯಕರಾಗಿದ್ದರೆಂದು ತಿಳಿದುಬರುತ್ತದೆ ಐತಿಹ್ಯಗಳನ್ನು ಗಮನದಲ್ಲಿಟ್ಟುಕೊಂಡು ವಿಶ್ಲೇಷಿಸಿದರೆ ಕನಕದಾಸರ ತಂದೆ-ತಾಯಿಗಳಿಗೆ ಎಷ್ಟು ವರ್ಷಗಳಾದರೂ ಮಕ್ಕಳಾಗದಿದ್ದಾಗ, ತಿರುಪತಿ ತಿಮ್ಮಪ್ಪನ ಸೇವೆಯನ್ನು ಮಾಡಲು ಪುತ್ರನೊಬ್ಬನು ಜನಿಸಿದನೆಂದೂ ಅವನಿಗೆ ತಿಮ್ಮಪ್ಪನೆಂದೇ ಹೆಸರು ಇಟ್ಟರೆಂದು ತಿಳಿದುಬರುತ್ತದೆ, ತಂದೆಯ ನಂತರ ಈತನು ದಣ್ಣಾಯಕನಾಗಿದ್ದನು ಎನ್ನುವುದು ತಿಳಿದು ಬರುತ್ತದೆ, ಕನಕದಾಸರ ಒಂದು ಉಕ್ತಿ ಹೇಳುವಂತೆ 'ದೊರೆತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿದೆ ನರಮಾತ್ರದವನೆನದೆ ಹರಿಯೆ'[೩೩] ಎಂದು ವಿಜಯನಗರ ಸಾಮ್ರಾಜ್ಯದ ಸಾಮಂತಾಧಿಕಾರತನವೇ ದೊರೆತನವಾಗಿದೆ. ವಿಜಯನಗರ ಚಕ್ರಾದಿಪತ್ಯದ ಉತ್ತರದ ಗಡಿನಾಡು ಬಾಡ. ಮೇಲಿಂದ ಮೇಲೆ ದಾಳಿ ಬರುತ್ತಿದ್ದ ಷಾಹಿರಾಜ್ಯವೊಂದರ ಮೇರೆ. ವಿಜಯನಗರ ಸಾಮ್ರಾಜ್ಯವು ಎಷ್ಟೇ ಸಮೃದ್ಧಿಯಿಂದ ಇದ್ದರೂ ಆಗಿಂದಾಗೆ ಅಕ್ಕಪಕ್ಕದ ಶತ್ರುಗಳಿಂದ ಕಿರುಕುಳಗಳು ಆಗುತ್ತಿದ್ದವು ಎಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಅಂಥ ಸಂದರ್ಭಗಳಲ್ಲಿ ರಾಜರ ಆಶ್ರಿತರಾಗಿದ್ದ ದಣ್ಣಾಯಕರು, ಸಾಮಂತರು ಸಕ್ರಿಯವಾಗಿ ಯುದ್ಧಗಳಲ್ಲಿ ಭಾಗವಹಿಸಬೇಕಾಗಿತ್ತು, ನಾಯಕನಾಗಿದ್ದ ಕನಕನಿಗೆ ಇಂಥ ಕಾಳಗವೊಂದರಲ್ಲಿ ಅಪಜಯವಾಯಿತು. ಅತನ ಆಪ್ತೇಷ್ಟರೂ ಕೈಬಿಟ್ಟರು. ರಣರಂಗದಲ್ಲಿ ಪ್ರಜ್ಞಾಹೀನನಾಗಿದ್ದ ಆತನನ್ನು ಯಾರೋ ಬಂದು ಉಪಚರಿಸಿದಂತಾಯಿತು. ಮೂರ್ಛೆಯಿಂದ ಎಚ್ಚೆತ್ತ ಆತನಿಗೆ ಆಗ ಅದು ದೈವ ಕೃಪೆಯಲ್ಲದೆ ಬೇರೆ ಯಾವುದೂ ಅಲ್ಲವೆಂದು ಜ್ಞಾನೋದಯವಾಯಿತು. ಆ ಕ್ಷಣದಿಂದ ಆತನ ಮನಸ್ಸು ಪರಿವರ್ತನೆಯಾಗಿ, ದೈವ ಬಲಕ್ಕೆ ಮಾರುಹೋಗಿ ದಾಸ ಕೈಂಕರ್ಯವ ಕೈಗೊಂಡಂತೆ ನಿರೂಪಿಸಲಾಗಿದೆ. ವ್ಯಾಸರಾಯರು, ಪುರಂದರದಾಸರು ಮತ್ತು ಕನಕದಾಸರು ಇವರು ಸಮಕಾಲೀನರು. ಈ ಮೂವರೂ ವಿಶ್ವವಿಖ್ಯಾತ ಚಕ್ರವರ್ತಿಗಳಲ್ಲೊಬ್ಬನಾದ ವಿಜಯನಗರದ ಶ್ರೀಕೃಷ್ಣದೇವರಾಯನ (ಕ್ರಿಶ ೧೫೦೯-೧೫೨೯)ವೈಭವದ ದಿನಗಳಲ್ಲಿ ಬಾಳಿದವರು. ಕೃಷ್ಣದೇವರಾಯನ ಆಸ್ಥಾನದ ಭಕ್ತಿ, ಗೌರವಗಳಿಗೆ ಪಾತ್ರರಾದವರು. ವ್ಯಾಸರಾಯರು ಅಂದು ಇದ್ದುದಕ್ಕೆ ಅವರಿಗೆ ಸಂಬಂಧಿಸಿದ ಅಂದರೆ ಆಳುವ ಅರಸನಿಂದ ಅವರಿಗೆ ವ್ಯಾಸ ಸಮುದ್ರ ನಿರ್ಮಿಸುವುದಕ್ಕಾಗಿ ದೊರೆತ ಉಂಬಳಿ ವಿಷಯ ಹೊತ್ತ ೧೫೨೭ನೆಯ

ಇಸವಿಯೆಂದು ಹೇಳಲಾದ ಶಿವಮೊಗ್ಗೆಯ ಒಂದು ಶಾಸನವು ಸಾಕ್ಷಿ ಹೇಳುತ್ತದೆ.[೩೪] ಕನಕದಾಸರು ವಿಜಯನಗರದಲ್ಲಿ ಇದ್ದುದಕ್ಕೆ ಅವರು ಶ್ರೀಕೃಷ್ಣದೇವರಾಯನ ಅಭಿಮಾನಿ ಆಶ್ರಿತನಾಗಿದ್ದುದಕ್ಕೆ, ಶ್ರೀಕೃಷ್ಣದೇವರಾಯನನ್ನೂ, ಅವನ ಆಸ್ಥಾನ ವೈಭವವನ್ನು ಕಂಡುದಕ್ಕೆ ಮೋಹನ ತರಂಗಿಣಿಯ ದ್ವಾರಕಾಪುರವರ್ಣನ ಹಾಗೂ ಶ್ರೀಕೃಷ್ಣನ ಗುಣ ಸಂಕೀರ್ತನಗಳು ಪುರಾವೆಯನ್ನೊದಗಿಸುತ್ತವೆ.[೩೫]

ಕನಕದಾಸರ ಮೋಹನ ತರಂಗಿಣಿಯ ಒಂದು ಪದ್ಯವು, ಹುತ್ತದ ಹೆಸರು ಪಡೆದ ವಾಲ್ಮೀಕಿಯ ಮತ್ತು ಮತ್ಸ್ಯಗಂಧಿಯ ಮಗನಾದ ವ್ಯಾಸನ ಪ್ರಸಿದ್ಧ ಪುರಾಣಗಳನ್ನು ಕನ್ನಡಿಸಿದ ಕವಿಶ್ರೇಷ್ಠರಾದ ಕುಮಾರವಾಲ್ಮೀಕಿ (ಕ್ರಿ.ಶ.೧೫೦೦)ಮತ್ತು ಕುಮಾರವ್ಯಾಸ (ಕ್ರಿ.ಶ೧೪೩೦) ಇವರನ್ನು ಅತ್ಯಾನಂದದಿಂದ ಕೊಂಡಾಡುತ್ತೇನೆ ಎಂದಿದ್ದಾನೆ. ಇದರಿಂದ ಕನಕದಾಸರು ಇವರಿಬ್ಬರಿಗಿಂತ ಅನಂತರದವರೆಂದು ತಿಳಿದುಬರುತ್ತದೆ. ಕಾಖಂಡಿಕಿ ಮಹೀಪತಿರಾಯನ ಮಗ ಕಾಖಂಡಿಕಿ ಕೃಷ್ಣರಾಯನು 'ನೆರೆ ತಾಳಪಾಕರ ಸಂತಮತಿ ಕನಕರ ಹರಿ ಭಕ್ತಿ ಉಲ್ಲಾಸಕರ ಎಂದು 'ಏಡು ಕೊಂಡಲವಾಸ' ತಿರುಪತಿಯ ವೆಂಕಟರಮಣನನ್ನು ಅಂಕಿತವುಳ್ಳ ಪ್ರಸಿದ್ಧ ತೆಲುಗು ಕೀರ್ತನಕಾರ, ವಾಗ್ಗೇಯನಿಧಿ ತಾಳಪಾಕ ಅನ್ನಮಾರ್ಯನನ್ನೂ, ಕಾಗಿನೆಲೆ ಆದಿಕೇಶವ ಅಂಕಿತವುಳ್ಳ ಕನ್ನಡದ ಕವಿ, ಕೀರ್ತನಾಚಾರ್ಯ ಕನಕದಾಸನನ್ನು ಜೊತೆ ಜೊತೆಯಲ್ಲಿಯೇ ಕೊಂಡಾಡಿದ್ದಾನೆ.[೩೬] ಕನಕದಾಸರನ್ನು ಅನನ್ಯ ಭಕ್ತಿಯಿಂದ ಸ್ಮರಿಸಿರುವ ಕಾಖಂಡಕಿ ಕೃಷ್ಣರಾಯ ಹದಿನೇಳನೇ ಶತಮಾನದವನು ಆದ್ದರಿಂದ ಕನಕದಾಸರು ಕಾಖಂಡಿಕಿ ಕೃಷ್ಣರಾಯನಿಗಿಂತ ಹಿಂದಿನವರಾಗಿರುವುದು ಕಂಡುಬರುತ್ತದೆ.

ಕನಕದಾಸರ ಕಾಲವನ್ನು ನಿರ್ಧರಿಸಲು ಸಿಗುವ ಇನ್ನೊಂದು ಆಧಾರವೆಂದರೆ, ಕನಕದಾಸರೇ ತಮ್ಮ ಮೋಹನ ತರಂಗಿಣಿಯಲ್ಲಿ ಬಳಸಿರುವ 'ಪೆಟಲಂಬಿನವರು' ಎನ್ನುವ ಶಬ್ದ.[೩೭] ಪೆಟಲಂಬು ಎಂದರೆ ಬಂದೂಕು, ತುಪಾಕಿ ಅಥವಾ ಪಿಸ್ತೂಲು, ಕ್ರಿಶ ೧೫೨೦ರಲ್ಲಿ ನಡೆದ ರಾಯಚೂರು ಯುದ್ಧದ ಸಂದರ್ಭದಲ್ಲಿ ಈ ಪೆಟಲಂಬು ಅಥವಾ ಬಂದೂಕುಧಾರಿಗಳ ದರ್ಶನ ಕನ್ನಡಿಗರಿಗಾಗಿದ್ದು, ಆದ್ದರಿಂದ ಕನಕದಾಸರ ಜೀವಿತಾವಧಿಯನ್ನು ಕ್ರಿಶ ೧೫೦೦ರಿಂದ ಕ್ರಿಶ ೧೬೦೦ರವರೆಗೆ ಎಂದು ಹೇಳಬಹುದಾಗಿದೆ.

ಕನಕದಾಸರ ಕುಲವನ್ನು ಗುರುತಿಸಲು ಅನೇಕ ಪ್ರಯತ್ನಗಳು ನಡೆದಿವೆ. ವಿದ್ವಾಂಸರು ತಮಗೆ ದೊರಕಿದ ಆಧಾರಗಳನ್ನು ಇಟ್ಟುಕೊಂಡು ಕೆಲವರು ಬೇಡರವನೆಂದೂ, ಕುರುಬನೆಂದೂ ಪ್ರತಿಪಾದಿಸಿರುವರು. ರಾ.ನರಸಿಂಹಾಚಾರ್ಯರು ಇವನು ಬೇಡರವನೆಂದೂ, ಅಂಡೆಯ ಕುರುಬಜಾತಿಯವನೆಂದೂ ಅವರಿವರು ಹೇಳುತ್ತಾರೆ ಎಂದು ಜನಹೇಳಿಕೆಯನ್ನಿತ್ತಿದ್ದಾರೆ.[೩೮] ಕಟ್ಟಿಶೇಷಾಚಾರ್ಯರು ಕನಕದಾಸರು ತಮ್ಮ ಮೋಹನ ತರಂಗಿಣಿಯ ಪೀಠಿಕಾ ಭಾಗದಲ್ಲಿ

ಶ್ರೀರಾಮಾನುಜರನ್ನೂ ಅವರ ಶಿಷ್ಯ ಪರಂಪರೆಯ ತಾತಾಚಾರ್ಯರನ್ನೂ ಸ್ಮರಿಸಿರುವುದರಿಂದ ಶ್ರೀವೈಷ್ಣವ ಮತದ ಬಗೆಗೆ ಒಲವುಳ್ಳವನೆಂತಲೂ ಕೀರ್ತನೆಯೊಂದರಲ್ಲಿ ಮುಟ್ಟಲಮ್ಮರು ಎನ್ನ ಬಂಧುಗಳು ಕಂಡರೆ ಅಟ್ಟಿಬಿಡುವುತಲಿಹರೋಕೃಷ್ಣ ಎಂಬ ಸಾಲಿನ ಅಧಾರದ ಮೇಲೆ ಕನಕದಾಸರು ಯಾವ ಕುಲದವರೆಂದು ಗೊತ್ತಾಗುವುದಿಲ್ಲ. ಆದರೆ ಮುಟ್ಟಿಸಿ ಕೊಳ್ಳದಂತಹ ಒಂದು ಜಾತಿಯವರಾಗಿದ್ದರೆಂದು ಹೇಳಬಹುದು. ಎಂದು ಹೇಳುತ್ತಾರೆ.[೯]

ಎಲ್.ಜಿ.ಹಾವನೂರರು ಪ್ರಕಾರ ಕನಕದಾಸರು ದಾಸಪಂಗಡ ಎಂಬ ಒಂದು ದಾಸ ವರ್ಗಕ್ಕೆ ಸೇರಿದವರು ಇವರ ವಂಶೀಕರು ಕಾಗಿನೆಲೆಯ ಸಮೀಪದ ಕುಮ್ಮೂರು ಗ್ರಾಮದಲ್ಲಿ ಈಗಲೂ ಇದ್ದಾರೆ. ಇವರಿಗೆ ೬೬ ಗ್ರಾಮಗಳ ವಾಲ್ಮೀಕಿ ಅಥವಾ ನಾಯಕರ ಜಗಳವನ್ನು ತೀರಿಸುವ ಹಕ್ಕು ಇದೆ. ಈ ಹಕ್ಕು ಆನೆಗೊಂದಿಯ ತಾತಾಚಾರ್ಯರು ಕೊಟ್ಟ 'ಶ್ರೀಮುಖ'ದಿಂದ ಪ್ರಾಪ್ತವಾದದ್ದು. ಕುರಿಸಾಕಾಣಿಕೆ ಈ ದಾಸರ ಕುಲಕಸುಬು ಪ್ರತಿಯೊಬ್ಬನ ಮನೆಯಲ್ಲೂ ಡೊಳ್ಳು ಇದೆ. ಎಂಬ ಅಂಶಗಳನ್ನು ಆಧರಿಸಿ ರಾಮಾನುಜರನ್ನು ತಾತಾಚಾರ್ಯ ಗುರುಗಳನ್ನೂ ಭಕ್ತಿಯಿಂದ ಕೊಂಡಾಡಿದ ಕನಕದಾಸರು ನಾಯಕ ಜಾತಿಯವರಾಗಿಯೇ ಇರಬಹುದೆಂದು ಹೇಳುವುದು ಯುಕ್ತಾಯುಕ್ತವೆನಿಸುತ್ತದೆ. ಕುರುಬರೆಂದು ಹೇಳುವುದಕ್ಕೆ ಯಾವ ಅನುಮಾನದ ಆಧಾರಗಳೂ ನಮಗೆ ಸಿಕ್ಕುವುದಿಲ್ಲ ಏಕೆಂದರೆ ಭೀರಯ್ಯನ ಭಕ್ತರಾಗಿರುವ ನಮ್ಮ ಉತ್ತರ ಕರ್ನಾಟಕದ ಕುರುಬರೆಲ್ಲರೂ ಸಿದ್ಧರ ಉಪಾಸನಾ ಪರಂಪರೆಗೆ ಸೇರಿದವರಾಗಿದ್ದಾರೆ.....ರಾಮಾನುಜೀಯ ವೈಷ್ಣವ ಮತದ ಸಂಬಂಧ ಅವರಿಗೆ ಸ್ವಲ್ಪವೂ ಇಲ್ಲ. 'ಒಡೆಯರು' ಎಂಬ ಹೆಸರು ಪುರೋಹಿತ ವರ್ಗದ ಕುರುಬರಲ್ಲಿದೆ. ಅವರಂತೂ ಸಂಪೂರ್ಣವಾಗಿ ವೀರಶೈವ ಆಚಾರಗಳ ಪ್ರಭಾವಕ್ಕೆ ಒಳಗಾಗಿರುವವರು ಎಂದಿದ್ದಾರೆ.[೧೦]

ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚುರಾವ್ ಅವರು ಕನಕದಾಸರ ಭಕ್ತಿಗೀತೆಗಳು ಎನ್ನುವ ತಮ್ಮ ಸಂಪಾದನಾ ಕೃತಿಯ ಮುನ್ನುಡಿಯಲ್ಲಿ 'ಕನಕದಾಸರು ಹುಟ್ಟಿದ ಜಾತಿ ಯಾವುದೆಂಬುದು ಒಂದು ಒಡೆಯಲಾರದ ಒಗಟೇ ಆಗಿದೆ. ಅವರನ್ನು ಕುರುಬ ಜಾತಿಯವರೆಂದು ಹೇಳುವ ಪರಂಪರೆಯೂ ಇದೆ. ನಾಯಕ ಜಾತಿಯವರೆಂದು ಹೇಳುವ ಪರಂಪರೆಯೂ ಇದೆ......ಎಂದು ಹೇಳಿ ಹಾವನೂರದ ಅಭಿಪ್ರಾಯವನ್ನು ಎತ್ತಿ ಹಿಡಿದಿದ್ದಾರೆ. ದೇವೇಂದ್ರ ಮಾಧವನವರು ಕನಕದಾಸರ ಹಾಡುಗಳಲ್ಲಿಯ ಕುರುಬ ಎಂಬ ಶಬ್ದಗಳು ಜಾತಿ ಸೂಚಕವಾಗಿಲ್ಲ: ಅವರು ಕುರುಬರೆಂಬ ಬಗ್ಗೆ ಬೇರೆ ಯಾವ ಆಧಾರಗಳೂ ಇಲ್ಲ. ಕನಕದಾಸರು ಬೇಡರೆಂಬ ಪರಂಪರೆಯ ನಂಬಿಕೆಯೊಂದಿಗೆ ಅವರ ಜಾತಿ, ಗೋತ್ರ ತಿಳಿಸುವ ಪುರಾತನ ಲಿಖಿತ ಆಧಾರಗಳು ಲಭ್ಯವಾಗಿವೆ. ಅನೇಕ ವಿದ್ವಾಂಸರು ವಿವರವಾದ ಚರ್ಚೆಯ ಅನಂತರ ಬೇಡರೆಂದು ಸ್ಪಷ್ಟಪಡಿಸಿದ್ದಾರೆ. ಕನಕದಾಸರ ವೈಷ್ಣವ ಶ್ರೀವೈಷ್ಣವ ಬದುಕು ಸಾಹಿತ್ಯಗಳಿಗೆ ಹೊಂದುವಂತೆ ನಾಯಕ ಜನಾಂಗದಲ್ಲಿ ವೈಷ್ಣವ

ಆಚರಣೆ–ನಂಬಿಕೆಗಳು ದಟ್ಟ ಹಾಗೂ ವ್ಯಾಪಕವಾಗಿ ಇರುವುದರಿಂದ ಕನಕದಾಸರ ಸಾಹಿತ್ಯದ ವಿಶಿಷ್ಟ ಲಕ್ಷಣವಾದ ಶೈವ–ವೈಷ್ಣವ ಸಮನ್ವಯ ಬೇಡರಲ್ಲಿ ರಕ್ತಗತ ಸಂಸ್ಕೃತಿಯಾಗಿರುವುದರಿಂದ ಪುರಂದರದಾಸರೂ ಬೇಡನೆಂಬ ಅರ್ಥದಲ್ಲಿ ಕಬ್ಬಿಲ ಶಬ್ದ ಉಪಯೋಗಿಸಿರುವುದರಿಂದ ಅವರು ಬೇಡರೆಂದು ನಿರ್ಧಾರವಾಗುತ್ತದೆ: ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೪೧]

ಹರಿದಾಸ ಪರಂಪರೆಯಲ್ಲಿ ಕನಕದಾಸರಿಗೆ ವಿಶಿಷ್ಟವಾದ ಸ್ಥಾನವಿದೆ. ಇವರು ಕೇವಲ ದಾಸ ಶ್ರೇಷ್ಠರು ಮಾತ್ರವಲ್ಲ ಸೊಗಸಾದ ಕವಿಗಳೂ ಹೌದು. ಹೀಗಾಗಿ ಇವರು ಕೀರ್ತನೆಗಳನ್ನಲ್ಲದೆ 'ಮೋಹನ ತರಂಗಿಣಿ' ನಳಚರಿತ್ರೆ' 'ರಾಮಧ್ಯಾನ ಚರಿತ್ರೆ' 'ಹರಿಭಕ್ತಿಸಾರ'ದಂತಹ ಕಾವ್ಯಗಳನ್ನು ರಚಿಸಿದ್ದಾರೆ. ಕನಕದಾಸರು ದಾಸರಾಗುವ ಮೊದಲೇ ಕಾವ್ಯಗಳನ್ನು ಬರೆದನೆಂದೂ, ಅನಂತರ ಕೀರ್ತನೆಗಳನ್ನು ರಚಿಸಿದನೆಂದೂ ಅಭಿಪ್ರಾಯ ಪಡಲಾಗಿದೆ.[೪೨] ಕೆಲವು ಕೀರ್ತನೆಗಳ ಕರ್ತೃ ಯಾರು ಎಂಬುದರ ಬಗೆಗೆ ಜಿಜ್ಞಾಸೆ ಇದೆ.[೪೩]

ದೇವಾಲಯಗಳು ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ, ದೇವಾಲಯದಲ್ಲಿ ಹಾಡುವುದು ಒಂದು ಸಂಪ್ರದಾಯವಾಗಿ, ದೇವರ ಸ್ತೋತ್ರಕ್ಕೆ ಅವಕಾಶವಾಯಿತು. ಸ್ತೋತ್ರಗಳು ದೇವರ ಮುಂದೆ ಪಠಿಸುವ ಮಂತ್ರಗಳಾದವು. ಏಕಾಂತವಾಗಿ ಮನೆಯಲ್ಲೊ, ಮಠದಲ್ಲೊ, ಮನೆ ಮನೆ ತಿರುಗಿ ಭಿಕ್ಷೆ ಬೇಡುವಾಗ ಬೀದಿಯಲ್ಲೊ, ವೈಯಕ್ತಿಕವಾಗಿ ದೇವಾಲಯದಲ್ಲೊ, ದೇವರ ಉತ್ಸವ ಹೊರಟಾಗ ಮಾಡುವ ಭಜನೆಯ ಸಮಯದಲ್ಲೊ, ಇಷ್ಟದೇವತೆಯನ್ನು ಕುರಿತು ಭಾವಪೂರ್ಣವಾಗಿ ಹೃದಯ ತುಂಬಿ ಹಾಡುವ ಭಕ್ತಿಗೀತೆಗಳೇ ಕೀರ್ತನೆಗಳು. ಕ್ರಮೇಣ ಕೀರ್ತನೆಗಳು ಜನರ ಮನಸ್ಸಿನಲ್ಲಿ ಆಳವಾಗಿ ಬೇರೂರಿದವು. ಮುಂದೆ ಕೀರ್ತನೆಗಳೂ ಮಂತ್ರಗಳಷ್ಟೇ ಪವಿತ್ರವಾದವು. ದಾಸರು ಕೀರ್ತನೆಗಳನ್ನು ಹಾಡುವುದು ಒಂದು ವಿಧಿಯಾಯಿತು. ಆದರೂ ದೇವಾಲಯಗಳಲ್ಲಿ ಸಾರ್ವತ್ರಿಕವಾದ ಪೂಜೆ ಸಂಸ್ಕೃತಿ ಭಾಷೆಯಲ್ಲಿಯೇ ಮುಂದುವರೆಯಿತು. ದೇಶೀಯ ಭಾಷೆಗಳು ವೈದಿಕ ಸಂಪ್ರದಾಯದಲ್ಲಾಗಲಿ ಶೈವ ಸಂಪ್ರದಾಯದಲ್ಲಾಗಲಿ ಸಾರ್ವತ್ರಿಕ ಪೂಜಾ ಸಮಯದಲ್ಲಿ ಬಳಸದಿರುವುದು ಗಮನಾರ್ಹವಾದ ಸಂಗತಿಯಾಗಿ ಕಂಡು ಬರುತ್ತದೆ. ಅದರೆ ಜನಸಾಮಾನ್ಯರ ಧಾರ್ಮಿಕ ವಿಧಿಗಳು ಸಾರ್ವತ್ರಿಕವಾದ ಸಂದರ್ಭದಲ್ಲಿಯೇ ದೇಸೀಯ ಭಾಷೆಯಲ್ಲಿಯೇ ನಡೆಯುತ್ತಿದ್ದುದು ವಿಶೇಷವಾಗಿ ಕಂಡುಬರುತ್ತದೆ. ಧರ್ಮದ ವಿಷಯವನ್ನು ಸುಲಭವಾಗಿ ಎಲ್ಲರಿಗೂ ತಿಳಿಯುವಂತೆ ಬೋಧನೆ ಮಾಡಲು ದೇಸೀಯ ಭಾಷೆಯ ಬಳಸಲು ಬೌದ್ಧರು, ಜೈನರು, ಶಿವಶರಣರು ಪ್ರಾರಂಭಿಸಿದರು ಅನಂತರ ದಾಸರು ಈ ಪರಂಪರೆಯನ್ನು ಮುಂದುವರೆಸಿದರು.

ಕೀರ್ತನೆಗಳಲ್ಲಿ ವೈಯಕ್ತಿಕವಾದ ಮುಕ್ತಿಯನ್ನು ಪಡೆಯುವ ಮನೋಭಾವನೆ ಪ್ರಧಾನವಾಗಿ ವ್ಯಕ್ತಗೊಂಡಿದೆ. ದೇವಾಲಯದ ಸಾರ್ವತ್ರಿಕ ಪೂಜಾ ವಿಧಿಯಲ್ಲಿ ಅವು ಹೆಚ್ಚಾಗಿ ಮಾನ್ಯತೆ

ಪಡೆಯಲಿಲ್ಲ. ಭಕ್ತನೊಬ್ಬ ಮುಕ್ತಿ ಪಡೆವ ಹಂಬಲದಿಂದ ಭಗವಂತನೊಂದಿಗೆ ನಡೆಸಿದ ಭಾವನಾತ್ಮಕ ಭಕ್ತಿ ಸಂಭಾಷಣೆಯೇ ಕೀರ್ತನೆಗಳ ವಸ್ತು. ಅವುಗಳಲ್ಲಿ ಸ್ತೋತ್ರ, ನಾಮ ಸಂಕೀರ್ತನೆ, ಆತ್ಮನಿವೇದನೆ, ಸಮಾಜ ವಿಮರ್ಶೆ, ಲೋಕನೀತಿ ಮತ್ತು ಮಾಧ್ವ ತತ್ವಕ್ಕನುಗುಣವಾಗಿ ಪುರಾಣ ಕತೆಗಳ ವ್ಯಾಖ್ಯಾನದ ಪ್ರಸಂಗಗಳೂ ಇವೆ.

ಕನ್ನಡ ಸಾಹಿತ್ಯದಲ್ಲಿ ಕೀರ್ತನೆ ಒಂದು ವಿಶಿಷ್ಟ ಪ್ರಕಾರವಾಗಿದೆ. ಸಂಗೀತ, ಸಾಹಿತ್ಯ, ನೃತ್ಯ ಕಲೆಯೊಂದಿಗೆ ಭಕ್ತಿ ಸಾಮರಸ್ಯಗೊಂಡ ಅಪೂರ್ವವಾದ ಮಾಧ್ಯಮವೇ ಕೀರ್ತನೆ. ಅದು ಸಾಹಿತ್ಯ ಪ್ರಧಾನವೋ, ಸಂಗೀತ ಪ್ರಧಾನವೋ ಎನ್ನುವ ಪ್ರಶ್ನೆ ಚರ್ಚಾಸ್ಪದವಾದುದು. ಸಂಗೀತಗಾರರೊಬ್ಬರು "ಕೀರ್ತನೆಯಲ್ಲಿ ಭಕ್ತಿರಸಭರಿತ ಸಾಹಿತ್ಯವೇ ಪ್ರಧಾನ ಸಂಗೀತ ಗೌಣ; ಇಲ್ಲಿ ಸಾಹಿತ್ಯ ರಸವಾಹಕ ಕೀರ್ತನೆಯಲ್ಲಿ ಸಾಹಿತ್ಯಕ್ಕೆ ಅನ್ವಯವಾದ ಸಂಗೀತ ಗೌಣವಾಗಿದ್ದರೂ ಅದು ಶಾಸ್ತ್ರೀಯ ಸಂಗೀತವೇ ಮೇಲಾಗಿ ಶಾಸ್ತ್ರೀಯ ಸಂಗೀತದ ತಾಳದ ಚೌಕಟ್ಟಿಗೂ ಒಳಪಟ್ಟಿದೆ. ಭಕ್ತಿರಸ ಪ್ರಧಾನವಾದ ಈ ಕೀರ್ತನೆಯಲ್ಲಿ ರಾಗ, ಭಾವ ವಿಸ್ತರಣಕ್ಕೂ ತಾಳದಲ್ಲಿನ ಚಮತ್ಕಾರಕ ಕೆಲಸಗಳಿಗೂ ಎಡೆಯಿಲ್ಲ. ಅದರೆ ಕೀರ್ತನೆಯ ಸಾಹಿತ್ಯ ಯತಿ, ಪ್ರಾಸ, ಛಂದೋನಿಯಮ ಬದ್ಧವಾಗಿದೆ.[೪೪] ಎಂದು ಅಭಿಪ್ರಾಯ ಪಟ್ಟರೆ, ವಿಮರ್ಶಕರೊಬ್ಬರು "ಹರಿದಾಸ ಕೀರ್ತನೆಗಳಿಗೆ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ದೊರೆತ ನೆಲೆ-ಬೆಲೆ ಸಂಗೀತ ಪ್ರಪಂಚದಲ್ಲಿ ದೊರೆತಿಲ್ಲ ಎಂಬುದು ಸ್ವಯಂ ಸ್ಪಷ್ಟ:[೪೫] ಎಂದಿದ್ದಾರೆ." ಕನಕದಾಸರ ಕೀರ್ತನೆಗಳ ಸತ್ವವನ್ನು ಗಮನಿಸಿದರೆ ಅವು ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸ್ಪರ್ಧಿಯಾಗಬಲ್ಲವು. ಹಾಗೆ ನೋಡಿದರೆ ಪುರಂದರದಾಸರ ಕೀರ್ತನೆಗಳಿಗಿಂತ ಕನಕದಾಸರ ಕೀರ್ತನೆಗಳಲ್ಲಿ ಕಾವ್ಯಗುಣ ಒಂದು ಕೈ ಮಿಗಿಲಾಗಿಯೇ ಇರುವಂತೆ ತೋರುತ್ತದೆ.[೪೬] ಎನ್ನುವ ವಿಮರ್ಶಕರ ಈ ಮಾತುಗಳು ಕನಕ ಕೀರ್ತನೆಗಳ ಅಂತರಂಗ ಸಂಪತ್ತಿಗೆ ಕನ್ನಡಿ ಹಿಡಿದಿವೆ. ಕನಕದಾಸರ ಕೀರ್ತನೆಗಳಲ್ಲಿನ ಭಾಷೆಯ ಸೊಗಡು ಸೊಗಸು ಬೆಡಗುಗಳು, ಕಲ್ಪನೆಯ ಹರಹು ಔನ್ನತ್ಯ ವಿಸ್ತಾರಗಳು, ಅರ್ಥದ ವಿನ್ಯಾಸ ವಿಶೇಷತೆಗಳು, ವಿಲಾಸಿಭಾವದ ಆರ್ದ್ರತೆ, ಸಾಂದ್ರತೆ, ಅಪೂರ್ವತೆಗಳು ಆ ಉಪಮೆಗಳ ಹೊಸತನ ವೈವಿಧ್ಯ ವೈಶಿಷ್ಟ್ಯಗಳು ಅನುಭವದ ಗಟ್ಟಿತನ ಗಾಢತೆಗಳು, ದೃಷ್ಟಿಯ ನಾವೀನ್ಯ ನಿರ್ಭೀತಿಗಳು, ವಿಶ್ಲೇಷಣೆಯ ಹರಿತ, ಖಾರ, ಕಟುತ್ವ, ಸೂಕ್ಷ್ಮತೆಗಳು, ಆತ್ಮನಿವೇದನೆಯ ನೈಜತೆ ನಿರಾಡಂಬರತೆ ತೀವ್ರತೆಗಳು ಪದ ಪದಗಳ ಗರ್ಭದಿಂದ ಹೊಮ್ಮಿ ಚಿಮ್ಮುವ ಸಹಜ ಮೋಹಕ ನಾದ ತರಂಗಗಳು ಅನನ್ಯ ಪರಿಣಾಮಕಾರಿಯಾಗಿದ್ದು ಉತ್ತಮ ಕಾವ್ಯ ಮೌಲ್ಯದ ಮಾದರಿಗಳಾಗಿವೆ.

ಬಿಬ್ಲಿಯಾಥಿಯಾ ಕರ್ನಾಟಕಾ ಮಾಲಿಕೆಯಲ್ಲಿ ಜನಪ್ರಿಯ ಹಾಡುಗಳನ್ನು ಹೊರತರಬೇಕೆಂಬ ಉದ್ದೇಶದಿಂದ ದಾಸರ ಪದಗಳನ್ನು ಮೊದಲಿಗೆ ಸಂಪಾದಿಸಿದವರು ಹರ್ಮನ್ ಮೊಗ್ಲಿಂಗ್,

೧೮೫೦ ಮತ್ತು ೧೮೫೨ ರಲ್ಲಿ ಪ್ರಕಟಿಸಿದ ೧೫೮ ಪುಟಗಳ ಕಲ್ಲಚ್ಚಿನ ಮುದ್ರಣದ ಈ ಸಂಕಲನದಲ್ಲಿ ೧೭೪ ಪದಗಳಿದ್ದು ಇದರಲ್ಲಿ ೧೮ ಕನಕದಾಸರ ಕೀರ್ತನೆಗಳಿವೆ. ದಾಸ ಸಾಹಿತ್ಯವನ್ನೆಲ್ಲಾ ಪ್ರಕಟಿಸಬೇಕೆಂಬ ಉದ್ದೇಶದಿಂದ ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ ಎಂಬ ಹೆಸರಿನ ಪತ್ರಿಕೆ ಪ್ರಾರಂಭಿಸಿ ಬೆಂಗಳೂರಿನ ಸುಬೋಧ ಪ್ರಕಟನಾಲಯವು ೧೯೨೮ರ ಎರಡನೆಯ ಸಂಪುಟದ ಮೊದಲನೆಯ ಸಂಚಿಕೆಯಲ್ಲಿ ೩೧, ೨ನೆಯ ಸಂಚಿಕೆಯಲ್ಲಿ ೩೫ ಮತ್ತು ೩ನೆಯ ಸಂಚಿಕೆಯಲ್ಲಿ ೧೨ ಕನಕದಾಸರ ಹಾಡುಗಳನ್ನು ಪ್ರಕಟಿಸಲಾಗಿದೆ. ಶ್ರೀ. ಕೃಷ್ಣಶರ್ಮ ಬೆಟಗೇರಿ, ಶ್ರೀ. ಹುಚ್ಚುರಾವ್ ಬೆಂಗೇರಿ ಅವರು ಶ್ರೀ ಕನಕದಾಸರ ಹಾಡುಗಳು ಮತ್ತು ಶ್ರೀ ಕನಕದಾಸರ ಭಕ್ತಿಗೀತೆಗಳು ಕೃತಿಗಳನ್ನು ಸಂಪಾದಿಸಿದ್ದಾರೆ. ಈ ಎರಡರಲ್ಲೂ ೧೭೫ ಹಾಡುಗಳನ್ನು ಸಂಗ್ರಹಿಸಲಾಗಿದೆ. ಕನಕದಾಸರ ಕೀರ್ತನೆಗಳು ಎನ್ನುವ ಕೃತಿ ಬಿ. ಶಿವಮೂರ್ತಿ ಶಾಸ್ತ್ರೀ ಮತ್ತು ಎಂ.ವಿ.ಕೃಷ್ಣರಾವ್ ಇವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿದೆ. ಇದರಲ್ಲಿ ೨೪೯ ಕೀರ್ತನೆಗಳಿವೆ.

ಕೀರ್ತನೆಗಳ ಸಂಪಾದನೆಯನ್ನು ಕುರಿತು ಡಾ.ಟಿ.ಎನ್.ನಾಗರತ್ನ ಅವರು ಹರಿದಾಸರ ಕೃತಿಗಳ ಸಂಪಾದನೆಗೂ, ಬೇರೆ ಕೃತಿಗಳ ಸಂಪಾದನೆಗೂ ತುಂಬಾ ವ್ಯತ್ಯಾಸವಿದೆ. ಹರಿದಾಸರ ಕೃತಿಗಳು ಬಾಯಿಂದ ಬಾಯಿಗೆ ಸಾಗಿಬಂದುವಾದ್ದರಿಂದ ಅನೇಕ ವ್ಯತ್ಯಾಸಗಳನ್ನು ಮೈಗೂಡಿಸಿಕೊಂಡು ಬಂದಿರುತ್ತವೆ.....ದೊರೆತಿರುವ ಹಸ್ತ ಪ್ರತಿಗಳಲ್ಲಿ ಯಾವುದೇ ಒಂದು ಪ್ರತಿಯನ್ನು ಇನ್ನೊಂದು ಪ್ರತಿ ಸಂಪೂರ್ಣವಾಗಿ ಹೋಲುವುದಿಲ್ಲ......ಯಾವುದೇ ಒಂದು ಸಂಕಲನವನ್ನು ಮೂಲ ಪ್ರತಿಯೆಂದು ಇಟ್ಟುಕೊಳ್ಳಲು ಸಾಧ್ಯವಿಲ್ಲ. ಒಂದೊಂದು ಪ್ರತ್ಯೇಕ ಕೀರ್ತನೆಗೂ ದೊರೆತ ಆಕರಗಳನ್ನೆಲ್ಲ ಒಟ್ಟು ಮಾಡಿ ಅವುಗಳಲ್ಲೆ ಆಯಾ ದಾಸರು ಬದುಕಿ ಬಾಳಿದ ಸ್ಥಳದ ದೃಷ್ಟಿಯಿಂದ ಪ್ರಾದೇಶಿಕವೆಂದಾಗಲೀ, ಪ್ರತಿಯ ಸ್ವರೂಪ ದೃಷ್ಟಿಯಿಂದ ಪ್ರಾಚೀನವೆಂದಾಗಲೀ ಅಥವಾ ಶುದ್ಧ ಪಾಠವನ್ನಾಧರಿಸಿ ಒಂದು ಪ್ರತಿಯನ್ನು ಆಯ್ದು ಅದನ್ನು ಮೂಲವೆಂದು ಭಾವಿಸಿ ಉಳಿದವುಗಳ ಪಾಠವನ್ನು ಸಂಕಲಿಸುವುದು ಅನಿವಾರ್ಯವಾಗಿದೆ. ಈ ಕ್ರಮದಿಂದಾಗಿ ಒಂದೊಂದು ಕೀರ್ತನೆಗಳ ಸಂಪಾದನೆಯೂ ಒಂದೊಂದು ಕಾವ್ಯದ ಸಂಪಾದನೆಯಂತೆಯೇ ಇರುತ್ತದೆ[೪೬] ಎಂದಿರುವರು.

ಕನಕದಾಸರು ಯಾವ ದೇವರನ್ನೂ ಬಹಿಷ್ಕರಿಸಲಿಲ್ಲ. ಶಿವ-ವಿಷ್ಣುವಿನಲ್ಲಿ ಬೇಧವೆಣಿಸದೆ ಅತ್ಮ ಸಾಕ್ಷಾತ್ಕಾರ ಮಾಡಿಕೊಂಡರು. ಕಾವ್ಯಕ್ಷೇತ್ರ, ಆಧ್ಯಾತ್ಮಿಕ ಕ್ಷೇತ್ರಗಳೆರಡರಲ್ಲೂ ಸಮಾನ ಖ್ಯಾತಿ ಪಡೆದ ಮಹಾನುಭಾವರು, ಸಾಹಿತ್ಯ ವಿದ್ಯಾ ಸಂಸ್ಕಾರ ಪಡೆದಿದ್ದು, ಕಾವ್ಯಗಳು ಮತ್ತು ಸ್ತೋತ್ರಗಳನ್ನು ರಚಿಸಿದ್ದಾರೆ. ಕನಕದಾಸರು ಕೀರ್ತನೆಗಳನ್ನು ಹೆಚ್ಚಾಗಿ ರಚಿಸಲಿಲ್ಲ. ಇವುಗಳಲ್ಲಿ ಏಕಾಂತ ಭಕ್ತಿಯನ್ನೂ, ಸಮರ್ಪಣಾ ಮನೋಭಾವವನ್ನೂ ಎಲ್ಲವೂ ಹರಿಚಾಲಿತ ಎಂಬ ತತ್ವವನ್ನು ಪ್ರತಿಪಾದಿಸಿರುವುದಲ್ಲದೆ, ಜನತೆಯ ಮೌಢ್ಯ ಪೊಳ್ಳು ನಂಬಿಕೆ ಇತ್ಯಾದಿಗಳನ್ನು ಖಂಡಿಸಿದ್ದಾರೆ. ನವವಿಧ ಭಕ್ತಿಯನ್ನು ನಿರೂಪಿಸಿದ್ದಾರೆ.

ಈಗ ದೊರೆತಿರುವ ಇವರ ಹಾಡುಗಳಲ್ಲಿ ಶಂಕರಾಭರಣ, ಮುಖಾರಿ, ಕಾಂಬೋಜಿ, ಇತ್ಯಾದಿ ೩೦ ಕ್ಕೂ ಹೆಚ್ಚಿನ ರಾಗಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ತಂಗದಿರನ ನಿಮಿಷ ತಾರಕೆಗಳು ಎಂಬ ಕೃತಿಯಲ್ಲಿ ಇವರು ಕೆಲವು ರಾಗಗಳನ್ನು ಪ್ರಸ್ತಾಪ ಮಾಡಿದ್ದಾರೆ.

"ತಾಳದಂಡಿಗೆ ಪಿಡಿದು ತುಂಬುರ ನಾರದರು ಭೂ ।
ಪಾಳಿ ದೇಶಾಕ್ಷಿ ನಾರಾಯಣಿ ಗುಜ್ಜರಿ ॥
ಮಾಳವಿ ಶ್ರೀದೇವಗಾಂಧಾರಿ ಮಲಹರಿ ।
ಸಾಳಗಮ ಸೌರಾಷ್ಟ್ರ ಗುಂಡ ಕ್ರಿಯಾ ಲಲಿತ ।
ಸುಳಾದಿಯಲಿ ನಾಮ ಕೀರ್ತನೆಗಳ ಪಾಡಿ ।
ಮೈಳೈಲಿ ವಾದ್ಯ ನೃತ್ಯಗಳಾಡುತಿಹರು ।
ಪಶುಪಾಲನು ಪವಡಿಸೋ ಹರಿಯೆ ॥

ಗೇಯದ ವೈವಿಧ್ಯದ ಧೃಷ್ಟಿಯಿಂದ ಇವರ ಕೊಡುಗೆ ಎಂದರೆ ಇವರ ದೇವರನಾಮಗಳು ನಮ್ಮಮ್ಮ ಶಾರದೆ, ತೊರೆದು ಜೀವಿಸಬಹುದೇ, ಏನೆಂದು ಕೊಂಡಾಡು ಸುಖಿಸಲೋ, ಈತನೀಗ ವಾಸುದೇವನು, ತಲ್ಲನಿಸದಿರು, ಬಾಗಿಲನುತೆರೆದು ಮುಂತಾದವುಗಳು ಎಲ್ಲರ ಮನಗಳಲ್ಲಿ ಚಿರಸ್ಥಾಯಿಯಾಗಿವೆ.

ಪುರಂದರದಾಸರ ಕೀರ್ತನೆಗಳಂತೆ ಕನಕದಾಸರ ರಚನೆಗಳು ಹೆಚ್ಚು ಪ್ರಚಲಿತವಾಗಿಲ್ಲ ಎಂಬ ಮಾತು ಕೇಳಿ ಬರುತ್ತದೆ. ಕನಕದಾಸರು ಆಗಿನ ಸಮಾಜದ ಒಂದು ಕೆಳಗಿನ ಸ್ತರದಿಂದ ಬಂದವರು, ಆದರೆ ಅವರು ತಮ್ಮನ್ನು ಅಲ್ಲಿಗೆ ಸೀಮಿತಗೊಳಿಸಲಿಲ್ಲ. ಮೇಲಿನ ಸ್ತರದವರೆಗೂ ಮೀರಿ ವ್ಯಾಪ್ತಿ ಇಟ್ಟುಕೊಂಡರು. ಭಾಗವತರು ಕುಲ ಧರ್ಮ, ಉದ್ಯೋಗ ಇತ್ಯಾದಿಗಳನ್ನೆಲ್ಲಾ ಮೀರಿದವರು, ಅಳ್ವಾರರುಗಳಲ್ಲಿ ಮಾರನ್, ಶಠಗೋಪನ್, ವಕುಳಾಭರಣ ಎಂಬ ಹೆಸರಿರುವ ನಮ್ಮಾಳ್ವರ್ ವೆಳ್ಳಾಲಗೌಡರು ಇವರ ಪ್ರಧಾನ ಶಿಷ್ಯ ಮಧುರಕವಿ ಆಳ್ವಾರರು ಬ್ರಾಹ್ಮಣರು, ಕುಲಶೇಖರಾಳ್ವಾರರು ಕ್ಷತ್ರಿಯರು, ತಿರುಪ್ಪಾಣಿ ಆಳ್ವಾರರು ಹರಿಜನರ ಪಾಣ್ ಕುಲದವರು, ತಿರುಮಂಗೈ ಆಳ್ವಾರರು ಬೇಡರು. ಅಂದ ಮೇಲೆ ಕನಕದಾಸರಿಗೆ ಈಡಾಗ ಬಲ್ಲವರು ಲೋಕದಲ್ಲಿ ವಿರಳ ಎಂಬ ಪುರಂದರದಾಸರ ಮಾತನ್ನು ಇಲ್ಲಿ ಸ್ಮರಿಸಬಹುದು.

ಪುರಂದರದಾಸರು ವ್ಯಾಸರಾಯರ ಶಿಷ್ಯರಾದವರು. ಅಷ್ಟೇ ಅಲ್ಲದೆ ಕೀರ್ತನ ಸಾಹಿತ್ಯದ ಗೌರಿಶಂಕರವೂ ಆದವರು. ವಿಸ್ಮಯಕಾರಿ ಅಂಶವೆಂದರೆ ಪುರಂದರದಾಸರು ಕೀರ್ತನೆ ಸುಳಾದಿ ಉಗಾಭೋಗಗಳನ್ನಷ್ಟೇ ರಚಿಸಿದ್ದಾರೆ. ಕೀರ್ತನ ಸಾಹಿತ್ಯದಲ್ಲಿ ಇಷ್ಟೊಂದು ವಿಫುಲವಾಗಿ ಅನುಭವ

ವಿಸ್ತಾರವನ್ನು, ಪ್ರಕಾರ ವೈವಿಧ್ಯವನ್ನು ಮತ್ತು ಅಷ್ಟೇ ಪ್ರಮುಖವಾಗಿ ಕರ್ಣಾಟಕ ಸಂಗೀತ ಪರಂಪರೆಯ ಲಕ್ಷ್ಯ ಲಕ್ಷಣ ಸಮನ್ವಿತವಾದ ಕೀರ್ತನೆಗಳನ್ನು ಬರೆದ ಇನ್ನೊಬ್ಬ ಕೀರ್ತನಕಾರನಿಲ್ಲ ಎಂಬುದು ಪುರಂದರದಾಸರ ವೈಶಿಷ್ಟ್ಯಕ್ಕೆ ಉದಾಹರಣೆಯಾಗಿದೆ. ವಿಜಯದಾಸರಿಂದ ಪತನದೊಂದಿಗೆ ಪುರಂದರರ ಕೀರ್ತನೆಗಳು ಚೆಲ್ಲಾಡಿ ಹೋಗಿ ಅವರ ಮಾನಸ ಶಿಷ್ಯರಾಗಿರುವ ವಿಜಯದಾಸರಿಂದ ಮತ್ತೆ ಸಂಗ್ರಹಗೊಂಡು ಪ್ರಕಟವಾಗಿವೆ. ಪುರಂದರದಾಸರ ಜೀವನದ ವಿವರಗಳು ವಿಶೇಷವಾಗಿ ಪವಾಡಗಳು ಹಾಗೂ ಐತಿಹ್ಯಗಳಿಂದ ತುಂಬಿ ಹೋಗಿವೆ. ಅವರ ತಂದೆ-ತಾಯಿಗಳ ವಿವರಗಳು ನಮಗೆ ಸ್ಪಷ್ಟವಾಗಿ ತಿಳಿದಿಲ್ಲ. ಅವರ ಪೂರ್ವಾಶ್ರಮದ ಹೆಸರಿನ ಬಗೆಗೂ ಭಿನ್ನಾಭಿಪ್ರಾಯಗಳಿವೆ. ಅವರ ಹೆಂಡತಿಯ ಹೆಸರಿನ ಬಗೆಗೂ ಭಿನ್ನಾಭಿಪ್ರಾಯ ಉಳಿದು ಕೊಂಡಿದೆ. ಇವರ ಮಕ್ಕಳ ವಿಷಯದಲ್ಲೂ ಅಷ್ಟೇ ಖಚಿತವಾಗಿ ತಿಳಿಯುವುದು ಕಷ್ಟವಾಗಿದೆ. ಶಾಸನವೊಂದರ ಆಧಾರದಿಂದ ಇವರ ಜೀವನದ ಕೆಲವು ಸಂಗತಿಗಳನ್ನು ತಿಳಿಯಬಹುದಾಗಿದೆ.

ಪುರಂದರದಾಸರ ಪೂರ್ವಾಶ್ರಮದ ಹೆಸರು ಶ್ರೀನಿವಾಸ ನಾಯಕ ಅಥವಾ ಕೃಷ್ಣಪ್ಪನಾಯಕ ದಾಸರಾಗುವ ಮೊದಲು ಗೃಹಸ್ಥರಾಗಿದ್ದರೆಂದೂ ಚಿನಿವಾರ ವೃತ್ತಿಯಲ್ಲಿದ್ದ ಈತನು ಕೃಪಣನೆಂದೂ ಮೂಗುತಿಯ ಪ್ರಸಂಗದಿಂದ ವೈರಾಗ್ಯದತ್ತ ಹೊರಳಿದರೆಂಬ ಐತಿಹ್ಯವಿದೆ. ವ್ಯಾಸರಾಯರ ಶಿಷ್ಯರಾಗಿ ಪುರಂದರದಾಸರಾದರು. ವ್ಯಾಸರಾಯರಿಂದ 'ಪುರಂದರವಿಠಲ ಎಂಬ ಅಂಕಿತವನ್ನು ಪಡೆದು ಹರಿದಾಸ ದೀಕ್ಷೆಯನ್ನು ಕೈಗೊಂಡರು. ಕಂಪಲಿಶಾಸನದ ಪ್ರಕಾರ ಲಕ್ಷ್ಮಣದಾಸ, ಹೇರ್ಬದಾಸ ಮತ್ತು ಮಧ್ವಪತಿದಾಸರೆಂಬ ಮಕ್ಕಳಿದ್ದರೆಂದು ತಿಳಿದರೆ ವಿಜಯದಾಸರ ಸುಳಾದಿಯೊಂದರಲ್ಲಿ ವರದಪ್ಪ, ಗುರುರಾಯ, ಅಭಿನವ ಮತ್ತು ಮಧ್ವಪತಿ ಎಂಬ ನಾಲ್ವರು ಗಂಡು ಮಕ್ಕಳಿದ್ದರೆಂದಿದೆ. ಅವರಲ್ಲಿ ಮೂವರು ದಾಸರು ಬದುಕಿದ್ದಾಗಲೇ ಮರಣ ಹೊಂದಿದರೆಂದು ಸೂಚಿತವಾದರೆ, ಇನ್ನೊಂದು ಮೂಲವು ಮಗಳೊಬ್ಬಳಿದ್ದಳೆಂದೂ ತಿಳಿಸುತ್ತದೆ. ಸತ್ಯಸಂಗತಿಯನ್ನು ನಿಖರವಾಗಿ ಹೇಳುವುದು ಕಷ್ಟವಾಗಿದೆ.

ಪುರಂದರದಾಸರ ವೈಯಕ್ತಿಕ ಜೀವನ ಅಥವಾ ಅವರ ಪೂರ್ವನಾಮ ಹಾಗೂ ಪೂರ್ವೇತಿಹಾಸ ಎಷ್ಟೇ ಸಂದಿಗ್ಧಗಳಿಗೆ ಒಳಗಾಗಿದ್ದರೂ ಅವರ ಕೆಲವು ಕೀರ್ತನೆಗಳಲ್ಲಿ ಮಕ್ಕಳ ಸಾವಿನ ನೋವು, ತಮ್ಮ ಪೂರ್ವಶ್ರಮದ ವೈಭವದ ಬದುಕು ಮತ್ತೆ ಅದರಿಂದ ಜುಗುಪ್ಸೆಗೊಂಡು ದಾಸನಾಗುವುದಕ್ಕೆ ಕಾರಣಳಾದ ಮಡದಿಯನ್ನು ಕುರಿತ ಸಂಗತಿಗಳು ಸೂಚಿತವಾಗುತ್ತವೆ.

ಪುರಂದರದಾಸರೂ, ವ್ಯಾಸರಾಯರೂ, ಕನಕದಾಸರೂ ಸಮಕಾಲಿನರೆಂದು ಕೆಲವೊಂದು ಆಧಾರಗಳು ತಿಳಿಸಿಕೊಡುತ್ತವೆ. ಶ್ರೀವ್ಯಾಸರಾಯರು ಶ್ರೀಕೃಷ್ಣದೇವರಾಯನಿಗೆ ಒದಗಿದ್ದ ಕುಹುಯೋಗದ

ವಿಪತ್ತನ್ನು ನಿವಾರಿಸಿದ್ದರು. ಈ ಘಟನೆಯು ಕ್ರಿ.ಶ.ಸುಮಾರು ೧೫೨೦ ರಲ್ಲಿ ಸಂಭವಿಸಿರಬೇಕೆಂದು ಆರ್.ಎಸ್.ಪಂಚಮುಖಿಯವರು ಅಭಿಪ್ರಾಯ ಪಟ್ಟಿರುವರು.[೪೮] ವ್ಯಾಸರಾಯರು ಶ್ರೀಕೃಷ್ಣದೇವರಾಯರು ತಮಗೆ ದತ್ತಿ ಕೊಟ್ಟ ವ್ಯಾಸಸಮುದ್ರವನ್ನು ಹಲವಾರು ವಿಭಾಗಗಳನ್ನಾಗಿ ಮಾಡಿ ಪುರಂದರ ದಾಸರ ಮಕ್ಕಳಾದ ಲಕ್ಷಣದಾಸ, ಹೇಬಣದಾಸ, ಮತ್ತು ಮಧ್ವಪದಾಸರಿಗೆ ದಾನ ಕೊಟ್ಟರೆಂಬ ಸಂಗತಿ, ಕ್ರಿ.ಶ೧೫೨೬ರ ಕಮಲಾಪುರದ ಶಾಸನದಲ್ಲಿ ಉಕ್ತವಾಗಿದೆ. ಪುರಂದರ ದಾಸರ ಮಕ್ಕಳಲ್ಲಿ ಒಬ್ಬನಾದ ಮಧ್ವಪತಿ, 'ಮದ್ವಪತಿವಿಠಲ' ಎಂಬ ಅಂಕಿತದಲ್ಲಿ ಬರೆದಿರುವ ಕೀರ್ತನೆಯಲ್ಲಿ ತನ್ನ ತಂದೆ 'ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳದತಿಶಯದಮಾವಾಸ್ಯೆ ಮಂದವಾರ'ದಂದು ವೈಕುಂಠಕ್ಕೆ ತೆರಳಿದರು ಎಂದು ಹೇಳಿರುವುದು ಒಂದು ಸಮಕಾಲೀನ ಪ್ರಮಾಣವಾಗಿದೆ. ಅಂದರೆ ಕ್ರಿ.ಶ.ಸು ೧೫೬೪ರ ವೇಳೆಗೆ ಅವರು ದಿವಂಗತರಾದರೆಂದು ತಿಳಿದುಬರುತ್ತದೆ. ದಾಸದೀಕ್ಷೆಯನ್ನು ಕೈಕೊಳ್ಳುವವೇಳೆಗೆ ಇವರಿಗೆ ೪೦ ವರ್ಷಗಳಿರಬಹುದೆಂದು ವಿದ್ವಾಂಸರು ಊಹಿಸಿರುವುದರಿಂದ, ಅಲ್ಲಿಂದ ಈಚೆಗೆ ೪೪ ವರ್ಷಗಳು ಹರಿದಾಸರಾಗಿದ್ದರೆಂದೂ, ಒಟ್ಟಿನಲ್ಲಿ ಕ್ರಿ.ಶ.೧೪೮೦ ರಿಂದ ೧೫೬೪ಗೆ ಜೀವಿಸಿದ್ದರೆಂದೂ ಹೇಳಬಹುದು.

ಪುರಂದರದಾಸರ ಕೀರ್ತನೆಗಳನ್ನು ಅಧ್ಯಯನ ಮಾಡಿದಾಗ ಅವರು ಮಾಡಿದ ತೀವ್ರವಾದ ದೇಶಸಂಚಾರ ಹಾಗೂ ತೀರ್ಥಕ್ಷೇತ್ರ ಸಂದರ್ಶನಗಳ ಚಿತ್ರವು ನಮಗೆ ದೊರೆಯುತ್ತದೆ. ಪುರಂದರದಾಸರ ಸಿದ್ಧಿಯ ಮಹತ್ವವನ್ನು ವ್ಯಾಸರಾಯರೇ ಹೇಳಿದ 'ದಾಸರೆಂದರೆ ಪುರಂದರದಾಸರಯ್ಯ' ಎನ್ನುವ ಮಾತುಗಳಲ್ಲಿ ಗಮನಿಸಬಹುದು. ದಾಸಸಾಹಿತ್ಯದಲ್ಲಿ ಪುರಂದರದಾಸರಂತೆ ಸ್ತುತ್ಯರಾದ ಇನ್ನೊಬ್ಬ ದಾಸರಿಲ್ಲ. ಇವರಾದ ಮೇಲೆ ನೂರು ವರುಷಗಳಾದ ಮೇಲೆ ಸ್ವಪ್ನದಲ್ಲಿ ತಮಗೆ ದೀಕ್ಷೆಯನ್ನು ನೀಡಿದರೆಂದು ಹೇಳುವ ವಿಜಯದಾಸರು, ಜಗನ್ನಾಥ ದಾಸರು, ಪ್ರಸನ್ನ ವೆಂಕಟದಾಸರು, ತ್ಯಾಗರಾಜ ಸ್ವಾಮಿಗಳು ಮೊದಲಾದವರು ಇವರನ್ನು ಅತ್ಯಂತ ಗೌರವದಿಂದ ಸ್ತುತಿಸುತ್ತಾರೆ.

ತಾಳ್ಳಪಾಕಂ ಅನ್ನಮಾಚಾರ್ಯರಿಗೆ ಸಂಬಂಧಿಸಿದ ಒಂದು ಘಟನೆಯು ಹೀಗಿದೆ. ಅನ್ನಮಾಚಾರ್ಯರು ತಿರುಪತಿಯ ವೆಂಕಟೇಶ್ವರ ಭಕ್ತರು. ಅವರ ವೃತ್ತಿ ವೆಂಕಟೇಶ್ವರನ ಸಮ್ಮುಖದಲ್ಲಿ ಸಂಕೀರ್ತನೆ ಮಾಡುವುದು. ಹೀಗೆ ಇವರು ವೆಂಕಟೇಶನ ಭಕ್ತಿಯಲ್ಲಿ ಮುಳುಗಿ ಕೀರ್ತನೆ ಮಾಡುತ್ತಿದ್ದಾಗ ಪುರಂದರರು ಅದನ್ನು ಕೇಳುವ ಭಾಗ್ಯ ಪಡೆದಿದ್ದರಂತೆ ಹಾಗೆ ಅನ್ನಮಾಚಾರ್ಯರ ಹಾಡು ಮುಗಿಯುತ್ತಿದ್ದಂತೆ ವೆಂಕಟೇಶನನ್ನೇ ಕಂಡಂತಾಯಿತು. ಎಂದು ಕೈ ಮುಗಿದರಂತೆ. ಆಗ ಅನ್ನಮಾಚಾರ್ಯರು ಪುರಂದರದಾಸರ ತೇಜಸ್ಸು ಹಾಗೂ ಉದಾತ್ತ ಗುಣಕ್ಕೆ ಮಾರುಹೋಗಿ ತಾವು ಒಂದು ಹಾಡನ್ನು ಹಾಡಬೇಕೆಂದು ವಿನಂತಿಸಿಕೊಂಡರಂತೆ ತಂಬೂರಿಯ ಶೃತಿಯೊಂದಿಗೆ ಪುರಂದರದಾಸರು ಕೀರ್ತನೆ ಹಾಡಿ ಮುಗಿಸಿದಾಗ ಅನ್ನಮಾಚಾರ್ಯರು ಸಂತೋಷೋನ್ಮಾದಗಳಿಂದ

'ದಿವ್ಯವಾದ ಗಾಯನ ಪಾಂಡುರಂಗ ವಿಠಲನೇ ಎದುರಿಗೆ ನಿಂತಂತಿದೆ' ಎಂದು ಪ್ರಶಂಸಿಸಿದರಂತೆ, ಈ ಸಂಗತಿಯನ್ನು ಅನ್ನಮಾಚಾರ್ಯರ ಮೊಮ್ಮಗನಾದ ಚೆನ್ನತಿರುವೆಂಗಳನಾಥ ತನ್ನ ಅಜ್ಜನನ್ನು ಕುರಿತ ನಾಲ್ಕು ದ್ವಿಪದ ಪ್ರಬಂಧಗಳಲ್ಲಿ ಉಲ್ಲೇಖಿಸಿದ್ದಾನೆ.[೪೯]

ಪುರಂದರದಾಸರು ಕನ್ನಡ ಮತ್ತು ತೆಲುಗು ಎರಡೂ ಭಾಷೆಗಳಿಗೂ ಸೇತುವೆಯಾಗಿ ನಿಂತ ಕೀರ್ತನಕಾರರು. ಅವರ ಕೀರ್ತನೆಗಳು ಕನ್ನಡ ಭಕ್ತಿ ಪರಂಪರೆಯ ಎಲ್ಲ ದ್ರವ್ಯಗಳಿಂದಲೂ ಶ್ರೀಮಂತಗೊಳ್ಳುತ್ತವೆ. ತಮ್ಮ ಗುರುಗಳು ಹಾಕಿಕೊಟ್ಟ ಕೀರ್ತನೆ ಪರಂಪರೆಗೆ ಅಪರೂಪವಾದ ಸಿದ್ಧಿಯನ್ನು ದೊರಕಿಸಿಕೊಟ್ಟವರು. ಇವರ ಕೀರ್ತನೆಗಳಲ್ಲಿ ಗೇಯತೆಯ ಸೊಂಪು ಎಷ್ಟು ಅಧ್ಭುತವಾಗಿದೆಯೆಂದರೆ, ಸಂಗೀತಕ್ಕಾಗಿ ಇವರ ಕೀರ್ತನೆಗಳ ಸಾಹಿತ್ಯ ಗುಣಕ್ಕೆ ಒಂದಿಷ್ಟು ಭಾದೆಯಾಗುವುದಿಲ್ಲ. ಏಳು ತಾಳಗಳನ್ನು ಒಳಗೊಂಡಂತೆ ರಚಿತವಾಗುವ ಇವರ ಕೀರ್ತನೆಗಳು ಸುಳಾದಿ, ಉಗಾಭೋಗಗಳು ಜಾನಪದದಲ್ಲಿ ರೂಢಿಯಲ್ಲಿದ್ದ ಎಲ್ಲ ಮಧುರ ಗೇಯ ಪದ್ಧತಿಗಳಿಗೂ ಕರ್ನಾಟಕ ಸಂಗೀತ ಪರಂಪರೆಯ ಒಂದು ರೂಪ ಹರಳುಗಟ್ಟುವಂತೆ ಮಾಡಿದವು.

ಪುರಂದರದಾಸರ ಕೀರ್ತನೆಗಳು ಬದುಕಿನ ಹಲವಾರು ಅನುಭವಗಳನ್ನು ಒಳಗೊಂಡಿವೆ. ಅಲ್ಲಿ ಆಡಂಬರವನ್ನು ಕುರಿತ ತಿರಸ್ಕಾರವಿದೆ. ಭಕ್ತನ ಆರ್ದ್ರತೆ ಇದೆ. ರೊಕ್ಕದ ಹಾಗೂ ದಮ್ಮಡಿಯ ವೈಭವಾಟೋಪಗಳಿವೆ. ಪ್ರಭುತ್ವದ ಲೊಳಲೊಟ್ಟೆ ಇದೆ. ಮಡದಿಯ ಕಿರುಕುಳದ ಚಿತ್ರವಿದೆ. ಹೆಣ್ಣಿಗಾಗಿ, ಹೊನ್ನಿಗಾಗಿ ಮತ್ತು ಮಣ್ಣಿಗಾಗಿ ಆಸೆಪಟ್ಟು ಹಾಳಾದವರ ಸಂಗತಿಗಳಿವೆ. ಮಡಿ, ಮಡಿ ಎನ್ನುವವರನ್ನೂ ಹಾಗೂ ಹೊಲೆತವನನ್ನು ಕುರಿತು ಹೊಸ ಧೋರಣೆಯಿದೆ. ದುರ್ಜನರನ್ನು ಕುರಿತ ವಿಡಂಬನವಿದೆ ಜನರ ವಿಚಿತ್ರ ರೀತಿಯನ್ನು ಕಂಡು ನಗೆಯು ಬರುತಿದೆ ಎಂದು ನಗುನಗುತ್ತಲೇ ಚುಚ್ಚುವ ರೀತಿಯಾಗಲಿ, ಈಸಬೇಕು ಇದ್ದು ಜೈಸಬೇಕು ಎಂದು ಬದುಕಿಗೊಂದು ಭರವಸೆ ನೀಡುವ ಸಂದರ್ಭವಾಗಲಿ, ಮಾನವ ಜನ್ಮ ದೊಡ್ಡದು ಹುಚ್ಚಪ್ಪಗಳಿರಾ ಎಂದು ಸಮಾಜದ ಜನರನ್ನು ಬದುಕಿನ ಆದರ್ಶಗಳ ಕಡೆಗೆ ಸೆಳೆದೊಯ್ಯುವ ಆಶಯಗಳಾಗಲಿ ಪಲ್ಲವಿಯಲ್ಲಿ ಅಂಕುರಿಸಿ, ಅನು ಪಲ್ಲವಿಯಲ್ಲಿ ಹಬ್ಬಿಕೊಂಡು ಕೀರ್ತನೆಯಲ್ಲಿ ಒಂದು ಅನುಭವ ದ್ರವ್ಯವಾಗಿ ವ್ಯಾಪಿಸಿಕೊಂಡು ಬಿಡುತ್ತದೆ.

ಕರ್ಣಾಟಕ ಸಂಗೀತ ಪಿತಾಮಹರೆಂಬ ಪ್ರಶಸ್ತಿಗೆ ಪಾತ್ರರಾದ ಪುರಂದರದಾಸರ ಕೃತಿಗಳು ಸಂಗೀತದ ದೃಷ್ಟಿಯಿಂದಲೂ ಪ್ರಶಂಸನಾರ್ಹವಾದುವೆಂದು ಅನೇಕ ಸಂಗೀತಜ್ಞರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುವರು . ಪುರಂದರದಾಸರಿಂದ ಪ್ರೇರಿತರಾದ ತ್ಯಾಗರಾಜರು "ಪ್ರಹ್ಲಾದಭಕ್ತವಿಜಯವೆಂಬ ಸಂಗೀತ ರೂಪದಲ್ಲಿ ದಾಸರನ್ನು ಕುರಿತು "ದುರಿತವ್ರಾತ ಮುಲೆಲ್ಲನು ಬದಿಮಾರ್ಚೆದಿ ಹರಿಗುಣಮುಲ

ಬಾಡುಚುನೆಪುಡುನ್ ಬರವಶುಡೈ ವೆಲಯು ಪುರಂದರದಾಸುನಿ ಮಹಿಮುಲನು ದಲಚೆದ ಮದಿಲೋನ್" ಎಂದು ಮುಕ್ತ ಕಂಠದಿಂದ ಸ್ತುತಿಸಿದ್ದಾರೆ. ಹರಿಸ್ತುತಿಯನ್ನು ಸರ್ವದಾ ಹಾಡುತ್ತಾ ಪರವಶರಾಗುತ್ತಿದ್ದ ಪುರಂದರದಾಸರನ್ನು ತಮ್ಮ ಹೃದಯದಲ್ಲಿ ತ್ಯಾಗರಾಜರು ಸ್ಮರಿಸಿದ್ದು, ಮಾತ್ರವಲ್ಲದೆ. ಅವರು ಸಾಗಿಬಂದಿ ದಾರಿಯಲ್ಲಿಯೇ ಸಾಕಷ್ಟು ದೂರ ನಡೆದು ಬಂದಿದ್ದಾರೆನ್ನುವುದನ್ನು ಅವರಿಬ್ಬರ ರಚನೆಗಳಲ್ಲಿ ಕಂಡುಬರುವ ಸಾದೃಶ್ಯಗಳ ಮೂಲಕ ಕೆ.ವಾಸುದೇವಚಾರ್ಯ ಮೊದಲಾದ ಸಂಗೀತ ತಜ್ಞರು ಈಗಾಗಲೇ ತೋರಿಸಿಕೊಟ್ಟಿರುತ್ತಾರೆ.

'ಸಂಗೀತ ಸಾರಾಮೃತ'ದ ಕರ್ತೃವಾದ ತುಳಜಾಜಿರಾಜನು, ಅವರ ಸುಳಾದಿಯ ಪ್ರಯೋಗವನ್ನು ಗಮನಿಸಿದರೆ, "ಸಂಗೀತ ಸಂಪ್ರದಾಯಪ್ರದರ್ಶಿನೀ" ಎಂಬ ಗ್ರಂಥವನ್ನು ರಚಿಸಿರುವ ಸುಬ್ಬರಾಮ ದೀಕ್ಷಿತರು ಪುರಂದರದಾಸರ ರಚನೆಗಳನ್ನು ತಮ್ಮ ಲಕ್ಷಣ ಗ್ರಂಥದಲ್ಲಿ ಲಕ್ಷ್ಯಗಳನ್ನಾಗಿ ಉದಾಹರಿಸಿರುವರು. ಈ ಮೂಲಕ ಪುರಂದರದಾಸರ ರಚನೆಗಳ ಸಂಗೀತದ ಮೌಲ್ಯವೆಷ್ಟು ಎನ್ನುವುದು ತಿಳಿದುಬರುತ್ತದೆ. ಶ್ರೀಪಾದರಾಜರು ಮತ್ತು ವ್ಯಾಸರಾಯರು ಕನ್ನಡದಲ್ಲಿ ಪ್ರಯೋಗಕ್ಕೆ ತಂದ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮವೇ ಮೊದಲಾದ ಪ್ರಕಾರಗಳನ್ನು ಪುರಂದರದಾಸರು ಅತ್ಯಂತ ಯಶಸ್ವಿಯಾಗಿ ಬಳಕೆಗೆ ತಂದರು ಎನ್ನಬಹುದಾಗಿದೆ.

ಬಂಧದ ದೃಷ್ಟಿಯಿಂದ ನೋಡಿದಲ್ಲಿ, ಕೀರ್ತನೆಗಳಲ್ಲಿ ಕಂಡುಬರುವ ಸರಳತೆಯೇ ಅವುಗಳ ಅಧಿಕ ಸಂಖ್ಯಾ ಪ್ರಮಾಣಕ್ಕೆ ಕಾರಣವೆಂದು ತಿಳಿದುಬರುತ್ತದೆ. ಕೀರ್ತನೆಯಲ್ಲಿ ಪಲ್ಲವಿಯ ಪಾತ್ರ ಬಹಳ ದೊಡ್ಡದು. ಕೀರ್ತನೆಯ ವಸ್ತುವಿನ ಸಮಗ್ರ ಸಾರ ಸಂಗ್ರಹವೇ ಪಲ್ಲವಿಯೆನ್ನಬಹುದು. ಈ ಪಲ್ಲವಿಗೆ ಪೋಷಕವಾಗಿ ಕಂಡುಬರುವ ಅನುಪಲ್ಲವಿ, ಹೆಸರೇ ಸೂಚಿಸುವಂತೆ ಉಪಪ್ರಧಾನವಾದುದು ಮತ್ತು ಐಚ್ಛಿಕವಾದುದು. ಆ ಬಳಿಕ ಬರುವ ಪ್ರತಿಯೊಂದು ನುಡಿಯಲ್ಲೂ ಪಲ್ಲವಿಯ ಅಭಿಪ್ರಾಯವನ್ನು ವಿಸ್ತರಿಸುವಂತೆ ತೋರಿಬರುತ್ತದೆ. ಒಟ್ಟು ಕೀರ್ತನೆಯ ಐಕ್ಯೈಕಭಾವವನ್ನು ಸಮರ್ಥಿಸುತ್ತದೆ.

ಸುಳಾದಿಗಳು ಹರಿದಾಸ ಪಂಥವು ಕರ್ನಾಟಕ ಸಂಗೀತದ ಗೇಯ ರಚನೆಗೆ ಹಾಗೂ ತಾಳಕ್ರಮಕ್ಕೆ ನೀಡಿದ ಬಹು ದೊಡ್ಡ ಕಾಣಿಕೆ. "ಸುಳಾದಿ"ಯೆಂಬ ಶಬ್ದ ನಿಷ್ಪತ್ತಿಯ ಬಗ್ಗೆ ಹಲವಾರು ಚರ್ಚೆಗಳು ವಿದ್ವಾಂಸರಲ್ಲಿ ನಡೆದಿವೆ. ಪುರಾತನ ಗೇಯ ಪ್ರಬಂಧಗಳಾದ ಸೂಡ ಪ್ರಬಂಧಗಳೇ ಸುಳಾದಿಗಳಗಿ 'ಡ'ಕಾರ, 'ಳ'ಕಾರವಾಗಿ ಪರಿವರ್ತನೆಯಾಗಿದೆ ಎಂಬುದು ಶಾಸ್ತ್ರಜ್ಞರ ಅಭಿಮತವಾಗಿದೆ. ಸುಳು-ಹಾದಿ>ಸುಳಾದಿಯೆಂಬುದು ಮೋಕ್ಷಾರ್ಥಿಗಳಿಗೆ ಸುಲಭ ಮಾರ್ಗವೆಂದೂ ಅಧ್ಯಾತ್ಮ ತತ್ವಜ್ಞರು ಹೇಳಿಕೊಂಡಿರುವುದುಂಟು. ಸೂಡವೆಂಬುದು "ಸೂಳ"ವಾಗಿರುವ ಅಭಿಪ್ರಾಯವೇ ಹೆಚ್ಚು ಮನ್ನಣೆಯನ್ನು ಪಡೆದಿದೆ. ಈ ಸೂಡ ಪ್ರಬಂಧಗಳು ಕ್ರಿ.ಶ. ೧೧೮೯ರಿಂದ 'ಅಗ್ಗಳ'ನೇ

ಮೊದಲಾದ ಕನ್ನಡ ಕವಿಗಳಿಂದ ಹಿಡಿದು ಪಾಲ್ಕುರಿಕೆ ಸೋಮನಾಥ, ಪದ್ಮಣಾಂಕ, ಗೋವಿಂದ ವೈದ್ಯ (೧೬೪೮)ರವರೆಗೆ ತಮ್ಮ ಕೃತಿಗಳಲ್ಲಿ ಸೂಡ ತಾಳಗಳನ್ನು ಕುರಿತು ವಿವರ ನೀಡಿರುವುದನ್ನು ಡಾ.ರಾ.ಸತ್ಯನಾರಾಯಣರವರು ತಮ್ಮ ಸಂಶೋಧನೆಗಳಲ್ಲಿ ತಿಳಿಸಿದ್ದಾರೆ.[೫೦] ಸೂಡವೆಂದರೆ ಗೀತ ವಿಶೇಷಗಳೆಂದು ಕಲ್ಲಿನಾಥನು ಹೇಳಿರುವನು. ಸೂಳ್ ಎಂದರೆ ಸರದಿಯಲ್ಲಿ; ಕ್ರಮವಾಗಿ ಏಳು ಅಥವಾ ಐದು ತಾಳಗಳಲ್ಲಿ ಒಂದೇ ಗೀತದ ಏಳು ಖಂಡಗಳನ್ನು ಹಾಡುವುದು ಧೃವ, ಮಠ್ಯ,ರೂಪಕ, ಝಂಪೆ, ತ್ರಿಪುಟ, ಆಟ, ಏಕ ಎಂಬ ಸಪ್ತತಾಳಗಳೂ 'ಸುಡಾಡಿಸಂಜ್ಞಕ'ಗಳೆಂದು ವೆಂಕಟ ಮುಖಿ ತನ್ನ ಚತುರ್ದಂಡಿ ಪ್ರಕಾಶಿಕೆಯಲ್ಲಿ ಹೇಳಿರುವನು. ಶ್ರೀಪಾದರಾಯರು ಸುಳಾದಿಗಳನ್ನು ರಚಿಸಿದವರಲ್ಲಿ ಮೊದಲಿಗರು. ವ್ಯಾಸರಾಯರು, ಪುರಂದರದಾಸರು, ವಿಜಯದಾಸರುಗಳೇ ಮೊದಲಾದ ಹರಿದಾಸ ಶ್ರೇಷ್ಠರುಗಳು ನೂರಾರು ಸುಳಾದಿಗಳನ್ನು ರಚಿಸಿದ್ದಾರೆ. ಪುರಂದರದಾಸರೇ ೬೪ ಸಾವಿರ ಸುಳಾದಿಗಳನ್ನು ರಚಿಸಿರುವರೆಂದು ತಿಳಿದುಬರುತ್ತದೆ.

ಸುಳಾದಿಗಳು ಸಪ್ತತಾಳಗಳ ಆಧಾರದ ಮೇಲೆ ರಚಿತವಾಗಿರುತ್ತವೆ. ಇವುಗಳ ಶಿಲ್ಪವಾದರೋ ಕೀರ್ತನೆಗಳಿಗಿಂತ ತೀರ ಭಿನ್ನವಾದುದು. ಒಂದೊಂದು ನುಡಿಯೂ ವಿಷಯ ಪ್ರತಿಪಾದನೆಗೆ ತಕ್ಕಂತೆ ಅಳವಟ್ಟಿರುತ್ತದೆ. ಕೀರ್ತನೆಗಳಲ್ಲಿ ಕಡೆಯ ಚರಣಗಳಲ್ಲಿ ಮಾತ್ರ ಅಂಕಿತ ಕಂಡುಬಂದರೆ, ಸುಳಾದಿಯ ಒಂದೊಂದು ನುಡಿಯಲ್ಲಿಯೂ ಅಂಕಿತವಿರುತ್ತದೆ. ಸುಳಾದಿಗಳ ರಚನೆ ಯಾವುದಾದರೊಂದು ಗಹನವಾದ ತತ್ವವಿಚಾರವನ್ನು ವಿಸ್ತಾರವಾಗಿ ಪ್ರತಿಪಾದಿಸಲು ಸೂಕ್ತವಾದ ಮಾಧ್ಯಮದಂತೆ ತೋರಿ ಬರುತ್ತದೆ. ಕಡೆಯಲ್ಲಿ ಬರುವ 'ಜತೆ'ಯಲ್ಲಿ ಎಲ್ಲಾ ನುಡಿಗಳ ಸಾರವನ್ನು ಅಡಗಿಸಿಟ್ಟು ಹೇಳಿರುವುದನ್ನು ಕಾಣಬಹುದು. ಕೀರ್ತನೆಯಲ್ಲಿ ಪಲ್ಲವಿ ಹಾಗೂ ಅನುಪಲ್ಲವಿಯ ಹಾಗೆ ಸುಳಾದಿಯಲ್ಲಿ 'ಜತೆ' ಇರುತ್ತದೆ.

ಉಗಾಭೋಗಗಳು ಹರಿದಾಸರು ರಚನೆಗಳಲ್ಲಿ ಅತ್ಯಂತ ಸಣ್ಣವಾದವುಗಳು ಉಗಾಭೋಗದ ಲಕ್ಷಣವನ್ನು ಕುರಿತು ಅನೇಕ ಚರ್ಚೆಗಳುಂಟು. ಪ್ರಬಂಧ ಖಂಡಗಳಾದ ಉದ್ಗ್ರಾಹ, ಆಭೋಗಗಳು ಸೇರಿ ಉಗಾಭೋಗವಾಗಿದೆಯೆಂಬುದು ಶಾಸ್ತ್ರಜ್ಞರ ಅಭಿಮತವಾಗಿದೆ. ಉಘೇ ಎಂಬುದರಿಂದಲೂ ಆನಂದದಾಯಕವಾದದ್ದರಿಂದ ಉಗಾಭೋಗವೆಂದು ಕೆಲವರು ಅಭಿಪ್ರಾಯಪಟ್ಟಿರುವರು. ಉದ್ಗ್ರಾಹ ಆಭೋಗಗಳ ಅಪಭ್ರಂಶವೇ ಉಗಾಭೋಗವೆನ್ನುವುದು ಹೆಚ್ಚಿನವರ ಅಭಿಮತವಾಗಿದೆ. ಉಗಾಭೋಗಗಳನ್ನು ಕೆಲವರು ಶರಣರ ವಚನಗಳಿಗೂ, ಉತ್ತರಾದಿ ಸಂಗೀತದ ಖ್ಯಾತ್, ಠಾಯಿಗಳಿಗೂ, ಕಾವ್ಯ ಗಾಯನವಾದ ಗಮಕಕ್ಕೂ ಹೋಲಿಸಿರುವರು. ಉಗಾಭೋಗಗಳಿಗೆ ಸಾಲುಗಳ ಮಿತಿ ಇಲ್ಲದಿದ್ದು ೨ ರಿಂದ ೨೦ ಸಾಲುಗಳವರೆಗೆ ಇದರ ವ್ಯಾಪ್ತಿಯುಂಟು. ಉಗಾಭೋಗಗಳು ಸುಳಾದಿಯ ಬಿಡಿ ನುಡಿಗಳನ್ನು ಹೋಲುವಂತಿರುತ್ತವೆ. ಹರಿದಾಸರ ಅನುಭವ ಗಾಢವೆನ್ನಿಸಿ, ಅದನ್ನು ಸಾಧ್ಯವಾದಷ್ಟು

ಸಂಕ್ಷಿಪ್ತವಾಗಿ ವ್ಯಕ್ತಪಡಿಸಲು ಈ ಪ್ರಕಾರ ಬಹಳ ಚೆನ್ನಾಗಿ ಒಪ್ಪುವಂತಿದೆ. ಇಲ್ಲಿ ವಿಷಯ ವಿಸ್ತಾರಕ್ಕಿಂತಲೂ, ವಿಷಯ ಸಂಗ್ರಹವೇ ಹೆಚ್ಚು. ಉಗಾಭೋಗದಲ್ಲಿ ಲಯವು ಆಂತರಿಕವಾಗಿ ಗುರುತಿಸಲ್ಪಟ್ಟರೂ ಈಚಿನ ದಿನಗಳಲ್ಲಿ ಇದನ್ನು ದೇವರ ನಾಮದ ಗಾಯನಕ್ಕೆ ಮುಂಚೆ ಆ ಕೀರ್ತನೆಯ ವಸ್ತುವಿಗೆ ಪೀಠಿಕೆಯಂತೆ ಹಾಡಲ್ಪಡುವುಂಟು.

ಹರಿದಾಸರ ರಚನೆಗಳಲ್ಲಿ ವಿರಳವಾಗಿ ಪ್ರಚಲಿತವಿರುವ "ವೃತ್ತನಾಮವನ್ನು ಕುರಿತು ನಿರ್ದಿಷ್ಟವಾದ ಲಕ್ಷಣಗಳನ್ನು ಸಂಗೀತ ಕ್ಷೇತ್ರದಲ್ಲಿ ನಿರ್ದೇಶಿಸಲು ಸಾಧ್ಯವಾಗಿಲ್ಲ. ಪುರಂದರದಾಸರು ೩೬,೦೦೦ ವೃತ್ತನಾಮಗಳನ್ನೂ, ವ್ಯಾಸರಾಯರು, ಶ್ರೀಪಾದರಾಯರು ಹಲವು ವೃತ್ತನಾಮಗಳನ್ನು ರಚಿಸಿದ್ದಾರೆನ್ನಲಾಗಿದೆ. ಇದರಲ್ಲಿ ಸಂಸ್ಕೃತವರ್ಣವೃತ್ತಗಳಾದ ವಿಕ್ರೀಡಿತ, ಶಾರ್ದೂಲ, ಸ್ರಗ್ಧರಾ, ಶಿಖರಿಣಿ, ಮಾಲಾ, ಹರಿಣಿ ಮುಂತಾದ ವೃತ್ತಗಳೊಂದಿಗೆ ಪಲ್ಲವಿ–ಚರಣಗಳೂ ಕಂಡುಬರುವುದು ಇದರ ಲಕ್ಷಣಗಳೆಂದು ಹೇಳಬಹುದಾಗಿದೆ. ಬೇಲೂರು ಕೇಶವದಾಸರು ಒಂದು ಪಲ್ಲವಿ–ಒಂದು ವೃತ್ತ–ಚರಣಗಳು: ಇದು ಅದರ ಸ್ವರೂಪವೆನ್ನುವರು. ಹುಲುಗೂರು ಕೃಷ್ಣಚಾರ್ಯರು ಇದಕ್ಕೆ ವೃತ್ತ ಪ್ರಬಂಧಗಳೆಂಬ ಮತ್ತೊಂದು ಹೆಸರಿದೆಯೆಂದೂ, ಇವು ಅಷ್ಟಪದಿಗಳನ್ನು ಹೋಲುತ್ತವೆಯೆಂದೂ ಪಲ್ಲವಿ–ಚರಣಗಳನ್ನು ತಾಳಬದ್ಧವಾಗಿಯೂ ವೃತ್ತವನ್ನು ಅದರ ಛಂದಸ್ಸಿನ ಮಿತಿಯೊಳಗೆ ಆಲಾಪನಾ ಅನಿಬದ್ದವಾದ ರೀತಿಯಲ್ಲಿ ಹಾಡಬಹುದೆಂದೂ ಇದೊಂದು ರೀತಿಯ ಮಿಶ್ರಕ್ರಮವೆಂದೂ ತಮ್ಮ ಕರ್ನಾಟಕ ಸಂಗೀತವೂ, ದಾಸಕೂಟವೂ" ಎಂಬ ಗ್ರಂಥದಲ್ಲಿ ವಿವರಿಸುವರು. ಕೆಲ ಸುಪ್ರಸಿದ್ಧವಾಗಿರುವ ವೃತ್ತನಾಮಗಳನ್ನು ಕಂಡರೆ ಇವುಗಳನ್ನು ಹರಿದಾಸರು ಸಂವಾದರೂಪವಾದ ಸನ್ನಿವೇಶಕ್ಕೆ ಅಳವಡಿಸಿ, ಈ ಮೂಲಕ ತಮ್ಮ ನಿರೂಪಣೆಯಲ್ಲಿ ನಾಟಕೀಯತೆಯನ್ನು ಸಾಧಿಸಲು ಪ್ರಯತ್ನಿಸಿರುವಂತಿದೆ ಎನ್ನುವುದು ವರದರಾಜರಾವ್.[೫೧] ಅವರ ಅಭಿಪ್ರಾಯವಾಗಿದೆ.

ದಾಸಶ್ರೇಷ್ಠರ ರಚನೆಗಳು ಅಸಂಖ್ಯಾತ ಕೀರ್ತನೆ, ಕೃತಿ, ಸುಳಾದಿ, ಉಗಾಬೋಗ ೪ಲಕ್ಷ ೭೫ಸಾವಿರವೆಂದು 'ವಾಸುದೇವನ ನಾವಾವಳಿಯ ಎಂಬ ಹಾಡಿನಲ್ಲಿ ಹೇಳಿದ್ದರೂ ಉಪಲಬ್ಧವಾಗಿರುವುದು ಸುಮಾರು ೧೦೦೦ದಷ್ಟು, ಇವರ ರಚನೆಗಳಲ್ಲಿ ಸಾಹಿತ್ಯ ಮತ್ತು ಸಂಗೀತಗಳ ಸಾಮರಸ್ಯ, ಗಾಯನ, ನರ್ತನಗಳ, ಮೋಹಕ ಗುಣಗಳು, ಗಹನತತ್ವಗಳು, ವೈಚಾರಿಕತೆ, ಮಾರ್ಗ ನಿರ್ಮಾಣ, ಮಾರ್ಗದರ್ಶನವಿರುವುದಲ್ಲದೆ ಇವು ಜನಸಾಮಾನ್ಯರ ಭಾಷೆಯಲ್ಲಿವೆ.

ಪುರಂದರದಾಸರು ಸಂಗೀತದ ಅಭ್ಯಾಸಕ್ಕೆ ಒಂದು ಹೊಸ ಹಾದಿಯನ್ನು ಹಾಕಿಕೊಟ್ಟು ಕರ್ನಾಟಕ ಸಂಗೀತವನ್ನು ಕಲಿಯಲು ವೈಜ್ಞಾನಿಕವೂ, ವ್ಯವಸ್ಥಿತವೂ ಆದ ಪದ್ಧತಿಯನ್ನು ರೂಪಿಸಿದರು. ಸರಳೆ, ಜಂಟಿವರಸೆ, ಅಲಂಕಾರಗಳನ್ನು ಮಾಯಾಮಾಳವಗೌಳದಲ್ಲೂ, ಸುಳಾದಿ ಸಪ್ತತಾಳಗಳನ್ನು

ಅಳವಡಿಸಿ ಮಲಹರಿ ರಾಗದಲ್ಲಿ ಪಿಳ್ಳಾರಿ ಗೀತೆಗಳನ್ನು ರಚಿಸಿದರು. ಅನೇಕ ಜನಪದ ಸಂಗೀತದ ಮಟ್ಟುಗಳಿಗೆ ಶಾಸ್ತ್ರೀಯವಾದ ರಾಗಗಳ ಸ್ವರೂಪ ಕೊಟ್ಟರು.

ಸಂಗೀತಾಭ್ಯಾಸ ಕ್ರಮವನ್ನು ಪುರಂದರದಾಸರು ಬದಲಾಯಿಸಿ ಮಾಯಾಮಾಳವಗೌಳ ಮೇಳದಿಂದ ಪ್ರಾರಂಭಿಸಿದರು. ಹಿಂದಿನ ಪದ್ಧತಿಯು ಷಡ್ಜ, ಮಧ್ಯಮ, ಪಂಚಮಗಳಿಗೆ ನಾಲ್ಕು ಶೃತಿಗಳ ಅಂತರವಿರುವ ಖರಹರಪ್ರಿಯ ರಾಗದಿಂದ ಅಭ್ಯಾಸ ಮಾಡುವುದಾಗಿತ್ತು. ಪುರಂದರದಾಸರು ಚತಶೃತಿಗೆ ಬದಲಾಗಿ ದ್ವಿಶೃತಿಗಳ ಅಂತರವಿರುವ ಸೌಲಭ್ಯವಿರುವ ಮಾಯಾಮಾಳವಗೌಳದಿಂದ ಪಾಠಕ್ರಮವನ್ನು ಆರಂಭಿಸಿದರು. ಇದು ಎಲ್ಲ ಬಗೆಯ ತೊಡರುಗಳನ್ನು ನಿವಾರಿಸಿ ಜ್ಞಾನ ಉಂಟುಮಾಡುವ ಸ್ವರ, ತಾಳ ಪ್ರಸ್ತಾರಗಳನ್ನು ಒಳಗೊಂಡ ಕ್ರಮವಾಗಿದ್ದು, ಕರ್ನಾಟಕ ಸಂಗೀತದಲ್ಲಿ ನೈಪುಣ್ಯವನ್ನು ಪಡೆಯಲು ಕಾರಣವಾಗಿರುವ ಸ್ವರಾವಳೀಗಳೂ, ಜಂಟಿಸ್ವರಗಳು, ಅಲಂಕಾರಗಳು, ಗೀತೆ ಮೊದಲಾದವುಗಳೇ ಈ ಪಾಠ ಪದ್ಧತಿಯ ಕ್ರಮವಾಗಿವೆ.

ಮಾಯಾಮಾಳವಗೌಳವನ್ನು ಶುದ್ಧಮೇಳವೆಂದು ಗ್ರಹಿಸಿದುದೇ ಕರ್ನಾಟಕ ಸಂಗೀತದ ಇತಿಹಾಸದಲ್ಲಿ ದೊಡ್ಡದೊಂದು ಕ್ರಾಂತಿಯಾಗಿ ಪರಿಣಮಿಸಿತು ಎನ್ನಬಹುದಾಗಿದೆ. ಸಮಾನಾಂತರ ಶೃತಿಯ ಈ ರಾಗದ ಹಿರಿಮೆಯನ್ನು ಅರ್ಥಮಾಡಿಕೊಂಡವರಲ್ಲಿ ಪುರಂದರದಾಸರು ಮೊದಲಿಗರು ಅಭ್ಯಾಸಿಗಳ ಅನುಕೂಲಕ್ಕೆಂದು ಇವರು ಮಾಯಮಾಳವಗೌಳ ಮೇಳದಿಂದ ಜನ್ಮವಾದ ಮಲಹರಿಯಲ್ಲಿ ಗೀತೆಗಳನ್ನು ರಚಿಸಿದ್ದಾರೆ. ಈ ರಾಗದಲ್ಲಿ ಪುರಂದರದಾಸರು ರಚಿಸಿದ ಲಕ್ಷ್ಯಗೀತೆಗಳಲ್ಲಿ ಬೇರೆ ಬೇರೆ ತಾಳಗಳಲ್ಲಿರುವ ಶ್ರೀಗಣನಾಥ ಸಿಂಧೂರ ವರ್ಣ, ಕುಂದಗೌರಗೌರೀವರ, ಲಂಭೋಧರ, ಕೆರೆಯನೀರನ್ನು ಕೆರೆಗೆ ಚೆಲ್ಲಿ ಇವು ಇಂದಿಗೂ ಉಳಿದು ಬಂದಿವೆಯಲ್ಲದೆ ಎಳೆಯರಿಗೆ ಸಂಗೀತಾಭ್ಯಾಸವನ್ನು ಮಾಡಿಸುವಲ್ಲಿ ಇವುಗಳಿಂದ ಪ್ರಾರಂಭ ಮಾಡುವ ರೂಢಿ ಇದೆ. ಪುರಂದರ ಕೊಡುಗೆ ದಕ್ಷಿಣಾದಿ ಸಂಗೀತದ ಭದ್ರ ಬುನಾದಿಯಾಯಿತು. ಇವರು ಕರ್ನಾಟಕ ಸಂಗೀತ ಪಿತಾಮಹರಾದರು.

ಪುರಂದರದಾಸರ ಹೆಚ್ಚು ಕೀರ್ತನೆಗಳು ಮಧ್ಯಮ ಕಾಲದಲ್ಲಿವೆ. ಛಾಪು, ಝುಂಪೆ ತಾಳಗಳೇ ಅವರಿಗೆ ಪ್ರಿಯವಾಗಿದ್ದ ತಾಳಗಳೆಂದು ಕಂಡುಬರುತ್ತದೆ. ಹೆಚ್ಚಾಗಿ ಆದಿತಾಳವನ್ನು ಬಳಸಿದ್ದಾರೆ. ತ್ಯಾಗರಾಜರೂ ಸಹ ಇದರಲ್ಲಿ ಪುರಂದರ ದಾಸರನ್ನು ಅನುಸರಿಸಿರುವರು. ದಾಸರ ನಾಯಕ–ನಾಯಕೀ ಭಾವದ ರಚನೆಗಳು ಕ್ಷೇತ್ರಜ್ಞನಿಗೆ ಮಾದರಿಯಾಗಿದ್ದಂತೆ ಎಲ್ಲ ವಾಗ್ಗೇಯಕಾರರಿಗೂ ಮಾದರಿಯಾಗಿವೆ.

ಸುಳಾದಿಗಳು ಪುರಂದರದಾಸರ ಸಂಗೀತವಿದ್ಯಾ ಪ್ರೌಢಿಮೆಯನ್ನು ಪ್ರಕಟಿಸುವ ಕವಿತೆಗಳಾಗಿವೆ. ಇವುಗಳ ನಡೆಯು ಕೀರ್ತನೆಗಳ ನಡೆಯಂತೆ ಇದ್ದು, ಪಲ್ಲವಿ, ಅನುಪಲ್ಲವಿಗಳು ಇರುವುದಿಲ್ಲ.

ಇದರಲ್ಲಿ ೭–೮ ಭಾಗಗಳಿದ್ದು ಪ್ರತ್ಯೇಕ ಭಾಗಕ್ಕೆ ಪ್ರತ್ಯೇಕ ತಾಳಗಳಿವೆ. ಸುಳಾದಿಯು ರಾಗದ ಸಂಚಾರವನ್ನು ತೋರಿಸುವ ಪ್ರೌಢವಾದ ಸಾಹಿತ್ಯವಾಗಿದೆ. ಕೆಲವು ಸುಳಾದಿಗಳ ಒಂದೊಂದು ತಾಳದ ಚರಣವನ್ನು ಒಂದೊಂದು ರಾಗದಲ್ಲೂ, ಮಿಕ್ಕವನ್ನು ಬೇರೆ ಬೇರೆ ತಾಳಗಳಲ್ಲಿ ಒಂದೇ ರಾಗದಲ್ಲಿ ಹಾಡುವ ರೂಢಿಯಿದೆ.

ಉಗಾಭೋಗ ಪುರಂದರದಾಸರು ರಚಿಸಿರುವ ಮತ್ತೊಂದು ಬಗೆಯ ಸಂಗೀತ ಸಾಹಿತ್ಯವಾಗಿದೆ. ಗೀತೆಯಂತೆ ಇದರ ಸಂಗೀತವೂ ಸರಳ, ಹಾಡಿನಲ್ಲಿ ವೈವಿದ್ಯವಿಲ್ಲ. ಯಾವ ರಾಗದಲ್ಲಿ ಬೇಕಾದರೂ ಸರ್ವ ಲಘು ನಡೆಯಲ್ಲಿ ಹಾಡಬಹುದು. ಇದಲ್ಲದೆ ಭಾಂಡೀರ ಭಾಷೆಯಲ್ಲಿಯೂ ದಾಸರು ಕೃತಿ ರಚನೆ ಮಾಡಿದ್ದರು. ಪುರಂದರದಾಸರ ಅಂಕಿತವಿರುವ ದೇಶಾಕ್ಷಿ ರಾಗದಲ್ಲಿ ಅಪರೂಪವಾಗಿ ಹಾಡಲಾಗುತ್ತಿರುವ 'ಭಯ ಸಮಯದೇವ, ಎನಿದೇವ, ಶ್ರೀವೆಂಕಟಾಚಲದೇವನಲರೆ ಶ್ರೀಪುರಂದರ ವಿಠಲಯರಾಯ ಕೇರಳಮಣೀ ದಣಿಸುವರೆ' ಎಂಬುದು ಇದರ ಸಾಹಿತ್ಯ ಇದರಲ್ಲಿ ದಣಿಸುವರೆ ಎಂಬ ದೈನ್ಯಭಾವದ ಪ್ರಶ್ನೆಯು ಕನ್ನಡದಲ್ಲಿದೆ. ಪಿಳ್ಳಾರಿ ಗೀತೆಗಳಲ್ಲದೆ ದಾಸರು ಬೇರೆ ಬೇರೆ ಗೀತೆಗಳನ್ನು ರಚಿಸಿದ್ದಾರೆ. ಅವರು ರಚಿಸಿರುವುದೆಂದು ಹೇಳಲಾದ ಲಕ್ಷಣ ಗೀತೆಗಳು, ತಾನವರ್ಣಗಳೂ, ಮತ್ತು ತಿಲ್ಲಾನಗಳೂ ಯಾವುವೂ ದೊರೆತಿಲ್ಲ. ಪುರಂದರ ದಾಸರ ೧೫೦ ವರ್ಷಗಳ ನಂತರ ಇದ್ದ ಪ್ರಸನ್ನವೆಂಕಟ ದಾಸರು 'ತಂದೆ ಪುರಂದರ ದಾಸರ ಸ್ಮರಿಸುವ' ಎಂಬ ಹಾಡಿನಲ್ಲಿ ಹೀಗೆ ಹೇಳಿದ್ದಾರೆ. "ಗೀತ, ಠಾಯಿ, ಸುಳಾದಿ, ಉಗಾಭೋಗ, ಪದಪದ್ಯ, ಪದವ್ರಾತ, ಪ್ರಬಂಧ ರಚಿಸಿ ವಿಠಲನ: ಪ್ರೀತಿ ಪಡಿಸಿ ಪ್ರತ್ಯಕ್ಷ ಕಂಡು ನಲಿದ ವೈಷ್ಣವಾಗ್ರನಾಥ ಪ್ರಸನ್ನ ವೆಂಕಟ ಕೃಷ್ಣನ" ಎಂದು ಹೇಳಿರುವರು. ದಾಸರು ರಚಿಸಿರುವ ಠಾಯಿಗಳು, ಲಕ್ಷಣ ಗೀತೆಗಳಾವುವು ಉಪಲಬ್ಧವಾಗಿಲ್ಲ.

ಪುರಂದರದಾಸರ ಇತರ ಕೀರ್ತನೆಗಳಲ್ಲಿ ಪ್ರಾಸಂಗಿಕವಾಗಿ ಹಲವಾರು ರಾಗಗಳ ಹೆಸರುಗಳನ್ನು ಹೇಳಿರುವರಲ್ಲದೆ 'ಬತ್ತೀಸ ರಾಗಗಳು' ಎಂಬ ಮಾತನ್ನು ಬಳಸಿರುವರು. ಆದ್ದರಿಂದ ಪುರಂದರದಾಸರು ಆಗ ಪ್ರಚಲಿತವಿರಬಹುದಾದ ಮೂವತ್ತೆರಡು ರಾಗಗಳಲ್ಲಿ ಅಳವಡಿಸಿರಬಹುದೆಂದು ತೋರುತ್ತದೆ.

ಸಂಗೀತಕ್ಕೆ ಪುರಂದರ ದಾಸರ ಕೊಡುಗೆಯನ್ನು ಮೊಟ್ಟಮೊದಲು ತೋರಿಸಿ ಕೊಟ್ಟವರು ಮದ್ರಾಸಿನವರು. ೧೯೪೨ರಲ್ಲಿ ಒಬ್ಬ ವಿದ್ವಾಂಸರು ಮದ್ರಾಸ್ ಮ್ಯೂಸಿಕಲ್ ಅಕಾಡೆಮಿಯ ಜರ್ನಲ್‌ನಲ್ಲಿ ಲೇಖನವನ್ನು ಪ್ರಕಟಿಸಿದರು. ಅವರ ಹೇಳಿಕೆಯಂತೆ "ದೈವೀ ಸಂಪತ್ತು, ಕಲೆ, ಸಂಸ್ಕೃತಿ, ಇವುಗಳೇ ಮೂರ್ತಿಭವಿಸಿ ಬಂತೆಂಬ ದೊಡ್ಡಸ್ತಿಕೆ ಪಡೆದವರಲ್ಲಿ ಅತ್ಯಂತ ದೊಡ್ಡವರೆನಿಸಿದರು ಶ್ರೀಪುರಂದರದಾಸರು. ಇವರು ಎಲ್ಲವನ್ನೂ ತ್ಯಜಿಸಿ ಹರಿದಾಸರಾಗಿ ಮಾಡಿದ ತ್ಯಾಗವು ಅಸಾಧಾರಣವಾದುದು. ಸಂಗೀತಶಾಸ್ತ್ರಕ್ಕೆ ಇವರು ಮಾಡಿದ ಅಪಾರ ಸೇವೆ ಅಮೋಘವಾಗಿರುವುದು. ಸಂಖ್ಯಾದೃಷ್ಟಿಯಿಂದ ಇತರ ಎಲ್ಲಾ

ವಾಗ್ಗೇಯಕಾರದ ಕೃತಿಗಳನ್ನು ಕೂಡಿಸಿ ಹೋಲಿಸಿದರೆ ಪುರಂದರದಾಸರ ಕೃತಿಗಳ ಏಕಾಂಶ ಸಹ ಕಾಣುತ್ತಿಲ್ಲ."

ಇನ್ನೋರ್ವ ವಿದ್ವಾಂಸರು ಯಾವ ನಿಧಿಯನ್ನು ಅನುಗ್ರಹ ರೂಪವಾಗಿ ನಮಗೆ ದಯಪಾಲಿಸಿರುವರೋ ಅಂಥ ನಿಧಿಯ ನಿರ್ಮಾತರೂ, ಸಹಸ್ರಗಟ್ಟಲೆ ಕೃತಿಗಳನ್ನು ರಚಿಸಿ ಮಾನವತ್ವದ ಮುದ್ರೆಯೊತ್ತಿ, ನಮಗೆ ಹೆಮ್ಮೆಯನ್ನುಂಟು ಮಾಡಿ ಕೊಟ್ಟಿರುವರೋ, ಅಂತ ಪುರಂದರ ದಾಸರ ಮಹೋಪಕಾರವನ್ನು ಮಾತುಗಳಿಂದ ವರ್ಣಿಸುವ ಬಗೆ ಹೇಗೆ? ಸಂಸ್ಕೃತ ಸಾಹಿತ್ಯಕ್ಕೆ ವಾಲ್ಮೀಕಿ ಮಹರ್ಷಿ ಹೇಗೋ ಕರ್ನಾಟಕ ಸಂಗೀತಕ್ಕೆ ಪುರಂದರ ದಾಸರು ಹಾಗೆ ಎಂಬ ಗೌರವವನ್ನು ಪಡೆದಿರುವರು.[೫೨] ಎಂಬ ಮಾತಿನಲ್ಲಿ ಅತಿಶಯೋಕ್ತಿಯೇನು ಕಂಡುಬರುವುದಿಲ್ಲ.

**ಸ್ವರಮೇಳಕಳಾನಿಧಿ**

ಭಾರತೀಯ ಸಂಗೀತ ಪದ್ಧತಿಗಳಿಗೆ, ಸಾಮವೇದದಿಂದ ಆರಂಭವಾಗಿ ದತ್ತಿಲ, ಕೋಹಿಲ, ಭರತ ಮೊದಲಾದವರ ಗ್ರಂಥಗಳಲ್ಲಿ ಶಾಸ್ತ್ರೀಯವಾಗಿ ನಿರೂಪಿತವಾಗಿರುವ ಸಂಗೀತ ಪದ್ಧತಿ ಆಧಾರವಾಗಿದೆ. ಸ್ಥಳೀಯ ಸಂಗೀತ ಪದ್ಧತಿಯೊಂದು ದಕ್ಷಿಣ ಭಾರತದಲ್ಲಿ ಬಳಕೆಯಲ್ಲಿದ್ದು ಅದನ್ನು ಒಳಗೊಂಡಂತೆ ಭಾರತೀಯ ಸಂಗೀತ ಪದ್ಧತಿಯು ಬೆಳೆದು ಬಂದಂತೆ ಕಂಡುಬರುತ್ತದೆ. ಸುಮಾರು ೪-೫ನೆಯ ಶತಮಾನದಲ್ಲಿದ್ದ ಮತಂಗನ ಬೃಹದ್ದೇಶಿ ಎಂಬ ಪ್ರಮಾಣ ಗ್ರಂಥ ದಕ್ಷಿಣ ಭಾರತದ ಸಂಗೀತವನ್ನು ವಸ್ತುವಾಗಿ ಗ್ರಹಿಸಿ, ಭರತ ಹೇಳುವ ಸಂಗೀತ ಜಾತಿಗಳ ಬದಲು ರಾಗ ಸಂಗೀತದ ವಿಷಯವನ್ನು ಮೊಟ್ಟ ಮೊದಲಿಗೆ ಪ್ರತಿಪಾದಿಸುತ್ತದೆ.

ಭರತಾಧಿಗಳಿಂದ ಬಂದ ಭಾರತೀಯ ಸಂಗೀತದ ನಿರಂತರ ಧಾರೆಯನ್ನು ಕರ್ನಾಟಕ ಪೋಷಿಸಿಕೊಂಡು ಬಂದಿತು. ಉತ್ತರ ಭಾರತದಲ್ಲಿ ಮುಸ್ಲಿಮರ ಪ್ರಭಾವದಿಂದ ಅಲ್ಲಿಯ ಕಲೆಗಳೆಲ್ಲಾ ತತ್ತರಿಸ ತೊಡಗಿದಾಗ ಅವುಗಳಿಗೆ ಪೋಷಣೆಯನ್ನಿತ್ತು ಸಮನ್ವಯ ಭಾವದಿಂದ ಬೆಳೆಸಿತು. ಉತ್ತರದ ಸಂಗೀತ ಮುಸ್ಲಿಂ ಪ್ರಭಾವಕ್ಕೆ ಒಳಗಾಗಿ ಬದಲಾಗತೊಡಗಿದಾಗ, ಅದಕ್ಕೊಂದು ಸಂಪ್ರದಾಯದ ಕಟ್ಟನ್ನು ಹಾಕಿ ದಕ್ಷಿಣದಲ್ಲಿ ಭಾರತೀಯತನವನ್ನು ಉಳಿಸಿಕೊಂಡು ಬರಲು ಕರ್ನಾಟಕ ಕಾರಣವಾಯಿತು. ಅದರ ಪರಿಣಾಮವಾಗಿ ದಕ್ಷಿಣ ಭಾರತದ ಸಂಗೀತ 'ಕರ್ನಾಟಕ ಸಂಗೀತ'ವೆಂಬ ಹೆಸರಿನಿಂದಲೇ ಪ್ರಸಿದ್ಧವಾಯಿತು.

ದಕ್ಷಿಣ ಭಾರತದಲ್ಲಿ ಸಂಗೀತದ ಸ್ವರೂಪವನ್ನು ತಿಳಿಸುವ ಅತಿ ಪ್ರಾಚೀನವಾದ ದೇಶ ಭಾಷೆಯ ಗ್ರಂಥವೆಂದರೆ ಶಿಲಪ್ಪದಿಗಾರಂ. ಕ್ರಿ.ಶ. ಸು. ೪ನೆಯ ಶತಮಾನದಲ್ಲಿ ಇಲಂಗೋವಾದಿಗಳ್ ಎಂಬ ಚೇರಮರಾಜನಿಂದ ರಚಿತವಾದ ಈ ಗ್ರಂಥ ರಾಗಗಳು, ಸ್ವರಗಳು, ಆರೋಹ, ಅವರೋಹ

ಮೊದಲಾದ ಶಾಸ್ತ್ರೀಯ ಅಂಶಗಳನ್ನು ಹೇಳುತ್ತದೆ.[೫೩] ಕರ್ನಾಟಕ ಚಕ್ರವರ್ತಿ ಚಾಲುಕ್ಯ ಸೋಮೇಶ್ವರ ಭೂಲೋಕಮಲ್ಲ (೧೧೧೬-೧೧೨೭)ನಿಂದ ರಚಿತವಾದ ಮಾನಸೋಲ್ಲಾಸ ಎಲ್ಲಾ ಕಲೆಗಳನ್ನು ಒಳಗೊಂಡ ವಿಶ್ವಕೋಶದಂಥ ಗ್ರಂಥವಾಗಿದೆ. ಇದರಲ್ಲಿ ಸಂಗೀತಶಾಸ್ತ್ರವನ್ನು ಕುರಿತು ಹೇಳುವಾಗ ದಕ್ಷಿಣ ಭಾರತದ ಸಂಗೀತವನ್ನು 'ಕರ್ನಾಟ ಸಂಗೀತ'[೫೪] ಎಂಬ ವಿಶೇಷಣದಿಂದ ಕರೆಯಲಾಗಿದೆ. ಈ ಹೆಸರಿನ ಮೊಟ್ಟಮೊದಲ ಉಲ್ಲೇಖ ಇದಾಗಿದೆ.

ಭಾರತೀಯ ಸಂಗೀತ ೧೩ನೇ ಶತಮಾನದಲ್ಲಿ ಎರಡು ಶಾಖೆಗಳಾಗಿ ಕವಲುಗಳಾಗಿ ವಿಂಗಡವಾಗಿರುವುದು ಕಂಡುಬರುತ್ತದೆ. ಹರಿಪಾಲನಿಂದ ೧೩೦೯ ರಿಂದ ೧೩೧೨ರಲ್ಲಿ ರಚಿತವಾದ ಸಂಗೀತ ಸುಧಾಕರದಲ್ಲಿ ದಕ್ಷಿಣ ಸಂಗೀತ ಕರ್ನಾಟಕವೆಂದೂ, ಉತ್ತರದ ಸಂಗೀತ ಹಿಂದೂಸ್ಥಾನಿ ಸಂಗೀತವೆಂದೂ ಪ್ರಸಿದ್ಧವಾಗಿದ್ದವೆಂಬ ಅಂಶ ತಿಳಿದುಬರುತ್ತದೆ.

ವಿಜಯನಗರದ ಅರಸರ ಕಾಲದಲ್ಲಿ ಕರ್ನಾಟಕ ಸಂಗೀತ ಸ್ಪಷ್ಟ ರೂಪುರೇಖೆಗಳೊಡನೆ ವಿಶಿಷ್ಟ ಆವಿಷ್ಕಾರಗಳೊಡನೆ ರೂಪು ತಳೆಯಿತು. ಹಿಂದಿನ ಕಾಲದಲ್ಲಿದ್ದ ಜನ ಮನ್ನಣೆ ಅದೇ ಧಾಟಿಯಲ್ಲಿ ಮುಂದುವರೆದಿದ್ದು ಮತ್ತು ಅಂದಿನ ದೊರೆಗಳ ವಿಶೇಷ ಪ್ರೋತ್ಸಾಹ ಈ ಮುನ್ನಡೆಗೆ ಕಾರಣವಾಗಿತ್ತು. ಆ ಸಮಕಾಲೀನ ಸಾಹಿತ್ಯ ಗ್ರಂಥಗಳಲ್ಲಿ ಬರುವ ಹಲವು ಉಲ್ಲೇಖಗಳು ಸಂಗೀತ ಅಂದು ಜನಪ್ರಿಯವಾಗಿತ್ತೆಂಬುದನ್ನು ಶಾಸ್ತ್ರಬದ್ಧವಾಗಿತ್ತೆಂಬುದನ್ನು ಸೂಚಿಸುತ್ತವೆ. ವಿಜಯನಗರ ಅರಸರ ಕಾಲದಲ್ಲಿ ಅವರ ಪ್ರೋತ್ಸಾಹದ ನೆರಳಿನಲ್ಲಿ ಈ ನಾಡಿನ ಸಂಗೀತದ ಶಾಸ್ತ್ರೀಯ ನಿರೂಪಣೆ ಹೆಚ್ಚಿನ ಮಟ್ಟಿಗೆ ಸಾಗಿತಾಗಿ ಇದೇ ಈ ಸಂಗೀತ ಪ್ರಕಾರಕ್ಕೆ ಕರ್ನಾಟಕ ಸಂಗೀತ ಎಂಬ ಹೆಸರು ಬರಲು ಕಾರಣವಾಯಿತು ಎಂಬ ಅಭಿಪ್ರಾಯವಿದೆ. ದಕ್ಷಿಣಾದಿ ಸಂಗೀತವನ್ನು ಪುನರುತ್ಥಾನ ಮಾಡಿದ ಮಹಾಮಹಿಮರು ವಿದ್ಯಾರಣ್ಯರು. ಇವರು ಬರೆದ ಸಂಗೀತಸಾರವೆಂಬ ಗ್ರಂಥ ಅನುಪಲಬ್ಧವಾಗಿದೆ. ವಿದ್ಯಾರಣ್ಯರು ತಮ್ಮ 'ಸಂಗೀತಸಾರ'ದಲ್ಲಿ ಹದಿನೈದು ಮೇಳ ರಾಗಗಳನ್ನು ಹೇಳಿ ಐವತ್ತು ಪ್ರಚುರ ಪ್ರಯೋಗಗಳುಳ್ಳ ರಾಗಗಳನ್ನು ಅಳವಡಿಸಿದ್ದರೆಂದು ಗೋವಿಂದ ದೀಕ್ಷಿತ ತನ್ನ (೧೬೧೪) ಸಂಗೀತ ಸುಧೆಯಲ್ಲಿ ಹೇಳುತ್ತಾನೆ. ಮೇಳ ರಾಗಗಳ ನಿರ್ದೇಶನವಲ್ಲದೆ ವಿದ್ಯಾರಣ್ಯರು ತಮ್ಮ ಗ್ರಂಥದಲ್ಲಿ ರಾಗಾಲಾಪನೆಯ ವಿಧಿಗಳನ್ನು ನಿರೂಪಿಸಿದ್ದಾರೆಂದು ದೀಕ್ಷಿತನಿಂದ ತಿಳಿದುಬರುತ್ತದೆ.

ದೇವರಾಯನ ಆಳ್ವಿಕೆಯ (ಸು. ೧೪೪೬-೬೫) ಕಾಲದಲ್ಲಿದ್ದು. ಅಭಿನವಭರತಾಚಾರ್ಯ, ರಾಯವಾಗ್ಗೇಯಕಾರ ಮುಂತಾದ ಪ್ರಶಸ್ತಿಗಳನ್ನು ಪಡೆದಿದ್ದ ಕಲ್ಲಿನಾಥವೆಂಬ ವಿದ್ವಾಂಸ ಶಾರ್ಙ್ಗದೇವನ ಕೃತಿಗೆ ಕಲಾನಿಧಿಯೆಂಬ ಟೀಕೆಯನ್ನು ಬರೆದನು. ಈತನು ತುಂಬಾ ಪ್ರತಿಭಾಶಾಲಿಯಾಗಿದ್ದು, ಕಲ್ಲಿನಾಥ ಸಂಪ್ರದಾಯವೆಂಬ ಸಂಪ್ರದಾಯದ ಹುಟ್ಟಿಗೆ ಕಾರಣನೆನ್ನುವಷ್ಟು ಪ್ರಭಾವಶಾಲಿಯಾಗಿದ್ದನು.[೫೫]

ದಕ್ಷಿಣಾದಿ ಸಂಗೀತದ ಸ್ವರೂಪವನ್ನು ಚಿತ್ರಿಸುವ ಮತ್ತೊಂದು ಗ್ರಂಥ 'ಸ್ವರಮೇಳ ಕಳಾನಿಧಿ' ವಿಜಯನಗರದ ರಾಮರಾಯನ ಅಮಾತ್ಯನಾಗಿದ್ದ ಬಯಕಾರ ರಾಮಪ್ಪನು ಈ ಗ್ರಂಥದ ಕರ್ತೃ. ಸ್ವರಮೇಳ ಕಳಾನಿಧಿ, ಕರ್ನಾಟಕ ಸಂಗೀತದಲ್ಲಿ ಕ್ರಾಂತಿಯನ್ನು ತಂದ ಗ್ರಂಥವಾಗಿದೆ. ಆ ಕಾಲಕ್ಕೆ ಸಂಗೀತಶಾಸ್ತ್ರದಲ್ಲಿ ಲಕ್ಷ್ಯ, ಲಕ್ಷಣಗಳ ವಿಷಯದಲ್ಲಿ ವಿಶೇಷವಾದ ಗೊಂದಲವಿದ್ದುದರಿಂದ ಇವುಗಳನ್ನು ಸಮೀಕರಿಸಿ ಗ್ರಂಥ ರಚನೆ ಮಾಡಿರುವುದಾಗಿಯೂ ಹೇಳಿಕೊಂಡಿದ್ದಾನೆ. ಇವನು ಪ್ರಯೋಗದ ದೃಷ್ಟಿಯನ್ನೇ ಹಿಡಿದು ಪ್ರಚುರವಾಗಿದ್ದ ಎಲ್ಲ ದೇಶೀರಾಗಗಳನ್ನು ಇಪ್ಪತ್ತು ಮೇಳಗಳಲ್ಲಿ ಅಡಕ ಮಾಡಲು ಯತ್ನಿಸಿದನು. ಹಿಂದಿನ ಕಾಲದಿಂದ ಬಂದಿದ್ದ ಗ್ರಾಮಮೂರ್ಛನ ಪದ್ಧತಿಯಿಂದ ರಾಗಗಳನ್ನು ಹಿಡಿಯುವ, ಹೆಸರಿಸುವ, ಹುಟ್ಟಿಸುವ ಪದ್ಧತಿಯನ್ನು ಧೈರ್ಯದಿಂದ ಬದಿಗಿಟ್ಟಾತ ರಾಮಾಮಾತ್ಯ. ಈ ಪದ್ಧತಿ ಲಕ್ಷಣ ಪ್ರಧಾನವಾದದ್ದು. ಮೇಳವೆಂಬ ಮಾತಿಗೆ ಹಿರಿಮೆ ಕೊಟ್ಟವರಲ್ಲಿ ರಾಮಾಮಾತ್ಯ ಮೊದಲಿಗ. ಇವನ ಗ್ರಂಥದಲ್ಲಿ ಮೇಳ ಪ್ರಕರಣವೆಂಬ ಪ್ರತ್ಯೇಕವಾದ ಪರಿಚ್ಛೇದವೇ ಇದೆ.

ಆಗಮ ಮತ್ತು ಸಂಗೀತಗಳೆರಡರಲ್ಲೂ ಘನ ಪಂಡಿತನಾಗಿದ್ದನು ಬಯಕಾರ ರಾಮಪ್ಪನು. ಶಾಸನಗಳು ಪ್ರಾರಂಭದಿಂದಲೂ ಇವನನ್ನು ವಾಗ್ಗೇಯಕಾರನೆಂದು ಕರೆದಿವೆ. ಇವನ ನಾಮ ವಿಶ್ಲೇಷಣೆ ಆ ಅರ್ಥವನ್ನು ಕೊಡುತ್ತದೆ. ಬಯಕಾರ ಎಂಬುದು ಉಭಯಕಾರದ ಸಂಕ್ಷಿಪ್ತ ಅಥವಾ ರೂಢಿ ಪದವಾಗಿದೆ. ಉಭಯಕಾರ ಎಂಬುದು ವಾಗ್ಗೇಯಕಾರ ಮತ್ತು ಸಂಗೀತಗಾರ ಎಂಬ ಪ್ರಕಾರಗಳನ್ನು ಸೂಚಿಸುತ್ತದೆ. ಇವನು ಉದ್ದಾಮ ಸಂಗೀತ ಕೃತಿಗಳ ರಚನಕಾರನಾಗಿದ್ದರಿಂದ ವಿಜಯನಗರದ ಅರಸರು ಇವನಿಗೆ ಅಭಿನವ ಭರತಾಚಾರ್ಯ ಎಂಬ ಬಿರುದನ್ನು ನೀಡಿದ್ದರು. ಕರ್ನಾಟಕ ಸಂಗೀತವನ್ನು ಕುರಿತು ಇಂದಿಗೂ ಅವಶ್ಯವಾಗಿ ಅಧ್ಯಯನ ಮಾಡಬೇಕಾದ "ಸ್ವರಮೇಳ ಕಲಾನಿಧಿ" ಸಂಗೀತ ಗ್ರಂಥವನ್ನು ಬಯಕಾರ ರಾಮಪ್ಪನು ಸಂಸ್ಕೃತದಲ್ಲಿ ರಚಿಸಿದನು. ಸಂಗೀತದ ರಹಸ್ಯಗಳನ್ನು ಆಳವಾಗಿ ಅಧ್ಯಯನ ಮಾಡಿದ್ದ ಬಯಕಾರ ರಾಮಪ್ಪನು ಸಂಗೀತ ಸಿದ್ಧಾಂತ ಮತ್ತು ಹಾಡುಗಾರಿಕೆ ಕಲೆಗಳೆರಡನ್ನು ಕರಗತ ಮಾಡಿಕೊಂಡಿದ್ದನು.

ಬಯಕಾರ ರಾಮಪ್ಪನ ತಾಯಿಯ ತಂದೆಯಾದ ಕಲ್ಲಿನಾಥನು ಸಂಗೀತದ ಪ್ರಕಾಂಡ ಪಂಡಿತನಾಗಿದ್ದಾನೆ. ಶಾರ್ಙ್ಗದೇವನ 'ಸಂಗೀತ ರತ್ನಾಕರ' ಗ್ರಂಥಕ್ಕೆ ಕಲ್ಲಿನಾಥನು ಭಾಷ್ಯವನ್ನು ಬರೆದಿದ್ದಾನೆ. ಶಾರ್ಙ್ಗದೇವನು ದೇವಗಿರಿಯ ಸೇವುಣ ಅರಸ ಸಿಂಘಣನ ಆಸ್ಥಾನದಲ್ಲಿದ್ದ ಮಹಾನ್ ಸಂಗೀತ ವಿದ್ವಾಂಸ. ಕಲ್ಲಿನಾಥನು ವಿಜಯನಗರದ ಇಮ್ಮಡಿ ಪ್ರೌಢದೇವರಾಯನ ಕಾಲದಲ್ಲಿ (೧೪೩೦) ಕರ್ನಾಟಕದ ಗರ್ಭದಿಂದ ಅವತರಿಸಿ ಸಂಗೀತ ಪ್ರಪಂಚದಲ್ಲಿ ಕಾಲಿರಿಸಿದನು. ಸಂಗೀತ ರತ್ನಾಕರಕ್ಕೆ ಅನೇಕರು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಆದರೆ ಕಲ್ಲಪ್ಪನ ಮಟ್ಟಕ್ಕೇರುವ ವ್ಯಾಖ್ಯಾನಕಾರರು

ಇಡೀ ಭಾರತದಲ್ಲಿ ಕೆಲವರು ಮಾತ್ರ ಸಿಕ್ಕಬಹುದು. ಭರತನ ನಾಟ್ಯಶಾಸ್ತ್ರಕ್ಕೂ, ಆನಂದವರ್ಧನನ ಧ್ವನ್ಯಾಲೋಕಕ್ಕೂ ವ್ಯಾಖ್ಯಾನವನ್ನು ಬರೆದ ಅಭಿನವಗುಪ್ತನ ಮಟ್ಟಕ್ಕೇರಬಲ್ಲ ವ್ಯಾಖ್ಯಾನಕಾರ ಕಲ್ಲಪ್ಪ. ಕಲ್ಲಿನಾಥನು ಮೂಲ ಗ್ರಂಥದಲ್ಲಿ ಸೂತ್ರ ರೂಪದಲ್ಲಿರುವ ಅಂಶಗಳನ್ನು ವಿವರಿಸಿ ಪ್ರಮಾಣಬದ್ಧವಾಗಿ ಅದನ್ನು ಸ್ಪಷ್ಟಪಡಿಸುವ ಈತನ ವಿದ್ಯಾ ವೈಖರಿ ವಿಸ್ಮಯಕಾರಿಯಾದುದು. ಮೂಲಗ್ರಂಥದ ಕ್ಲಿಷ್ಟ ಭಾಗಗಳನ್ನು ಶಬ್ದಾರ್ಥ ತಾತ್ಪರ್ಯ ಧ್ವನಿ ವಿಶೇಷ ಮೊದಲಾದವುಗಳಿಂದ ವಿವರಿಸುತ್ತಾನೆ. ಅನಂತರ ಆಯಾ ವಿಷಯಕ್ಕೆ ಸಂಬಂಧಪಟ್ಟ ತನ್ನ ವಾದವನ್ನು ಮಂಡಿಸುತ್ತಾನೆ. ಪೂರ್ವಾಚಾರ್ಯರ ಮತಗಳಿಂದ ತನ್ನನ್ನು ಸಮರ್ಥಿಸಿಕೊಳ್ಳುತ್ತಾನೆ. ಆಳವಾದ ಅಧ್ಯಯನದಿಂದ ಮತ್ತು ಲೋಕಾನುಭವ ಜನ್ಯವಾದ ಜ್ಞಾನದಿಂದ ವಿಷಯವನ್ನು ಪ್ರತಿಪಾದಿಸಿ ಮೂಲ ಗ್ರಂಥದ ಉದ್ದೇಶವನ್ನು ಪ್ರತಿಷ್ಠಾಪಿಸುತ್ತಾನೆ. ವ್ಯಾಖ್ಯಾನವೂ ಸ್ವತಂತ್ರವಾದ ಸೃಷ್ಟಿಯಾಗಬಲ್ಲದೆಂಬುದನ್ನು ತನ್ನ ಕೃತಿಯಿಂದ ಸಾಧಿಸಿ ತೋರಿಸಿ, ತನ್ನ ವ್ಯಾಖ್ಯಾನಕ್ಕೆ ಆತನು ಕೊಟ್ಟ ಹೆಸರು 'ಕಲಾನಿಧಿ' ಸಾರ್ಥಕವಾಗಿದೆ. ಪ್ರಕಾಂಡ ಪಂಡಿತನಾಗಿದ್ದ ತನ್ನ ತಾತ ಕಲ್ಲಿನಾಥನಿಂದ ಸಂಗೀತ ಪರಂಪರೆಯ ವಿದ್ವತ್ತು ಬಯಕಾರ ರಾಮಪ್ಪನ ಧಮನಿಗಳಲ್ಲಿ ಹರಿಯುತ್ತಿತ್ತು. ಅಳಿಯ ರಾಮರಾಯನ ಅಪೇಕ್ಷೆಯ ಮೇರೆಗೆ ರಾಮಾಮಾತ್ಯನು 'ಸ್ವರಮೇಳ ಕಲಾನಿಧಿ' ಸಂಗೀತ ಗ್ರಂಥವನ್ನು ರಚಿಸಿದನು. ಈ ಗ್ರಂಥದಲ್ಲಿ ಅಂದಿನ ಸಂಗೀತದ ಸಿದ್ಧಾಂತಗಳು ಮತ್ತು ರೂಢಿಯಲ್ಲಿದ್ದ ಹಾಡುಗಾರಿಕೆಯ ನಡುವೆ ಹೊಂದಾಣಿಕೆಯನ್ನು ರೂಪಿಸಿದನು. ಈ ಗ್ರಂಥವನ್ನು ಕ್ರಿ.ಶ್ರ ೧೫೫೦ ಆಗಸ್ಟ್ ೨೧ ರಂದು ಪೂರ್ಣಗೊಳಿಸಿದನೆಂದು ತನ್ನ ಗ್ರಂಥದಲ್ಲಿ ಹೇಳಿಕೊಂಡಿದ್ದಾನೆ.

ಬಯಕಾರ ರಾಮಪ್ಪನು ಸುಪ್ರಸಿದ್ಧ ವಾಗ್ಗೇಯಕಾರ. "ವಾಗ್ಗೇಯಕಾರ ಎಂಬ ಪದಕ್ಕೆ ವಾಚಂಗೇಯಂ ಕುರುತೇಯಃ ಸಃ ವಾಗ್ಗೇಯಕಾರಃ ಎಂದಿದ್ದಾನೆ. ವಾಕ್ ಎಂದರೆ ಸಾಹಿತ್ಯ, ಗೇಯವೆಂದರೆ ಸಂಗೀತ, ಸಂಗೀತ ಸಾಹಿತ್ಯವೆರಡನ್ನು ಒಟ್ಟಿಗೆ ರಚಿಸುವಾತನನ್ನು ಶಾರ್ಙ್ಗದೇವ ವಾಗ್ಗೇಯಕಾರನೆಂದಿದ್ದಾನೆ."[೫೭] ವಾಗ್ಗೇಯಕಾರನಾಗಿದ್ದ ಬಯಕಾರ ರಾಮಪ್ಪನು ಸಂಗೀತದ ರಹಸ್ಯಗಳನ್ನು ಕರತಲಾಮಲಕ ಮಾಡಿಕೊಂಡಿದ್ದನು. ಲಕ್ಷ್ಯ ಮತ್ತು ಲಕ್ಷಣಗಳ ನಡುವೆ ವೈರುಧ್ಯ ಅಗಾಧವಾಗಿ ಬೆಳೆದಿತ್ತು. ಇವನ ಸಮಕಾಲೀನನಾದ ಸೋಮನಾಥನು ಲಕ್ಷ್ಯ, ಲಕ್ಷಣಗಳ ನಡುವೆ ಅಗಾಧವಾಗಿ ಬೆಳೆದಿದ್ದ ವಿರೋಧಾಭಾಸವನ್ನು ತನ್ನ 'ರಾಗ ವಿಬೋಧ' ಕೃತಿಯಲ್ಲಿ ತಿಳಿಸಿದ್ದಾನೆ.[೫೮] ಈ ಸಮಸ್ಯೆಗೆ ಪರಿಹಾರ ರೂಪದಲ್ಲಿ ರಾಮಪ್ಪನು ಸ್ವರಮೇಳ ಕಲಾನಿಧಿ ಗ್ರಂಥವನ್ನು ರಚಿಸಿದ್ದಾನೆ. ಬಯಕಾರ ರಾಮಪ್ಪನು ಏಲಾರಾಗಕದಂಬ, ದ್ವಿಪದ, ಸ್ವರಾಂಕ, ಶ್ರೀವಿಲಾಸ, ದ್ರುವ ಪಂಚರತ್ನ, ಮುಂತಾದ ಸಂಗೀತ ಗ್ರಂಥಗಳನ್ನು ರಚಿಸಿರುವನೆಂದು ಹೇಳಿದ್ದರೂ ಅವುಗಳಾವುವು ದೊರೆತಿಲ್ಲ.

'ಸ್ವರಾಮೇಳಕಳಾನಿಧಿ'ಯು ಸಂಸ್ಕೃತದಲ್ಲಿ ರಚನೆಯಾದ ಮಹತ್ವದ ಸಂಗೀತ ಗ್ರಂಥ. ಗಾತ್ರದಲ್ಲಿ ಕಿರಿದಾದರೂ ಇದು ಸಂಗೀತದ ರಹಸ್ಯಗಳನ್ನು ಒಳಗೊಂಡಿರುವ ವಿಶಿಷ್ಟ ಗ್ರಂಥವಾಗಿದೆ. ಐದು

ಅಧ್ಯಾಯಗಳನ್ನು ಇದು ಹೊಂದಿದ್ದು, ೩೨೮ ಶ್ಲೋಕಗಳನ್ನು ಒಳಗೊಂಡಿದೆ. ಈ ಗ್ರಂಥ ಗಾತ್ರದಲ್ಲಿ ಚಿಕ್ಕದಾಗಿದ್ದರೂ ಇದರಲ್ಲಿ ಹುದುಗಿರುವ ವಿಷಯಗಳು ಅಗಾಧವಾಗಿವೆ. ಆಧುನಿಕ ಕರ್ನಾಟಕ ಸಂಗೀತಕ್ಕೆ ಪ್ರವೇಶಿಕೆಯಾಗಿಯೂ ಮಾಹಿತಿಯನ್ನು ನೀಡುತ್ತದೆ. ಇದು ಎರಡು ಸಾವಿರ ವರ್ಷಗಳ ಭಾರತೀಯ ಸಂಗೀತ ವಿಕಾಸವನ್ನು ವಿಶ್ಲೇಷಿಸುತ್ತದೆ.

ಮೊದಲನೆಯ ಅಧ್ಯಾಯವು ಪೀಠಿಕಾ ರೂಪದಲ್ಲಿದ್ದು ಐತಿಹಾಸಿಕ ಮಾಹಿತಿಯನ್ನು ನೀಡುತ್ತದೆ. ಈ ಗ್ರಂಥ ರಾಜಕೀಯವಾಗಿಯೂ ವಿಶಿಷ್ಟ ವಿಷಯವನ್ನು ಒಳಗೊಂಡಿದೆ. ಇದರಲ್ಲಿ ಬಯಕಾರ ರಾಮಪ್ಪನು ತನ್ನ ಪೂರ್ವಿಕರ ವಿಷಯವನ್ನು ಬಹು ಸಂಕ್ಷಿಪ್ತವಾಗಿ ತಿಳಿಸುತ್ತಾನೆ. ತನ್ನ ಒಡೆಯನಾದ ಅಳಿಯ ರಾಮರಾಯನ ವಂಶಾವಳಿಯನ್ನು ಪೌರಾಣಿಕ ಮೆರುಗಿನೊಂದಿಗೆ ವಿವರಿಸುತ್ತಾನೆ. ರಾಮರಾಯನ ತಮ್ಮನಾದ ವೆಂಕಟಾದ್ರಿಯ ಇವನ ಮಿತ್ರನು. ಅವನ ನೆರವಿನೊಂದಿಗೆ ರಾಮರಾಯನ ಆಸ್ಥಾನಕ್ಕೆ ಇವನ ಪ್ರವೇಶವಾಗುತ್ತದೆ. ರಾಮರಾಯನು ಇವನನ್ನು ಆ ಕಾಲದ ಪ್ರಸಿದ್ಧ ಹಾಗೂ ಸಮರ್ಥ ಸಂಗೀತಗಾರನೆಂದು ಮನ್ನಣೆ ನೀಡುವುದು. ಸ್ವರಮೇಳ ಕಲಾನಿಧಿಯನ್ನು ರಚಿಸಲು ಆದೇಶ ನೀಡುವುದು ಮತ್ತು ಅಳಿಯ ರಾಮರಾಯನ ಆದೇಶದಂತೆ ರತ್ನಕೂಟ ಎಂಬ ಭವ್ಯವಾದ ಅರಮನೆಗಳ ಸಂಕೀರ್ಣವನ್ನು ಕಟ್ಟಿಸಿದನೆಂದು ಇವೇ ಮೊದಲಾದ ಅಂಶಗಳನ್ನು ಬಯಕಾರ ರಾಮಪ್ಪನು ವಿವರಿಸುತ್ತಾನೆ. ಉಳಿದ ನಾಲ್ಕು ಅಧ್ಯಾಯಗಳು ಕ್ರಮವಾಗಿ ಸ್ವರ, ವೀಣೆ, ಮೇಳ ಮತ್ತು ರಾಗದ ಬಗ್ಗೆ ತಿಳಿಸುತ್ತವೆ. ಈ ಅಧ್ಯಾಯಗಳಲ್ಲಿ ಇವನು ಅಂದು ಸಮಸ್ಯೆಯಾಗಿ ಬೆಳೆದಿದ್ದ ಲಕ್ಷ್ಯ ಮತ್ತು ಲಕ್ಷಣಗಳ ವಿರೋಧಾಭಾಸವನ್ನು ಸಮನ್ವಯಗೊಳಿಸಿ, ಸುಲಭವಾಗಿ ಅರ್ಥೈಸಲು ಪ್ರಯತ್ನಿಸಿದ್ದಾನೆ. ಇದನ್ನೇ ಬಯಕಾರ ರಾಮಪ್ಪನು ಪೀಠಿಕಾ ಅಧ್ಯಾಯದಲ್ಲಿ ತಿಳಿಸುತ್ತಾನೆ.

ಎರಡನೇ ಸ್ವರ ಅಧ್ಯಾಯದಲ್ಲಿ ಸಂಗೀತ ಮೌಲ್ಯ ಹಾಗೂ ಗಾಂಧರ್ವ ಮತ್ತು ಗಾನದ ಪ್ರಭೇದವನ್ನು ತಿಳಿಸುತ್ತಾನೆ. ಅನಂತರ ನಾದ, ನಾದೋತ್ಪತ್ತಿಯ ಮೂಲ, ಮಂದ್ರ, ಮಧ್ಯಮ, ತಾರ ಮತ್ತು ನಾದವು ವ್ಯಕ್ತವಾಗುವ ೨೨ ಶ್ರುತಿಗಳನ್ನು ವಿವರಿಸಿದ್ದಾನೆ. ಈ ಶ್ರುತಿಗಳಿಂದ ೭ ಸ್ವರಗಳು ಉಂಟಾಗುವುದನ್ನು ಮತ್ತು ವೀಣೆಯಲ್ಲಿ ಅವುಗಳ ಸ್ಥಾನಗಳನ್ನು ತಿಳಿಸಲಾಗಿದೆ. ಈ ಸ್ವರಗಳಲ್ಲಿ ಶುದ್ಧಸ್ವರ ಮತ್ತು ವಿಕೃತ ಸ್ವರಗಳೆಂಬ ಭೇದಗಳಿವೆ. ಷಡ್ಜವನ್ನೇ ಆಧಾರ ಸ್ವರವಾಗಿ ಅಂಗೀಕರಿಸಿ ಶ್ರುತಿ, ಸ್ವರ, ಪ್ರಮೇಯಗಳನ್ನು ರಾಗ ವರ್ಗೀಕರಣ, ರಾಗ ವಿಶ್ಲೇಷಣೆ ಮುಂತಾದವುಗಳನ್ನು ಷಡ್ಜಕ್ಕೆ ಏಕಸೂತ್ರದಲ್ಲಿ ಸಂಬಂಧಿಸಿರುವಂತೆ ನಿರೂಪಿಸಿದ್ದಾನೆ. ಆಧುನಿಕ ಜನಕ ರಾಗಗಳ ಪ್ರಮೇಯವೂ ಇವೆ. ತಂಬೂರಿಯ ಅಥವಾ ವೀಣೆಯ ತಂತಿಯನ್ನು ಮಿಡಿದಾಗ ಅದರಲ್ಲಿ ಶುದ್ಧ, ಮಧ್ಯಮ, ಪಂಚಮ ಭಾವಗಳೂ ಅಂತರ ಗಾಂಧಾರವೂ, ಮೇಲು ಷಡ್ಜವೂ ತಮಗೆ ತಾವೇ ಉಗಮವಾಗಿ

ಕೇಳಿಸುತ್ತವೆ. ಮೊದಲು ಇದನ್ನು ಗಮನಿಸಿದವನೇ ಬಯಕಾರ ರಾಮಪ್ಪ. ಇವನ್ನು ಸ್ವಯಂ ಭೂಸ್ವರಗಳೆಂದು ಹೇಳಲಾಗಿದೆ.

ಸಂಗೀತಕ್ಕೆ ಮೂಲಭೂತವಾದ ಅಂಶಗಳು ಎರಡು : ನಾದ ಮತ್ತು ಕಾಲ. ನಾದ, ಶ್ರುತಿ ಶುದ್ಧವಾಗಿರಬೇಕು. ಕಾಲ, ಲಯಬದ್ಧವಾಗಿರಬೇಕು; ಎಂಬುದು ಸಂಗೀತದ ಮುಖ್ಯ ಲಕ್ಷಣ. ಇಲ್ಲಿ 'ಶ್ರುತಿ' ಎಂಬ ಸಂಗೀತ ಪರಿಭಾಷೆಯ ಅರ್ಥವನ್ನು 'ಶ್ರುತಿ' ಎಂದರೆ ಕೇಳು ಎಂಬ ಪದದಿಂದ ಅದರ ನಿಷ್ಪತ್ತಿಯಾಗಿದೆ. ಕಿವಿಯಿಂದ ಕೇಳಬಹುದಾದಂತಹ ಅತ್ಯಲ್ಪ ನಾದವನ್ನೇ 'ಶ್ರುತಿ' ಎನ್ನುತ್ತಾರೆ. ಇದನ್ನು ದೀಪ್ತ, ಆರ್ಯ, ತರುಣ. ಮೃದು ಮತ್ತು ಮಧ್ಯಮ ಎಂದು ಐದು ಭಾಗಗಳಾಗಿ ವಿಂಗಡಿಸಲಾಗಿದೆ. ಶ್ರುತಿ ಮತ್ತು ಸ್ವರಗಳು ಮೂಲಭೂತವಾದ ಅಂಶಗಳು. 'ಸ್ವ' ಎಂದರೆ ತನಗೆ ತಾನೇ 'ರ' ಎಂದರೆ ರಂಜಿಸುವುದು. ಸ್ವಯಂ ರಂಜನೆಯಿಂದ ಕೂಡಿದ ನಾದವೇ ಸ್ವರ ಎಂದು ಅದರ ವಿವರಣೆಯನ್ನು ಕೊಡಲಾಗಿದೆ. 'ಸ್ವರ' ಎಂಬುದು ಶ್ರುತಿಯಂತೆ ಕೇವಲ ನಾದ ಮಾತ್ರವಾಗಿರದೆ, ಭಾವನೆಯ ಅಭಿವ್ಯಕ್ತಿಯ ಅಂಶವನ್ನು ಒಳಗೊಂಡಿರುತ್ತದೆ. ಸ್ವರಗಳು ಸ್ವಯಂ ರಂಜನೆಯ ಶಕ್ತಿಯನ್ನು ಪಡೆದಿದ್ದರೂ ತಮಗೆ ತಾವೇ ಸ್ವತಂತ್ರವಲ್ಲ; ಸಾಪೇಕ್ಷಪವಾದವುಗಳು. ಆದುದರಿಂದ ನಾದವು ಸ್ವತಂತ್ರವಾಗಿರುವಾಗ ಶ್ರುತಿಯೆಂದೂ, ಪರಸ್ಪರ ಸಾಪೇಕ್ಷವಾಗಿರುವಾಗ ಸ್ವರವೆಂದೂ ಕರೆಯಬಹುದು.[೫೮] ಶ್ರುತಿ ಮತ್ತು ಸ್ವರಗಳಿಗೆ ಇರುವ ಸಂಬಂಧ, ಮಣ್ಣು ಮತ್ತು ಅದರಿಂದಾದ ಮಡಿಕೆಗೆ ಇರುವ ಸಂಬಂಧವನ್ನು, ಹಾಲು ಮತ್ತು ಮೊಸರಿಗೆ ಇರುವ ಸಂಬಂಧವನ್ನು ಹೋಲುತ್ತವೆಂದು ಹೇಳಿರುವ ವಿದ್ವಾಂಸರೂ ಉಂಟು.[೫೯]

ನಾದ ಪ್ರಧಾನವಾದ ಶ್ರುತಿ ಮತ್ತು ಕಾಲ ಪ್ರಧಾನವಾದ ತಾಳಗಳಲ್ಲಿ ಅನೇಕ ಸೂಕ್ಷ್ಮವಾದ ವಿಭೇದಗಳು ಏರ್ಪಟ್ಟಿವೆ. ಧ್ವನಿ ವಿನ್ಯಾಸದ ಪ್ರಯೋಗಗಳು ಎಷ್ಟೊಂದು ಬಗೆಯಲ್ಲಿ ನಡೆದಿವೆ ಎಂಬುದಕ್ಕೆ ಅವು ಸಾಕ್ಷಿಗಳಾಗಿವೆ. ೨೨ ಬಗೆಯ ಶ್ರುತಿಗಳಿವೆ. ಅವುಗಳೆಂದರೆ ತೀವ್ರ, ಕುಮುದವತಿ, ಮಂದ, ಛಂದೋವತಿ, ದಯಾವತಿ, ರಂಜನಿ, ರಕ್ತಿಕ, ರೌದ್ರಿ, ಕ್ರೋಧಿ, ವಜ್ರಿಕ, ಪ್ರಸರಿಣಿ, ಪ್ರೀತಿ, ಮಾರ್ಜರಿ, ಕ್ಷಿತಿ, ರಕ್ತ, ಸಂದೀಪಿನಿ, ಆಲಾಪಿನಿ, ಮದಂತಿ, ರೋಹಿಣಿ, ರಮ್ಯ, ಉಗ್ರ ಮತ್ತು ಕ್ಷೋಭಿಣಿಗಳು. ಈ ಶ್ರುತಿಗಳಿಂದ ಸ್ವರಗಳು ಹುಟ್ಟುವ ಸ್ಥಾನವನ್ನು ನಿರ್ದೇಶಿಸಲಾಗಿದೆ.

ಛಂದೋವತಿಯಿಂದ ಷಡ್ಜ ಹುಟ್ಟುತ್ತದೆ. ಹಾಗೆಯೇ ಏಳನೇ ಶ್ರುತಿಯಿಂದ ರಿಷಭವೂ, ೯ ರಿಂದ ಗಾಂಧಾರವೂ, ೧೩ ರಿಂದ ಮಧ್ಯಮವೂ, ೧೭, ೨೦, ೨೨ ರಿಂದ ಕ್ರಮವಾಗಿ ಪಂಚಮ ದೈವತ ನಿಷಾಧಗಳೂ ಹುಟ್ಟುತ್ತವೆ. ಈ ಸಪ್ತಸ್ವರಗಳು - ಸ, ರಿ, ಗ, ಮ, ಪ, ದ, ನಿ, ಇವು ಶುದ್ಧ ಸ್ವರಗಳು. ಈ ನಿರ್ದೇಶಿತ ಸ್ವರಗಳಿಗಿಂತ ಶ್ರುತಿ ಸಾಲಿನಲ್ಲಿ ಒಂದು ಸ್ಥಾನ ಹಿಂದೆ ಹುಟ್ಟುವ

ಸ್ವರಗಳನ್ನು ಗುರುತಿಸಿ ಅವುಗಳನ್ನು ಚ್ಯುತ, ಷಡ್ಜ, ಚ್ಯುತಿ, ಮಧ್ಯಮ ಇತ್ಯಾದಿ ಹೆಸರುಗಳಿಂದ ಕರೆಯಲಾಗಿದೆ. ಇವು ವಿಕೃತ ಸ್ವರಗಳು. ಬಯಕಾರ ರಾಮಪ್ಪನು ಚ್ಯುತಿಷಡ್ಜ, ಚ್ಯುತಮಧ್ಯಮ, ಚ್ಯುತ ಪಂಚಮ, ಸಾಧಾರಣ ಗಾಂಧಾರ, ಅಂತರ ಗಾಂಧಾರ, ಕೈಶಿಕೀ ನಿಷಾಧ ಮತ್ತು ಕಾಕಲೀನಿಷಾಧಗಳನ್ನು ಹೆಸರಿಸಿರುವನು.[೬೦] ಶುದ್ಧ ಸ್ವರಗಳು ಮತ್ತು ಈ ವಿಕೃತ ಸ್ವರಗಳು ಸೇರಿ ಒಟ್ಟು ೧೪ ಸ್ವರಗಳಾಗುತ್ತವೆ. ಆದರೆ ಶಾಸ್ತ್ರಕಾರರು ಈ ವಿಚಾರದಲ್ಲಿ ಏಕಾಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ. ಸಾರಂಗದೇವ ತನ್ನ ಸಂಗೀತ ರತ್ನಾಕರದಲ್ಲಿ ೭ ಶುದ್ಧ ಸ್ವರಗಳ ಜೊತೆಗೆ, ೧೨ ವಿಕೃತ ಸ್ವರಗಳನ್ನು ಹೇಳುತ್ತಾನೆ. ವೆಂಕಟಮುಖಿ, ತುಳಜಾಜರು ೫ ವಿಕೃತ ಸ್ವರಗಳನ್ನು ಮಾತ್ರ ಒಪ್ಪಿಕೊಂಡು ಶುದ್ಧ ಸ್ವರಗಳು ಸೇರಿ ಒಟ್ಟು ೧೨ ಸ್ವರಗಳನ್ನು ಮಾತ್ರ ಇಟ್ಟುಕೊಂಡಿದ್ದಾರೆ. ಇಲ್ಲಿ ಷಡ್ಜ ಮತ್ತು ಪಂಚಮಗಳು ಅಚಲ ಸ್ವರಗಳೆಂದು ಪರಿಗಣಿಸಲಾಗಿದೆ. ‘ಸ’ ಮತ್ತು ‘ಪ’ಗಳ ಸ್ಥಾನ ನಿರ್ದಿಷ್ಟವಾದುದು ಎಂಬುದು ಅವರ ಅಭಿಪ್ರಾಯ. ಮುಂದೆ ಈ ದೃಷ್ಟಿಯೇ ಪ್ರಧಾನವಾಗಿ ೧೨ ಸ್ವರಗಳನ್ನು ಮಾತ್ರ ಒಪ್ಪಿಕೊಳ್ಳುವ ಪದ್ಧತಿ ಬೆಳೆದು ಬಂದಂತೆ ತೋರುತ್ತದೆ.

ಮೂರನೇ ಅಧ್ಯಾಯದಲ್ಲಿ ವೀಣೆಯ ಬಗೆಗೆ ಸ್ಪಷ್ಟವೂ ಖಚಿತವೂ ಆದ ಮೌಲ್ಯಯುತ ವಿವರಣೆಯನ್ನು ನೀಡುತ್ತಾನೆ. ರಾಮಾಮಾತ್ಯನು ವೀಣೆಯ ಬಗೆಗೆ ನೀಡಿರುವ ಖಚಿತವಾದ ಅಭಿಪ್ರಾಯಗಳನ್ನು ನೋಡಿದರೆ ಅವನು ವೀಣೆಯ ಬಗ್ಗೆ ಎಂಥಾ ಆಳವಾದ ಅಧ್ಯಯನವನ್ನು ಮಾಡಿರಬಹುದೆಂದು ತಿಳಿಯುತ್ತದೆ. ವೀಣೆಯ ಹಿರಿಮೆ, ಸ್ವರಕ್ಕೆ ಅದನ್ನು ಹೋಲಿಸುವಿಕೆ ಮುಂತಾದ ವಿಷಯಗಳನ್ನು ನಿರೂಪಿಸಲಾಗಿದೆ. ಸ್ವರಗಳನ್ನು ವೀಣೆಯ ದಂಡದಲ್ಲಿ ಶಾಸ್ತ್ರಕ್ಕೂ, ಪ್ರಯೋಗಕ್ಕೂ ವಿರೋಧವಿಲ್ಲದಂತೆ ತೋರಿಸಿ ನಿರ್ಣಯಿಸಿದ್ದಾನೆ. ಶುದ್ಧ ಮತ್ತು ವಿಕೃತ ಸ್ವರಗಳ ವಿಶ್ಲೇಷಣೆ ಮತ್ತು ಮೂರು ಬಗೆಯ ವೀಣೆಗಳನ್ನು ತಿಳಿಸಿದ್ದಾನೆ. ಅವುಗಳೆಂದರೆ ಶುದ್ಧಮೇಲ ವೀಣೆ, ಮಧ್ಯ ಮೇಲ ವೀಣೆ ಮತ್ತು ಅಚ್ಯುತರಾಜೇಂದ್ರ ವೀಣೆ ಅಥವಾ ಅಚ್ಯುತರಾಯ ಮೇಲ ವೀಣೆ. ಇವುಗಳಲ್ಲಿ ಪ್ರತಿಯೊಂದಕ್ಕೂ ಏಕರಾಗ ಮೇಲವೀಣೆ ಮತ್ತು ಸರ್ವರಾಗ ಮೇಲವೀಣೆಗಳೆಂಬ ಎರಡು ವಿಧಗಳಿವೆ. ಏಕತಂತಿ ಮೇಲವೀಣೆ ಎಂಬ ಮೂರನೆಯ ವಿಧವು ಮಧ್ಯಮೇಲ ವೀಣೆಯಲ್ಲಿ ಕಂಡುಬರುತ್ತದೆ. ಒಟ್ಟು ಏಳು ವೀಣೆಗಳನ್ನು ರಾಮಾಮಾತ್ಯನು ವಿವರಿಸಿದ್ದಾನೆ. ಏಕರಾಗ ಮೇಳವೀಣೆಯಲ್ಲಿ ಒಂದೇ ರಾಗವನ್ನು ನುಡಿಸಲಿಕ್ಕೆ ಸಾಧ್ಯವಿದ್ದು, ಸ್ಥಿರ ಮೆಟ್ಟಿಲುಗಳು ಎಡದಿಂದ ಬಲಕ್ಕೆ ಚಲಿಸಬಹುದಿತ್ತು. ಸರ್ವರಾಗ ಮೇಳ ವೀಣೆಯಲ್ಲಿ, ಎಲ್ಲಾ ರಾಗಗಳನ್ನು ನುಡಿಸಬಹುದಿತ್ತು ಮತ್ತು ಸ್ಥಿರ ಮೆಟ್ಟಿಲುಗಳು ಏಕಕಾಲದಲ್ಲಿ ಬೇಕಾದ ಸ್ವರಶ್ರೇಣಿ ಮತ್ತು ಸ್ಥಾಯಿಗಳಿಗೆ ಹೊಂದುವಂತೆ ಚಲಿಸಬಹುದಿತ್ತು.

ಶುದ್ಧಮೇಳ ವೀಣೆಯ ದಂಡಿನ ಮೇಲೆ ೬ ಮೆಟ್ಟಿಲುಗಳು, ೪ ಲೋಹದ ತಂತಿಗಳು ಮತ್ತು ಬಲಬದಿಯಲ್ಲಿ ‘ಶ್ರುತಿ’ ಎಂದು ಕರೆಯಲಾದ ೩ ತಂತಿಗಳನ್ನು ಜೋಡಿಸಲಾಗಿತ್ತು. ೪

ತಂತಿಗಳನ್ನು ಅನುಮಂದ್ರ ಷಡ್ಜ, ಅನುಮಂದ್ರ ಪಂಚಮ, ಮಂದ್ರಷಡ್ಜ, ಮಂದ್ರ ಮಾಧ್ಯಮಗಳಿಗೂ, ಬದಿಯ ತಂತಿಗಳು ಮಧ್ಯಷಡ್ಜ, ಮಧ್ಯಮಧ್ಯಮ ಮತ್ತು ತಾರಾಷಡ್ಜಕ್ಕೆ ಹೊಂದಿಸಲಾಗಿತ್ತು.

ಮಧ್ಯಮೇಳ ವೀಣೆಯಲ್ಲಿ ೪ ತಂತಿಗಳನ್ನು ಅನುಮಂದ್ರ ಪಂಚಮ, ಮಂದ್ರಷಡ್ಜ, ಮಂದ್ರಪಂಚಮ, ಮಧ್ಯಷಡ್ಜಗಳಿಗೂ, ಬದಿಯ ತಂತಿಗಳನ್ನು ಮಧ್ಯಷಡ್ಜ, ಮಂದ್ರಪಂಚಮ ಮತ್ತು ಮಂದ್ರಷಡ್ಜಗಳಿಗೆ ಹೊಂದಿಸಲಾಗಿತ್ತು. ಅಚ್ಯುತ ರಾಜೇಂದ್ರ ವೀಣೆಯಲ್ಲಿ ೪ ತಂತಿಗಳನ್ನು ಅನುಮಂದ್ರ ಷಡ್ಜ, ಅನುಮಂದ್ರ ಪಂಚಮ, ಮಂದ್ರಷಡ್ಜ ಮತ್ತು ಮಂದ್ರ ಪಂಚಮಗಳಿಗೂ, ಬದಿಯ ತಂತಿಗಳನ್ನು ಮಧ್ಯಷಡ್ಜ, ಮಂದ್ರಪಂಚಮ ಮತ್ತು ಮಂದ್ರಷಡ್ಜಕ್ಕೆ ಹೊಂದಿಸಲಾಗಿತ್ತು. ವಾದಿ, ಸಂವಾದಿ, ಸ್ವರಗಳ ಸಂಬಂಧ, ಸ್ವಯಂಭು ಸ್ವರಗಳು ಮುಂತಾದವುಗಳ ಬಗ್ಗೆ ವಿವರಣೆಯನ್ನು ನೀಡಲಾಗಿದೆ.

ಮೇಳದ ಬಗ್ಗೆ ವಿವರಣೆಯನ್ನು ನಾಲ್ಕನೇ ಅಧ್ಯಾಯವು ನೀಡುತ್ತದೆ. ಮೇಳವೆಂದರೆ ಗ್ರಾಮ, ಮೂರ್ಛನ, ಜಾತಿ, ತಾನ, ಮುಂತಾದವುಗಳಿಗಾಗಿ ಸ್ವರಗಳನ್ನು ಗುಚ್ಛ ಮಾಡುವುದು ಎಂದು ಹಿಂದೆ ಅರ್ಥೈಸಲಾಗಿತ್ತು. ಬಯಕಾರ ರಾಮಪ್ಪನು ಮೊಟ್ಟಮೊದಲ ಬಾರಿಗೆ ಮೇಳ ಪದವನ್ನು ಉಪಯೋಗಿಸಿರುವನು ಮತ್ತು ಈ ಪದವನ್ನು ಸರಿಯಾದ ಅರ್ಥದಲ್ಲಿ ಉಪಯೋಗಿಸಿರುವನು. ರಾಮಾಮಾತ್ಯನು ೨೦ ಮೇಳಗಳು, ಅವುಗಳ ಸ್ವರಗಳು ಮತ್ತು ೬೦ ಜನ್ಯ ರಾಗಗಳನ್ನು ಕುರಿತು ವಿವೇಚಿಸಿದ್ದಾನೆ. ಇಪ್ಪತ್ತು ಮೇಳಗಳಲ್ಲಿ ಹದಿನೈದಕ್ಕೆ ಮಾನ್ಯತೆ ಇದ್ದಿದ್ದು ತಿಳಿದು ಬರುತ್ತದೆ. ಷಡ್ಜ ಮತ್ತು ಪಂಚಮ ಎಲ್ಲಾ ಮೇಳಗಳಲ್ಲಿಯೂ ಬಳಸಲಾಗಿದೆ.

**ಕೋಷ್ಟಕ-೧**

| ಕ್ರ ಸಂ. | ಮೇಳ | ರಿಷಭ | ಗಾಂಧಾರ | ಮಧ್ಯಮ | ದೈವತ | ನಿಷಾಧ |
|---|---|---|---|---|---|---|
| ೦೧. | ಮುಖಾರಿ | ಶುದ್ಧ | ಶುದ್ಧ | ಶುದ್ಧ | ಶುದ್ಧ | ಶುದ್ಧ |
| ೦೨. | ಮಾಳವಗೌಳ | ಶುದ್ಧ | ಚ್ಯುತಮಧ್ಯಮ | ಶುದ್ಧ | ಶುದ್ಧ | ಚ್ಯುತಮಧ್ಯಮ |
| ೦೩. | ಶ್ರೀರಾಗ | ಪಂಚಶ್ರುತಿ | ಸಾಧಾರಣ | ಶುದ್ಧ | ಪಂಚಶ್ರುತಿ | ಕೈಶಿಕಿ |
| ೦೪. | ಸಾರಂಗನಾಟ | ಪಂಚಶ್ರುತಿ | ಚ್ಯುತಮಧ್ಯಮ | ಶುದ್ಧ | ಪಂಚಶ್ರುತಿ | ಚ್ಯುತಷಡ್ಜ |
| ೦೫. | ಹಿಂದೋಳ | ಪಂಚಶ್ರುತಿ | ಚ್ಯುತಿಮಧ್ಯಮ | ಶುದ್ಧ | ಶುದ್ಧ | ಚ್ಯುತಷಡ್ಜ |
| ೦೬. | ಶುದ್ಧರಾಮಕ್ರಿಯ | ಶುದ್ಧ | ಚ್ಯುತಪಂಚಮ | ಚ್ಯುತಪಂಚಮ | ಶುದ್ಧ | ಚ್ಯುತಷಡ್ಜ |
| ೦೭. | ದೇಶಾಕ್ಷಿ | ಷಟ್‌ಶ್ರುತಿ | ಚ್ಯುತಿಮಧ್ಯಮ | ಶುದ್ಧ | ಪಂಚಶ್ರುತಿ | ಚ್ಯುತಷಡ್ಜ |
| ೦೮. | ಕನ್ನಡಗೌಳ | ಷಟ್‌ಶ್ರುತಿ | ಚ್ಯುತಿಮಧ್ಯಮ | ಶುದ್ಧ | ಪಂಚಶ್ರುತಿ | ಕೈಶಿಕಿ |
| ೦೯. | ಶುದ್ಧನಾಟ | ಷಟ್‌ಶ್ರುತಿ | ಚ್ಯುತಿಮಧ್ಯಮ | ಶುದ್ಧ | ಷಟ್‌ಶ್ರುತಿ | ಚ್ಯುತಷಡ್ಜ |
| ೧೦. | ಆಹರಿ | ಪಂಚಶ್ರುತಿ | ಸಾಧಾರಣ | ಶುದ್ಧ | ಶುದ್ಧ | ಕೈಶಿಕಿ |
| ೧೧. | ನಾದರಾಮಕ್ರಿಯೆ | ಶುದ್ಧ | ಸಾಧಾರಣ | ಶುದ್ಧ | ಶುದ್ಧ | ಕೈಶಿಕಿ |

| | | | | | |
|---|---|---|---|---|---|
| ೧೨. ಶುದ್ಧವರಾಳಿ | ಶುದ್ಧ | ಶುದ್ಧ | ಚ್ಯುತಪಂಚಮ | ಶುದ್ಧ | ಕೈಶಿಕಿ |
| ೧೩. ರೀತಿಗೌಳ | ಶುದ್ಧ | ಶುದ್ಧ | ಶುದ್ಧ | ಪಂಚಶ್ರುತಿ | ಕೈಶಿಕಿ |
| ೧೪. ವಸಂತ ಭೈರವಿ | ಶುದ್ಧ | ಚ್ಯುತಮಧ್ಯಮ | ಶುದ್ಧ | ಶುದ್ಧ | ಕೈಶಿಕಿ |
| ೧೫. ಕೇದಾರಗೌಳ | ಪಂಚಶ್ರುತಿ | ಚ್ಯುತಮಧ್ಯಮ | ಶುದ್ಧ | ಪಂಚಶ್ರುತಿ | ಚ್ಯುತಷಡ್ಜ |
| ೧೬. ಹೆಜ್ಜುಜ್ಜಿ | ಶುದ್ಧ | ಅಂತರ | ಶುದ್ಧ | ಶುದ್ಧ | ಕಾಕಲಿ |
| ೧೭. ಸಾಮವರಾಳಿ | ಶುದ್ಧ | ಶುದ್ಧ | ಶುದ್ಧ | ಶುದ್ಧ | ಕಾಕಲಿ |
| ೧೮. ದೇವಗುಪ್ತಿ | ಶುದ್ಧ | ಶುದ್ಧ | ಶುದ್ಧ | ಶುದ್ಧ | ಶುದ್ಧ |
| ೧೯. ಸಾಮಂತ | ಷಟ್‌ಶ್ರುತಿ | ಅಂತರ | ಶುದ್ಧ | ಷಟ್‌ಶ್ರುತಿ | ಕಾಕಲಿ |
| ೨೦. ಕಾಂಭೋಜಿ | ಪಂಚಶ್ರುತಿ | ಅಂತರ | ಶುದ್ಧ | ಪಂಚಶ್ರುತಿ | ಕಾಕಲಿ |

ರಾಮಾಮಾತ್ಯನು ಹೇಳಿದ ಮೇಳಗಳ ಸ್ವರ ಶ್ರೇಣಿಯು ಸ್ಪಷ್ಟ ಹಾಗೂ ಸಮಂಜಸವಾಗಿತ್ತು. ಅಂದು ಮುಖಾರಿರಾಗ ಶುದ್ಧ ರಾಗವಾಗಿತ್ತು. ರಾಮಾಮಾತ್ಯನು ಹೇಳಿದ ಎಷ್ಟೋ ಮೇಳಗಳು ಇಂದು ಜನ್ಯರಾಗಗಳಾಗಿವೆ. ಕೆಲವೊಂದು ಹೆಸರು ಬದಲಾಗಿದೆ. ಶುದ್ಧರಾಮಕ್ರಿಯ ಇಂದು ಕಾಮವರ್ಧಿನಿಯಾಗಿದೆ. ಮಾಳವಗೌಳವ–ಮಾಯಾಮಾಳವಗೌಳವಾಗಿದೆ. ದೇಶಾಕ್ಷಿ-ಶೂಲಿನಿ, ಕನ್ನಡಗೌಳ-ವಾಗದೀಶ್ವರಿ. ಶುದ್ಧನಾಟ-ಚಲನಾಟ, ಆಹಿರಿ-ಕೀರವಾಣಿ, ನಾದನಾಮ ಕ್ರಿಯ-ಧೇನುಕ, ಶುದ್ಧವರಾಳಿ-ಶುಭಪಂತುವರಾಳಿ, ರೀತಿಗೌಳ-ವನಸ್ಪತಿ, ವಸಂತಭೈರವಿ-ವಕುಳಾಭರಣ ಕೇದಾರಗೌಳ-ಶಂಕರಾಭರಣ ರಾಗಗಳನ್ನು ಹೋಲುತ್ತವೆ. ದೇವಗುಪ್ತಿ, ಮುಖಾರಿ, ಕಾಂಭೋಜಿ, ಶ್ರೀರಾಗಗಳು ಇಂದು ಜನ್ಯರಾಗಗಳಾಗಿವೆ. ೨೦ ಮೇಳಗಳ ಜನ್ಯರಾಗಗಳನ್ನು ರಾಮಾಮಾತ್ಯನು ಹೆಸರಿಸಿದ್ದಾನೆ. ರಾಗಗಳನ್ನು ಉತ್ತಮ, ಮಧ್ಯಮ, ಅಧಮ ರಾಗಗಳೆಂದೂ ವೇಳೆಗನುಸಾರವಾಗಿ ವಿಂಗಡಣೆ ಮಾಡಿ ಅದರ ಲಕ್ಷಣಗಳೊಂದಿಗೆ ವಿವರಿಸಿದ್ದಾನೆ. ಬಯಕಾರ ರಾಮಪ್ಪನು ವಿವರಿಸಿದ ಮಧ್ಯಮೇಳ ವೀಣೆ, ಮೇಳಗಳ ಬೆಳವಣಿಗೆ ಮತ್ತು ವ್ಯವಸ್ಥಿತ ವಿಂಗಡಣೆಯು ಸಂಗೀತದ ಬೆಳವಣಿಗೆಗೆ ಮೈಲಿಗಲ್ಲಾಯಿತು.

ಐದನೆಯ ಅಧ್ಯಾಯವು ಈ ಗ್ರಂಥದಲ್ಲಿನ ಪ್ರಮುಖ ಭಾಗವಾಗಿದೆ. ಇದು ರಾಗಗಳನ್ನು ಕುರಿತು ವಿಶ್ಲೇಷಿಸುತ್ತದೆ. ೬೦ ಜನ್ಯರಾಗಗಳನ್ನು ಕುರಿತು ಹೇಳಿದ್ದಾನೆ. ಈ ರಾಗಗಳನ್ನು ಉತ್ತಮ, ಮಧ್ಯಮ ಮತ್ತು ಅಧಮಗಳೆಂದು ವರ್ಗೀಕರಿಸಲಾಗಿದೆ. ಉತ್ತಮ ರಾಗಗಳ ವರ್ಗಕ್ಕೆ ಸೇರಿದ ೨೦ ರಾಗಗಳನ್ನು ಗೀತ, ಪ್ರಬಂಧ, ಠಾಯಿ ಮತ್ತು ಆಲಾಪನೆಗಳಿಗೆ ಉಪಯೋಗಿಸಲಾಗುತ್ತಿತ್ತು.

ರಾಗಗಳ ಕಲ್ಪನೆ ಭಾರತೀಯ ಸಂಗೀತದ ವಿಶಿಷ್ಟ ಸಾಧನೆಯಾಗಿದೆ. ಇದರ ತಳಹದಿಯ ಮೇಲೆ ಇಡೀ ಸಂಗೀತದ ಸೌಧ ನಿಂತಿದೆ. ಆನಂದವನ್ನುಂಟು ಮಾಡುವಂತೆ ನಿರ್ಮಿತವಾದ ಸ್ವರಗಳ ಮಧುರವಾದ ಜೋಡಣೆಯನ್ನೇ 'ರಾಗ' ಎಂದು ಕರೆಯಬಹುದು. ಬೃಹದ್ದೇಶಿ ಕೃತಿಯಲ್ಲಿ ಮತಂಗನು ರಾಗ ಲಕ್ಷಣವನ್ನು ಹೀಗೆ ಸೂತ್ರೀಕರಿಸಿದ್ದಾನೆ.

ಯೋಸೌ ಧ್ವನಿ ವಿಶೇಷಸ್ತು ಸ್ವರವರ್ಣ ವಿಭೂಷಿತಃ |

ರಂಜಕೋ ಜನಚಿತ್ತಾನಾಂ ಸ ಚ ರಾಗ ಉದಾಹೃತಃ ॥[೬೨]

'ಸ್ವರ' ವರ್ಣವಿಭೂಷಿತವಾದ ಧ್ವನಿ ವಿಶೇಷ ಜನರ ಚಿತ್ತವನ್ನು ರಂಜಿಸುವಂತಿದ್ದರೆ ಅದು ರಾಗ ಎನಿಸಿಕೊಳ್ಳುತ್ತದೆ ಎಂದಿದ್ದಾನೆ. ಅಹೋಬಲನ ಸಂಗೀತ ಪಾರಿಜಾತ ಸ್ಪಷ್ಟವಾಗಿ ರಾಗ ರೂಪವನ್ನು ತಿಳಿಸುತ್ತದೆ. "ರಂಜಕಃ ಸ್ವರ ಸಂದರ್ಭೋಃ ರಾಗ ಇತ್ಯಭಿಧೀಯತೇ" ಅಂದರೆ ರಂಜಕವಾದ ಸ್ವರ ವಿನ್ಯಾಸಗಳೇ ರಾಗ ಎನ್ನುತ್ತಾನೆ ಅಹೋಬಲ. ಮತಂಗನ ರಾಗ ಲಕ್ಷಣ ನಿರೂಪಣೆಯಲ್ಲಿ 'ಸ್ವರ' ಮತ್ತು 'ವರ್ಣ' ಎಂಬ ಮಾತುಗಳು ಬರುತ್ತವೆ. ಇಲ್ಲಿ ವರ್ಣವೆಂದರೆ ಹಾಡುವ ಕ್ರಿಯೆ ಎಂದು ಇಟ್ಟುಕೊಳ್ಳಬೇಕಾಗುತ್ತದೆ.[೬೩]

ರಾಗಕ್ಕೆ ಇಂಗ್ಲೀಷಿನಲ್ಲಿ ಮೆಲೊಡಿಟೈಪ್, ಮೆಲೊಡಿ-ಮೌಲ್ಡ್, ಟ್ಯೂನ್ ಎನ್ನಲಾಗಿದೆ. ಶುದ್ಧ ವಿಕೃತ ಸ್ವರಗಳ ಸಂಖ್ಯೆ ಹನ್ನೆರಡು. ಸಪ್ತಸ್ವರ ಭೇದಗಳಲ್ಲಿ ಐದಕ್ಕೆ ಕಡಿಮೆ ಇಲ್ಲದಂತೆ ಸ್ವರಗಳನ್ನಾಯ್ದು ಅವನ್ನು ಆಧಾರ ಷಡ್ಜಕ್ಕೆ ಸಂಬಂಧಿಸಿದಂತೆ ಒಂದು ಕ್ರಮದಲ್ಲಿ ಸೇರಿಸಿದರೆ ರಾಗವಾಗುತ್ತದೆ.[೬೪]

ಒಂದೇ ಸ್ವರವುಳ್ಳ "ಅರ್ಚಿಕ" ಸಂಗೀತದಿಂದ ಹಿಡಿದು ಸಪ್ತಸ್ವರಗಳನ್ನು ಬಳಸಿಕೊಳ್ಳುವ 'ಸಂಪೂರ್ಣ' ಸಂಗೀತದವರೆಗೆ ಏಳು ಬಗೆಗಳಾಗುತ್ತವೆ. ಇದರಲ್ಲಿ ಔಡವ, ಷಾಡವ ಮತ್ತು ಸಂಪೂರ್ಣಗಳು ಲೌಕಿಕ ಸಂಗೀತವಾಗಿ, ದೇಶೀ ಎಂಬ ಹೆಸರನ್ನು ಪಡೆದು ಬೆಳೆದು ಬಂದಿವೆ. ಐದು, ಆರು, ಏಳು, ಸ್ವರಗಳ ವಿವಿಧ ವಿನ್ಯಾಸದಿಂದ, ಇದರ ಜೊತೆಗೆ ವಿಕೃತಿ ಸ್ವರಗಳೂ ಸೇರಿ ಅನಂತ ರಾಗಗಳ ಕಲ್ಪನೆಯನ್ನು ಶಾಸ್ತ್ರಕಾರರು ಕಂಡುಕೊಂಡರು. ಆರೋಹಣ ಮತ್ತು ಅವರೋಹಣಗಳಲ್ಲಿ ಆಗುವ ಸ್ವರಗಳ ವ್ಯತ್ಯಾಸದಿಂದ ರಾಗಗಳ ಸಂಖ್ಯೆಯನ್ನು ಅಸಂಖ್ಯಾತವಾಗಿ ಬೆಳೆಸಿದ್ದಾರೆ. ಸಾವಿರಾರು ಸಂಖ್ಯೆಗಳವರೆಗೆ ರಾಗಗಳನ್ನು ಬೆಳೆಸಬಹುದಾದರೂ ಅವುಗಳಲ್ಲಿ ಹಾಡಲು ಸಾಧ್ಯವಾಗಬಹುದಾವು ಸುಮಾರು ಇನ್ನೂರು ರಾಗಗಳು.[೬೫]

ಈ ರಾಗಗಳ ವ್ಯವಸ್ಥೆಯನ್ನು ಶಾಸ್ತ್ರಕಾರರು ಒಂದು ಕ್ರಮವನ್ನು ರೂಢಿಸಿಕೊಂಡು ಬಂದರು. ಈ ವ್ಯವಸ್ಥೆಯನ್ನು ಪೂರ್ಣಗೊಳಿಸಿ ಎಪ್ಪತ್ತೆರಡು ಮೇಳಕರ್ತ ರಾಗಗಳನ್ನು ನಿರ್ಮಿಸಿದನು. ಇವು ಜನಕ ರಾಗಗಳಾಗಿ ಇತರ ಅನೇಕ ಜನ್ಯರಾಗಗಳಿಗೆ ಕಾರಣವಾದವು. ಈ ಎಪ್ಪತ್ತೆರಡು ಮೇಳಕರ್ತಗಳನ್ನು ಪ್ರತಿಯೊಂದರಲ್ಲಿಯೂ ಆರು ರಾಗಗಳನ್ನುಳ್ಳ ಹನ್ನೆರಡು ಚಕ್ರಗಳನ್ನಾಗಿ ಮಾಡಲಾಯಿತು.

**ಕೋಷ್ಟಕ**[೬೬]

೧. ೧ ರಿಂದ ೬ರವರೆಗೆ - ಇಂದುಚಕ್ರ

೨. ೭ ರಿಂದ ೧೨ರವರೆಗೆ - ನೇತ್ರಚಕ್ರ

೩. ೧೩ ರಿಂದ ೧೮ರವರೆಗೆ - ಅಗ್ನಿಚಕ್ರ

೪. ೧೯ ರಿಂದ ೨೪ರವರೆಗೆ - ವೇದಚಕ್ರ

೫. ೨೫ ರಿಂದ ೩೦ರವರೆಗೆ - ಬಾಣಚಕ್ರ

೬. ೩೧ ರಿಂದ ೩೬ರವರೆಗೆ - ಋತುಚಕ್ರ

೭. ೩೭ ರಿಂದ ೪೨ರವರೆಗೆ - ಋಷಿಚಕ್ರ

೮. ೪೩ ರಿಂದ ೪೮ರವರೆಗೆ - ವಸುಚಕ್ರ

೯. ೪೯ ರಿಂದ ೫೪ರವರೆಗೆ - ಬ್ರಹ್ಮಚಕ್ರ

೧೦. ೫೫ ರಿಂದ ೬೦ರವರೆಗೆ - ದಿಶಿಚಕ್ರ

೧೧. ೬೧ ರಿಂದ ೬೬ರವರೆಗೆ - ರುದ್ರಚಕ್ರ

೧೨. ೬೭ ರಿಂದ ೭೨ರವರೆಗೆ - ಆದಿತ್ಯಚಕ್ರ

ಈ ಹನ್ನೆರಡು ಚಕ್ರಗಳಲ್ಲಿ ಮೊದಲನೆಯ ಆರು ಚಕ್ರಗಳನ್ನು ಪೂರ್ವಭಾಗವೆಂದೂ, ಕೊನೆಯ ಆರು ಚಕ್ರಗಳನ್ನು ಉತ್ತರಭಾಗವೆಂದೂ ಕರೆಯಲಾಗಿದೆ.

ಜನಕ-ಜನ್ಯ ಈ ಎರಡೂ ರಾಗಗಳನ್ನು ಇನ್ನೊಂದು ಬಗೆಯಲ್ಲಿ ವಿಂಗಡಿಸಲಾಗಿದೆ. ಮಾಯಾಮಾಳವಗೌಳ, ಕಲ್ಯಾಣಿಯಂಥ ರಾಗಗಳು ತಮ್ಮತಮ್ಮ ವೈಶಿಷ್ಟ್ಯವನ್ನು ತಮ್ಮಲ್ಲಿಯೇ ಉಳಿಸಿಕೊಂಡು, ಅದರಿಂದ ಮಾತ್ರ ತೃಪ್ತವಾಗಿ, ಲಕ್ಷಣಕಾರರ ಆದೇಶಗಳಿಗೆ ತಲೆಬಾಗಿ ಪಾತಿವ್ರತ್ಯ ನಿಯಮವನ್ನು ಪಾಲಿಸುವ ರಾಗಗಳು. ಇವುಗಳಿಗೆ ಶುದ್ಧರಾಗಗಳೆಂದು ಹೆಸರು. ಸಾರಂಗ, ಸೌರಾಷ್ಟ್ರದಂತಹ ಮತ್ತೆ ಕೆಲವು ರಾಗಗಳು ಬೇರೆ ಬೇರೆ ರಾಗಗಳ ಲಕ್ಷಣವನ್ನು ಪ್ರದರ್ಶಿಸುತ್ತವೆ. ಇಂಥವಕ್ಕೆ ಛಾಯಾಲಗ ಅಥವಾ ಸಾಳಗ ಎನ್ನುತ್ತಾರೆ.[೬]

ಲಕ್ಷಣ ಗ್ರಂಥದಲ್ಲೂ ರಾಗಕ್ಕೆ ೧೩ ಲಕ್ಷಣಗಳನ್ನು ಹೇಳಲಾಗಿದೆ. ಗ್ರಹ, ಅಂಶ, ತಾರ, ಮಂದ್ರ, ನ್ಯಾಸ, ಅಪನ್ಯಾಸ, ಸನ್ಯಾಸ, ವಿನ್ಯಾಸ, ಬಹುತ್ವ, ಅಲ್ಪತ್ವ, ಅಂತರ, ಮಾರ್ಗ, ಷಾಡವ, ಔಡವ, ಇವುಗಳಲ್ಲಿ ಮುಖ್ಯವಾದವುಗಳ ಮೂರು ಅವುಗಳೆಂದರೆ ಗ್ರಹ, ಅಂಶ, ನ್ಯಾಸ, ಗ್ರಹವೆಂದರೆ ರಾಗ ಶುರುವಾಗುವ ಸ್ವರ, ರಾಗ ಮುಗಿಯುವ ಸ್ವರ ನ್ಯಾಸ, ಅಂಶವೆಂದರೆ ರಾಗದಲ್ಲಿ ಅತಿ ಮುಖ್ಯವಾಗಿ ಪ್ರಯೋಗ ಬಾಹುಳ್ಯದಿಂದ ವಿಶಿಷ್ಟವಾದ ಸ್ವರ. ಇದಕ್ಕೆ ಜೀವಸ್ವರ, ರಾಗ ಛಾಯಾಸ್ವರ ಎಂತಲೂ ಕರೆಯಲಾಗಿದೆ.

ರಾಗವೇ ಸಂಗೀತ ಪ್ರಯೋಗದ ಕಡೆಯ ಫಲ. ಮಾತಿಗೆ ಸಿಲುಕದ ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳನ್ನು ಆಧ್ಯಾತ್ಮಿಕ ಅನುಭವಗಳನ್ನು ಹೊರಹೊಮ್ಮಿಸಬೇಕೆಂಬ ಪ್ರಯತ್ನ 'ರಾಗ'ದಿಂದ

ಸಿದ್ಧಿಸಿತು. ‘ರಾಗ’ ಎನ್ನುವ ಮಾತೇ ಅದರ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ‘ಅನುರಾಗ’, ‘ರಕ್ತಿ’, ‘ಭಾವನೆ’, ‘ಉದ್ವೇಗ’ ಮೊದಲಾದ ಅರ್ಥವನ್ನು ಅದು ಸೂಚಿಸುತ್ತದೆ.

ರಾಗದ ಸ್ವರೂಪವನ್ನು “Raga is a Physco - Material object, as it is an objective expression of the Subjective Feeling of the mind”[೬೮] ಎನ್ನುವ ಮಾತು ಸ್ಪಷ್ಟಪಡಿಸುತ್ತದೆ. ವ್ಯಕ್ತಿನಿಷ್ಠ ಅನುಭವಗಳ ವಸ್ತುನಿಷ್ಠವಾದ ನಾದ ನಿರೂಪಣೆಯೇ ರಾಗ. ಶಾಸ್ತ್ರೀಯವಾದ ನಾದ ವಿನ್ಯಾಸಗಳ ಬಹಿರ್ ರೂಪದ ಮಾಧ್ಯಮವನ್ನು ಅವಲಂಬಿಸಿ ತನ್ನ ಆಂತರಿಕ ಅನುಭವಗಳನ್ನು ನಿರೂಪಿಸಲು ರಾಗ ಸಹಾಯವಾಗುತ್ತದೆ.

ವಿಜಯನಗರ ಕಾಲದ ಮಹತ್ವದ ಮೌಲಿಕ ಗ್ರಂಥ ‘ಸ್ವರಮೇಳಕಳಾನಿಧಿ’. ಈ ಸಮಯಕ್ಕಾಗಲೇ ಕಲ್ಲಿನಾಥನ ವ್ಯಾಖ್ಯಾನದ ಕಾಲವು ಮುಗಿದು ಆಗಲೇ ಕೆಲವು ಕಾಲ ಕಳೆದಿತ್ತು. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರದ ವೈಭವ ತನ್ನ ಅತ್ಯುನ್ನತ ಶಿಖರವನ್ನು ಮುಟ್ಟಿ, ಸಾಹಿತ್ಯ ಸಂಗೀತಾದಿ ಕಲೆಗಳಿಗೆ ವಿಶೇಷ ಪೋಷಣೆಯನ್ನು ನೀಡಿತ್ತು. ದಾಸಕೂಟದ, ಅದರಲ್ಲೂ ಮುಖ್ಯವಾಗಿ ಪುರಂದರದಾಸರ, ಕೀರ್ತನೆಗಳ ರಚನೆ ವಿಪುಲವಾಗಿ ನಡೆದಿತ್ತು. ಅಲ್ಲದೆ ಪುರಂದರದಾಸರು ವಾಗ್ಗೇಯಕಾರರಾಗಿ ತಮ್ಮದೇ ಆದ ಕಾಣಿಕೆಯನ್ನು ಕರ್ನಾಟಕ ಸಂಗೀತಕ್ಕೆ ಕೊಟ್ಟಿದ್ದರು. ಇದೆಲ್ಲದರ ಪರಿಣಾಮವಾಗಿ ಸಂಗೀತ ಒಂದು ಹೊಸ ಹಾದಿಯಲ್ಲಿ ಮುನ್ನಡೆಯುತ್ತಿತ್ತು. ಈ ಕಾಲದಲ್ಲಿ ಸಂಗೀತದ ಪ್ರಗತಿ ಮುನ್ನಡೆದಂತೆ, ಅನೇಕ ಸಮಸ್ಯೆಗಳು ಹುಟ್ಟಿಕೊಂಡವು. ಸಂಗೀತದ ಸ್ವರ, ರಾಗ, ಮೇಳಗಳಲ್ಲಿ ವೈರುಧ್ಯ ಉಂಟಾಯಿತು. ಅವುಗಳನ್ನು ಅಂದಿನ ಸಂಗೀತದ ವಿದ್ವಾಂಸರು ವ್ಯಕ್ತಪಡಿಸಿ, ಅವುಗಳಿಗೆ ಪರಿಹಾರವನ್ನು ನೀಡಿದ್ದಾರೆ. ಆದರೆ ಅವುಗಳಿಗೆ ಪರಿಣಾಮಕಾರಿ ಪರಿಹಾರವನ್ನು ನೀಡಿದವನು ಬಯಕಾರ ರಾಮಪ್ಪನೆಂಬುದು ಗಮನಾರ್ಹವಾದ ಸಂಗತಿಯಾಗಿದೆ. ಈ ಯುಗದಲ್ಲಿ ರಾಮಾಮಾತ್ಯ, ಸ್ವರಮೇಳ ಕಲಾನಿಧಿಯನ್ನು ಬರೆದು, ಹೊಸ ಅಭಿಪ್ರಾಯಗಳಿಗೆ ಶಾಸ್ತ್ರೀಯವಾದ ವ್ಯವಸ್ಥೆಯನ್ನುಂಟು ಮಾಡಲು ಪಟ್ಟಿರುವ ಪ್ರಯತ್ನ ಸ್ತುತ್ಯಾರ್ಹವಾದುದು. ವಿಜಯನಗರ ಕಾಲ ಸಂಗೀತ ಸಾಹಿತ್ಯದ ಇತಿಹಾಸದಲ್ಲಿ ಸ್ಮರಣಾರ್ಹವಾದುದು. ಬಯಕಾರ ರಾಮಪ್ಪನಂತಹ ವ್ಯಕ್ತಿಗಳೇ ಇದಕ್ಕೆ ಕಾರಣ ಪುರುಷರು ಎಂದರೆ ತಪ್ಪಾಗಲಾರರು.

**ಅಡಿಟಿಪ್ಪಣಿಗಳು**

೦೧. ನಾಗಭೂಷಣಶಾಸ್ತ್ರೀ (ಸಂ), ವಿವೇಕ ಚಿಂತಾಮಣಿ ನಿಜಗುಣ ಶಿವಯೋಗಿಗಳು ಪು. ೧೭೯, ಬೆಂಗಳೂರು.

೦೨. ಅದೇ.

೦೩. ಗಾನಶಾಸ್ತ್ರದಾಯಿನಿ

೦೪. ಹರ್ಬರ್ಟ್ ಸ್ಪಿನ್ಸರ್ ಲಿಟೆರರಿ ಸ್ಟೈಲ್

೦೫. ಕರ್ಟ್ ಸುಭಾಸ್ ವಿ.ಶಾರ್ಟ್ ಹಿಸ್ಟರಿ ಆಫ್ ಮೂಸಿಕ್

೦೬. ನಾಗಭೂಷಣಶಾಸ್ತ್ರೀ (ಸಂ), ವಿವೇಕ ಚಿಂತಾಮಣಿ ನಿಜಗುಣಶಿವಯೋಗಿಗಳು, ಪು. ೧೬೯.

೦೭. ಸತ್ಯನಾರಾಯಣ ರಾ. (ಸಂ), ರಾಗಮಾಲ ಪುಂಡರೀಕ ವಿಠಲ ಪು. ೧೮೫, ಬೆಂಗಳೂರು, ೧೯೮೯.

೦೮. ಸುಬ್ರಮಣ್ಯಶಾಸ್ತ್ರಿ ಎನ್. (ಸಂ), ಸಂಗೀತ ರತ್ನಾಕರ ಶಾರ್ಙ್ಗದೇವ ಪು. ೨೫, ಮದರಾಸು.

೦೯. ರಾಮಸ್ವಾಮಿ ಅಯ್ಯರ್, ಸ್ವರಮೇಳ ಕಳಾನಿಧಿ ಪೀಠಿಕೆ ಮದರಾಸು.

೧೦. ಗೋಸ್ವಾಮಿ ಜಿ., ದಿ ಸ್ಟೋರಿ ಆಫ್ ಇಂಡಿಯನ್ ಮ್ಯೂಸಿಕ್

೧೧. ಅರವಿಂದ ಮಾಲಗತ್ತಿ, ಕರ್ನಾಟಕ – ಕರ್ನಾಟಕ ಸಂಗೀತ, ಪು. ೪೪೭.

೧೨. ತಿಪ್ಪೇಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಸಂಗೀತ ಮತ್ತು ನೃತ್ಯ ಪು–೬೬೨.

೧೩. ಅನಂತ ಕೃಷ್ಣಶರ್ಮ, ಗಾನಕಲೆ ರಾಳ್ಳಪಲ್ಲಿ

೧೪. ತಿಪ್ಪೇಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಸಂಗೀತ ಮತ್ತು ನೃತ್ಯ ಪು–೬೬೧.

೧೫. ಗಾನಕಲಾಮಂಜರಿ, ಸಂಪುಟ–೨, ಪುಟ–೮೧.

೧೬. ತಿಪ್ಪೇಸ್ವಾಮಿ ಎಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಸಂಗೀತ ಮತ್ತು ನೃತ್ಯ ಪು–೬೬೩.

೧೭. ಅದೇ, ಪುಟ–೬೬೭.

೧೮. ಅದೇ, ಪುಟ–೬೬೪.

೧೯. ಅರವಿಂದ ಮಾಲಗತ್ತಿ, ಕರ್ನಾಟಕ – ಕರ್ನಾಟಕ ಸಂಗೀತ, ಪು. ೪೪೭.

೨೦. ಸತ್ಯನಾರಾಯಣ ರಾ., ಆಧುನಿಕ ಸಂಗೀತದ ಆದ್ಯಾಚಾರ್ಯ–ಕನ್ನಡಿಗ ಕಲ್ಲಪ್ಪ, ಪ್ರಜಾಮತ ದೀಪಾವಳಿ ಸಂಚಿಕೆ

೨೧. ಅದೇ.

೨೨. ಅರವಿಂದ ಮಾಲಗತ್ತಿ, ಕರ್ನಾಟಕ – ಕರ್ನಾಟಕ ಸಂಗೀತ, ಪು. ೪೪೮.

೨೩. ತಿಪ್ಪೇಸ್ವಾಮಿ ಎಚ್., ಕರ್ಣಾಟಕ ಸಂಸ್ಕೃತಿ ಸಮೀಕ್ಷೆ ಸಂಗೀತ ಮತ್ತು ನೃತ್ಯ ಪು-೬೭೩.

೨೪. ಬಸವರಾಜು ಎಲ್. (ಸಂ), ಶಿವದಾಸ ಗೀತಾಂಜಲಿ

೨೫. ಅದೇ, ಪುಟ-೨೫

೨೬. ಅದೇ, ಪುಟ-೧೯೩

೨೭. ಸಿದ್ಧಲಿಂಗಯ್ಯ ಜಿ.ಎಸ್., ಹರಿದಾಸ ಸಾಹಿತ್ಯ ಪರಂಪರೆ, ಪುಟ-೧೮.

೨೮. ಚಿದಾನಂದಮೂರ್ತಿ ಎಂ. ವಚನ ಸಾಹಿತ್ಯದ ಉಗಮ, ಪು.೨೫

೨೯. ಸಿದ್ದಲಿಂಗಯ್ಯ ಜಿ.ಎಸ್. ಹರಿದಾಸ ಸಾಹಿತ್ಯ ಪರಂಪರೆ ಪು.೮

೩೦. ಪುರಂದರ ಸಾಹಿತ್ಯ ದರ್ಶನ ಸಂ-೪,ಪು೨

೩೧. ಹರಿದಾಸ ಸಾಹಿತ್ಯ ಪರಂಪರೆ ಪು,೨೪

೩೨. ಪುರಂದರ ಸಾಹಿತ್ಯದರ್ಶನ, ಪ್ರಸ್ತಾವನೆ, ಸಂ.೧, ಪು.೩೩

೩೩. ಬೆಟಗೇರಿ ಕೃಷ್ಣಶರ್ಮ, ಕನಕದಾಸರ ಹಾಡುಗಳು. ಪು.೨೦೧

೩೪. ರೈಸ್ ಸಂಗ್ರಹಣೆ, ಶಿವವೊಗ್ಗ ೮೫ನೇ ಶಾಸನ

೩೫. ಕನಕದಾಸರ ಪದಗಳು, ಪದ ೫೦, ಮುತ್ತುಕೇರಿಗೆ ಮುತ್ತು ಪದ:೫೧ ಕೂಸನುಕಂಡಿರಾ

೩೬. ವರದರಾಜರಾವ್ ಜಿ., ಕನಕದಾಸರ ಕಾಲ, ದೇಶ ಮತ್ತು ಜೀವನ, ಕ,ತ,ಚಿಕ್ಕಣ್ಣ (ಸಂ)ಕನಕಕಿರಣ

೩೭. ಕೋತಿನ ಎಸ್.ಎಸ್. (ಸಂ), ಮೋಹನ ತರಂಗಿಣಿ, ಗರುಡನ ಸಂಧಿ ೩೬, ಪದ್ಯ ೪೨

೩೮. ಅದೇ ಪು ೨೩೭-೨೩೮

೩೯. ಕಟ್ಟಿ ಶೇಷಾಚಾರ್ಯರು, ಕವಿ ಕನಕದಾಸರು ಪು.೭೫

೪೦. ಬೆಟಗೇರಿ ಕೃಷ್ಣಶರ್ಮ ಮತ್ತು ಬೆಂಗೇರಿ ಹುಚ್ಚುರಾವ್, ಶ್ರೀ ಕನಕದಾಸರ ಭಕ್ತಿಗೀತೆಗಳು, ಪುಟ ೩೬೭-೬೮

೪೧. ದೇವೇಂದ್ರ ಮಾಧವನವರ, ಕನಕದಾಸರು ಬೇಡ ಜನಾಂಗದವರು, ಎಸ್.ಎಸ್.ಭಗವತಿ (ಸಂ) ಕನಕದಾಸರ: ಒಂದು ಅಧ್ಯಯನ, ಪುಟ-೩೮

೪೨. ಬೆಟಗೇರಿ ಕೃಷ್ಣಶರ್ಮ: ಕನಕದಾಸರು ಚಿತ್ರಿಸಿದ ಜೀವನ, ಮಹಾತ್ಮ ಕನಕದಾಸಯನ ಪ್ರಶಸ್ತಿ. ಪು-೩೧

೪೩. ನಾಗರಾಜ.ಕೆ.ಜಿ.ಕನಕದಾಸರ ಕೀರ್ತನೆಗಳು: ಕನಕದಾಸರು ಒಂದು ಅಧ್ಯಯನ ಡಾ.ಎಸ್.ಎಸ್.ಭಗವತಿ

೪೪. ರಾಜರಾವ್ ಎಲ್. ಕನ್ನಡ ವಾಗ್ಗೇಯಕಾರರು, ಕೃತಿಕಾರರು, ಚಿನ್ನದ ಬೆಳಸು, ಪುಟ ೧೨೩

೪೫. ಸೀತಾರಾಮಯ್ಯ.ಎಂ.ವಿ.ಕನ್ನಡ ಹಾಡಿನ ವಿಕಾಸ ಮತ್ತು ಲಯ ಸ್ವರೂಪ, ಚಿನ್ನದ ಬೆಳಸು, ಪುಟ ೧೨೭

೪೬. ಲಕ್ಕಪ್ಪಗೌಡ ಎಚ್.ಜೆ., ಕನಕದಾಸರ ಕೀರ್ತನೆಗಳು ಕಾವ್ಯಮೌಲ್ಯ, ಕನಕದಾಸರ ಒಂದು ಅಧ್ಯಯನ (ಸಂ) ಡಾ. ಭಗವತಿ.ಎಸ್.ಎನ್.

೪೭. ಮಣೀಹ ಪುಟ ೯೬-೬೭

೪೮. ಎಪಿಗ್ರಾಫೀಯ ಇಂಡಿಕಾ, ಸಂ-೫.

೪೯. ಪಂಚಮುಖಿ ಆರ್.ಎಸ್., ಶ್ರೀಪುರಂದರದಾಸರ ಜೀವನ ಚರಿತ್ರೆ, ಪು.೫೭

೫೦. ಸಿದ್ದಲಿಂಗಯ್ಯ ಜಿ.ಎಸ್. ಹರಿದಾಸ ಸಾಹಿತ್ಯ ಪರಂಪರೆ ಪು.೪೭

೫೧. ವರದರಾಜರಾವ್ ಜಿ. ಹರಿದಾಸ ಸಾಹಿತ್ಯಸಾರ ಪು. ೪೧೨

೫೨. ವರದರಾಜರಾವ್ ಜಿ. ಪುರಂದರದಾಸರು ಪು.೫೫.

೫೩. ಅರವಿಂದ ಮಾಲಗತ್ತಿ, ಕರ್ಣಾಟಕ - ಕರ್ಣಾಟಕ ಸಂಗೀತ, ಪು. ೪೪೭.

೫೪. ಅದೇ. ಪು. ೪೪೭.

೫೫. ತಿಪ್ಪೇಸ್ವಾಮಿ ಹೆಚ್., ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಸಂಗೀತ ಮತ್ತು ನೃತ್ಯ, ಪು. ೬೬೫.

೫೬. ಅಮೃತಾ ನಾರಾಯಣ, ಕನ್ನಡ ಸಾಹಿತ್ಯ ಮತ್ತು ಶಾಸನಗಳ ಹಿನ್ನೆಲೆಯಲ್ಲಿ ದಕ್ಷಿಣಾದಿ ಸಂಗೀತದ ವಿವರಣೆ - ಒಂದು ಅಧ್ಯಯನ, ಪು. ೧೭.

೫೭. ಶಿವರುದ್ರಸ್ವಾಮಿ. ಎಸ್.ಎನ್. ಬಯಕಾರ ರಾಮಪ್ಪ, ಪು. ೧೫.

೫೮. ರಾಳ್ಳಪಲ್ಲಿ ಅನಂತ ಕೃಷ್ಣಶರ್ಮ, ಗಾನಕಲೆ, ಪು. ೬೫.

೫೯. ಗೋಸ್ವಾಮಿ. ಜಿ., ದಿ ಹಿಸ್ಟರಿ ಆಫ್ ಇಂಡಿಯನ್ ಮ್ಯೂಸಿಕ್, ಪು. ೩೫.

೬೦. ಬಯಕಾರ ರಾಮಪ್ಪ, ಪು. ೯.

೬೧. ಅದೇ. ಪು. ೧೦.

೬೨. ಸಾಂಬಮೂರ್ತಿ.ಪಿ. ಸೌತ್ ಇಂಡಿಯನ್ ಮ್ಯೂಸಿಕ್, ಪು. ೧೨೫.

೬೩. ದಿ ಹಿಸ್ಟರಿ ಆಫ್ ಇಂಡಿಯನ್ ಮ್ಯೂಸಿಕ್, ಪು. ೫೫.

೬೪. ಕರ್ಣಾಟಕ ಸಂಗೀತ, ಪು. ೪೫೦.

೬೫. ತಿಪ್ಪೇಸ್ವಾಮಿ ಹೆಚ್., ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ಸಂಗೀತ ಮತ್ತು ನೃತ್ಯ, ಪು. ೬೫೨.

೬೬. ಅದೇ ಪು. ೫೫೨.

೬೭. ಕರ್ಣಾಟಕ ಸಂಗೀತ, ಪು. ೫೫೨.

೬೮. Swamy, Prajananda, The Historical Development of indian Music, p. ೧೨೫.

# ಅಧ್ಯಾಯ ೬
# ಸಮಾರೋಪ

ದಕ್ಷಿಣ ಭಾರತದ ಚರಿತ್ರೆಯಲ್ಲಿ ವಿಜಯನಗರ ಅರಸರ ಆಳ್ವಿಕೆಯು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇಡೀ ದಕ್ಷಿಣ ಭಾರತವನ್ನೇ ವ್ಯಾಪಿಸಿದ್ದ ಅವರ ರಾಜ್ಯದಲ್ಲಿ ಆಡಳಿತವನ್ನು ಸುಲಭಗೊಳಿಸುವ ಉದ್ದೇಶದಿಂದ ವಿಶಿಷ್ಟವಾದ ಅಮರನಾಯಕರ ಪದ್ಧತಿಯನ್ನು ಜಾರಿಗೆ ತಂದರು. ಈ ಕಾಲದಲ್ಲಿ ಸಣ್ಣಪುಟ್ಟ ಪಾಳೆಯಗಾರರು, ಮಾಂಡಲೀಕರು ತಮ್ಮ ತಮ್ಮ ಕ್ಷೇತ್ರದಲ್ಲಿ ರಾಜಮಹಾರಾಜರಂತೆಯೇ ವೈಭವಪೂರ್ಣವಾಗಿ ಆಳ್ವಿಕೆಯನ್ನು ಮಾಡಿರುವರು. ಇವರು ಅರಸರು ಮಾಡುತ್ತಿದ್ದ ಎಲ್ಲಾ ರೀತಿಯ ಪ್ರಜಾಹಿತದ ಕಾರ್ಯವನ್ನು ನಿಷ್ಠೆಯಿಂದ ಪ್ರಾಮಾಣಿಕವಾಗಿ ಅನುಕರಣೀಯವಾಗುವಂತೆ ಮಾಡಿತೋರಿಸಿದರು. ಜನಸಾಮಾನ್ಯರಿಗೆ ತುಂಬಾ ಅವಶ್ಯವಿರುವ ಕೆರೆ, ಬಾವಿ, ಅರವಟ್ಟಿಗೆ, ಗುಡಿಗುಂಡಾರ ಮತ್ತು ಕೋಟೆ ಕೊತ್ತಲಗಳನ್ನು ನಿರ್ಮಿಸಿದ್ದಲ್ಲದೆ ಧರ್ಮ, ಸಾಹಿತ್ಯ, ಕಲೆಗಳೊಂದಿಗೆ ಸಾಂಸ್ಕೃತಿಕ ಮೌಲ್ಯಗಳನ್ನು ಸಂರಕ್ಷಿಸಿಕೊಂಡು ಬಂದರು.

ಪ್ರಸಕ್ತದಲ್ಲಿ ಸಂಶೋಧನೆಯು ಆಳರಸರ ಇತಿಹಾಸದಿಂದ ಆರ್ಥಿಕ, ಸಾಮಾಜಿಕ ಮತ್ತು ಜನಸಾಮಾನ್ಯರ ಇತಿಹಾಸಗಳ ಅಧ್ಯಯನದ ಕಡೆಗೆ ಹರಿಯುತ್ತಿದೆ. ಜನಸಾಮಾನ್ಯರ ಬದುಕಿನ ಮೇಲೆ ಸಾಮ್ರಾಜ್ಯಮಟ್ಟದ ರಾಜಕೀಯಕ್ಕಿಂತ ಸ್ಥಳೀಯ ರಾಜಕೀಯ ಬದಲಾವಣೆ ಹೆಚ್ಚಿನ ಪರಿಣಾಮವನ್ನುಂಟು ಮಾಡುತ್ತದೆ. ಸಮಕಾಲೀನ ಸಾಮಂತ ಅರಸರ, ಅಧಿಕಾರಿಗಳ ಸಾಧನೆಗಳು ಅರಸರ ಪ್ರಜ್ವಲ ಆಳ್ವಿಕೆಯ ಮುಂದೆ ಗೌಣವಾಗುವುದು ಹಿಂದಿನಿಂದಲೂ ನಡೆದುಬಂದಿದೆ.

ಸಮಕಾಲೀನನಾದ ಬಯಕಾರ ರಾಮಪ್ಪನ ಸಾಧನೆಗಳನ್ನು ಪ್ರತ್ಯೇಕವಾಗಿ ಗಮನಿಸಿ ನೋಡಿದಾಗ ಅರಸರ ಸಾಧನೆಗಳಿಗಿಂತ ಕೆಲವು ಅಂಶಗಳಲ್ಲಿ ಉನ್ನತವಾಗಿ ಇರುವುದು ಕಂಡುಬರುತ್ತದೆ. ಇವನ ಜನಪರ ಕಾರ್ಯಗಳು ಅರಸರ ಮುಂದೆ ಎಲೆಮರೆಯ ಕಾಯಿಯಂತಾಗಿವೆ. ಸಾಮ್ರಾಜ್ಯದ ಉನ್ನತಿಗಾಗಿ ದುಡಿದು, ಸಾಮ್ರಾಜ್ಯದ ಏಳಿಗೆಗಾಗಿ ಬದುಕನ್ನು ಮುಡುಪಾಗಿಟ್ಟು ತಾನು ನಿರ್ಮಿಸಿದ ದೇವಾಲಯಗಳು, ಕೆರೆಗಳು, ಬಾವಿಗಳು, ಅಗ್ರಹಾರಗಳು ಮೊದಲಾದ ಜನಪರ ಕಾರ್ಯಗಳಿಂದ ಇಂದಿಗೂ ಜನರ ಮನಸ್ಸಿನಲ್ಲಿ ಸ್ಥಾನ ಪಡೆದಿರುವ ಬಯಕಾರ ರಾಮಪ್ಪನ ಜೀವನ ಸಾಧನೆಗಳ ಮೇಲೆ ಬೆಳಕನ್ನು ಚೆಲ್ಲುವುದು ನನ್ನ ಅಧ್ಯಯನದ ಉದ್ದೇಶವಾಗಿತ್ತು.

ಈ ಉದ್ದೇಶದ ಪೂರೈಕೆಗಾಗಿ ಪ್ರಸ್ತುತ ಅಧ್ಯಯನವನ್ನು ಆರು ಅಧ್ಯಾಯಗಳನ್ನಾಗಿ ವಿಂಗಡಿಸಲಾಗಿದೆ.

ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಸ್ಪಷ್ಟವಾಗಿ ಹೇಳಲಾಗಿದ್ದು, ಈ ಅಧ್ಯಯನಕ್ಕೆ ಸಂಬಂಧಪಟ್ಟ ಮಾಹಿತಿ ಸಂಗ್ರಹಣೆ, ವಿಶ್ಲೇಷಣೆ ಮುಂತಾದವುಗಳನ್ನು ಯಾವ ರೀತಿಯಲ್ಲಿ ಮಾಡಲಾಗಿದೆ ಎಂಬುದರ ಬಗೆಗೆ ಚರ್ಚಿಸಲಾಗಿದೆ. ಬಹಳ ಮುಖ್ಯವಾಗಿ ಈ ಅಧ್ಯಾಯವು ನನ್ನ ಮುಂದಿನ ಅಧ್ಯಯನಗಳು ಯಾವ ರೀತಿ ಇವೆ. ಏನನ್ನು ಒಳಗೊಂಡಿವೆ ಎಂಬುದರ ಬಗೆಗೆ ಮಾಹಿತಿಯನ್ನು ಕೊಡಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ವಿಜಯನಗರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಪರಿಸ್ಥಿತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ವಿಜಯನಗರ ಸ್ಥಾಪನೆಯೊಂದಿಗೆ ಅದನ್ನು ಆಳಿದ ಸಂಗಮ, ಸಾಳವ, ತುಳುವ, ಅರವೀಡು ವಂಶಗಳು ಹಾಗೂ ಬಹುಮನಿ ಅರಸರೊಂದಿಗೆ ವಿಜಯನಗರ ಹೊಂದಿದ್ದ ಸಂಬಂಧ ಮತ್ತು ಸ್ಥಳೀಯ ಅರಸರುಗಳೊಂದಿಗೆ ವಿಜಯನಗರವು ಹೊಂದಿದ್ದ ಸಂಬಂಧಗಳನ್ನು ಹೇಳಲಾಗಿದೆ. ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ಕಟ್ಟುಪಾಡುಗಳನ್ನು, ಸಾಮಾಜಿಕ ಜೀವನ ಪದ್ಧತಿಗಳನ್ನು, ಹಿಂದಿನ ಸಂಪ್ರದಾಯವನ್ನು, ಮಹಿಳೆಯರ ಸ್ಥಾನಮಾನಗಳನ್ನು, ಜಾತಿಯ ಕಟ್ಟುಪಾಡುಗಳನ್ನು ಕುರಿತು ಹೇಳಲಾಗಿದೆ. ಧಾರ್ಮಿಕವಾಗಿ ವೈಷ್ಣವ ಮತ್ತು ಶೈವ ಧರ್ಮಗಳು ಹೆಚ್ಚಿನ ಪ್ರಾಬಲ್ಯವನ್ನು ಹೊಂದಿದ್ದವು. ಇಸ್ಲಾಂ, ಜೈನ, ಬೌದ್ಧ ಧರ್ಮಗಳು ಸಾಮ್ರಾಜ್ಯದಲ್ಲಿ ಕಂಡುಬರುತ್ತವೆ. ಧಾರ್ಮಿಕ ಆಚರಣೆಯಲ್ಲಿರುವ ವಿಧಿ-ವಿಧಾನಗಳನ್ನು ದೇವರು, ಧರ್ಮ, ಗುಡಿಗೋಪುರಗಳ ಬಗ್ಗೆ ಜನರಲ್ಲಿರುವ ಧಾರ್ಮಿಕ ಭಾವನೆಗಳನ್ನು, ಅಂದಿನ ಧಾರ್ಮಿಕ ನಿಷೇಧಗಳನ್ನು, ಧಾರ್ಮಿಕ ಪ್ರವೃತ್ತಿಗಳನ್ನು ಕುರಿತು ಹೇಳಲಾಗಿದೆ. ದೇವಸ್ಥಾನಗಳಿಗೆ ನೀಡಿರುವ ಕೊಡುಗೆಗಳನ್ನು,

ದೇವಾಲಯಗಳ ಜೀರ್ಣೋದ್ಧಾರ ಕೈಗೊಂಡಿರುವುದನ್ನು ಈ ಅಧ್ಯಯನದಲ್ಲಿ ಸಮರ್ಪಕವಾಗಿ ಪೂರಕ ಮಾಹಿತಿಗಳೊಂದಿಗೆ ಚರ್ಚಿಸಲಾಗಿದೆ.

ಮೂರನೆಯ ಅಧ್ಯಾಯವು ನಾಯಕರ ಉನ್ನತಿಯಾಗಿದ್ದು, ಇದರಲ್ಲಿ ನಾಯಕರ ಹಿನ್ನಲೆ, ನಾಯಕರ ಬೆಳವಣಿಗೆ, ನಾಯಕರ ಸಾಧನೆಗಳನ್ನು ಕುರಿತು ಹಾಗೂ ಬಯಕಾರ ರಾಮಪ್ಪನ ಕುಟುಂಬದ ಹಿನ್ನೆಲೆಯನ್ನು ಕುರಿತು ಚರ್ಚಿಸಲಾಗಿದೆ. ನಾಯಕ ಜನಾಂಗವು ಪ್ರಾಚೀನ ಕಾಲದಲ್ಲಿ ಬೇಟೆಯ ವೃತ್ತಿಯನ್ನು ಅವಲಂಬಿಸಿತ್ತು. ಮೌರ್ಯ ಹಾಗೂ ಗುಪ್ತರ ಕಾಲದಲ್ಲಿ ಈ ಜನಾಂಗವು ನಾಡಿನ ಸಂಪರ್ಕಕ್ಕೆ ಬಂದಿತ್ತು. ಅಲ್ಲಿಂದ ಈ ಜನಾಂಗವು ತಮ್ಮ ಧೈರ್ಯ ಸಾಹಸ ಗುಣಗಳಿಂದ ಸೈನಿಕರಾಗಿ, ಅಧಿಕಾರಿಗಳಾಗಿ ಕೊನೆಗೆ ವಿಜಯನಗರ ಕಾಲದಲ್ಲಿ ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡು ವಿಜಯನಗರದ ಪತನದ ನಂತರ ಸ್ವತಂತ್ರರಾಗಿ ಆಳ್ವಿಕೆಯನ್ನು ನಡೆಸುತ್ತಿದ್ದರ ಕುರಿತು ಹೇಳಲಾಗಿದೆ. ಈ ಜನಾಂಗವು ವಿಜಯನಗರ ಸಾಮ್ರಾಜ್ಯಕ್ಕೆ ಕೊಟ್ಟ ಕೊಡುಗೆ ಅಮೂಲ್ಯವಾಗಿತ್ತು. ವಿಜಯನಗರ ಸಾಮ್ರಾಜ್ಯವನ್ನು ಸೈನಿಕವಾಗಿ ಸಂರಕ್ಷಿಸುವ ಕಾರ್ಯದಲ್ಲಿ ತೊಡಗಿತ್ತು. ವೀರ ಜನಾಂಗವಾದ ಈ ಜನಾಂಗವು ಸಮರ್ಥ ಆಡಳಿತ ನಡೆಸುವ ಮೂಲಕ ಗುಡಿಗೋಪುರಗಳನ್ನು ಕಟ್ಟಿಸಿದ್ದು, ಕೆರೆಬಾವಿಗಳನ್ನು ಕಟ್ಟಿಸಿದ್ದು, ಕರ್ನಾಟಕದ ಇತಿಹಾಸಕ್ಕೆ ಹಾಗೂ ಸಂಸ್ಕೃತಿಗೆ ತಮ್ಮದೇ ಆದ ಕೊಡುಗೆಗಳನ್ನು ನೀಡಿರುವುದರ ಬಗ್ಗೆ ಹೇಳಲಾಗಿದೆ. ಬಯಕಾರ ರಾಮಪ್ಪನು ವಿದ್ವಾಂಸರ ಮನೆತನದಲ್ಲಿ ಜನಸಿರುವನು. ಬಯಕಾರ ರಾಮಪ್ಪನ ಪೂರ್ವಿಕರು ಮೂಲತಃ ಆಂಧ್ರಪ್ರದೇಶದವರು. ಕಾಲಾನಂತರದಲ್ಲಿ ವಿಜಯನಗರಕ್ಕೆ ವಲಸೆ ಬಂದವರು. ಬಯಕಾರ ರಾಮಪ್ಪನ ಪೂರ್ವಿಕರು ವಿಜಯನಗರ ಸಾಮ್ರಾಜ್ಯದಲ್ಲಿ ಪ್ರಭಾವಿ ಹುದ್ದೆಗಳನ್ನು ಹೊಂದಿದ್ದರು. ಇವನ ತಂದೆಯು ವಿಜಯನಗರ ಸಾಮ್ರಾಜ್ಯದಲ್ಲಿ ರಾಯಸ ಎನ್ನುವ ಅಧಿಕಾರಿಯಾಗಿದ್ದನು. ಇವನ ತಾಯಿಯ ತಂದೆಯಾದ ಕಲ್ಲಿನಾಥನು ಖ್ಯಾತ ಸಂಗೀತ ವಿದ್ವಾಂಸನಾಗಿದ್ದನು. ಬಯಕಾರ ರಾಮಪ್ಪನಿಗೆ ವೀರಮ್ಮ ಎನ್ನುವ ಪತ್ನಿಯಲ್ಲಿ ಲಿಂಗಾಲಯ, ಆಕಪ್ಪ ಎನ್ನುವ ಇಬ್ಬರು ಗಂಡುಮಕ್ಕಳು ಅಚ್ಯುತಮ್ಮ ಮತ್ತು ಕಾಮಾಂಬಿಕಾ ಎಂಬ ಇಬ್ಬರು ಹೆಣ್ಣುಮಕ್ಕಳು ಇದ್ದರು. ಬಯಕಾರ ರಾಮಪ್ಪನ ಕುಟುಂಬದ ಹಿನ್ನೆಲೆಯನ್ನು ಕುಟುಂಬ ವರ್ಗದವರ ಪ್ರಮುಖ ಕಾರ್ಯಕ್ಷೇತ್ರಗಳ ಬಗ್ಗೆ ಈ ಅಧ್ಯಯನದಲ್ಲಿ ಪೂರಕ ಮಾಹಿತಿಯನ್ನು ಒದಗಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಯಕಾರ ರಾಮಪ್ಪನ ಸಾಧನೆಗಳ ಕುರಿತು ಹೇಳಲಾಗಿದೆ. ರಾಜಕೀಯವಾಗಿ ಬಯಕಾರ ರಾಮಪ್ಪನು ವಿಜಯನಗರ ಸಾಮ್ರಾಜ್ಯದಲ್ಲಿ ಕಿರಿಯ ಹುದ್ದೆಗಳಾದ ಪಾರುಪತ್ತೆಗಾರ, ಮಾಗಾಣಿಕಾರನಾಗಿ ಆಡಳಿತವನ್ನು ನಿರ್ವಹಿಸಿದನು. ನಂತರದಲ್ಲಿ ಅಚ್ಯುತ ದೇವರಾಯನ ಕಾಲದಲ್ಲಿ ಕೊಂಡವೀಡು ದುರ್ಗದ ಅರಸನಾಗಿ ನೇಮಕನಾದನು.

ಬಯಕಾರ ರಾಮಪ್ಪನ ಪಾರಮಾರ್ಥಿಕ ಸಾಧನೆಗಳಾದ ದೇವಾಲಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಬಯಕಾರ ರಾಮಪ್ಪನು ತನ್ನ ಚಿಕ್ಕಪ್ಪ ರಾಮಯ್ಯಭಾಸ್ಕರ ಆತನ ಹೆಂಡತಿ ಅಮ್ಮಾಜಮ್ಮಾ ಹಾಗೂ ಅವರ ಮಗ ಕೃಷ್ಣಪ್ಪನ ಹೆಸರಿನಲ್ಲಿ ತಿಮಲಾಪುರದಲ್ಲಿ ತ್ರಿಕೂಟಾಚಲ ದೇವಾಲಯವನ್ನು ಹಾಗೂ ತನ್ನ ತಂದೆ ತಾಯಿಯರಿಗೆ ಪುಣ್ಯವಾಗಬೇಕೆಂದು ಗೋಪಿನಾಥ ದೇವಾಲಯವನ್ನು ಮತ್ತು ಮಲ್ಲಿಕಾರ್ಜುನ, ದೇವೇಶ, ವೀರಭದ್ರ ದೇವಾಲಯಗಳನ್ನು ನಿರ್ಮಿಸಿರುವನು. ಅಚ್ಯುತಮ್ಮಳಿಗೆ ಪುಣ್ಯವಾಗಬೇಕೆಂದು ಹುಲಿಕುಂಟ ಗ್ರಾಮದಲ್ಲಿ ಬಾಲಕೃಷ್ಣ ದೇವಾಲಯವನ್ನು ಕಟ್ಟಿಸಿದನು. ಈ ದೇವಾಲಯಗಳನ್ನು ಕುರಿತು ಸಮಗ್ರವಾಗಿ ವಿಶ್ಲೇಷಿಸಲಾಗಿದೆ.

ಬಯಕಾರ ರಾಮಪ್ಪನು ಲೌಕಿಕವಾದ ಕರ್ತವ್ಯಗಳಾದ ಕೆರೆಗಳು, ಬಾವಿಗಳು, ಅಗ್ರಹಾರಗಳು ಮೊದಲಾದವುಗಳನ್ನು ಕುರಿತು ಚರ್ಚಿಸಲಾಗಿದೆ. ಬಯಕಾರ ರಾಮಪ್ಪನು ತನ್ನ ಸಂಬಂಧಿಗಳ ಹೆಸರಿನಲ್ಲಿ ಹದಿನಾರಕ್ಕೂ ಹೆಚ್ಚು ಕೆರೆಗಳನ್ನು, ಅನೇಕ ಸಂಖ್ಯೆಯ ಬಾವಿಗಳನ್ನು ಕಟ್ಟಿಸಿರುವನು. ಇವನ ಮಾಡಿದ ಜನೋಪಯೋಗಿ ಕಾರ್ಯಗಳು ೫೦೦ ವರ್ಷಗಳ ನಂತರವೂ ಜನತೆಗೆ ನೆರವಾಗುತ್ತಿವೆ. ಅಗ್ರಹಾರಗಳನ್ನು ನಿರ್ಮಿಸುವುದರ ಮೂಲಕ ಬಯಕಾರ ರಾಮಪ್ಪನು ಸಾಹಿತ್ಯ ಮತ್ತು ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡಿರುವನ್ನು ಇಲ್ಲಿ ಸ್ಮರಿಸಲಾಗಿದೆ.

ಐದನೆಯ ಅಧ್ಯಾಯವು ಬಯಕಾರ ರಾಮಪ್ಪನು ಸಂಗೀತ ಕ್ಷೇತ್ರಕ್ಕೆ ನೀಡಿದ ಕೊಡುಗೆಯಾಗಿದ್ದು, ಇದಕ್ಕೆ ಪೂರಕವಾಗಿ ಕರ್ನಾಟಕ ಸಂಗೀತದ ಹುಟ್ಟು, ಬೆಳವಣಿಗೆ ಮತ್ತು ಪುರಂದರ–ಕನಕದಾಸರ ಕೊಡುಗೆ ಹಾಗೂ ಕರ್ನಾಟಕ ಸಂಗೀತಕ್ಕೆ ಬಯಕಾರ ರಾಮಪ್ಪನ ಮೇರು ಕೊಡುಗೆಯಾದ ಸ್ವರಮೇಳಕಳಾನಿಧಿ ಕುರಿತು ಹೇಳುತ್ತದೆ.

ಉತ್ತರ ಭಾರತದಲ್ಲಿ ಇಸ್ಲಾಂನ ಪ್ರಭಾವದಿಂದ ಭಾರತೀಯ ಸಂಗೀತವು ಹಿಂದೂಸ್ಥಾನಿ ಸಂಗೀತವಾಗಿ ಪರಿವರ್ತನೆಯಾಗಿರುವುದು. ದಕ್ಷಿಣ ಭಾರತದಲ್ಲಿ ಯಾವುದೇ ರೀತಿಯ ಬದಲಾವಣೆ ಹೊಂದದೆ ಹಾಗೆಯೇ ಉಳಿದುಬಂದು ಕರ್ನಾಟಕದವರ ಕೊಡುಗೆಯಿಂದಾಗಿ ದಕ್ಷಿಣಾದಿ ಸಂಗೀತವು ಕರ್ನಾಟಕ ಸಂಗೀತವೆಂದು ಹೆಸರು ಪಡೆದಿದ್ದನ್ನು ಹಾಗೂ ಲಾಕ್ಷಣೀಕರು ಕೊಟ್ಟಿರುವ ಕೊಡುಗೆಗಳ ಕುರಿತು ಹೇಳಲಾಗಿದೆ.

ಕರ್ನಾಟಕ ಸಂಗೀತಕ್ಕೆ ಪುರಂದರ–ಕನಕದಾಸರು ನೀಡಿರುವ ಕೊಡುಗೆಗಳನ್ನು ಈ ಅಧ್ಯಾಯದಲ್ಲಿ ಹೇಳಲಾಗಿದೆ. ಪುರಂದರ ದಾಸರು ಮಾಯಾಮಾಳವಗೌಳದಿಂದ ಸಂಗೀತವನ್ನು ಕಲಿಯುವ ಪದ್ಧತಿಯನ್ನು ಆರಂಭಿಸಿದರು. ಒಂದು ಲಕ್ಷ ಇಪ್ಪತ್ತೈದು ಸಾವಿರ ಕೀರ್ತನೆಗಳನ್ನು ರಚಿಸಿರುವರೆಂದು ಹೇಳಲಾಗಿದೆ. ಕನಕದಾಸರು ಕೀರ್ತನೆಗಳಲ್ಲದೇ ಇತರೆ ಕೃತಿಗಳನ್ನು ರಚಿಸಿದ ಕುರಿತು ಚರ್ಚಿಸಲಾಗಿದೆ.

ಸ್ವರಮೇಳಕಳಾನಿಧಿಯು ಕರ್ನಾಟಕ ಸಂಗೀತಕ್ಕೆ ಬಯಕಾರ ರಾಮಪ್ಪನ ಮಹತ್ತರ ಕೊಡುಗೆಯಾಗಿದೆ. ಇದು ೨೦೦೦ ವರ್ಷಗಳ ಭಾರತೀಯ ಸಂಗೀತವನ್ನು ವಿಶ್ಲೇಷಿಸುತ್ತದೆ. ಇದು ಐದು ಅಧ್ಯಾಯಗಳನ್ನು ಹೊಂದಿದ್ದು, ೩೨೫ ಶ್ಲೋಕಗಳಿಂದ ಕೂಡಿದೆ.

ಕೊನೆಯ ಅಧ್ಯಾಯವು ಸಮಾರೋಪವಾಗಿದ್ದು, ಇದರಲ್ಲಿ ಐದು ಅಧ್ಯಾಯಗಳ ಫಲಿತಗಳನ್ನು ಸಮಗ್ರವಾಗಿ ಚರ್ಚಿಸಲಾಗಿದೆ.

ಬಯಕಾರ ರಾಮಪ್ಪನ ಕುರಿತಂತೆ ಇವರೆಗೂ ಯಾರು ಅಧಿಕೃತವಾಗಿ ಸಂಶೋಧನೆಯನ್ನು ನಡೆಸಿಲ್ಲ. ಅಲ್ಲೊಂದು ಇಲ್ಲೊಂದು ಲೇಖನಗಳನ್ನು ಬರೆದಿರುವರು. ಮೊದಲ ಬಾರಿಗೆ ಬಯಕಾರ ರಾಮಪ್ಪನ ಕುರಿತು ವಿಶೇಷವಾಗಿ, ವಿಸ್ತೃತವಾಗಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಬಯಕಾರ ರಾಮಪ್ಪನ ಕೊಡುಗೆಗಳಾದ ದೇವಾಲಯಗಳು, ಕೆರೆಗಳು, ಬಾವಿಗಳು, ಅಗ್ರಹಾರಗಳು ಮತ್ತು ಅವನ ಜೀವನ ಸಾಧನೆಗಳ ಮೇಲೆ ಬೆಳಕನ್ನು ಚೆಲ್ಲಲು ಈ ಸಂಶೋಧನೆಯು ಸಫಲವಾಗಿದೆ. ಈ ಸಂಶೋಧನೆಯಲ್ಲಿ ಬಯಕಾರ ರಾಮಪ್ಪನಿಗೆ ಸಂಬಂಧಿಸಿದಂತೆ ಒಂದು ಹೊಸ ಕೆರೆಯನ್ನು ಗುರುತಿಸಲಾಗಿದೆ. ಅಲ್ಲದೇ ಕೆಲ ಹೊಸ ಶಾಸನಗಳನ್ನು ಪತ್ತೆ ಹಚ್ಚಲಾಗಿದೆ.

ಈ ಅಧ್ಯಯನವು ಬಹಳ ಮುಖ್ಯವಾಗಿ ಮಾಹಿತಿ ಪ್ರಧಾನವಾಗಿದ್ದು ಅಲ್ಲಲ್ಲಿ ವಿಶ್ಲೇಷಣೆಯನ್ನು ಒಳಗೊಂಡಿದೆ.

# ಆಕರ ಗ್ರಂಥಗಳು

೧. ಕಲಬುರ್ಗಿ ಎಂ. ಎಂ., ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೨. ಕಪಟರಾಳ ಕೃಷ್ಣರಾವ್, ಸುರುಪುರ ಸಂಸ್ಥಾನ ಇತಿಹಾಸ, ಮಂಜುನಾಥ ಪ್ರಕಾಶನ, ಬೆಂಗಳೂರು, ೧೯೭೭

೩. ಕರಶೆಟ್ಟಿ ರುದ್ರಪ್ಪ, ಮ್ಯಾಸಬೇಡರು : ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

೪. ಕೆಳದಿ ಗುಂಡಾ ಜೋಯಿಷ್, ಕೆಳದಿ ನೃಪವಿಜಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯.

೫. ಕೊಟ್ರೇಶ್ ಎಂ. ಕೋಟೆ – ಕೊತ್ತಲಗಳು : ಒಂದು ಅಧ್ಯಯನ, (ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ) ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೬. ಕೊಟ್ರಯ್ಯ ಸಿ.ಟಿ.ಎಂ., ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಯ, ಹಂಪಿ, ೨೦೦೧.

೭. ಕೊರಟೆ ಶ್ರೀನಿವಾಸರಾವ್, ಶ್ರೀ ಪುರಂದರ ದಾಸರು, ಬೆಂಗಳೂರು ೧೯೮೯

೮. ಕೋಡದ ಎಸ್.ಬಿ., ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಪ್ರಯಾಗ ಪ್ರಕಾಶನ, ಹುಬ್ಬಳ್ಳಿ, ೧೯೬೭.

೯. ಗುರುರತ್ನ ಬಾಬು. ಡಿ., ದಕ್ಷಿಣ ಭಾರತೀಯ ಕಲೆ ಮತ್ತು ವಾಸ್ತುಶಿಲ್ಪ, ಯುವ ವಾಣಿ ಕ್ರಿಯೇಟಿವ್, ಮಾನಸ ಗಂಗೋತ್ರಿ, ಮೈಸೂರು, ೧೯೯೭

೧೦. ಗೋಪಾಲ ಬಾ. ರಾ., ವಿಜಯನಗರ ವಾಸ್ತುಶಿಲ್ಪ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩.

೧೧. ಗುರುಮೂರ್ತಿ ಪೆಂಡಕೂರು (ಅನು) ಶ್ರೀ ಕೃಷ್ಣದೇವರಾಯ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, ೨೦೦೭

೧೨. ಚಿದಾನಂದ ಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯.

೧೩. ಚಿದಾನಂದ ಮೂರ್ತಿ ಎಂ., ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫.

೧೪. ಚತುರ್ದಂಡಿ ಪ್ರಕಾಶಿಕೆ, ವೆಂಕಟಮುಖಿ, ಮ್ಯೂಸಿಕ್ ಅಕಾಡೆಮಿ, ಮದ್ರಾಸ್, ೧೯೮೬

೧೫. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು, ೧೯೯೭.

೧೬. ದಯಾನಂದ ಪೈ, ಗುಡಿ ಜನರ ಜೀವನಾಡಿ, ಇತಿಹಾಸ ಸಂಶೋಧನಾ ಕೇಂದ್ರ, ಮೈಸೂರು, ೧೯೯೪.

೧೭. ದುರುಗಪ್ಪ ಎಂ.ಕೆ., ವಿಜಯನಗರೋತ್ತರ ಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೧೮. ದೇವರಕೊಂಡಾರೆಡ್ಡಿ, ಸಂಪಾದಕರು, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೧೯. ದೇವರಕೊಂಡಾರೆಡ್ಡಿ ಮತ್ತು ಇತರರು, ಹಂಪಿ ಶಾಸನಗಳು, ಸಂ. ೩, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೦. ನಾಗೇಗೌಡ ಹೆಚ್.ಎಲ್., ಪ್ರವಾಸಿ ಕಂಡ ಇಂಡಿಯಾ, ಸಂಪುಟಗಳು ೧, ೨, ೩, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೧.

೨೧. ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೨.

೨೨. ನರಸಿಂಹಮೂರ್ತಿ ಎ.ವಿ., (ಕನ್ನಡ ಅನುವಾದ) ದೆಹಲಿ ಸುಲ್ತಾನರ ಅಧಿಪತ್ಯ, ಭಾಗ – ೧, ೨. ಭಾರತೀಯ ವಿದ್ಯಾಭವನ, ಬೆಂಗಳೂರು, ೨೦೦೧.

೨೩. ನಂಜುಂಡಸ್ವಾಮಿ ಎ.ಎಸ್., ಕರ್ನಾಟಕ ಪಾಳೆಯಗಾರರು ಮತ್ತು ಒಡೆಯರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೬.

೨೪. ನಿರುಪಮಾ, ಆಮುಕ್ತಮಾಲ್ಯದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೨೫. ನೀಲತ್ತಳ್ಳಿ ಕಸ್ತೂರಿ, (ಅನು) ಕರ್ನಾಟಕದಲ್ಲಿ ಕೆರೆ ನೀರಾವರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೬. ಪ್ರಭಾಕರ್ ಎಂ.ಎಸ್., ದೇವಾಲಯ ವಾಸ್ತು ಚಂದ್ರಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೨೭. ಪದ್ಮಮೂರ್ತಿ, ಸಂಗೀತ ಲಕ್ಷಣ ಸಂಗ್ರಹ, ಭಾಗ – ೧ ಮತ್ತು ೨, ೧೯೮೦

೨೮. ಪ್ರಭಾಕರ್ ಎ.ಎಸ್., ಪಾಲಮ್ಮ ಮತ್ತು ಸಂಗಡಿಗರು ಹಾಡಿದ ಮ್ಯಾಸಬೇಡರ ಕಥನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೨೯. ಪುಲಮತಿ ಶ್ಯಾಮರಾವ್, ವಿಜಯನಗರ ಕಲೆ ಮತ್ತು ಸಾಹಿತ್ಯ, ಬೆಂಗಳೂರು, ೧೯೫೬.

೩೦. ಬೆಟಗೇರಿ ಕೃಷ್ಣಶರ್ಮ, ಕರ್ನಾಟಕದ ಜನಜೀವನ, ಸಮಾಜ ಪುಸ್ತಕಾಲಯ, ಧಾರವಾಡ, ೧೯೬೧.

೩೧. ಬಸವರಾಜ ಹೆಚ್.ಎಂ., ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ, ಅಪ್ರಕಟಿತ ಎಂ.ಫಿಲ್ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೩೨. ಭಗವತಿ ಎಸ್.ಎಸ್., (ಸಂ) ಕನಕದಾಸರ ಒಂದು ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೬

೩೩. ಮತಂಗ ಮುನಿ, ಬೃಹದ್ಧೇಶಿ, (ಸಂ) ಡಾ. ರಾ. ಸತ್ಯನಾರಾಯಣ, ಹಂಪಿ, ೧೯೯೮.

೩೪. ಮಹಾದೇವ ಸಿ., ವಿಜಯನಗರ ದೇವಾಲಯಗಳ ಗಾರೆ ಶಿಲ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೩೫. ಮಹಾದೇವ ಸಿ., ತಿಮ್ಮಲಾಪುರದ ಪುರಾತತ್ವ ಶೋಧಗಳು, ಅಪ್ರಕಟಿತ ಯೋಜನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪.

೩೬. ಮಹೇಶ್ ಕೆ., ಕೃಷ್ಣದೇವರಾಯನ ಕಾಲದ ವೈಷ್ಣವ ದೇವಾಲಯಗಳು, ಅಪ್ರಕಟಿತ ಪಿಹೆಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೩೭. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯.

೩೮. ರಾಬರ್ಟ್ ಸಿವೆಲ್, ಮರೆತುಹೋದ ಮಹಾಸಾಮ್ರಾಜ್ಯ ವಿಜಯನಗರ, (ಅನು) ಸದಾನಂದ ಕನವಳ್ಳಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೨.

೩೯. ರಾಜಣ್ಣ ಆರ್., ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ, ೧೯೯೨.

೪೦. ರಾಜಾರಾಮ್ ಹೆಗಡೆ., ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೪೧. ರಾಮಚಂದ್ರರಾವ್ ಎಸ್.ಕೆ., ಭಾರತದ ದೇವಾಲಯ ನೆಲೆ-ಹಿನ್ನೆಲೆ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೭೯.

೪೨. ರಾಮಚಂದ್ರರಾವ್ ಎಸ್.ಕೆ., ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.

೪೩. ರಾಮಾಮಾತ್ಯ, ಸ್ವರಮೇಳ ಕಲಾನಿಧಿ, (ಸಂ) ರಾಮಸ್ವಾಮಿ ಅಯ್ಯರ್. ಎಂ.ಎಸ್., ಮದ್ರಾಸ್, ೧೯೩೨.

೪೪. ಲಕ್ಷ್ಮಣ ತೆಲಗಾವಿ, ಶ್ರೀನಿವಾಸ. ಎಂ.ವಿ., (ಸಂ) ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಚಿತ್ರದುರ್ಗ, ೧೯೭೬.

೪೫. ವೆಂಕಟರತ್ನಂ ಎ.ವಿ., ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಮೈಸೂರು ವಿಶ್ವವಿದ್ಯಾಲಯ, ಮೈಸೂರು,೧೯೭೪.

೪೬. ವೆಂಕಟರಂಗೋಕಟ್ಟಿ, (ಅನು) ಗ್ಯಾಸೆಟಿಯರ್, ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು. ಮುಂಬೈ ಗರ್ವನಮೆಂಟ್ ಸೆಂಟ್ರಲ್ ಬುಕ್ ಡಿಪೋ, ಮುಂಬೈ, ೧೯೮೩.

೪೭. ವಿಜಯನಗರ ಅಧ್ಯಯನ, ೧ ರಿಂದ ೫ ಸಂಪುಟಗಳು, ಹಂಪು ಉತ್ಸವ ಸಂಚಿಕೆ, ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು, ೧೯೯೭ - ೨೦೦೦.

೪೮. ವೀರ ನಾಯಕ ಹೆಚ್., ಕ್ಷಾತ್ರಾಂಶ ಪ್ರಬೋಧ, ಸಾಹಿತ್ಯ ಸಂಪದ, ಹರ್ತಿಕೋಟೆ, ಚಿತ್ರದುರ್ಗ, ೧೯೮೭.

೪೯. ವೀರಭದ್ರಪ್ಪ ಕುಂ., ಶ್ರೀ ಕೃಷ್ಣದೇವರಾಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫೦. ವರದರಾಜರಾವ್ ಜಿ., ಪುರಂದರ ದಾಸರು, ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬.

೫೧. ವಿರುಪಾಕ್ಷಿ ಪೂಜಾರಹಳ್ಳಿ, ಬೇಟೆ ಮತ್ತು ಬೇಡರು, ಚಿನ್ನ ಹಗರಿ ಪ್ರಕಾಶನ, ಪೂಜಾರಹಳ್ಳಿ, ೨೦೦೭.

೫೨. ವಸುಂಧರ ಫಿಲಿಯೋಜಾ, ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೮.

೫೩. ವೆಂಕಟೇಶಯ್ಯ ಎಂ.ಜಿ., ಚಿತ್ರದುರ್ಗದ ಪಾಳೆಯಗಾರರು, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೭೯.

೫೪. ವೀಣಾ ಎಂ.ಪಿ., ಮನೆ, ಸಮಾಜ ಮತ್ತು ಸಂಸ್ಕೃತಿ, ನೆಲಮನೆ ಪ್ರಕಾಶನ, ಶ್ರೀರಂಗ ಪಟ್ಟಣ, ೨೦೦೦.

೫೫. ವಸು ಎಂ.ವಿ., ದಕ್ಷಿಣ ಕರ್ನಾಟಕ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫೬. ವಸಂತ ಕುಷ್ಟಗಿ, ವಿಜಯನಗರ ಸಾಮ್ರಾಜ್ಯದ ಪತನಾನಂತರ ಹರಿದಾಸ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫೭. ವಾಸುದೇವನ್ ಸಿ.ಎಸ್., ಹಂಪಿ ಪರಿಸರದ ಕೆರೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧.

೫೮. ವಾಸುದೇವನ್ ಸಿ.ಎಸ್., ವಿಜಯನಗರ ಪಟ್ಟಣ ಮತ್ತು ಅದರ ಉಪನಗರಗಳು, ವಿಜಯನಗರ ಅಧ್ಯಯನ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು.

೫೯. ಸಂಪತ್ಕುಮಾರಾಚಾರ್ಯ ವಿ.ಎಸ್., ಕರ್ನಾಟಕ ಸಂಗೀತ ಪಾರಿಭಾಷಿಕ ಶಬ್ದಕೋಶ, ಸಂಪುಟ ೧ ಮತ್ತು ೩, ಮೈಸೂರು, ೧೯೮೬.

೬೦. ಸತ್ಯನಾರಾಯಣ ರಾ., ಕರ್ನಾಟಕ ಸಂಗೀತ ವಾಹಿನಿ, ಬೆಂಗಳೂರು, ೨೦೦೧.

೬೧. ಶಿವರಾಮ ಕಾರಂತ ಕೆ., ಭಾರತೀಯ ಶಿಲ್ಪ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫.

೬೨. ಶಿವರಾಮ ಕಾರಂತ ಕೆ., ಚಾಲುಕ್ಯ ವಾಸ್ತು ಮತ್ತು ಶಿಲ್ಪ, ಮೈಸೂರು ರಾಜ್ಯದ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೬೯.

೬೩. ಶಿವಣ್ಣ ಕೆ.ಎಸ್., ಕರ್ನಾಟಕ ಚರಿತ್ರೆ ಮಾಲಿಕೆ, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೬೪. ಶಿವಾನಂದ ವಿರಕ್ತಮಠ, ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮.

೬೫. ಶೀಲಾಕಾಂತ ಪತ್ತಾರ., ಬಾದಾಮಿ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೬೬. ಶ್ರೀಕಂಠಶಾಸ್ತ್ರಿ ಎಸ್., ಹೊಯ್ಸಳ ವಾಸ್ತುಶಿಲ್ಪ, ಪ್ರಸಾರಾಂಗ ಮೈಸೂರು, ವಿಶ್ವವಿದ್ಯಾಲಯ, ಮೈಸೂರು, ೧೯೬೫.

೬೭. ಶ್ರೀಕಂಠಯ್ಯ, ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಮೈಸೂರು, ೧೯೮೩.

೬೮. ಶಿವರುದ್ರಸ್ವಾಮಿ ಎಸ್.ಎನ್., ಬಯಕಾರ ರಾಮಪ್ಪ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೬೯. ಶಿದ್ದಲಿಂಗಯ್ಯ ಜಿ.ಎಸ್., ಹರಿದಾಸ ಸಾಹಿತ್ಯ ಪರಂಪರೆ, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೭.

೭೦. ಸದಾಶಿವಪ್ಪ ಕುಂ. ಭಾ, ಹರಪನಹಳ್ಳಿ ಪಾಳೆಯಗಾರರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೬.

೭೧. ಸದೋಜ್ಯಾತಸ್ವಾಮಿಜೀ, ವಿಜಯನಗರ ಕಾಲದ ಧಾರ್ಮಿಕ ಜೀವನ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೧.

೭೨. ಸಂಪತ್ಕುಮಾರಾಚಾರ್ಯ ವಿ.ಎಸ್., ಇತರರು, ಕರ್ನಾಟಕ ಸಂಗೀತ ದೀಪಿಕೆ, ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೦.

೭೩. ಸೋಮಶೇಖರ ಎಸ್.ವೈ., ವಿಜಯನಗರ ಕಾಲದ ಸೈನ್ಯ ವ್ಯವಸ್ಥೆ ಮತ್ತು ಯುದ್ಧನೀತಿ, ಅಪ್ರಟಿತ ಪಿಹೆಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೭೪. ಸೂರ್ಯನಾರಾಯಣರಾವ್. ವಿ., ಮರೆಯಲಾಗದ ಮಹಾಸಾಮ್ರಾಜ್ಯ, (ಅನು) ಬಾಲಸುಬ್ರಮಣ್ಯಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೭೫. ಸೂರ್ಯನಾಥ ಕಾಮತ್. ಯು., ವಿಜಯನಗರ ಸಾಮ್ರಾಜ್ಯ, ಪ್ರಕಾಶ ಸಾಹಿತ್ಯ, ಬೆಂಗಳೂರು ೧೯೯೧.

೭೬. ಸುರೇಶ್ ಕೆ.ಎಂ. ಮತ್ತು ಇತರರು, ಬಳ್ಳಾರಿ ಜಿಲ್ಲೆಯ ದೇವಾಲಯ ಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦.

೭೭. ಷೇಕ್ ಅಲಿ ಬಿ., ಪ್ರಧಾನ ಸಂಪಾದಕರು, ಕರ್ನಾಟಕ ಚರಿತ್ರೆ, (ಕ್ರಿ.ಶ. ೧೩೩೬–೧೭೬೦) ಸಂ. ೩, ಚರಿತ್ರೆ ಮಾಲೆ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಯ, ಹಂಪಿ, ೧೯೯೭.

೨೮. ಷೇಕ್ ಅಲಿ ಬಿ., ಪ್ರಧಾನ ಸಂಪಾದಕರು, ಕರ್ನಾಟಕ ಚರಿತ್ರೆ, (ಕ್ರಿ.ಶ. ೧೩೪೭-೧೭೬೦) ಸಂ. ೪, ಚರಿತ್ರೆ ಮಾಲೆ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಯ, ಹಂಪಿ, ೧೯೯೭.

೨೯. ಹಿರೇಮಠ ಆರ್.ಸಿ., (ಸಂ) ಕನಕದಾಸರ ಮೋಹನ ತರಂಗಿಣಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩.

೩೦. ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ತೇಜಸ್ವಿ ಕಟ್ಟಿಮನಿ, (ಸಂ) ಫಟ್ಟಿ ಹೊಸಹಳ್ಳಿ ಗಟ್ಟಿಗ, ಹರ್ತಿಕೋಟೆ, ಚಿತ್ರದುರ್ಗ, ೨೦೦೨.

೩೧. ಜ್ಞಾನಾನಂದ ಜಿ., ಶಿಲ್ಪಾದರ್ಶ, ಸಂ. ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಯ, ಹಂಪಿ, ೨೦೦೨.

**ಪತ್ರಿಕೆಗಳು**

೧. ವಾಲ್ಮೀಕಿ ಸಂದೇಶ, ಮಾಸಿಕ, ಗದಗ.

೨. ವಾಲ್ಮೀಕಿ ಬಂಧು, ಮಾಸಿಕ, ಧಾರವಾಡ.

೩. ವಾಲ್ಮೀಕಿ ವಾಣಿ, ಮಾಸಿಕ, ಚಿತ್ರದುರ್ಗ.

೪. ವಾಲ್ಮೀಕಿ ಕರ್ನಾಟಕ, ಮಾಸಿಕ, ಬೆಂಗಳೂರು.

**ಇಂಗ್ಲೀಷ್ ಆಕರ ಗ್ರಂಥಗಳು**

1. Acharya P.K. Architecture of Manasara, J.K. Publishing House, Bhopal, 1978.

2. Agarwala P.K., Temple Architecture, The Karnataka Dravida tradition, 7 to 13th Centuries, Abhinava Publishing, New Delhi, 1995.

3. Abhishankara K. Mysore State, Gagetteer, Bellary Dist, Bangalore 1972.

4. Burton Stein (Ed) south Indian Temples, New Delhi, 1974.

5. Dikshit G.S., Early Vijayanagara and self local Government in medival Karnataka, Dharwad, 1964.

6. Francis Buchanan, A journey through Mysore Canara, Malabar Vol-1, Asian Publications, New Delhi, 1988

7. Gopal B.R. (Ed) Vijayanagara Inscriptions 1-4 Vols, Directorate of Archaeology and museums, Mysore, 1985.

8. Krishna Rao. M.V., Purandara and Haridasa movement, Dharwad, 1966.

9. Mahalingam T.V., Adiministrative and Social life under Vijayanagara part-II, Madras, 1969.

10. Patil C.S., Temples of Bellary and Raichur district, Directorate of Archaeology and museums, Mysore, 1997.

11. Paes and Nuniz, The Vijayanagara Chronicals of Paes and Nuniz, Asian Educational services, New Delhi, 1991.

12. Salatore B.A., Social and political life in vijayanagara Empire, Part - II, 1934.

13. Sundara A., The early Kadamba Temple architecture, QJMS LXXV-3S

14. Sabaramathi, History of South Indian Music, R.R.I., Madras, 1972.

15. Venkataratnam A.V., Local Self Government in Vijayanagara Empire, Mysore, 1975.



ವೀರಭದ್ರ ವಿಗ್ರಹ, ವೀರಭದ್ರ ದೇವಾಲಯ,
ತಿಮ್ಮಲಾಪುರ.



ಗಣೇಶ ವಿಗ್ರಹ, ಮಲ್ಲಿಕಾರ್ಜುನ ದೇವಾಲಯ,
ತಿಮ್ಮಲಾಪುರ.



ದೇವ ಕೋಷ್ಠಕ, ಮಲ್ಲಿಕಾರ್ಜುನ ದೇವಾಲಯ,
ತಿಮ್ಮಲಾಪುರ.



ಮುಖ ಮಂಟಪದ ಕಂಬ, ಈಶ್ವರ ದೇವಾಲಯ,
ತಿಮ್ಮಲಾಪುರ.



ದ್ವಾರ ಗೋಪುರದ ಒಳನೋಟ ಈಶ್ವರ ದೇವಾಲಯ, ತಿಮ್ಮಲಾಪುರ.



ದ್ವಾರ ಗೋಪುರ ಈಶ್ವರ ದೇವಾಲಯ, ತಿಮ್ಮಲಾಪುರ.



ಮುಖ ಮಂಟಪ ಈಶ್ವರ ದೇವಾಲಯ, ತಿಮ್ಮಲಾಪುರ.



ಮುಖ್ಯ ಗರ್ಭಗುಡಿಯ ಶಿವಲಿಂಗ, ಈಶ್ವರ ದೇವಾಲಯ ತಿಮ್ಮಲಾಪುರ.



ಪಾರ್ಶ್ವ ನೋಟ, ಈಶ್ವರ ದೇವಾಲಯ ತಿಮ್ಮಲಾಪುರ.



ಪಾರ್ಶ್ವ ನೋಟ, ಈಶ್ವರ ದೇವಾಲಯ ತಿಮ್ಮಲಾಪುರ.



ಬಲ ಭಾಗದ ಶಿವಲಿಂಗ, ಈಶ್ವರ ದೇವಾಲಯ
ತಿಮ್ಮಲಾಪುರ.



ಬಲಿಪೀಠದ ಹತ್ತಿರ ಇರುವ ಶಿಲಾಶಾಸನ,
ಈಶ್ವರ ದೇವಾಲಯ ತಿಮ್ಮಲಾಪುರ.



ಮುಖ್ಯಗರ್ಭಗುಡಿಯ ಶಿಖರ, ಈಶ್ವರ ದೇವಾಲಯ
ತಿಮ್ಮಲಾಪುರ.



ಗೋಪಿನಾಥ ವಿಗ್ರಹ, ಗೋಪಿನಾಥ ದೇವಾಲಯ
ತಿಮ್ಮಲಾಪುರ.



ಮುಖ ಮಂಟಪ, ಗೋಪಿನಾಥ ದೇವಾಲಯ, ತಿಮ್ಮಲಾಪುರ.



ವಿಹಂಗಮ ನೋಟ, ಗೋಪಿನಾಥ ದೇವಾಲಯ, ತಿಮ್ಮಲಾಪುರ.



ವಿಹಂಗಮ ನೋಟ ಈಶ್ವರ ದೇವಾಲಯ, ತಿಮ್ಮಲಾಪುರ.



ದ್ವಾರ ಗೋಪುರ ಗೋಪಿನಾಥ ದೇವಾಲಯ
ತಿಮ್ಮಲಾಪುರ.



ಗರ್ಭ ಗುಡಿ ದ್ವಾರ ಗೋಪಿನಾಥ ದೇವಾಲಯ
ತಿಮ್ಮಲಾಪುರ.



ದ್ವಾರ ಗೋಪುರ ಒಳನೋಟ ಗೋಪಿನಾಥ ದೇವಾಲಯ
ತಿಮ್ಮಲಾಪುರ.



ರಥ, ಗೋಪಿನಾಥ ದೇವಾಲಯ
ತಿಮ್ಮಲಾಪುರ.



ಮಲ್ಲಿಕಾರ್ಜುನ ದೇವಾಲಯ, ತಿಮ್ಮಲಾಪುರ.



ಮುಖ ಮಂಟಪ ಮಲ್ಲಿಕಾರ್ಜುನ ದೇವಾಲಯ, ತಿಮ್ಮಲಾಪುರ.



ಜೀರ್ಣಾವಸ್ಥೆಯಲ್ಲಿರುವ ದೇವೇಶ ದೇವಾಲಯ, ತಿಮ್ಮಲಾಪುರ.



ಬಾಲಕೃಷ್ಣ ದೇವಾಲಯ, ಹುಲಿಕುಂಟೆ.



ದ್ವಾರಬಂಧ ಮಲ್ಲಿಕಾರ್ಜುನ ದೇವಾಲಯದ ಕಲ್ಯಾಣಿ, ತಿಮ್ಮಲಾಪುರ.



ತಿಮ್ಮಲಾಪುರ ಅಗ್ರಹಾರದ ಅವಶೇಷಗಳು, ತಿಮ್ಮಲಾಪುರ.



೯೦ ಡಿಗ್ರಿ ಆಕಾರದ ಪಾವಟಿಗೆಗಳು ಅಂಗಾಲಯ ಬಾವಿ, ತಿಮ್ಮಲಾಪುರ.



ಮಲ್ಲಿಕಾರ್ಜುನ ದೇವಾಲಯದ ಹತ್ತಿರವಿರುವ ಕಲ್ಯಾಣಿ, ತಿಮ್ಮಲಾಪುರ.



ಅಂಗಾಲಯ ಬಾವಿ, ತಿಮ್ಮಲಾಪುರ.



ಶಿಲಾ ಶಾಸನ, ಈಶ್ವರ ದೇವಾಲಯ ತಿಮ್ಮಲಾಪುರ.



ಶಿಲಾ ಶಾಸನ, ಗೋಪಿನಾಥ ದೇವಾಲಯ ತಿಮ್ಮಲಾಪುರ.



ಶಿಲಾ ಶಾಸನ, ಗೋಪಿನಾಥ ದೇವಾಲಯ ತಿಮ್ಮಲಾಪುರ.



ಲಿಂಗಾಲಯ ಬಾವಿ ಹತ್ತಿರದ ಶಿಲಾ ಶಾಸನ, ತಿಮ್ಮಲಾಪುರ.



ಪಾರ್ಶ್ವ ನೋಟ ತಿಮ್ಮಲಾಪುರ ಕೆರೆ, ತಿಮ್ಮಲಾಪುರ.



ತೂಬು ತಿಮ್ಮಲಾಪುರ ಕೆರೆ, ತಿಮ್ಮಲಾಪುರ.



ವಿಹಂಗಮ ನೋಟ ತಿಮ್ಮಲಾಪುರ ಕೆರೆ, ತಿಮ್ಮಲಾಪುರ.



ಜಂಬಯ್ಯನ ಕೆರೆ, ತಿಮ್ಮಲಾಪುರ.



ಅಚ್ಚುತಮ್ಮ ಸಮುದ್ರ, ಹುಲಿಕುಂಟೆ ಕೆರೆ, ಹುಲಿಕುಂಟೆ.



ಚಿಲಕನಹಟ್ಟಿ ಕೆರೆ, ಚಿಲಕನಹಟ್ಟಿ.



ರಾಮಸಮುದ್ರ ಮಗಿಮಾವಿನ ಹಳ್ಳಿ ಕೆರೆ, ಮಗಿಮಾವಿನ ಹಳ್ಳಿ.



ಚಿಲಕನ ಹಟ್ಟಿ ಕೆರೆ, ಚಿಲಕನಹಟ್ಟಿ.



ಪಾರ್ಶ್ವನೋಟ ಶಿವಲಿಂಗ, ಈಶ್ವರ ದೇವಾಲಯ ತಿಮ್ಮಲಾಪುರ.